# ಜನಪದ ನಂಬಿಕೆ ಮತ್ತು ಆಚರಣೆಗಳು

## (ಬೀದರ ಜಿಲ್ಲೆಯ ಕುರಿತು)

(ಕ.ರಾ.ಶಿ.ಸಂಸ್ಥೆ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ, ಇವರಿಗೆ ಪಿ.ಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಸಂಶೋಧನಾ ಮಹಾಪ್ರಬಂಧ)


ಸಂಶೋಧಕರು :

**ಕಲಾವತಿ ತಂದೆ ಶಿವರಾಜ ಭಾಗಿರಥಿ,**

**ಮು: ಹುಡಗಿ**

ತಾ : ಹುಮನಾಬಾದ ಜಿ: ಬೀದರ.

ಮಾರ್ಗದರ್ಶಕರು :

**ಡಾ.ಶಿವಗಂಗಾ ರುಮ್ಮಾ,**

ಎಂ.ಎ.ಎಂಫಿಲ್, ಪಿಎಚ್‌ಡಿ.

ಆಯ್ಕೆ ಶ್ರೇಣಿ ಉಪನ್ಯಾಸಕರು,

ಸ್ನಾತಕೋತ್ತರ ಅಧ್ಯಯನ ಕೇಂದ್ರ,

ಸರಕಾರಿ ಪ್ರಥಮ ದರ್ಜೆ ಕಾಲೇಜು, ಗುಲಬರ್ಗಾ





ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ - ೫೮೩೨೭೬

೨೦೧೧

# ಜನಪದ ನಂಬಿಕೆ ಮತ್ತು ಆಚರಣೆಗಳು

## (ಬೀದರ ಜಿಲ್ಲೆಯ ಕುರಿತು)

(ಕ.ರಾ.ಶಿ.ಸಂಸ್ಥೆ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ, ಇವರಿಗೆ ಪಿ.ಎಚ್.ಡಿ.
ಪದವಿಗಾಗಿ ಸಲ್ಲಿಸುತ್ತಿರುವ ಸಂಶೋಧನಾ ಮಹಾಪ್ರಬಂಧ)


ಸಂಶೋಧಕರು:

**ಕಲಾವತಿ ತಂದೆ ಶಿವರಾಜ ಭಾಗಿರಥಿ**

**ಮು: ಹುಡಗಿ**

ತಾ : ಹುಮನಾಬಾದ ಜಿ: ಬೀದರ.





ಮಾರ್ಗದರ್ಶಕರು,

**ಡಾ.ಶಿವಗಂಗಾ ರುಮ್ಮಾ,**
ಎಂಎ.,ಎಂಫಿಲ್, ಪಿಎಚ್‌ಡಿ,

ಆಯ್ಕೆ ಶ್ರೇಣಿ ಉಪನ್ಯಾಸಕರು,
ಸ್ನಾತಕೋತ್ತರ ಅಧ್ಯಯನ ಕೇಂದ್ರ,
ಸರಕಾರಿ ಪ್ರಥಮ ದರ್ಜೆ ಕಾಲೇಜು, ಗುಲಬರ್ಗಾ






**ಕನ್ನಡ ವಿಶ್ವವಿದ್ಯಾಲಯ ಹಂಪಿ,**

**ವಿದ್ಯಾರಣ್ಯ – ೫೮೩೨೭೬**

**೨೦೧೧**

# ಘೋಷಣಾ ಪತ್ರ

ನಾನು "ಜನಪದ ನಂಬಿಕೆ ಮತ್ತು ಆಚರಣೆಗಳು" (ಬೀದರ ಜಿಲ್ಲೆಯ ಕುರಿತು) ಎಂಬ ಈ ಮಹಾಪ್ರಬಂಧವನ್ನು **ಡಾ॥ ಶಿವಗಂಗಾ ರುಮ್ಮಾ** ಆಯ್ಕೆ ಶ್ರೇಣಿ ಉಪನ್ಯಾಸಕರು, ಸ್ನಾತಕೋತ್ತರ ಅಧ್ಯಯನ ಕೇಂದ್ರ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಗುಲಬರ್ಗಾ ಅವರ ಮಾರ್ಗದರ್ಶನದಲ್ಲಿ ಮಹಾಪ್ರಬಂಧದ ಸಂಶೋಧನಾ ಅಧ್ಯಯನ ನಡೆಸಿ ಸಿದ್ಧಗೊಳಿಸಿದ್ದೇನೆ. ಪ್ರಸ್ತುತ ಪಿ.ಹೆಚ್.ಡಿ. ಪದವಿಗಾಗಿ ಕ.ರಾ.ಶಿ.ಸಂಸ್ಥೆ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಇವರಿಗೆ ಸಾದರಪಡಿಸುತ್ತಿದ್ದೇನೆ.

ಈ ಸಂಶೋಧನಾ ಮಹಾಪ್ರಬಂಧವು ನನ್ನ ಸ್ವತಂತ್ರ ಅಧ್ಯಯನವಾಗಿದ್ದು, ಇದನ್ನು ಈ ಮೊದಲು ಯಾವುದೇ ಪದವಿ ಅಥವಾ ಡಿಪ್ಲೋಮಾಕ್ಕಾಗಿ ಯಾವುದೇ ಸಂಸ್ಥೆ ಅಥವಾ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿಲ್ಲ. ಇದನ್ನು ಇಡಿಯಾಗಿ ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಕಲಾವತಿ,**
ಪಿ.ಎಚ್. ಡಿ.ಸಂಶೋಧನಾ ವಿದ್ಯಾರ್ಥಿ,
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ಗುಲಬರ್ಗಾ
ದಿನಾಂಕ :

ಡಾ॥ ಶಿವಗಂಗಾ ರುಮ್ಮಾ,
ಎಂಎ.,ಎಂಫಿಲ್, ಪಿಎಚ್‌ಡಿ,

ಆಯ್ಕೆ ಶ್ರೇಣಿ ಉಪನ್ಯಾಸಕರು,
ಸ್ನಾತಕೋತ್ತರ ಅಧ್ಯಯನ ಕೇಂದ್ರ,
ಸರಕಾರಿ ಪ್ರಥಮ ದರ್ಜೆ ಕಾಲೇಜು, ಗುಲಬರ್ಗಾ

---

# ಪ್ರಮಾಣ ಪತ್ರ

**ಕಲಾವತಿ** ಇವರು ನನ್ನ ಮಾರ್ಗದರ್ಶನದಲ್ಲಿ **"ಜನಪದ ನಂಬಿಕೆ ಮತ್ತು ಆಚರಣೆಗಳು" (ಬೀದರ ಜಿಲ್ಲೆಯ ಕುರಿತು)** ಈ ವಿಷಯ ಕುರಿತು ಪಿ.ಎಚ್.ಡಿ. ಸಂಶೋಧನ ಅಧ್ಯಯನ ಕೈಗೊಂಡಿದ್ದಾರೆ. ಈಗ ಅವರು ಸಿದ್ಧಪಡಿಸಿದ 'ಸಂಶೋಧನ ಮಹಾಪ್ರಬಂಧವು, ನನ್ನ ಮಾರ್ಗದರ್ಶನ ಹಾಗೂ ಅವರ ಪ್ರಮಾಣಿಕ ಸಂಶೋಧನ ಅಧ್ಯಯನದ ಪ್ರತಿಫಲ, ಇದು ಅವರ ಸ್ವತಂತ್ರ ಸಂಶೋಧನ ಬರಹವಾಗಿದ್ದು, ಇದರ ಯಾವುದೇ ಭಾಗವೂ ಎಲ್ಲಿಯೂ ಪ್ರಕಟಗೊಂಡಿಲ್ಲ. ಆದ್ದರಿಂದ ಈ ಸಂಶೋಧನ ಮಹಾಪ್ರಬಂಧವನ್ನು ಪಿ.ಎಚ್.ಡಿ.ಪದವಿಗಾಗಿ ಕ.ರಾ.ಶಿ.ಸಂಸ್ಥೆ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ, ಕನ್ನಡ ವಿಶ್ವವಿದ್ಯಾಲಯ ಹಂಪಿ ಇಲ್ಲಿಗೆ ಸಾದರಪಡಿಸಲು ಯೋಗ್ಯವಾಗಿದೆ ಎಂದು ಈ ಮೂಲಕ ದೃಢೀಕರಿಸಿ ಶಿಫಾರಸ್ಸು ಮಾಡಲಾಗಿದೆ.

ಮಾರ್ಗದರ್ಶಕರು,

ಡಾ. ಶಿವಗಂಗಾ ರುಮ್ಮಾ

ಡಾ. ಶಿವಗಂಗಾ ರುಮ್ಮಾ
ಎಂ.ಎ., ಎಂ.ಫಿಲ್., ಪಿಹೆಚ್.ಡಿ.
ಸಹ ಪ್ರಾಧ್ಯಾಪಕರು
ಸ್ನಾತಕೋತ್ತರ ಕನ್ನಡ ಅಧ್ಯಯನ ಕೇಂದ್ರ
ಸರಕಾರಿ ಮಹಾವಿದ್ಯಾಲಯ, ಗುಲಬರ್ಗಾ.

ಸ್ಥಳ: ಗುಲಬರ್ಗಾ
ದಿನಾಂಕ :

# ನಿವೇದನೆ

ಬೀದರ ಜಿಲ್ಲೆಯ ಜನಪದ ನಂಬಿಕೆ ಮತ್ತು ಆಚರಣೆಗಳು ಎನ್ನುವ ಈ ಅಧ್ಯಯನವು ಇಂದಿಗೂ ಗಾಢವಾಗಿ ಅಸಿತ್ವದಲ್ಲಿರುವ ಈ ನಂಬಿಕೆ ಮತ್ತು ಆಚರಣೆಗಳ ಹಿಂದಿರುವ ಉದ್ದೇಶವನ್ನು ತಿಳಿಯುವುದಾಗಿದೆ.

ಅನಾವಶ್ಯಕವಾದ ಅಥವಾ ಮೂಢವೆನಿಸಿದ ನಂಬಿಕೆಗಳನ್ನು ದೂರಿಕರಿಸಿ ಉಪಯುಕ್ತವಾದವುಗಳನ್ನು ಅಳವಡಿಸಿಕೊಳ್ಳಬೇಕಾಗಿದೆ. ಹಾಗೂ ಕಾಲಮಾನಕ್ಕೆ ತಕ್ಕಂತೆ ಶಿಕ್ಷಣ, ಸಂಸ್ಕೃತಿ, ಸಮಾಜದಲ್ಲಿನ ಬದಲಾವಣೆ ಇಂದಿನ ಜನರ ಮೇಲೆ ಪ್ರಭಾವ ಬೀರಿ ಹಳೆಯ ನಂಬಿಕೆ ಮತ್ತು ಆಚರಣೆಗಳೆಲ್ಲವೂ ತುಚ್ಚಿಕರಿಸುವುದಕ್ಕಿಂತ ಮೊದಲು ಅವುಗಳಲ್ಲಿ ಅಡಗಿರುವ ಮೌಲ್ಯಯುತವಾದ ವಿಚಾರಗಳನ್ನು ಜೀವನದುದ್ದಕ್ಕು ಊರುಗೋಲು ಆಗಿ ಸಹಾಯಕವಾಗಿರುವ ಅವುಗಳ ಗೂಢಾರ್ಥವನ್ನು ಅರಿಯಬೇಕಾಗಿದೆ.

ಇಂತಹ ಉದ್ದೇಶಗಳಿಗಾಗಿ ಕೈಕೊಂಡ ಈ ಅಧ್ಯಯನಕ್ಕೆ ಪ್ರೇರಣೆ ಮತ್ತು ಸಹಕಾರ ನೀಡಿದ ಕನ್ನಡ ಅಧ್ಯಯನ ಹಾಗೂ ಸಂಶೋಧನಾ ಕೇಂದ್ರ, ಬೀದರದ **ನಿರ್ದೇಶಕರಾದ ಡಾ॥ ಜಗನ್ನಾಥ ಹೆಬ್ಬಾಳೆ**ರವರಿಗೆ ನನ್ನ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಅಧ್ಯಯನ ಅವಧಿಯಲ್ಲಿ ಸಂಶೋಧನಾ ಕಮಟ್ಟದಲ್ಲಿ ಸಲಹೆ, ಸಹಕಾರ ನೀಡಿದ ಹಂಪಿ ವಿಶ್ವವಿದ್ಯಾಲಯ ಕುಲಪತಿಗಳಾದ **ಡಾ॥ ಮುರಗೆಪ್ಪ**ರವರಿಗೂ ಪ್ರಾಧ್ಯಾಪಕರಾದ **ಶ್ರೀ ಪುಟ್ಟಯ್ಯ** ಹಾಗೂ **ಡಾ॥ ಶಿವಾನಂದ ವಿರಕ್ತಮಠ** ಅವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಬೀದರ ಜಿಲ್ಲೆಯ ಜನಪದ ನಂಬಿಕೆ ಮತ್ತು ಆಚರಣೆಗಳು ಎನ್ನುವ ಪಿ.ಹೆಚ್.ಡಿ. ಅಧ್ಯಯನಕ್ಕೆ **ಡಾ॥ ಶಿವಗಂಗಾ ರುಮ್ಮಾ** ಅವರು ಮಾರ್ಗದರ್ಶಕರಾಗಿ ಸಲಹೆ ನೀಡಿದ ಅವರಿಗೆ ತುಂಬು ಹೃದಯದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಹಾಗೆಯೇ ಅವರ ಸಾಕಷ್ಟು ಕೆಲಸಗಳ ಒತ್ತಡದಲ್ಲೂ ಸಮಯ ಕೊಟ್ಟು ನನ್ನ ಇತರ ತೊಂದರೆಗಳಲ್ಲಿ ಆತ್ಮೀಯ ಹಿರಿಯ ಸಹೋದರಿಯಾಗಿ ಸಹಾಯ ಮಾಡಿರುವುದನ್ನು ಎಂದೆಂದಿಗೂ ನೆನಪಿಸಿಕೊಳ್ಳುತ್ತೇನೆ.

ಅದೇ ರೀತಿಯಾಗಿ ಸಹೋದರರಾದ **ಶ್ರೀ ಚೆನ್ನಬಸಪ್ಪಾ ಮಂಗಲಗಿ** ಅವರ ಸಲಹೆ-ಸಹಕಾರ ಪ್ರೋತ್ಸಾಹಗಳು ಕ್ರಿಯಾತ್ಮಕವಾಗಿ ನೆರವಾಗಿವೆ ಅವರಿಗೂ ಕೂಡಾ ನನ್ನ ಅನಂತ ವಂದನೆಗಳು.

ಅಧ್ಯಯನಕ್ಕಾಗಿ ಪ್ರೇರೇಪಿಸಿದ ಮತ್ತು ಸಹಕರಿಸಿದ **ಡಾ॥ ಸುರೇಖಾ ನಾಗರಾಜ ಬಲಕಲ್** ಅವರಿಗೂ ಕೃತಜ್ಞತೆಯಿಂದ ಸ್ಮರಿಸುವೆ.

ಕ್ಷೇತ್ರ ಕಾರ್ಯದಲ್ಲಿ ವಿಚಾರಧಾರೆ ಎರೆದು ಬಹು ಜನಪದರನ್ನು ಭೇಟಿಯಾಗಲು ಕಾರಣರಾದ **ಶ್ರೀ ಸಿದ್ರಾಮಪ್ಪಾ ಕಾರಮಗಿ** ಅವರಿಗೂ ನನ್ನ ನಮನಗಳು. ಮೋರಾರ್ಜಿ ದೇಸಾಯಿ ವಸತಿ ಶಾಲೆ, ಕೋಗನೂರ ಪ್ರಾಚಾರ್ಯರಾದ **ಶ್ರೀ ಕಿಶನರಾವ್, ಎಸ್.ಕುಲಕರ್ಣಿ**ಯವರಿಗೂ ಹಾಗೂ ಸಹ ಉದ್ಯೋಗಿಗಳಿಗೂ ವಂದನೆಗಳು.

ವ್ಯಾಸಂಗಕ್ಕಾಗಿ ಸದಾ ಬೆಂಬಲಿಸುವ ಮತ್ತು ಹರ್ಷಪಡುವ ನನ್ನ ಹೆತ್ತವರಾದ ತಂದೆ ಶ್ರೀ **ಶಿವರಾಜ. ಕ. ಭಾಗಿರಥಿ ತಾಯಿ ಶಕುಂತಲಾ. ಎಸ್. ಭಾಗಿರಥಿ** ಅವರ ಆಶೀರ್ವಾದಗಳನ್ನು ಸದಾ ಆಶಿಸುತ್ತೇನೆ. ಹಾಗೆಯೇ ಅಧ್ಯಯನದ ಕ್ಷೇತ್ರಕಾರ್ಯದಲ್ಲಿ ಸಹಾಯ ಮಾಡಿದ ನನ್ನ ಅಣ್ಣ **ಧನರಾಜ** ತಮ್ಮ **ಲಿಂಗರಾಜ** ಹಾಗ್ಗೂ ಸಹೋದರಿಯರಾದ **ಅನೀತಾ, ಲೀಲಾ, ಮೀನಾಕ್ಷಿ**ಯವರನ್ನು ಸದಾ ನೆನೆಯುತ್ತೇನೆ. **ಶ್ರೀಮತಿ ರೇಣುಕಾ ಗಂಡ ಚಂದ್ರಕಾಂತ ಶ್ರೀನಿವಾಸ ಸರಡಗಿ, ಶ್ರೀಮತಿ ಮಂದಾಕಿನಿ ಗಂಡ ವಸಂತರಾವ, ಶಾಮಲಾಬಾಯಿ ಗಂಡ ಬಾಲಚಂದ್ರರಾವ ಉಪ್ಲಿ**ಯವರಿಗೂ ಸವಿನಯದಿಂದ ನೆನಪಿಸಿಕೊಳ್ಳುವೆ.

ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆ ಮೇಲು ಎನ್ನುವಂತೆ ಕೃಷಿಯನ್ನೇ ನಂಬಿ ಜೀವನ ಸಾಗಿಸಿದ ಅನುಭವದ ಖಣಿಯಾಗಿರುವ ನನ್ನ ಮಾವರಾದ **ಶ್ರೀ ಬಸವಣಪ್ಪಾ ತಂದೆ ವೀರಭದ್ರಪ್ಪಾ ರಾಜೇಶ್ವರ,** ಅತ್ತೆಯವರಾದ **ಕಾಶಿಬಾಯಿ ಬಸವಣಪ್ಪಾ ರಾಜೇಶ್ವರ** ಅವರ ಸಹಾಯವನ್ನು ಮರೆಯಲಾರೆ. ಹಾಗೂ ನೆಗಣಿಯಾದ **ಶಿಲ್ಪಾ,** ಮೈದುನರಾದ **ಶರಣಬಸಪ್ಪಾ** ನಾದಿನಿಯರಾದ **ಸಂಗಮ್ಮಾ ಶಿವರಾಯ ಭೂಯ್ಯಾರ, ಶಾಂತಾಬಾಯಿ ಘಾಳೆಪ್ಪಾ ಮಂಠಾಳ** ಇವರನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳುವೆ.

ಕಮರಿ ಹೋಗುತ್ತಿರುವ ಆಸೆಯನ್ನು ಮತ್ತು ಚಿಗುರಿಸಿದ ಹಾಗೂ ಸದಾ ಸಹಾಯಕರಾಗಿರುವ ನನ್ನೊಳಗಿನ ಚೈತನ್ಯವಾದ ನನ್ನ ಬಾಳ ಸಂಗಾತಿಯವರಾದ ಶ್ರೀ **ರಾಜಶೇಖರ ತಂದೆ ಬಸವಣಪ್ಪಾ ರಾಜೇಶ್ವರ** ಇವರಿಗೆ ಸದಾ ಚಿರ ಋಣಿಯಾಗಿರುವೆ. ನನ್ನಾಸೆಗೆ ತಮ್ಮ ಪುಟ್ಟ ಕನಸ್ಸುಗಳನ್ನು ಸೇರಿಸಿದ ನನ್ನ ಮುದ್ದು ಮಕ್ಕಳಾದ **ನಾಗಲಕ್ಷ್ಮೀ ಆರ್.** ಮತ್ತು **ವಿಶಾಲ ಆರ್.** ಹಾಗೂ **ಪುಟ್ಟಿ, ಅನುರಾಧ**ಳನ್ನು ಅತಿ ಹರ್ಷದಿಂದ ನೆನೆಯುತ್ತೇನೆ.

ಈ ಅಧ್ಯಯನವು ಗಣಕಯಂತ್ರದ ಸಹಾಯದಿಂದ ಸುಂದರವಾಗಿ ಬೆರಳಚ್ಚುಗೊಳಿಸಿದ **ಶ್ರೀ ರಾಜು ಬಿಜ್ಜಾ** ರವರಿಗೂ ಕೂಡಾ ನನ್ನ ವಂದನೆಗಳು.

**ಕಲಾವತಿ.**

# ಪರಿವಿಡಿ


| ಅಧ್ಯಾಯಗಳು | ವಿವರಣೆ | ಪು.ಸಂ. |
|---|---|---|
| ಅಧ್ಯಾಯ – ೧ | ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ | ೧ – ೭ |
| ಅಧ್ಯಾಯ – ೨ | ನಂಬಿಕೆಗಳ ಹುಟ್ಟು ಮತ್ತು ಪೂರ್ವೋತ್ತರ | ೮ – ೩೬ |
| ಅಧ್ಯಾಯ – ೩ | ಆಚರಣೆಗಳು : ಧರ್ಮ–ದೇವರು | ೩೭ – ೧೩೬ |
| ಅಧ್ಯಾಯ – ೪ | ಕೃಷಿ ನಂಬಿಕೆ ಮತ್ತು ಆಚರಣೆಗಳು | ೧೩೭ – ೧೮೫ |
| ಅಧ್ಯಾಯ – ೫ | ನಿಸರ್ಗವನ್ನು ಕುರಿತು ನಂಬಿಕೆ ಮತ್ತು ಆಚರಣೆಗಳು | ೧೮೬ – ೨೧೬ |
| ಅಧ್ಯಾಯ – ೬ | ಆಹಾರ–ಆರೋಗ್ಯ ಕುರಿತು ನಂಬಿಕೆ ಮತ್ತು ಆಚರಣೆಗಳು | ೨೧೭ – ೨೫೧ |
| ಅಧ್ಯಾಯ – ೭ | ಸಂಕೀರ್ಣ | ೨೫೨ – ೨೬೪ |
| ಅಧ್ಯಾಯ – ೮ | ಸಮಾರೋಪ | ೨೬೫ – ೨೭೧ |
| | ಅನುಬಂಧ | ೨೭೨ – ೨೮೧ |

# ಅಧ್ಯಾಯ–೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧. ಪ್ರಸ್ತಾವನೆ

೨. ಅಧ್ಯಯನದ ಉದ್ದೇಶ

೩. ಅಧ್ಯಯನದ ವ್ಯಾಪ್ತಿ

## ೧. **ಪ್ರಸ್ತಾವನೆ :**

ಜನಪದ ಮತ್ತು ಜಾನಪದ ಎಂಬ ಎರಡು ಶಬ್ಧಗಳ ಅರ್ಥ ವ್ಯಾಪ್ತಿ ವಿಶಿಷ್ಟವಾದದು. ಜಾನಪದ ಎನ್ನುವ ಪದ ಇಂಗ್ಲೀಷ Folklore ಎಂಬ ಪದಕ್ಕೆ ಸಮನಾರ್ಥಕವಾಗಿ ಬಳಸಿರುವ ಕನ್ನಡ ಪದ Folklore ಎನ್ನುವುದು, Folk ಮತ್ತು lore ಎಂಬ ಎರಡು ಪ್ರತ್ಯೇಕ ಅರ್ಥಗಳನ್ನುಳ್ಳ ಪದಗಳ ಸಂಯೋಗದಿಂದಾಗಿದೆ. Folk ಎಂದರೆ ಜನಪದ lore ಎಂದರೆ ಜ್ಞಾನ ಎಂಬ ಅರ್ಥಗಳಿವೆ. ಒಟ್ಟಾಗಿ ಇದು 'ಜನಪದ ಜ್ಞಾನ' ಎಂದಾಗುತ್ತದೆ. ಈ ಪದಕ್ಕೆ ಡಾ.ಹಾ.ಮಾ.ನಾಯಕರು ಕನ್ನಡದಲ್ಲಿ ಜಾನಪದ ಎಂಬ ಶಬ್ದ ಬಳಸಿದ್ದಾರೆ. ಜನಪದರ ಜ್ಞಾನವೇ ಜಾನಪದ.

ಜಾನಪದ ವಿದ್ವಾಂಸರು ಜನಪದವನ್ನು ವಿವರಿಸುವ ಕ್ರಮ ಕೂಡಾ ಇದೇ ರೀತಿಯದಾಗಿದೆ. ಕ್ರಿ.ಶ. ೧೮೧೨ ರಿಂದ ಗ್ರೀಮ್ ಸಹೋದರರಿಂದ ಜಾನಪದ ಅಧ್ಯಯನ ಆರಂಭಗೊಂಡು ೧೮೪೬ರಲ್ಲಿ Folkore ಎಂಬ ಹೆಸರನ್ನು ಪಡೆದು ಅಮೇರಿಕಾದಲ್ಲಿ ಇದು ಜಾನಪದ ಅಧ್ಯಯನ ಎಂಬ ವಿಸ್ತಾರವಾದ ಹಿನ್ನೆಲೆಯನ್ನು ಪಡೆಯುವವರೆಗೆ ಜಾನಪದವನ್ನು ಅನೇಕ ವಿದ್ವಾಂಸರು ವಿವರಿಸಿದ್ದಾರೆ. ಅಂತಹವರಲ್ಲಿ ಇಬ್ಬರ ವಿದ್ವಾಂಸರ ಹೇಳಿಕೆಗಳು ಈ ಕೆಳಗಿನಂತಿವೆ.

**ಉಮಾಲ ಕ್ಯಾಥರಿನ್ :**

ಈಕೆ ಕ್ಯಾಲಿಪೋರ್ನಿಯ ವಿಶ್ವವಿದ್ಯಾನಿಲಯದಲ್ಲಿ ಮಾನವ ಶಾಸ್ತ್ರಜ್ಞೆ ಅಮೇರಿಕಾದ 'ಜರ್ನಲ್ ಆಫ್ ಅಮೇರಿಕನ್ ಫೋಕ್ ಲೋರ್' ಸೊಸೈಟಿಗೆ ಸದಸ್ಯೆಯಾಗಿ ಕೆಲಸದಲ್ಲಿದ್ದಾಳೆ. "ಜಾನಪದ ತನ್ನ ಸ್ವಭಾವದಲ್ಲಿ ರೈತಾಪಿ ವರ್ಗದ ಪದ್ಧತಿಗಳು, ನಂಬಿಕೆಗಳು ಮತ್ತು ಗದ್ಯಕಥನಗಳನ್ನು ಒಳಗೊಂಡದ್ದು".[೧]

**ಲೀಚ್, ಮ್ಯಾಕ್, ಎಡ್ವರ್ಡ್ :**

"ನಂಬಿಕೆಗಳು, ಪದ್ಧತಿಗಳು, ಪರಂಪರೆಗಳು, ಕಥೆಗಳು, ಮಾಂತ್ರಿಕ ಆಚರಣೆಗಳು ಗಾದೆಗಳು ಹಾಡುಗಳು ಮುಂತಾದವನ್ನು ಪ್ರತಿನಿಧಿಸುವ ವಿಶಿಷ್ಟಾರ್ಥವೇ ಜಾನಪದ"[೨]

ಜಗತ್ತಿನ್ಯಾದ್ಯಂತ ಜಾನಪದ ಅಧ್ಯಯನ ಆರಂಭಗೊಂಡಂತೆ, ಜಾನಪದದ ಪರಿಕಲ್ಪನೆ ಕ್ರಿ.ಶ. ೧೮೪೬ರಲ್ಲಿ ವಿಲಿಯಂ ಥಾಂಸನ್ ನಿಂದ ಸೂಚಿತವಾದ ನಂತರದ ದಿನಗಳಲ್ಲಿ ಭಾರತದಲ್ಲೂ ಅದರ ಅಧ್ಯಯನ ಆರಂಭವಾಯಿತು. ಭಾರತದಲ್ಲಿ ಋಗ್ವೇದ ಕಾಲದಿಂದಲೂ ಜಾನಪದದ ಮೂಲಕ ಅರಸಲಾಗುತ್ತದೆ.

---

[೧] ಅಡಿಟಿಪ್ಪಣಿ : ಜನಪದರು ನಾವು – ಲೇ.ಡಾ.ಹಿ.ಶಿ.ರಾಮೇಗೌಡ ಪುಟ ಸಂಖ್ಯೆ ೫೬

[೨] ಜನಪದರು ನಾವು – ಲೇ.ಡಾ.ಹಿ.ಶಿ.ರಾಮೇಗೌಡ ಪುಟ ಸಂಖ್ಯೆ ೫೯

ಪಂಚತಂತ್ರ, ಹಿತೋಪದೇಶ, ಬೇತಾಳ, ಪಂಚವಿಂಶತಿ, ಶುಕ್ಲಸಪ್ತತಿ, ಗುಣಾಢ್ಯನ ಬೃಹತ್ಕಥೆಯ ಆಧಾರದ ಮೇಲೆ ರಚಿತವಾದ ಕ್ಷೇಮೇಂದ್ರನ ಬೃಹತ್ಕಥಾಮಂಜರಿ, ಸೋಮದೇವನ ಕಥಾಸರಿತ್ಸಾಗರ ಮುಂತಾದವು ಜನಪದ ಕಥೆಗಳ ದೊಡ್ಡ ಕೋಶಗಳಿವೆ. ಕನ್ನಡದಲ್ಲಿ ಪ್ರಥಮ ಗದ್ಯಗ್ರಂಥ 'ವಡ್ಡಾರಾಧನೆ'ಯೇ ಕನ್ನಡದ ಪ್ರಥಮ ಜನಪದ ಕಥಾಸಂಕಲನ ಎನಿಸುತ್ತದೆ.

ಕರ್ನಾಟಕದಲ್ಲಿ ಜನಪದ ಸಾಹಿತ್ಯವನ್ನು ರಚಿಸಿದ ವಿದ್ವಾಂಸರನ್ನು ಮಾಸ್ತಿಯವರ ಕಾಲದಿಂದಲೇ ಗುರುತಿಸಲಾಗಿದೆ. ಮಾಸ್ತಿಯವರ 'ಕನ್ನಡನಾಡಿನ ಲಾವಣಿ ಸಾಹಿತ್ಯ' ಎನ್ನುವ ಲೇಖನ ಜನಪದ ಸಾಹಿತ್ಯದ ಮೇಲೆ ಬೆಳಕು ಚೆಲ್ಲುತ್ತದೆ. ಗರತಿಯ ಹಾಡು, ಉತ್ತರ ಕರ್ನಾಟಕದ ಮಲ್ಲಿಗೆ ದಂಡೆ, ಜೀವನ ಸಂಗೀತ ಎನ್ನುವ ಕೃತಿಗಳು ಪ್ರಕಟಗೊಂಡ ನಂತರ ಒಂದೊಂದು ಕೃತಿಗಳು ಜಾನಪದ ಕಣಜ ತುಂಬಲು ಸಹಾಯವಾದವು. ಶಿವರಾಮ ಕಾರಂತ, ಹಾ.ಮಾ.ನಾಯಕ, ದೇ.ಜ.ಗೌ ರಂತಹ ಲೇಖಕರಿಂದ ಜಾನಪದ ಒಂದು ನಿರ್ಧಿಷ್ಟ ಸ್ವರೂಪ ಪಡೆಯಿತು.

ಜಾನಪದವು ಪರಂಪರೆಯ ಮೂಲಕ ಸಾಗುತ್ತಾ ಬಂದ ಸಂಸ್ಕೃತಿಯನ್ನು ತಿಳಿಸುವ ಮುಖ್ಯವಾಹಕವಾಗಿದೆ. ಮೌಖಿಕವಾಗಿ ಅನುಭವಿಗಳಲ್ಲಿ ಹರಿದು ಬರುವ ಜ್ಞಾನ ಮತ್ತು ಅನುಭವಗಳ ಪ್ರತಿರೂಪಗಳಾಗಿರುತ್ತವೆ. ಅವರಲ್ಲಿ ಪ್ರೌಢಜ್ಞಾನದ ಮೂಲಕ ಅವರ ಆಚಾರ–ವಿಚಾರ, ರೂಢಿ–ಸಂಪ್ರದಾಯಗಳು, ನಂಬಿಕೆ–ಆಚರಣೆಗಳು, ಗಾದೆ–ಒಗಟು, ಕಥೆ–ಗೀತೆ, ನೃತ್ಯ–ನಾಟಕಗಳ ರೂಪದಲ್ಲಿ ವಿದ್ಯಾವಂತರಲ್ಲದ ಬಹುಸಂಖ್ಯಾತರೆನಿಸುವ ಜನಪದರಲ್ಲಿ ಉಳಿದು, ಬೆಳೆದುಕೊಂಡು ಬರುತ್ತವೆ. ಇವುಗಳನ್ನು ಆಲಿಸುವ ಪ್ರವೃತ್ತಿ ಬೆಳೆಸಿಕೊಳ್ಳಬೇಕಾಗಿದೆ. ಜಾನಪದವೆಂಬುವುದು ಕೇವಲ ವೈಭವೀಕರಣದ ಸೊತ್ತು ಅಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತಾ ಡಾ.ಜೀ.ಶಂ.ಪ. ಕೆಳಗಿನ ಮಾತುಗಳನ್ನು ಆಡುತ್ತಾರೆ.

"ಜಾನಪದ ಎಂಬುದು ಕುತೂಹಲದ, ಅನುಕಂಪೆಯ, ಪ್ರಶಂಸೆಯ ಭಾವಾವೇಶದ ವಿಷಯವಾಗದೆ, ಅತ್ಯಂತ ನಿಷ್ಠೆ ಮತ್ತು ಶ್ರದ್ಧೆಯಿಂದ ಆಳವಾಗಿ ಅಭ್ಯಸಿಸಬೇಕಾದ ಒಂದು ವಿಜ್ಞಾನವಾಗಿದೆ. ಜಾನಪದದ ಬಗ್ಗೆ ಒಳ್ಳೆಯ ಒಳನೋಟಗಳನ್ನು ಬೆಳಸಿಕೊಂಡು ಸಂಗ್ರಹ, ವಿಭಜನೆ, ವಿಶ್ಲೇಷಣೆಗೆ ತೊಡಗುವವರು ಮಾತ್ರ ತೂಕವಾದದ್ದನ್ನೇನಾದರೂ ಈ ಕ್ಷೇತ್ರದಲ್ಲಿ ಕೊಡ ಬಲ್ಲವರಾಗಿದ್ದಾರೆ. ಆ ನಿಟ್ಟಿನಲ್ಲಿ ಜಾನಪದ ಅಭ್ಯಾಸಿಗಳು ಪ್ರವೃತ್ತರಾಗಲಿ"[೩]

ಜಾನಪದವನ್ನು ಜೀವಂತಗೊಳಿಸಲು, ಹೊಸ ಜೀವನ ಮೌಲ್ಯಗಳನ್ನು ಜಾನಪದಕ್ಕೆ ಹಾಯಿಸಲು, ಹೊಸ ಸಮಸ್ಯೆಗಳನ್ನು ಯುಕ್ತ ರೀತಿಯಲ್ಲಿ ಪರಿಚಯಿಸಿ ಜನರನ್ನು ಜಾಗೃತಗೊಳಿಸಲು ಭಾರತೀಯ ಸಮಾಜ ಜೀವನದ ಬೇರೆ ಬೇರೆ ಮುಖಗಳನ್ನು ಪರಿಚಯಿಸಲು ಜಾನಪದ ಅಧ್ಯಯನ ತೀವ್ರಗೊಳ್ಳಬೇಕಾಗಿದೆ.

ಕ್ರಿ.ಶ. ೧೯೫೯ರ ಬೀದರ ಸಾಹಿತ್ಯ ಸಮ್ಮೇಳನದ ಗದ್ದುಗೆಯಿಂದ ಆಚಾರ್ಯ ಡಿ.ಎಲ್. ನರಸಿಂಹಚಾರ್ಯರು ಮತ್ತೆ ಹಳೆಯ ಪಲ್ಲವಿಯಲ್ಲೇ ಎಚ್ಚರಿಸಬೇಕಾಯಿತು. "ಹೊಸ ನಾಗರಿಕತೆ ಹಳ್ಳಿಗಳಿಗೆ ನುಗ್ಗಿ ಅಲ್ಲಿನ ಜನಜೀವನದ, ಸಾರಸರ್ವಸ್ವವಾಗಿರುವ ಸಾಹಿತ್ಯ ಕುಸುಮವನ್ನು ಬಾಡಿಸುವ ಮುನ್ನವೇ ಅದರ ಸಂಗ್ರಹಣ ಕಾರ್ಯ ಆದಷ್ಟೂ ತ್ವರಿತವಾಗಿ ಮುಂದುವರಿಯಬೇಕು"[೪] ಎಂದು ಜಾನಪದದ ವಿಶೇಷತೆಯನ್ನು

[೩] ಅಡಿಟಿಪ್ಪಣಿ: ಅನ್ವಯಿಕ ಜಾನಪದ – ಲೇ – ಡಾ.ಬಿ.ಎ.ವಿವೇಕ ರೈ. ಪುಟ ಸಂಖ್ಯೆ ೧೨೨

[೪] ಅಡಿಟಿಪ್ಪಣಿ: ಜಿ.ಶಂ.ಪ. ಅವರ ಜಾನಪದ ಬರಹಗಳು. ಲೇ–ಕಾಳೇಗೌಡ ನಾಗವಾರ ಮತ್ತು ಡಾ.ಅಂಬಳಿಕೆ ಹಿರಿಯಣ್ಣ ಪುಟ ಸಂಖ್ಯೆ–[illegible]

ಮತ್ತು ಅದರ ಬೆಳವಣಿಗೆಯನ್ನು ಕುರಿತು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿರುವರು. ಜಾನಪದವನ್ನು ಉಳಿಸಿಕೊಳ್ಳುವ ಕಾಳಜಿಯನ್ನು ಬರವಣಿಗೆಯಲ್ಲಿ ಪಾಲ್ಗೊಳ್ಳುತ್ತಿರುವ ಲೇಖಕರು ಇದರ ಅಸ್ತಿತ್ವವನ್ನು ಉಳಿಸಿಕೊಳ್ಳುವ ಜವಾಬ್ದಾರಿ ಕೈಗೆತ್ತಿಕೊಳ್ಳಬೇಕಾಗಿದೆ.

ಜಾನಪದದ ಅತ್ಯಂತ ಉತ್ಕೃಷ್ಟವಾದ ಭಾಗವೇ ಜನಪದ ಸಾಹಿತ್ಯ. ಜನಪದದ ನೇರ ನುಡಿಗಳನ್ನು, ಅನುಭವಗಳನ್ನು, ಮನಸ್ಸಿನ ಆಳದ ಆಲೋಚನೆಗಳನ್ನು ಒಳಗೊಂಡ ಅವರಾಡುವ ಪದವೇ ಜನಪದ. ಜನಪದ ಗೀತೆ, ಕಥೆ, ಗಾದೆ, ಒಗಟು, ಲಾವಣಿಗಳು ಜನಪದ ಸಾಹಿತ್ಯದ ಪ್ರಕಾರಗಳಾಗಿ ಉತ್ತಮ ಅಧ್ಯಯನಕ್ಕೆ ಫಲಭರಿತ ಸಾಹಿತ್ಯರಾಶಿ ಒದಗಿಸಿಕೊಟ್ಟಿವೆ. ಇವುಗಳ ರಚನೆಯಲ್ಲಿ ಪುನಃ ಪೂರ್ತಿಯಾಗಿ ಸವಿಯುಂಡು ಸಾಧನೆಗೈದಿರುವರು. ಇನ್ನೂ ಜನಪದ ಸಾಹಿತ್ಯದಲ್ಲಿ ಇಂತಹ ಸವಿ ಉಣಿಸುವ ಸಾಕಷ್ಟು ವಿಷಯಗಳು ಅದರಲ್ಲಿವೆ. ಅಂತಹ ವಿಷಯಗಳಲ್ಲಿ ಜನಪದ ನಂಬಿಕೆ ಮತ್ತು ಆಚರಣೆಗಳು ಒಂದಾಗಿವೆ.

ಮಾನವ ಬದುಕಿನ ಎಲ್ಲ ಮಗ್ಗುಲಗಳನ್ನು ಆವರಿಸಿಕೊಂಡಿರುವ ನಂಬಿಕೆಗಳು ಜನಪದ ಪ್ರಕಾರಗಳೊಂದಿಗೆ ನಿಕಟ ಸಂಬಂಧವನ್ನು ಪಡೆದುಕೊಂಡಿವೆ. ಅವುಗಳು ಕ್ಷಣದಲ್ಲಿ ಹುಟ್ಟಿ ಕ್ಷಣದಲ್ಲಿ ಕಣ್ಮರೆಯಾಗಿ ಹೋಗುವುದಿಲ್ಲ. ನಿಧಾನಗತಿಯಲ್ಲಿ ವ್ಯಕ್ತಿ ಅನುಭವದ ಮೂಲಕ ಸಮಾಜದ ಜನರಲ್ಲಿ ಪ್ರಚಾರಗೊಂಡು ತಲೆಮಾರಿನಿಂದ ತಲೆಮಾರಿಗೆ ಮುಂದುವರೆದಾಗ ಅದು ನಂಬಿಕೆಯಾಗಿ ಉಳಿಯುತ್ತದೆ. ಅದು ತಕ್ಷಣವೇ ಪ್ರಸಾರವಾಗಲು ಅಂದಿನ ಕಾಲದಲ್ಲಿ ಕಂಪ್ಯೂಟರ್, ಇಂಟರನೆಟ್, ಇ–ಮೇಲ್, ಫ್ಯಾಕ್ಸ್ ಅಂತಹ ವ್ಯವಸ್ಥೆಗಳೇನು ಇರಲಿಲ್ಲ. ನಂಬಿಕೆಗಳು ವ್ಯಕ್ತಿಗಳಲ್ಲಿ ಕಂಡುಂಡ ಅನುಭವಗಳಾಗಿ ಬಂದಿವೆ. ಆದರೆ ಬಂದಿರುವ ದಾರಿಗಳಲ್ಲಿ ಭಿನ್ನತೆಯಿರಬಹುದು. ಕೆಲವೊಂದು ಭಯ, ದೈವಿಭಾವ, ಸುಖ, ಸಂತೋಷ, ಕೆಲಸ ಕಾರ್ಯಗಳ ಮೂಲಕ ಹುಟ್ಟಿಕೊಂಡಿವೆ.

ನಂಬಿಕೆಗಳ ಪರಂಪರೆಯ ಈ ಜ್ಞಾನವನ್ನು ಅಂತರ್ ಶಿಸ್ತಿನ ಅಧ್ಯಯನಕ್ಕೆ ಒಳಪಡಿಸಿ ಅದರ ಸಮಂಜಸತೆಯನ್ನು ಕಂಡುಕೊಳ್ಳುವ ಕೆಲಸ ಆಗಬೇಕಿದೆ. ವೈದ್ಯ, ವ್ಯವಸಾಯ, ಪರಿಸರ, ಆಹಾರ, ಆರೋಗ್ಯ, ಧರ್ಮ ಮುಂತಾದ ಕ್ಷೇತ್ರಕ್ಕೆ ಸಂಬಂಧಿಸಿದ ನಂಬಿಕೆಗಳು ವ್ಯಕ್ತಪಡಿಸುವ ಪಾರಂಪರಿಕ ತಿಳುವಳಿಕೆಯನ್ನು ಬರವಣಿಗೆಯಲ್ಲಿ ವ್ಯಕ್ತಪಡಿಸುವುದು ಸರಿಯೆನಿಸುತ್ತದೆ.

ಸಾಹಿತ್ಯದಲ್ಲಿ ಬರವಣಿಗೆಯ ಮೂಲಕ ನಂಬಿಕೆ – ಆಚರಣೆಗಳು ವ್ಯಕ್ತಪಡಿಸುವುದರಿಂದ ಜನರಿಗೆ ಓದುವ ಅವಕಾಶ ಸಿಕ್ಕಂತಾಗುತ್ತದೆ. ವಾಸ್ತವಿಕದಲ್ಲಿನ ಸಾಮಾಜಿಕ, ರಾಜಕೀಯ ಸಂದರ್ಭದಲ್ಲಿ ಮನುಷ್ಯ ಸಂಬಂಧಗಳನ್ನು ನೆಲೆಗೊಳಿಸುವಲ್ಲಿ ನಂಬಿಕೆಗಳನ್ನು ಬಳಸಿಕೊಳ್ಳಬೇಕಾಗಿದೆ. ಉದಾಹರಣೆಗೆ: ಮೊಹರಂ ಆಚರಣೆ, ಜಾತ್ರೆ–ಉತ್ಸವಗಳು, ದಸರಾ ಸಂದರ್ಭದಲ್ಲಿ ತುಳಜಾಪೂರಕ್ಕೆ ಹೋಗುವುದು ಇಂತಹ ನಂಬಿಕೆಗಳು ಆಚರಿಸುವ ಸಮಯದಲ್ಲಿ ಯಾವುದೇ ರೀತಿಯಲ್ಲಿ ಜಾತಿ–ಭೇದ, ಲಿಂಗಭೇದ ಮಾಡದೆ ಒಟ್ಟಾಗಿ ಆಚರಿಸುವರು.

ಹೀಗೆ ನಂಬಿಕೆಗಳನ್ನು ಬಳಸಿಕೊಳ್ಳುವಾಗ ಜನಪದ ನಂಬಿಕೆ ಮತ್ತು ಮೂಢ ನಂಬಿಕೆಗಳ ಅರ್ಥ ವ್ಯತ್ಯಾಸ ಅಗತ್ಯವಾಗಿ ತಿಳಿಯಬೇಕಾಗಿದೆ. ಏಕೆಂದರೆ ಇಂದಿನ ಶಿಕ್ಷಿತರೂ ಕೂಡಾ ಮೂಢನಂಬಿಕೆಗಳಿಂದ ದೂರವಾಗಿ ಉಳಿದಿಲ್ಲ. ಅಲ್ಲದೆ ಆಧುನಿಕ ಕಾಲದ ಜ್ಯೋತಿಷರು ಟಿ.ವಿ.ಮಾಧ್ಯಮದ ಮೂಲಕ 'ಪುನರ್ಜನ್ಮ'

'ಜನ್ಮಾಂತರ' ಎನ್ನುವ ಕಾರ್ಯಕ್ರಮಗಳಲ್ಲಿ ರಾಜಾರೋಷವಾಗಿ ಅದಕ್ಕೆ ಜೋತು ಬಿದ್ದು ಪ್ರಚಾರ ಗಿಟ್ಟಿಸುವುದನ್ನು ಕಾಣುತ್ತೇವೆ. ಆಧುನಿಕತೆಗೆ ತಕ್ಕಂತೆ ಅದು ರೂಪಾಂತರ ಹೊಂದುತ್ತಿದೆ ಎಂದಷ್ಟೇ ಹೇಳಬಹುದೇನೋ ಈ ಮೂಢನಂಬಿಕೆಗಳಿಗೆ ಜೋತು ಬೀಳಲು ಕಾರಣಗಳೆಂದರೆ, ಮೊದಲನೆಯದಾಗಿ ವಿಚಾರಗಳ ಅರಿವಿಲ್ಲದಿರುವುದು. ಅರಿವಾದರೂ ಅದನ್ನು ಬಿಡುವ ಆತ್ಮಸ್ಥೈರ್ಯದ ಕೊರತೆ ಎಂದಿನಿಂದಲೋ ಆಚರಿಸಿಕೊಂಡು ಬಂದ ಅದನ್ನು ಬಿಟ್ಟರೆ ಏನಾಗಿ ಹೋಗುವುದೋ ಎಂಬ ಅಜ್ಞಾನದಿಂದಾಗುವ ಭಯ, ಆಚರಿಸಿದರೆ ಲಾಭವಾಗಬಹುದೆಂಬ ನಂಬಿಕೆ.

ಜನ ಸಾಮಾನ್ಯರ ನಿತ್ಯ ಬದುಕಿನಲ್ಲಿ ಸೂರ್ಯೋದಯದಿಂದ – ಸೂರ್ಯಾಸ್ತದವರೆಗೇ ಬದುಕಿನ ಅಸ್ತದವರೆಗೂ ನಂಬಿಕೆಗಳು ಹೆಣೆದುಕೊಂಡು ಬಂದು ಸತ್ವವನ್ನು, ಒಂದು ತೀವ್ರತೆಯನ್ನು ನೀಡುತ್ತವೆ. ನಂಬಿಕೆಗಳು ಧರ್ಮದ ಅಸ್ತ್ರವಾಗಿ ತೆಗೆದು ನಿರಾಯಾಸವಾಗಿ ಪ್ರಯೋಗಿಸುವುದನ್ನು ನೊಡಿದರೆ ಅಚ್ಚರಿಯಾಗುತ್ತದೆ. ಲೌಕಿಕ ಅನುಭವದ ಅಡಿಗಲ್ಲಿನಲ್ಲಿ ರೂಪಿತವಾದ ನಂಬಿಕೆ ಮತ್ತು ಆಚರಣೆಗಳು ಅನಾದಿ ಕಾಲದಿಂದಲೂ ಜೀವನದಲ್ಲಿ ಬೆರೆತು ಬಂದಿವೆ. ಸುಸಂಸ್ಕೃತರೂ, ನಾಗರಿಕರೂ, ಸುಶಿಕ್ಷಿತರೂ ಬಿಡುವಂತಿಲ್ಲ. ಹೀಗೆ ಜನಸಾಮಾನ್ಯರ ಜೀವಾಳವೇ ಆಗಿವೆ. ಅವುಗಳಲ್ಲಿ ಕೆಲವೊಂದು ವಿಶಿಷ್ಟವೂ, ಅಪೂರ್ವವೂ ಆಗಿವೆ. ಇವುಗಳು ಹೆಚ್ಚಾಗಿ ರೂಢಿಗತವಾಗಿರುವುದು ಗ್ರಾಮಾಂತರ ಪ್ರದೇಶಗಳಲ್ಲಿ. ಅವರ ಜೀವನ ಕ್ರಮಕ್ಕೆ, ಅವರ ಸಂಸ್ಕೃತಿಗೆ, ರೀತಿ ನೀತಿಗಳಿಗೆ ಹಿಡಿದ ಕೈಗನ್ನಡಿಯಂತಿವೆ.

'ನೆಮ್ಮು'ಗೆಯಿಂದ ನಂಬುಗೆ ಎಂಬ ಪದ ಬಂದಿದೆ. 'ನೆಮ್ಮು' ಎಂದರೆ ಆಶ್ರಯಿಸು, ಅವಲಂಬಿಸು, ನಟ್ಟು, ನಿಲ್ಲು, ಆಧಾರ, ಆಸರೆ, ಭರವಸೆ ಇತ್ಯಾದಿ ಅರ್ಥಗಳಿವೆ. ಆಧಾರವುಳ್ಳದ್ದು ನಂಬಿಕೆಯಾಗುತ್ತದೆ. ಆ ಆಧಾರವು ಯಾವುದು ಎನ್ನುವುದು ಮುಖ್ಯ.

ಅವೈಜ್ಞಾನಿಕ ಮತ್ತು ವೈಜ್ಞಾನಿಕ ಎಂದು ಎರಡು ವರ್ಗಗಳಲ್ಲಿ ಗುರುತಿಸಿಕೊಳ್ಳಲಾದ ನಂಬಿಕೆಗಳಲ್ಲಿ, ವೈಜ್ಞಾನಿಕ ಅರ್ಥಕೊಡುವ ಮತ್ತು ಉಪಯುಕ್ತವಾದವುಗಳನ್ನು ಮಾತ್ರ ಎತ್ತಿ ಹಿಡಿದು ಅವೈಜ್ಞಾನಿಕ ಎನಿಸಿದ ನಂಬಿಕೆಗಳ ಅಧ್ಯಯನ ಕೈಬಿಡುವಂತಿಲ್ಲ. ಅವೈಜ್ಞಾನಿಕವಾದ ಆ ನಂಬಿಕೆಗಳ ಹಿಂದೆ ಇತಿಹಾಸ, ಸಾಮಾಜಿಕ, ಧಾರ್ಮಿಕ, ಅಥವಾ ಇನ್ನಾವುದೇ ಹಿನ್ನಲೆ ಅದರಲ್ಲಿರುವುದನ್ನು ತಿಳಿದುಕೊಳ್ಳುವ ಪ್ರಯತ್ನ ನಮ್ಮದಾಗಬೇಕು. ಅವುಗಳ ಪ್ರಾಮುಖ್ಯತೆ, ಪ್ರಯೋಜನ, ಉದ್ದೇಶವೇನು ಎನ್ನುವುದು ಅಧ್ಯಯನ ಮಾಡಬೇಕಾಗಿದೆ.

**೨ ಅಧ್ಯಯನದ ಉದ್ದೇಶ :**

ಕರ್ನಾಟಕದ ಕಿರೀಟ, ಕರ್ನಾಟಕದ ಕಾಶ್ಮೀರ ಹಾಗೂ ಜನಪದರ ಬಿದರಿ ಕಲೆಗೆ ಪ್ರಸಿದ್ಧವಾದ ಬೀದರ ಜಿಲ್ಲೆಗೆ ಸಂಬಂಧಿಸಿದಂತೆ 'ಬೀದರ ಜಿಲ್ಲೆಯ ಜನಪದ ನಂಬಿಕೆ ಮತ್ತು ಆಚರಣೆಗಳು' ಅಧ್ಯಯನದ ವಿಷಯ ವಸ್ತುವಾಗಿದೆ. ಇದಕ್ಕೆ ಕಾರಣವೆಂದರೆ ಇಂದಿನ ಆಧುನೀಕರಣದ ಮಾಯಾಲೋಕದಲ್ಲಿ ಮಾಯಾವಾಗುತ್ತಿರುವ ಜನಪದ ನಂಬಿಕೆ ಮತ್ತು ಆಚರಣೆಗಳನ್ನು ಗುರುತಿಸುವ ಉದ್ದೇಶವಾಗಿದೆ.

ಆಯಾ ಕಾಲದ ಅವಶ್ಯಕತೆಗಳಿಗನುಗುಣವಾಗಿ ಬೆಳೆದು ಬಂದಿರುವ ನಂಬಿಕೆ ಮತ್ತು ಆಚರಣೆಗಳನ್ನು ಇಂದಿನ ಸಂದರ್ಭದಲ್ಲಿಟ್ಟು ನೋಡಿ ವೈಜ್ಞಾನಿಕ ವೈಚಾರಿಕ ತಳಹದಿಯಿರುವವುಗಳನ್ನು ಗುರುತಿಸುವ ಅಗತ್ಯವಿದೆ.

ಅಷ್ಟೇ ಅಲ್ಲದೆ ಇಂದಿನ ಬದುಕಿಗೆ ಹೊರೆಯಾದವುಗಳನ್ನು ವಿದ್ಯಾವಂತರು ಕೂಡ ಕಣ್ಣು ಮುಚ್ಚಿ ಅನುಸರಿಸುತ್ತಿದ್ದಾರೆ. ಕೆಲವೊಮ್ಮೆ ವೈಚಾರಿಕತೆಯ ಹೆಸರಿನಲ್ಲಿ ಎಲ್ಲವನ್ನು ತಿರಸ್ಕರಿಸಲಾಗುತ್ತಿದೆ. ಈ ಎರಡೂ ಧೋರಣೆಗಳು ಪ್ರಗತಿ ವಿರೋಧಿಯೇ, ಈ ಅಧ್ಯಯನವು ಈ ಎರಡೂ ಧೋರಣೆಗಳಿಗೆ ಕಾರಣವಾದ ಸಾಮಾಜಿಕ, ಆರ್ಥಿಕ ಸಂದರ್ಭಗಳನ್ನು ಗುರುತಿಸುವ ಆಶಯ ಹೊಂದಿದೆ. ಸಾಂಸ್ಕೃತಿಕ ರಾಜಕಾರಣವಾಗಿ ಆಧುನಿಕತೆಯು ವೇಷಧರಿಸಿರುವ ಇಂದಿನ ಸಂದರ್ಭದಲ್ಲಿ ಪರ್ಯಾಯದ ಚಿಂತನೆಗೆ ಪೂರಕವಾಗುವಂತಿರುವ ನಮ್ಮ ಹಿರಿಯರ ಅನುಭವ ದ್ರವ್ಯವನ್ನು ಸ್ಪಷ್ಟಪಡಿಸಿಕೊಂಡು ನಮ್ಮ ಮುಂದಿನ ಬದುಕಿಗೆ ಬೆಳಕಿಂಡಿಗಳನ್ನು ನಿರ್ಮಿಸುವಲ್ಲಿ ಈ ಅಧ್ಯಯನವು ಶ್ರದ್ಧೆ ವಹಿಸಿದೆ ಎಂದು ಹೇಳಬಹುದು.

ಜನಪದರು ಅನುಸರಿಸಿಕೊಂಡು ಬಂದಿರುವ ನಂಬಿಕೆಗಳು ಸಮಕಾಲೀನ ಸಂದರ್ಭದಲ್ಲಿ ನಿರ್ಲಕ್ಷಕ್ಕೆ ಒಳಗಾಗುತ್ತಿವೆ. ಏಕೆಂದರೆ ಜನಪದರು ಆಡು–ನುಡಿ, ಆಚಾರ–ವಿಚಾರ, ಉಡುಗೆ–ತೊಡುಗೆ, ಬದುಕು–ಬವಣೆ, ಆಧುನಿಕರಲ್ಲಿ ಹೆಚ್ಚಾನು ಹೆಚ್ಚು ಜನತೆಗೆ ಬೇಡವಾಗುತ್ತಿವೆ. ಹಳ್ಳಿಯ ಜನಪದರ ನಡುವೆ ಬದುಕುವ ಬದುಕಿಗೆ ಬೆಲೆಯಿಲ್ಲ ಎನ್ನುವ ತಿರಸ್ಕಾರ ಮನೋಭಾವನೆ ಕಂಡುಬರುತ್ತಿದೆ. ಆದ್ದರಿಂದ ಇಂತಹ ಅಧ್ಯಯನದ ಮೂಲಕ ಅವುಗಳ ಬಗ್ಗೆ ನೆನಪಿಸಬೇಕಾಗಿದೆ.

ನಗರದಲ್ಲಿ ಸಿಗುವ ಸೌಲಭ್ಯಗಳು ಹಳ್ಳಿಯಲ್ಲಿ ಸಂಪೂರ್ಣವಾಗಿ ದೊರೆಯದೇ ಇರುವ ನೆಪದಲ್ಲಿ ನಗರ ಜೀವನದ ಸುಳಿಯಲ್ಲಿ ಸಿಲುಕಿಕೊಳ್ಳುತ್ತಿದ್ದಾರೆ. ನಗರದಲ್ಲಿ ಅನುಭವಿಸುವ ನೀರು, ಆಹಾರ, ವಾಸಸ್ಥಾನದ ಸಮಸ್ಯೆಗಳೊಂದಿಗೆ ಬದುಕಬೇಕಾಗುತ್ತದೆ. ಆದರೆ ಈ ನಗರ ಜೀವನ ಒಂದು ರೀತಿಯಲ್ಲಿ ಗೌರವ ತಂದು ಕೊಡುತ್ತದೆ ಎನ್ನುವ ಸಂಕುಚಿತ ವಿಚಾರಕ್ಕೆ ತಲುಪುತ್ತಿರುವುದು ವಿಷಾದವೇ ಸರಿ. ಹಳ್ಳಿಯಿಂದ ನಗರ ಜೀವನಕ್ಕೆ ಮಾರು ಹೋದಂತೆ ನಮ್ಮ ಸಂಸ್ಕೃತಿಯಲ್ಲಿ ಆಚರಿಸಿಕೊಂಡು ಬರುತ್ತಿರುವ ನಂಬಿಕೆಗಳು ಬೇರೆ ಸ್ವರೂಪ ಪಡೆದುಕೊಳ್ಳುತ್ತಿವೆ. ಶಿಕ್ಷಣ ಪಡೆಯುತ್ತಿರುವ ಇಂದಿನ ಜನರಲ್ಲಿ ವೈಚಾರಿಕ ಪ್ರಜ್ಞೆ ಹಾಗೂ ವಿಮರ್ಶನಾ ಶಕ್ತಿ ಬೆಳೆದು ಬಂದಿರುವುದರಿಂದ ನಂಬಿಕೆಗಳನ್ನು ದೂರೀಕರಿಸದೆ ಅವುಗಳ ಅಂತರಾವಲೋಕನ ಅಧ್ಯಯನ ಅಗತ್ಯವಾಗಿದೆ.

ಆಧುನಿಕದಂತೆ ವೈದ್ಯಕೀಯ ಸೌಲಭ್ಯವಿರದ ಜನಪದರು ತಮ್ಮ ಅನುಭವದ ಮೂಲಕ ಒಂದಾನೊಂದು ಕಾಲದಲ್ಲಿ ರೋಗದಿಂದ ಗುಣಮುಖರಾಗಲು ಗಿಡಮೂಲಿಕೆಗಳನ್ನು ಬಳಸಿಕೊಂಡಿದ್ದಾರೆ. ನೈಸರ್ಗಿಕ ಸಂಪನ್ಮೂಲಗಳ ಬಳಕೆಯನ್ನು ಪತ್ತೆ ಮಾಡಿದ್ದಾರೆ. ಇರುವುದರಲ್ಲಿಯೇ ಹಂಚಿಕೊಳ್ಳುವ ಕಾಯಕ–ದಾಸೋಹಗಳ ಸಾಮಾಜಿಕ ಗುಣ ಬೆಳೆಸಿಕೊಂಡಿದ್ದಾರೆ. ಬದುಕಿಗೆ ಬೇಕಾಗುವ ಪ್ರೀತಿ, ಕರುಣೆ, ಅನುಕಂಪ, ಸಹಾನುಭೂತಿಗಳಂತಹ ಮಾನವೀಯ ಹಾಗೂ ನೈತಿಕ ಮೌಲ್ಯಗಳನ್ನು ಅಳವಡಿಸಿಕೊಂಡಿದ್ದಾರೆ. ಇಂತಹವುಗಳ ಪದೇ ಪದೇ ಬಳಕೆಯ ಫಲಿತವಾಗಿಯೇ ಬಂದ ನಂಬಿಕೆ ಮತ್ತು ಆಚರಣೆಗಳೆಲ್ಲವು ಮೂಢವೆಂದು ಹೇಳುವುದು ಹೇಗೆ ? ಆದ್ದರಿಂದ ಅವುಗಳನ್ನು ದೂರಿಕರಿಸದೆ. ವಿಭಿನ್ನವಾದ ವಿಚಾರಗಳ ಮೂಲಕ ಅವಲೋಕಿಸಿ ಅವುಗಳ ನಿಜವಾದ ಮೌಲಿಕ ಗುಣ ಗುರುತಿಸಿಕೊಳ್ಳುವಂತೆ ಪ್ರೇರಿಪಿಸಬೇಕಾಗಿದೆ.

ಜನಪದರ ಬದುಕಿಗೆ ಆಧಾರವಾಗಿರುವ ನಂಬಿಕೆ ಮತ್ತು ಆಚರಣೆಗಳೆಲ್ಲವು ಉಪಯುಕ್ತವಾದವುಗಳೇನು ಅಲ್ಲ. ಕೆಲವೊಂದು ನಂಬಿಕೆಗಳು ಸಮಯ ವಿಳಂಬ ಮಾಡುವ, ಭಯ ಹುಟ್ಟಿಸುವಂತಹವುಗಳು ಇವೆ.

'ಖಾಲಿ ಕೊಡ ಎದುರಿಗೆ ಬಂದರೆ ಕೆಲಸ ಆಗುವುದಿಲ್ಲ'. 'ಮೂವರು ಸೇರಿ ಕೆಲಸಕ್ಕೆ ಹೋಗಬಾರದು' ಇಂತಹವುಗಳ ಕುರಿತು ಏನು ? ಏಕೆ ? ಹೇಗೆ ? ಎಂದು ವಿಚಾರಿಸದೆ ಒಬ್ಬನಿಗಾದ ಅವಘಡದ ಅನುಭವ ಇತರರಿಗೂ ಅನ್ವಯಿಸುತ್ತದೆ ಎಂದು ನಂಬಿಕೊಂಡು ಬಂದಿದ್ದುಂಟು. ನನ್ನ ವಿದ್ಯಾರ್ಥಿ ಜೀವನದಲ್ಲಿ ನಡೆದ ಇಂತಹ ಒಂದು ನಂಬಿಕೆ ಕುರಿತು ನಡೆದ ಘಟನೆ ನೆನಪಿಗೆ ಬರುತ್ತದೆ. ಅದೇನೆಂದರೆ, ಹತ್ತನೆ ತರಗತಿಯಲ್ಲಿ ಓದುತ್ತಿರುವಾಗ ನಮ್ಮೂರಿನ ಪಕ್ಕದ ಹಳ್ಳಿಯಿಂದ ಶಾಲೆ ಕಲಿಯಲು ಬರುತ್ತಿದ್ದ ನನ್ನ ಗೆಳತಿಗೆ ಜ್ಯೋತಿಷ ಕೇಳಿಸಿಕೊಂಡಾಗ ಆಯುಷ್ಯ ಪ್ರಮಾಣ ಕಡಿಮೆಯಿದೆ ಎಂದು ಹೇಳಿದ್ದಕ್ಕೆ ಪರಿಹಾರವಾಗಿ ಕುರಿಯೊಂದನ್ನು ಬಲಿಕೊಟ್ಟರು. ಹಾಗೂ ಇತ್ತೀಚಿಗೆ ಅಧ್ಯಯನದ ಕ್ಷೇತ್ರ ಕಾರ್ಯಕ್ಕೆ ಔರಾದ ತಾಲೂಕಿನ ಮಾಳೆಗಾಂವಕ್ಕೆ ಹೋದಾಗ ಒಬ್ಬರ ಮನೆಯಲ್ಲಿ 'ಭಾಗ್ಯವಂತಿ ದೇವಿ' ಹುತ್ತಿನ ರೂಪದಲ್ಲಿ ಇತ್ತೀಚಿಗಷ್ಟೇ (ಮಾರ್ಚ-೨೦೧೦) ಹುಟ್ಟಿಕೊಂಡಿರುವಳೆಂಬುದನ್ನು ನಂಬಿದ್ದಾರೆ. ಹಾಗೆಯೇ ಆ ಮನೆಯ ಯಜಮಾನತಿ ಕನಸಿನಲ್ಲಿ ತಾನು ಹುಟ್ಟಿರುವುದಾಗಿ ಮತ್ತು ಒಂಬತ್ತು ತಿಂಗಳು ಬೆಳೆಯುವುದಾಗಿ ಹೇಳಿದಳಂತೆ!

ಹೀಗೆ ನಮ್ಮ ಹಳ್ಳಿಯ ಬದುಕಿನಲ್ಲಿ ಇಂತಹ ಅರ್ಥವಿಲ್ಲದ (ಮೂಢ ನಂಬಿಕೆಗಳು) ವಿಷಯಗಳು ನಂಬಿಕೆಗಳಾಗಿ ಜೀವನದಲ್ಲಿ ದುಗುಡವನ್ನು ಹುಟ್ಟಿಸುತ್ತವೆ. ಭಯವನ್ನುಂಟು ಮಾಡಿ ವಿನಾಕಾರಣ ಮಾನಸಿಕ ಗೊಂದಲಕ್ಕಿಡು ಮಾಡಿಕೊಡುತ್ತವೆ. ಇಂತಹ ಮೂಢನಂಬಿಕೆಗಳಿಂದ ದೂರಾಗಿ ಬದುಕಿಗೆ ಆಶಾಕಿರಣವಾಗಿರುವ ಮತ್ತು ವೈಜ್ಞಾನಿಕತೆಯ ಉಪಯೋಗ ಹೊಂದಿರುವ ಕಾರ್ಯಕಾರಣ ಸಂಬಂಧಗಳನ್ನು ವ್ಯಕ್ತಪಡಿಸುವ ನಂಬಿಕೆ ಮತ್ತು ಆಚರಣೆಗಳ ಹಿಂದಿರುವ ಹಿನ್ನೆಲೆ, ವಿಶಿಷ್ಟತೆ, ಉಪಯೋಗಗಳನ್ನು ತಿಳಿಸುವ ಉದ್ದೇಶವನ್ನು ಹೊಂದಲಾಗಿದೆ.

**೩. ಅಧ್ಯಯನದ ವ್ಯಾಪ್ತಿ :**

ಸರ್ವಕಾಲಿಕ ಹಾಗೂ ಸಾರ್ವತ್ರಿಕವಾದ ನಂಬಿಕೆಗಳು ಒಂದು ಚೌಕಟ್ಟಿಗೆ ಮಾತ್ರ ಸೀಮಿತವಾಗಿಲ್ಲ. ಬುಡಕಟ್ಟು, ಜನಾಂಗ, ಜಾತಿ, ದೇಶ, ವಿದೇಶ, ಸ್ತ್ರೀ ಪುರುಷ, ಹಿರಿಯ, ಕಿರಿಯ, ಪ್ರಾಣಿ, ಪಕ್ಷಿ, ಆಕಾಶ, ಭೂಮಿ, ನೀರು, ಬೆಂಕಿ, ಗಾಳಿ ದೇವರು, ದೆವ್ವ ಹೀಗೆ ನೂರಾರು ವಿಧಗಳಲ್ಲಿ ಭೂತಕಾಲದ ನಂಬಿಕೆಗಳು ವರ್ತಮಾನದಲ್ಲಿ ಚಲಿಸಿ ಭವಿಷ್ಯತ್ತಿಗೂ ಹೆಜ್ಜೆ ಇರಿಸುತ್ತವೆ. ನಿರಂತರ ಚಲನ ಶೀಲವಾಗಿರುವ ನಂಬಿಕೆಗಳ ಹರವು ಬಹಳ ವಿಶಾಲವಾದ ವ್ಯಾಪ್ತಿಯನ್ನು ಒಳಗೊಂಡಿದೆ.

ಈ ವಿಶಾಲತೆಯನ್ನು ಹೊಂದಿರುವ ಜನಪದ ನಂಬಿಕೆಗಳನ್ನು ಇಲ್ಲಿ ಬೀದರ ಜಿಲ್ಲೆಯ ಕ್ಷೇತ್ರ ವ್ಯಾಪ್ತಿಗೆ ಸೇರಿದಂತೆ ಅಧ್ಯಯನ ಕೈಗೊಳ್ಳಲಾಗಿದೆ. 'ಬೀದರ ಜಿಲ್ಲೆಯ ಜನಪದ ನಂಬಿಕೆ ಮತ್ತು ಆಚರಣೆಗಳು' ಎನ್ನುವುದು ಅಧ್ಯಯನದ ಆಯ್ಕೆ ವಿಷಯವಾಗಿದೆ.

ಜನಪದ ನಂಬಿಕೆಗಳು ಸಾಹಿತ್ಯೇತರ ಭಾಗಕ್ಕೆ ಸೇರುತ್ತವೆ. ಜಾನಪದ ವಿದ್ವಾಂಸರು, ವಿಜ್ಞಾನಿಗಳು ನಂಬಿಕೆಗಳಲ್ಲಿ ಜನಪದ ನಂಬಿಕೆ ಮತ್ತು ಮೂಢನಂಬಿಕೆ ಎಂದು ಪ್ರಭೇಧಗಳನ್ನು ಗುರುತಿಸಿದ್ದಾರೆ. ನಂಬಿಕೆಗಳು ಧೋರಣೆ ಮತ್ತು ವಿಶ್ವಾಸಕ್ಕೆ ಸಂಬಂಧಿಸಿದವು. ಮೂಢ ನಂಬಿಕೆ ಮಂತ್ರವಿದ್ಯೆಗೆ ಸಂಬಂಧಿಸಿದ್ದು ಅಪಾಯಕಾರಿಯಾಗಿರುತ್ತವೆ. ಆರ್.ಎಸ್.ಬಾಗ್ಸ್‌ರು ಆರು ಪ್ರಕಾರಗಳಾಗಿ ವಿಂಗಡಿಸಿದ್ದಾರೆ. ವೈಲ್ಯಾಂಡ್. ಡಿ. ಹ್ಯಾಂಡ್ ಏಳು ಪ್ರಕಾರಗಳಲ್ಲಿ ಹಾಗೂ ಜನಪದ ನಂಬಿಕೆಗಳ ವೈಜ್ಞಾನಿಕ ಅಧ್ಯಯನದಲ್ಲಿ ೧) ಧಾರ್ಮಿಕ ೨) ಸಾಂಸ್ಕೃತಿಕ ೩) ವೈಯುಕ್ತಿಕ ನಂಬಿಕೆಗಳೆಂದು ಮೂರು ಪ್ರಕಾರಗಳಾಗಿ ವಿಂಗಡಿಸಿದ್ದಾರೆ.

ಹೀಗೆ ವಿದ್ವಾಂಸರ ಮತ್ತು ವೈಜ್ಞಾನಿಕ ಅಧ್ಯಯನದ ಹಿನ್ನೆಲೆಯಲ್ಲಿ ೧) ಅಧ್ಯಯನದ ಉದ್ದೇಶ ವ್ಯಾಪ್ತಿ ೨) ನಂಬಿಕೆಗಳ ಹುಟ್ಟು ಪೂರ್ವೋತ್ತರ ೩) ಆಚರಣೆಗಳು ೪) ಕೃಷಿ ನಂಬಿಕೆ ಮತ್ತು ಆಚರಣೆಗಳು ೫) ನಿಸರ್ಗವನ್ನು ಕುರಿತು ನಂಬಿಕೆ ಮತ್ತು ಆಚರಣೆಗಳು ೬) ಆಹಾರ-ಆರೋಗ್ಯ ಕುರಿತು ನಂಬಿಕೆ ಮತ್ತು ಆಚರಣೆಗಳು ೭) ಸಂಕೀರ್ಣ ೮) ಸಮಾರೋಪ ಎನ್ನುವ ಅಧ್ಯಾಯಗಳು ರಚಿಸಿಕೊಳ್ಳಲಾಗಿದೆ. ಇವುಗಳಿಗೆ ಸಂಬಂಧಿಸಿದ ನಂಬಿಕೆ ಮತ್ತು ಆಚರಣೆಗಳು ನನ್ನ ಅಧ್ಯಯನದ ವಿಷಯ ವ್ಯಾಪ್ತಿಯಲ್ಲಿ ಒಳಗೊಂಡಿವೆ.

ಪ್ರಸ್ತುತ ಅಧ್ಯಯನದ ಸಮಯದಲ್ಲಿ ಕ್ಷೇತ್ರ ಕಾರ್ಯದ ಮೂಲಕ ಸಂಗ್ರಹಿಸಿದ ನಂಬಿಕೆಗಳ ವಿಶ್ಲೇಷಣೆಯು, ನಂಬಿಕೆಗಳ ಉದ್ದೇಶ, ಸತ್ಯಾಂಶ, ಉಪಯುಕ್ತೆ ಅವುಗಳಲ್ಲಿರುವ ಸಂಸ್ಕೃತಿಯ ಪ್ರತಿಬಿಂಬದ ಮನೋಭಾವನೆಗಳೇನು ಎಂಬುವುದು ಒಳಗೊಂಡಿದೆ. ನಂಬಿಕೆಗಳಲ್ಲಿ ಜನಪದರ ಗಟ್ಟಿಯಾದ ಮನೋಭಾವದೊಂದಿಗೆ, ವೈಜ್ಞಾನಿಕ ಪ್ರಜ್ಞೆಯನ್ನು ಹೊಂದಿರುವ ನಂಬಿಕೆಗಳನ್ನು ಗುರುತಿಸುವ ಪ್ರಯತ್ನ ಈ ಅಧ್ಯಯನದ ಮೂಲಕ ಮಾಡಲಾಗಿದೆ.

ಜನಪದ ನಂಬಿಕೆ_ಮೂಢನಂಬಿಕೆ, ವೈಜ್ಞಾನಿಕ-ಅವೈಜ್ಞಾನಿಕವೆಂದು ಅಧ್ಯಯನದಲ್ಲಿ ಪ್ರಕಾರಗಳಾಗಿ ವಿಂಗಡನೆಗಳಿಲ್ಲ. ಆದರೂ ವಿವರಣೆಗಳಲ್ಲಿ ಜನಪದರಿಂದ ಮೂಡಿ ಬಂದ ನಂಬಿಕೆಗಳ ಹಿನ್ನಲೆ ಮೇರೆಗೆ ಯಾವ ನಂಬಿಕೆಗೆ ಸಂಬಂಧಿಸಿವೆ ಎಂದು ಗುರುತಿಸಲಾಗುವುದು.

ಕರ್ನಾಟಕದಲ್ಲಿ ಹೈದ್ರಾಬಾದ ಕರ್ನಾಟಕ ಹಿಂದುಳಿದ ಪ್ರದೇಶವೆಂಬ ಹಣೆಪಟ್ಟಿಯನ್ನು ಹೊಂದಿದೆ. ಬೀದರ ಹಿಂದುಳಿದ ಜಿಲ್ಲೆ ಎಂಬ ಪದನಾಮ ಹೊತ್ತಿದೆ. ಆದರೆ ಜನಪದ ವಿಷಯದಲ್ಲಿ ಹಾಗಲ್ಲ. ಜನಪದ ಸಂಸ್ಕೃತಿ, ಜನಪದಗೀತೆ, ಹಂತಿಪದಗಳು, ಕೋಲಾಟ, ಬುಲಾಯಿಪದ, ಹಬ್ಬ ಆಚರಣೆ ಹಾಗೂ ವಿಶೇಷವಾದ ಜನಪದರ ಬಿದರಿ ಕಲೆಯಲ್ಲಂತೂ ದೇಶ-ವಿದೇಶಗಳಲ್ಲೂ ತನ್ನ ಕೀರ್ತಿ ಉಳಿಸಿಕೊಂಡು ಬಂದಿರುವುದು ಹೆಮ್ಮೆಯ ಸಂಗತಿಯಾಗಿದೆ. ಅದೇ ರೀತಿಯಾಗಿ ನಂಬಿಕೆ ಮತ್ತು ಆಚರಣೆಗಳಲ್ಲಿಯು ವಿಶೇಷತೆಯಿರುವುದು ಕ್ಷೇತ್ರಕಾರ್ಯದಿಂದ ತಿಳಿದು ಬಂದಿರುತ್ತದೆ. ಐದು ತಾಲ್ಲೂಕುಗಳನ್ನು ಹೊಂದಿರುವ ಬೀದರ ಜಿಲ್ಲೆ ಚಿಕ್ಕದಾದರೂ ನೆರೆ ರಾಜ್ಯಗಳಾದ ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರದ ಗಡಿ ಭಾಗಗಳಿಗೆ ಸಮೀಪವಿರುವ ಊರುಗಳಲ್ಲಿ ಕೆಲವೊಂದು ವಿಶೇಷ ಅಥವಾ ಭಿನ್ನ ರೀತಿಯ ಆಚರಣೆಗಳಿರುವುದು ತಿಳಿದು ಬರುತ್ತದೆ.

ನಂಬಿಕೆಗಳು ಸತ್ಯಾಂಶದ ಬಂಗಾರದ ಗಟ್ಟಿಗಳಾಗಿವೆ. ಇಂತಹ ಮೌಲ್ಯಯುತವಾದ ಮಾನಸಿಕ ಅನುಭವದ ಮೂಲಕ ಹೊರಹೊಮ್ಮಿದ ಭವಿಷ್ಯದಲ್ಲಿ ಸಮಾಜ ಬದುಕಿಗೆ ಬೇಕಾಗಿರುವ ಜನಪದ ನಂಬಿಕೆಗಳ ನೆಲೆಯನ್ನು ಅಗತ್ಯವಾಗಿ ಗುರುತಿಸಲು ಪ್ರಯತ್ನಿಸಲಾಗಿದೆ.

ಬೀದರ ಜಿಲ್ಲೆಗೆ ಸಂಬಂಧಿಸಿದ ಈ ಜನಪದ ನಂಬಿಕೆ ಮತ್ತು ಆಚರಣೆಗಳು ಇತರ ಪ್ರದೇಶದ ಸಂಪ್ರದಾಯಗಳಲ್ಲೂ ಕಂಡು ಬರಬಹುದು. ಜನಪದ ನಂಬಿಕೆ ಮತ್ತು ಆಚರಣೆಗಳ ಪರಂಪರೆ ಪ್ರಾಚೀನತೆಯಿಂದ ವಾಸ್ತವಿಕ ಬದುಕಿನವರೆಗೂ ವಿಶಾಲವಾದ ವ್ಯಾಪ್ತಿಯನ್ನು ಪಡೆದುಕೊಂಡಿದೆ.

## ಅಧ್ಯಾಯ-೨

## ನಂಬಿಕೆಗಳ ಹುಟ್ಟು ಮತ್ತು ಪೂರ್ವೋತ್ತರ

೧. ಪ್ರಸ್ತಾವನೆ

೨. ಜನಪದ ನಂಬಿಕೆಗಳ ಆಶಯ

೩. ಭೂಮಿ-ಆಕಾಶ ಉಗಮ

೪. ಪ್ರಾಚೀನ ಮಾನವನ ಉದಯ

೫. ದೇವತೆಗಳ ಆರಾಧನೆ

೬. ನಾಗರಿಕತೆಗಳ ಹುಟ್ಟು ಬೆಳವಣಿಗೆ

೭. ಸಮಾಜದ ಬದಲಾವಣೆ

೮. ವಿಜ್ಞಾನದ ಬೆಳವಣಿಗೆಯಿಂದಾದ ಪ್ರಭಾವ

೯. ಆಧುನಿಕ ಯುಗದ ಪ್ರಭಾವ ಮತ್ತು ಆಧುನಿಕ ಸಂಪ್ರದಾಯ

**೧. ಪ್ರಸ್ತಾವನೆ :**

ಭೂಮಿಯ ಮೇಲೆ ಅಸ್ತಿತ್ವ ಪಡೆದುಕೊಂಡ ಗೋಚರ ಮತ್ತು ಅಗೋಚರ ವಸ್ತುಗಳ ಉದಯಕ್ಕೆ ಒಂದಿಲ್ಲ ಒಂದು ಕಾರಣವಿದ್ದೇ ಇರುತ್ತದೆ. ತಾಯಿ ಗರ್ಭದಿಂದ ಉದಯಿಸಿದ ಮಗು ಹುಟ್ಟಿನಿಂದಲೇ ಅಕ್ಕ, ತಂಗಿ, ಮಗ, ಮಗಳು, ಮೊಮ್ಮಗ, ಮೊಮ್ಮಗಳು, ಅತ್ತಿಗೆ, ನಾದಿನಿ, ಭಾವ, ಮೈದುನ ಎನ್ನುವಂತಹ ಸಂಬಂಧಗಳು ಹೆಣೆದುಕೊಳ್ಳುತ್ತದೆ. ಕುಟುಂಬ, ಶಾಲೆ, ಸಮಾಜದಲ್ಲಿ ತನ್ನ ಅಸ್ತಿತ್ವನ್ನು ಹೆಸರಿನ ಮೂಲಕ ಗುರುತಿಸಿಕೊಂಡು ಪ್ರಜೆಯಾಗಿ ಬಾಳುತ್ತದೆ. ಅದೇ ರೀತಿ ಎಲ್ಲೋ ಇರುವ ಕಲ್ಲು ಮಣ್ಣುಗಳಿಂದ ಬೆಸೆದುಕೊಂಡ ಬಯಲು ಭೂಮಿ ಮನೆಯಾಗುತ್ತದೆ. ಒಬ್ಬ ಯಜಮಾನನ ಮನೆ ಎನಿಸಿಕೊಳ್ಳುತ್ತದೆ. ಇವುಗಳಲ್ಲಿ ಮಗು ಮತ್ತು ಮನೆ ಮಾತ್ರ ಗೋಚರಿಸುತ್ತವೆ. ಮಗು ಬೆಳೆದು ಭಂದ ರೀತಿ, ಅದು ಬೆಳೆಸಿಕೊಂಡ ಭಾವನೆಗಳು ಅಗೋಚರವಾಗಿರುತ್ತವೆ. ಮನೆಯು ಯಾವ ರೀತಿಯಲ್ಲಿ ಉಪಯೋಗವಾಗುತ್ತಿರುವುದು ಎಂಬುವುದು ಅಗೋಚರಿತ. ಆದರೆ ಮಗು ಮತ್ತು ಮನೆಗಳ ವಿಷಯದಲ್ಲಿ ಗೋಚರಿತ ಮತ್ತು ಅಗೋಚರಿತ ವಿಷಯಗಳು ಅಡಗಿರುವುದು ಸತ್ಯ. ಜಗತ್ತಿನಲ್ಲಿ ಕಾಣಿಸುವ ಪ್ರತಿಯೊಂದು ಜೀವಿ ಇನ್ನೊಂದರ ಮೇಲೆ ಅವಲಂಬನೆಯಾಗಿ ಬದುಕುತ್ತಲೆ ಇವೆ.

ಹೀಗೆ ಭೂಮಿ ಆಕಾಶಗಳ ಜೊತೆಯಲ್ಲಿ ಗೋಚರಿತ ಜೀವಿಗಳು ಮತ್ತು ಅಗೋಚರಿತವಾದವುಗಳು ಭೂಗರ್ಭದಲ್ಲಿ, ಆಕಾಶಕಾಯದಲ್ಲಿ ಎಷ್ಟೋ ವಿಷಯಗಳು ಅಡಗಿ ಕುಳಿತವು. ಭೂಮಿ, ಆಕಾಶದೊಂದಿಗೆ ಅಸ್ತಿತ್ವ ಪಡೆದ ಜೀವಿಗಳ ವಿಕಾಸ ಹಾಗೂ ಬದಲಾವಣೆ ಹೊಂದಿದಂತೆ, ಬುದ್ಧಿ ಬೆಳೆದಂತೆ ನಂಬಿಕೆಗಳ ಹುಟ್ಟು ಆರಂಭವಾಯಿತೆನ್ನುವುದರಲ್ಲಿ ಎರಡು ಮಾತಿಲ್ಲ.

ಭೂಮಿ ಆಕಾಶಗಳ ಉಗಮ, ಮಾನವನ ಅಲೆಮಾರಿ ಜೀವನ, ದೇವತೆಗಳ ಆರಾಧನೆ, ನಾಗರಿಕತೆಗಳ ಹುಟ್ಟು ಬೆಳವಣಿಗೆ, ಸಮಾಜದಲ್ಲಿನ ಬದಲಾವಣೆ, ವಿಜ್ಞಾನದ ಬೆಳವಣಿಗೆಯಿಂದಾದ ಪ್ರಭಾವ ಹಾಗೂ ಆಧುನಿಕ ಯುಗದ ಪ್ರಭಾವ ಮತ್ತು ಸಂಪ್ರದಾಯ. ಈ ಅಂಶಗಳಿಂದ ಜನಪದ ನಂಬಿಕೆಗಳ ಹುಟ್ಟು ಮತ್ತು ಪೂರ್ವೋತ್ತರ ಸ್ಥಿತಿಯನ್ನು ಅರಿಯಬಹುದು.

**೨. ಜನಪದ ನಂಬಿಕೆಗಳ ಆಶಯ :**

'ಜನಪದ ನಂಬಿಕೆ' ಜಾನಪದದ ಮುಖ್ಯ ಪ್ರಕಾರಗಳಲ್ಲಿ ಒಂದಾಗಿ ಪರಿಗಣಿತವಾಗಿದೆ. ಜನಪದರು ಆಚರಿಸುವ ಆಚರಣೆ ಸಂಪ್ರದಾಯಗಳು ನಂಬಿಕೆ ಮೇಲೆ ನಿಂತಿವೆ. ಜನಪದರ ಜೀವನದಲ್ಲಿ ನಂಬಿಕೆಗಳ ಪಾತ್ರ ಮುಖ್ಯವಾದುದು. ಅವುಗಳೇ ಅವರ ಕೆಲಸಕ್ಕೆ ಆಧಾರಗಳು. ತೀರಾ ಮುಂದುವರೆದ ಸಮಾಜದಲ್ಲಿಯೂ ನಂಬಿಕೆಗಳಿಂದ ದೂರಾಗದೆ ಸಿಲುಕಿಕೊಳ್ಳುವ ಸ್ಥಿತಿ ಕಂಡು ಬರುತ್ತದೆ. ದೇವರು, ಪೂಜೆ, ತೀರ್ಥಯಾತ್ರೆ, ಹಬ್ಬ ಹರಿದಿನಗಳು, ಸ್ವಪ್ನ ಹೀಗೆ ಜೀವನಕ್ಕೆ ಸಂಬಂಧಿಸಿದ ಸ್ಥಾನದಲ್ಲಿ ತನ್ನ ಅಸ್ತಿತ್ವದ ಕಾಲು ಚಾಚಿರುವ ನಂಬಿಕೆಗಳು ಸಂಸ್ಕೃತಿಯ ಮೂಲಸೆಲೆಗಳಾಗಿವೆ. ಒಂದೊಂದು ಧರ್ಮ, ಜನಾಂಗ, ಜಾತಿ, ಬುಡಕಟ್ಟುಗಳು ಅನುಸರಿಸುವ ನಂಬಿಕೆಗಳು ಅವರವರಿಗೆ ತೋರು ದೀಪಗಳಾಗಿವೆ, ಮಾರ್ಗದರ್ಶಿಗಳಾಗಿವೆ. ನೀತಿ ನಿಯಮಗಳಾಗಿವೆ.

ಆರ್.ಎಸ್.ಬಾಗ್ಸ್ ಎಂಬ ಜಾನಪದ ವಿದ್ವಾಂಸರು ನಂಬಿಕೆಗಳನ್ನು ವೈಜ್ಞಾನಿಕ ಬಗೆಯಲ್ಲಿ ಅಳವಡಿಸಿದ್ದಾನೆ. ಅದೇ ರೀತಿಯಾಗಿ ಇನ್ನಿತರ ವಿದ್ವಾಂಸರು ನಂಬಿಕೆಗಳಲ್ಲಿ ಬೇರೆ ಬೇರೆ ಪ್ರಕಾರಗಳಾಗಿ ಗುರುತಿಸಿದ್ದಾರೆ. ಪ್ರಸ್ತುತವಾಗಿ ಬರವಣಿಗೆಗೆ ತೆಗೆದುಕೊಂಡ 'ಜನಪದ ನಂಬಿಕೆ ಮತ್ತು ಆಚರಣೆಗಳು' ಎನ್ನುವ ವಿಷಯದಲ್ಲಿ 'ನಂಬಿಕೆ' ಎನ್ನುವ ಪದದ ಮಹತ್ವ ಬಹಳಷ್ಟು ಆಳವಾದ, ವಿಶಾಲವಾದ, ಅತ್ಯಂತ ಮೌಲ್ಯಯುತ ಪದವಾಗಿದೆ. ಈ ಪದವು ಚಲಿಸುವ ಬಂಡಿಗೆ ಕಡೆಗೀಲು ಇದ್ದಂತೆ. ಜೀವಿಗಳ ದೇಹದ ಚಲನೆಗೆ ಉಸಿರಾಟ ಮುಖ್ಯವಾದಂತೆ, ನಂಬಿಕೆ ಜೀವನ ಚಕ್ರಕ್ಕೆ ಅಷ್ಟೇ ಮುಖ್ಯವಾಗಿದೆ.

ನಂಬಿಕೆಯ ಅರ್ಥ ಮತ್ತು ಅದರ ಮಹತ್ವ ಒಳಗೊಂಡಂತೆ ವಿದ್ವಾಂಸರು ಹೀಗೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

೧. ಪ್ರಸಿದ್ಧ ಪ್ರಬಂಧಕಾರ ಗಾರ್ಡಿನರ್ – "ಭಾವ ಜೀವಿಯ ವರದ ಹಸ್ತ"[೫]

೨. "The forms change but the substance reamains" – ಆಲ್ಡಸ್‌ಕ್ಸಲಿ[೬]

೩. ಬಗೇ ಹಾಟ್ ರ ಪ್ರಕಾರ : ಸುಪ್ರಸಿದ್ಧ ಮನಶಾಸ್ತ್ರಜ್ಞ ಈತನ ಪ್ರಕಾರ "ನಂಬಿಕೆಯೂ ಕೂಡ ಒಂದು ವಿಧವಾದ ಮೊದಲ ಮಾನಸಿಕ ಅನುಭವ"[೭]

೪. ಸ್ವಾಮಿ ವಿವೇಕಾನಂದರ ಪ್ರಕಾರ: "ಆತ್ಮ ಶ್ರದ್ಧೆಯ ಸಿದ್ಧಾಂತ ಅಥವಾ ನಿಷ್ಕಪಟ ನಂಬಿಕೆಯೇ ನನ್ನ ಜೀವನದ ಧ್ಯೇಯ"

೫. ಡಾ॥ ಶಾಲಿನಿ ರಜನೀಶ : "ಮನೋವೈಜ್ಞಾನಿಕ ಶಾರೀರಿಕ ದೃಢ ನಿಶ್ಚಯವೇ ನಂಬಿಕೆ. ನಂಬಿಕೆ ಸಕರಾತ್ಮಕವಾದವುಗಳು. ನಂಬಿಕೆ ಬಾಳಿನ ಊರುಗೋಲುಗಳಾಗಿರುತ್ತವೆ." (ರೇಡಿಯೋ ಪ್ರಸಾರ ದಿನಾಂಕ ೦೯.೧೧.೨೦೦೯)

---

೫ (ಅಡಿ ಟಿಪ್ಪಣಿ: ನಮ್ಮ ಜನಪದ ನಂಬಿಕೆಗಳು, ಲೇಖಕರು ಡಾ॥ ಜಿ.ವಿ.ದಾಸೇಗೌಡ, ಪುಟ ಸಂಖ್ಯೆ-೦೬)
೬ (ಅಡಿ ಟಿಪ್ಪಣಿ: ನಮ್ಮ ಜನಪದ ನಂಬಿಕೆಗಳು, ಲೇಖಕರು ಡಾ॥ ಜಿ.ವಿ.ದಾಸೇಗೌಡ, ಪುಟ ಸಂಖ್ಯೆ-೦೬)
೭ (ಅಡಿ ಟಿಪ್ಪಣಿ: ನಮ್ಮ ಜನಪದ ನಂಬಿಕೆಗಳು, ಲೇಖಕರು ಡಾ॥ ಜಿ.ವಿ.ದಾಸೇಗೌಡ, ಪುಟ ಸಂಖ್ಯೆ-೧೦)

ಜನಪದ ನಂಬಿಕೆಯು ಪರಂಪರಾನುಗತವಾಗಿ ಅಂಗೀಕೃತವಾದ ಒಂದು ಪರಿಕಲ್ಪನೆ. ಇಂದು ಜಗತ್ತಿನಲ್ಲಿಯೇ ವ್ಯಾಪಕವಾಗಿ ಪ್ರಚಲಿತವಾಗಿರುವ ಕ್ರೈಸ್ತ ಮತ್ತು ಇಸ್ಲಾಂರು ಮೂಲತಹವಾಗಿ ಯಹೋದಿಯಾಗಿರುವ ಅವರು ಪ್ರವಾದಿಗಳ ಬೋಧನೆಯಂತೆ 'ಯಾವೆ' ಎಂಬ ಒಬ್ಬರೇ ದೇವರನ್ನು ನಂಬಿದ್ದರು. ಮುಸಲ್ಮಾನರು "ಅಲ್ಲಾ ಎಂಬ ಹೆಸರಿನ ಮೇಲೆ ಇಟ್ಟ ನಂಬಿಕೆ, ಹಿಂದೂಗಳು 'ದೇವನೊಬ್ಬ ನಾಮ ಹಲವು' ಎನ್ನುವುದರ ಮೇಲಿಟ್ಟ ನಂಬಿಕೆಗಳೆಲ್ಲವು ಧರ್ಮಕ್ಕೆ ಆಧಾರಗಳಾದವು. ಮಾನವ ಪ್ರಪಂಚದ ಧರ್ಮ, ಜನಜೀವನ, ಸಾಂಸ್ಕೃತಿಕ, ಸಾಮಾಜಿಕ ಹಾಗೂ ಅವನ ಕೃಷಿ-ಕಾರ್ಯ, ಆಹಾರ-ಆರೋಗ್ಯ, ಉಡುಗೆ-ತೊಡುಗೆ, ನಡೆ_ನುಡಿ, ನೋವು-ನಲಿವು, ಹುಟ್ಟು-ಸಾವುಗಳಲ್ಲಿ ನಂಬಿಕೆಗಳು ಉದಯಿಸಿದವು.

ನಂಬಿಕೆಗಳನ್ನು 'ಮೂಢನಂಬಿಕೆಗಳು' ಎಂದು ಹೇಳಲಾಗುವುದು. ಈ ಹೇಳಿಕೆಯನ್ನು ವಿಶ್ಲೇಷಿಸಿ, ವಿಮರ್ಶಿಸಿ ವೈಜ್ಞಾನಿಕ ಪರಿಶೀಲನೆಗೆ ಒಳಪಡಿಸದೆ ಯಾವುದೋ ಅಂಧಶ್ರದ್ಧೆಗೆ ಕಟ್ಟುಬಿದ್ದು ನಂಬಿಕೆಗಳಿಗೆ ಬದ್ಧರಾಗಿ ವರ್ತಿಸುವವರ ಹಿನ್ನೆಲೆಯಲ್ಲಿ ಆ ಮಾತು ಬೆಳಕಿಗೆ ಬಂದಿರಬಹುದು. ಆದರೆ ಮೂಢನಂಬಿಕೆಗಳು ಎಂಬ ಮಾತು ನಂಬಿಕೆಗಳಿಗೆ ಅನ್ವಯವಾಗುವುದಿಲ್ಲ. ಇಂಗ್ಲೀಷಿನ Belief ಮತ್ತು Superstition ಎಂಬ ಮಾತುಗಳನ್ನು ಗಮನಿಸಿದಾಗ ಮೂಢನಂಬಿಕೆಗಳಿಗೂ ನಂಬಿಕೆಗಳಿಗೂ ವ್ಯತ್ಯಾಸವಿರುವುದು ಕಂಡು ಬರುತ್ತದೆ. ಆದ್ದರಿಂದ ಇಂಗ್ಲೀಷ್ ನ Belief ಎಂಬುದಕ್ಕೆ 'ಜನಪದ ನಂಬಿಕೆಗಳು' ಎಂದೂ 'Superstition' ಎಂಬುದಕ್ಕೆ 'ಮೂಢನಂಬಿಕೆಗಳು' ಎನ್ನುವ ಪದಗಳ ಬಳಕೆಯಿಂದಾಗಿ, ಯಾವ ವಿಧವಾದ ಸಂಧಿಗ್ಧತೆಯೂ ತಲೆದೋರದೆ ಇಂಗ್ಲೀಷಿನ ಆ ಎರಡೂ ಪದಗಳಿಗೂ ಇರುವ ಅಂತರದ ಅರಿವು ಕನ್ನಡದ ಸಂವಾದಿ ಪದಗಳಲ್ಲಿ ವ್ಯಕ್ತವಾಗುವುದನ್ನು ಮನಗಾಣಬಹುದು. ಮೂಢನಂಬಿಕೆಗಳು ವೈಚಾರಿಕತೆಗೆ ಹಾಗೂ ಅನುಭವಗಳಿಗೆ ವಿರುದ್ಧವಾದವು. ಇವುಗಳಿಗೆ ಯಾವುದೆ ಸಾಕ್ಷ್ಯಾಧಾರಗಳಿಲ್ಲದೆ, ದೊರಕಬಹುದಾದ ಆಧಾರಗಳಿಗೆ ವಿರುದ್ಧವಾಗಿರುತ್ತವೆ.

ಕೆಲವೊಮ್ಮೆ ಇಂತಹ ಮೂಢನಂಬಿಕೆಗಳು ತಮಾಷೆಗೂ ಎಡೆಮಾಡಿಕೊಡುತ್ತವೆ. ಪಿತೃಕಾರ್ಯ ಸಂದರ್ಭದಲ್ಲಿ ಅಡ್ಡಾದ ಬೆಕ್ಕನ್ನು ಕಟ್ಟಿಹಾಕಿದ್ದನ್ನು ನೋಡಿದ ಮಕ್ಕಳು ಮುಂದೆ ತಾವು ಕೂಡಾ ತಮ್ಮಲ್ಲಿ ಬೆಕ್ಕು ಇರದಿದ್ದರೂ ಬೇರೆ ಕಡೆಯಿಂದ ಬೆಕ್ಕನ್ನು ತಂದು ಕಟ್ಟಿಹಾಕಿ ಪಿತೃಕಾರ್ಯ ನೆರವೇರಿಸಿದರಂತೆ! ಇದೇ ಪದ್ಧತಿ ಸಮಾಜದಲ್ಲಿ ಪ್ರಭಾವ ಬೀರಿತು. ಇದು ಸಾಮಾನ್ಯವಾಗಿ ಹೊರ, ಹೊರಟಿರುವ ಯಾರಿಗೂ ಬೆಕ್ಕು ಅಡ್ಡ ಬರಬಾರದೆಂಬ ನಂಬಿಕೆಯಾಗಿ ರೂಢಿಯಾಯಿತು. ಇಂತಹ ಮೂಢನಂಬಿಕೆಗಳಲ್ಲಿನ ಮೂಢ ವಿಚಾರಗಳು ವೈಜ್ಞಾನಿಕ, ವೈಚಾರಿಕವಾಗಿ ಪ್ರಜ್ಞೆಯುಳ್ಳವರಿಗೆ ಕಾಣಿಸುತ್ತವೆ. ಆದರೆ ವೈಜ್ಞಾನಿಕ ಪ್ರಜ್ಞೆಯಿರದ, ವಿಚಾರ ಶಕ್ತಿಯಿರದೆ ಇರುವವರು ಅಂತಹುವುಗಳನ್ನೇ ಶ್ರದ್ಧೆಯಿಂದ ಪಾಲಿಸುತ್ತಿರುತ್ತಾರೆ. ಅದು ತಪ್ಪು ಎಂದು ಯಾರಾದರೂ ಹೇಳಿದರೂ ಅದನ್ನು ಬಿಡುವ ಧೈರ್ಯ ಮಾಡುವುದಿಲ್ಲ. ಅದೇ ಮೂಢನಂಬಿಕೆ ! ವಿಜ್ಞಾನ ದೇವರಲ್ಲಿ ನಂಬಿಕೆ ಇಟ್ಟಿಲ್ಲಾ. ಈ ಸೃಷ್ಟಿಯ ಆದಿಯಲ್ಲಿ ಮಾನವನು ತನ್ನ ಹೊಸ ನಡುವಳಿಕೆ ಅಂದರೆ ನಿಸರ್ಗದಲ್ಲಿ ಆಹಾರಕ್ಕಾಗಿ ಸಿಗುವ ಗಡ್ಡೆ-ಗೆಣಸು ಕಡಿಮೆಯಾದಾಗ ಭೂಮಿಯಲ್ಲಿ ಬೀಜ ಬಿತ್ತುವ ಹೊಸ ಅವಿಷ್ಕಾರ ಮಾಡಿದ. ಇದೇ ರೀತಿ ಈತ ಮಾಡಿದ ಎಲ್ಲಾ ಕೆಲಸಗಳು ವಿಜ್ಞಾನದ್ದೆ ಆಗಿವೆ ಎಂದು ವಿಜ್ಞಾನ

ಹೇಳುವುದಾದರೆ ಹೇಳಲಿ, ಆರಂಭದ ಈ ಮಾನವನಿಗೆ ವಿ–ಜ್ಞಾನ ಅಥವಾ ಹೊಸಜ್ಞಾನ ಎಂದು ಕರೆಯಲು ಆಗಿರಲಿಕ್ಕಿಲ್ಲ. ಆದರಿಂದ ಈ ಒಂದು ಅದ್ಭುತ ಅಥವಾ ಚೈತನ್ಯ ಶಕ್ತಿಗೆ 'ದೇವರು' ಎಂದಿರಬೇಕು. ಆದರೆ ಅವನು ಮಾಡಿದ ಬಿತ್ತುವ, ಬೆಂಕಿ ಕಂಡು ಹಿಡಿದಿದ್ದು, ಕಲ್ಲಿನ ಮತ್ತು ಕಬ್ಬಿಣದ ಆಯುಧಗಳ ಬಳಕೆ ಇವುಗಳಲ್ಲಿ ಅವರ ವೈಜ್ಞಾನಿಕ ಪ್ರಜ್ಞೆ ಇರುವುದನ್ನು ಒಪ್ಪಿಕೊಳ್ಳಬೇಕಾಗಿದೆ.

ಜನಪದ ನಂಬಿಕೆಗಳಲ್ಲಿ ಬಹುಪಾಲು ವೈಜ್ಞಾನಿಕ ಸತ್ಯ ಕಂಡು ಬರುತ್ತದೆ. ಆದರಿಂದ ನಂಬಿಕೆಗಳನ್ನು ವೈಜ್ಞಾನಿಕ ಮತ್ತು ಅವೈಜ್ಞಾನಿಕ ಎಂದು ಎರಡು ವರ್ಗಗಳಲ್ಲಿ ವರ್ಗೀಕರಿಸಲಾಗಿದೆ. ಜನಪದರದಲ್ಲಿ ವಿಜ್ಞಾನವೂ ಇದೆ. ನಂಬಿಕೆಯೂ ಇದೆ. ಹಾಗೆಯೇ ಧರ್ಮವೂ ಇದೆ. ಆಸಕ್ತಬೇಕಾದುದನ್ನು ಜ್ಞಾನದಿಂದ ರೂಢಿಸಿಕೊಳ್ಳುತ್ತಾನೆ. ಊಹಾತ್ಮಕ ನಂಬಿಕೆಯ ಒಂದು ತತ್ವವಿರದೆ ಯಾವ ಸಂಶೋಧಕನೂ, ಯಾವ ವಿಜ್ಞಾನಿಯೂ ತನ್ನ ಕಾರ್ಯದಲ್ಲಿ ಮುನ್ನಡೆಯಲಾರ. ಹೀಗಿರಬಹುದು, ಹೀಗಾಗಬಹುದೆಂಬ ನಂಬಿಕೆಯೇ ಅಲ್ಲಿಯ ಮೂಲ. ಆದ್ದರಿಂದ ನಂಬಿಕೆಯ ಜಾಗ ಸಾರ್ವತ್ರಿಕ, ಸಾರ್ವಕಾಲಿಕ, ತನ್ನ ರೂಪವನ್ನು ತನ್ನ ಇರುವಿಕೆಯನ್ನು ಬೇರೆ ಬೇರೆ ರೀತಿಯಲ್ಲಿ ಅದು ಪ್ರಕಟಪಡಿಸುತ್ತದೆ.

ಜನಪದ ನಂಬಿಕೆಗಳು ಬಹಳ ಪ್ರಾಚೀನವಾದವು; ಅವುಗಳ ಪ್ರಾಚೀನತೆಯನ್ನು ಕುರಿತು ಹೇಳುವುದಾದರೆ ಭೂಮಿಯ ಮೇಲೆ ಎಂದು ಮಾನವನ ಉಗಮವಾಯಿತೋ ಅಂದೇ ಮಾನವನ ಮನೋ ಮಂದಿರದಲ್ಲಿ ಅವು ಮೂಡಿದವನ್ನಬಹುದು. ಮಾನವನ ಭಾವನೆಗಳ ಅಭಿವ್ಯಕ್ತಿಯ ಮಾಧ್ಯಮವಾದ ಭಾಷೆ ಹುಟ್ಟಿದಾಗ ಜನಪದ ನಂಬಿಕೆಗಳೂ ಅಭಿವ್ಯಕ್ತಿ ಪಡೆದು ಜನ ಜೀವನದಲ್ಲಿ ಚಲಾವಣೆ ಹೊಂದಿದವು. ಜನಪದ ನಂಬಿಕೆಗಳ ಉಗಮಕ್ಕೆ ಕಾರಣ ಮಾನವನ ಮಾನಸಿಕ ಆಂದೋಲನ, ಮಾನಸಿಕ ಆಂದೋಲನಕ್ಕೆ ಮಾನವ ಒಳಗಾಗಲು ನೈಸರ್ಗಿಕ ಶಕ್ತಿ ಪ್ರಭಾವ ಬೀರಿದೆ.

ಪ್ರಬುದ್ಧ ಧರ್ಮಗಳು ಬೆಳೆದು ಬಳಕೆಗೆ ಬರುವ ಮುನ್ನ ನೈಸರ್ಗಿಕ ಧರ್ಮಗಳು ನಂಬಿಕೆಗಳನ್ನು ಸ್ವೀಕರಿಸಿದ ಹಿನ್ನಲೆಯೆಂದರೆ ಅತಿಮಾನುಷ ಶಕ್ತಿಯ ಭಯ, ಯಾವುದೋ ಒಂದು ಅವ್ಯಕ್ತ ಶಕ್ತಿ ಜನತೆಯ ಬದುಕನ್ನು ನಿಯಂತ್ರಿಸುತ್ತದೆಯಾದ್ದರಿಂದ ಸಾಮಾನ್ಯ ಮತ್ತು ಅಸಾಮಾನ್ಯಗಳ ಬಗ್ಗೆ ಕಂಡು ಬಂದ ವ್ಯತ್ಯಾಸಗಳೇ ಜನಪದ ನಂಬಿಕೆಗಳ ತಾಯಿ ಬೇರಾಯಿತು.

ನಂಬಿಕೆ ಮಾನಸಿಕ ಆಂದೋಲನಕ್ಕೆ ಒಳಗಾದಾಗ ಯಾವ ರೀತಿಯಾಗಿ ಮನಸನ್ನು ಪರಿವರ್ತನೆ ಮಾಡಿ ದೃಢೀಕರೀಸಬಲ್ಲದು. ಗುರಿಯನ್ನು ಸಾಧಿಸಬಲ್ಲದು ಎನ್ನುವುದನ್ನು ಶ್ರೀ ರಾಮಕೃಷ್ಣರು ಹೇಳಿದ ಈ ಕಥೆಯ ಮೂಲಕ ತಿಳಿಯಬಹುದು.

"ಹಾಲು ಮಾರುವ ಹುಡುಗಿಯೊಬ್ಬಳು ಪೂಜಾರಿಯೊಬ್ಬನಿಗೆ ಸರಿಯಾದ ಸಮಯಕ್ಕೆ ಹಾಲು ತರದೆ ತಡಮಾಡುತ್ತಿದ್ದಳು. ಕಾರಣವೆಂದರೆ ಹಾಲು ದೋಣಿಯ ಮೂಲಕ ತರಬೇಕಾದುದರಿಂದ ದೋಣಿಗಾಗಿ ಕಾಯುತ್ತಿದ್ದಳು. ಆದರೆ ಪೂಜಾರಿ ಏನೆ ಆಗಲಿ ಹೊಳೆಯನ್ನು ದಾಟಿಯಾದರೂ ಸರಿಯಾದ ಸಮಯಕ್ಕೆ ಹಾಲು ತಂದೊಪ್ಪಿಸುವಂತೆ ಹಾಗೂ ಹೊಳೆ ದಾಟುವ ಧೈರ್ಯ ಇಲ್ಲವೆ ? ದೇವರ ನಾಮ ಉಚ್ಚರಿಸುತ್ತಾ ಜನರು ಸಮುದ್ರ ದಾಟುತ್ತಾರೆ. ಎನ್ನುವ ಪೂಜಾರಿಯ ಮಾತುಗಳನ್ನು ಕೇಳಿದ ಹುಡುಗಿಯರು

ಮರುದಿವಸಿದಿಂದ ದೇವರ ನಾಮ ಉಚ್ಚರಿಸುತ್ತಾ ಹೊಳೆ ದಾಟಿ ಸರಿಯಾದ ಸಮಯಕ್ಕೆ ಹಾಲು ತರುವುದನ್ನು ಕಂಡು ಮತ್ತೊಮ್ಮೆ ಪೂಜಾರಿ ಆಕೆಯನ್ನು ವಿಚಾರಿಸುತ್ತಾನೆ. ಆಕೆ ತನ್ನ ಧೈರ್ಯದಿಂದ, ದೇವರ ನಾಮ ಉಚ್ಚರಿಸುತ್ತಾ ನಡೆಯುತ್ತಲೆ ಹೊಳೆ ದಾಟಿರುವುದನ್ನು ಹೇಳುತ್ತಾಳೆ. ಇದನ್ನು ಕೇಳಿದ ಪೂಜಾರಿ ಇದು ನಿಜವೆ ಎಂದು ಪೂಜಾರಿ ಹುಡುಗಿಯನ್ನು ಹಿಂಬಾಲಿಸಿದನು. ನೀರಿನಲ್ಲಿ ನಡೆಯಲಾಗದೆ ತಡವರಿಸುತ್ತಾ ದಡ ಸೇರಿದನು.

ಇಲ್ಲಿ ಹುಡುಗಿಯು ಪೂಜಾರಿಯ ಮಾತಿನಲ್ಲಿ ನಂಬಿಕೆಯಿಟ್ಟು ಗುರಿಯನ್ನು ಸಾಧಿಸಲು ಮನಸು ಪರಿವರ್ತಿಸಿಕೊಂಡು ದೃಢಿಕರಿಸಿಕೊಂಡಳು.

ಹೀಗೆ ನಂಬಿಕೆಯ ಶಕ್ತಿಯನ್ನು ಎಂದಿಗೂ ಕೇಳಂದಾಜು ಮಾಡಬಾರದು ಎನ್ನುವ ಮಹತ್ವ ಈ ಕಥೆಯ ಮೂಲಕ ತಿಳಿದು ಬರುವುದು. (ಕಥೆ: ವಿಜಯಕರ್ನಾಟಕ ದಿನಪತ್ರಿಕೆ ದಿ: ೦೩.೦೬.೨೦೧೦ ಶ್ರೀ ರಾಮಕೃಷ್ಣರ ಕಥೆಗಳು).

ಇಂದಿನ ಕಾನೂನಿಗಳಿಗಿಂತಲೂ ಹಿಂದಿನ ನಂಬಿಕೆಗಳು ಮೀರಿ ನಿಂತಿವೆ. ನಂಬಿಕೆಗಳು ಕಾಲಮಾನ ಮತ್ತು ಪ್ರಾದೇಶಿಕ, ಸಾಮಾಜಿಕ ಪರಿವರ್ತನೆ ಸನ್ನಿವೇಶಕ್ಕೆ ತಕ್ಕಂತೆ ಬದಲಾಗುತ್ತವೆ. ಒಂದರ ಹುಟ್ಟಿನಲ್ಲಿ ಮತ್ತೊಂದು ಉದಯಿಸುತ್ತಾ ಬದಲಾವಣೆಗೊಂಡು ಶಾಸನಗಳಾಗಿ ರಚನೆಗೊಂಡರೂ ಮತ್ತೆ ನಾವು ನಂಬಿಕೆಗಳಾಗಿ ನಮ್ಮ ದೈನಂದಿನ ಜೀವನದಲ್ಲಿ ಸಾಗಿಸಿಕೊಂಡು ಬರುತ್ತಿದ್ದೇವೆ. ನಂಬಿಕೆಗಳನ್ನು ಶಾಸನ ಅಥವಾ ಕಾನೂನುಗಳಂತೆ ಬರೆದು ಎಚ್ಚರಿಕೆಯ ಫಲಕಗಳನ್ನು ಮನೆಗಳಲ್ಲಾಗಲಿ, ದೇವಸ್ಥಾನಗಳಲ್ಲಾಗಲಿ, ಅಥವಾ ಯಾವುದೇ ಸಾರ್ವಜನಿಕ ಸ್ಥಳಗಳಲ್ಲಾಗಲಿ ಹಾಕಿಲ್ಲ. ಸಾರ್ವಜನಿಕ ಸ್ಥಳದಲ್ಲಿ ಸರ್ಕಾರದ ಮೂಲಕ ಹಾಕಿರುವ 'ಸ್ವಚ್ಛತೆ ಕಾಪಾಡಿ' ಬಸ್ಸಿನಲ್ಲಿ 'ಟಿಕೇಟ್ ಪಡೆದುಕೊಳ್ಳದಿದ್ದರೆ ೫೦೦ ರೂಗಳಷ್ಟು ದಂಡ ಮತ್ತು ವರದಕ್ಷಿಣೆ ತೆಗೆದುಕೊಂಡರೆ ಕಾನೂನಿನ ಪ್ರಕಾರ ಅಪರಾಧ ಎಂದು ಹೇಳುವ ವರದಕ್ಷಿಣೆ ನಿಷೇಧ ಕಾಯ್ದೆಗಳು ಜಾರಿಗೆ ತರಲಾಗಿದೆ. ಆದರೂ ಅವುಗಳನ್ನು ಉಲ್ಲಂಘಿಸುತ್ತಾರೆ. ಆದರೆ ಪರಂಪರಾನುಗತವಾಗಿ ಮೌಖಿಕವಾಗಿ ಆಚರಣೆಯಲ್ಲಿ ಬಂದ ನಂಬಿಕೆಗಳನ್ನು ಉಲ್ಲಂಘಿಸದೆ ಅವುಗಳನ್ನು ಚಾಚೂ ತಪ್ಪದೆ ಅನುಸರಿಸಿಕೊಂಡು ಬರುತ್ತಾರೆ.

ಅವು ಮನಸ್ಸನ್ನು ಗಟ್ಟಿಗೊಳಿಸಿರುತ್ತವೆ. ಬಿಡಲಾಗುವುದಿಲ್ಲ. ಸರ್ಕಾರದ ಮೂಲಕ ಹೊರಡಿಸಿದ ಕಾನೂನುಗಳನ್ನು ಮೀರಿದರೆ ಶಿಕ್ಷೆಯನ್ನು ಕೊಡುವ ಕ್ರಮ ಕೈಗೊಳ್ಳಲಾಗುತ್ತದೆ. ಆದರೆ ನಂಬಿಕೆಗಳನ್ನು ಪಾಲಿಸದಿದ್ದಾಗ ಯಾವುದೇ ವ್ಯಕ್ತಿಗೆ ಶಿಕ್ಷೆ ಕೊಡುವುದಿಲ್ಲ. ಆದರೆ ವ್ಯಕ್ತಿಗೆ ತನ್ನ ಆತ್ಮಸಾಕ್ಷಿಯೇ ಆ ನಂಬಿಕೆಗಳಿಗೆ ವಿಧೇಯನಾಗಿರುವಂತೆ ಮಾಡುತ್ತದೆ.

ಜನಪದ ನಂಬಿಕೆಗಳನ್ನು ಇಷ್ಟಕ್ಕೆ ಸೀಮಿತವೆಂದು ಗುರುತಿಸಲಾಗುವುದಿಲ್ಲ. ಏಕೆಂದರೆ ಕೇವಲ ತಮ್ಮ ಸಮೂಹಕ್ಕೆ ಮಾತ್ರ ಒಳಿತಾಗಲಿ ಎಂಬ ಸಂಕುಚಿತ ಭಾವನೆ ಅವುಗಳಲ್ಲಿಲ್ಲ. ಅವು ಸರ್ವಕಾಲಿಕ ಮತ್ತು ಸಾರ್ವತ್ರಿಕವಾಗಿವೆ.

**೨. ಭೂಮಿ ಆಕಾಸದ ಉಗಮ :**

ಜೀವಿಗಳ ಅಸ್ತಿತ್ವ ಕಂಡು ಬರುವುದೇ ಭೂಮಿಯ ಹುಟ್ಟಿನ ನಂತರ. ವಿಕಿರಣಶೀಲ ಕಾರ್ಬನ್-೧೪ ಉಪಯೋಗಿಸಿ ಹೆಚ್ಚು ನಿಖರವಾಗಿ ಕಾಲ ನಿರ್ಣಯ ಮಾಡುವ ಪದ್ಧತಿಯನ್ನು ಕ್ರಿ.ಶ. ೧೯೪೮ರಲ್ಲಿ ಚಿಕಾಗೋ ವಿಶ್ವವಿದ್ಯಾಲಯದಲ್ಲಿ ವಿಲಾರ್ಡ್ ಲಿಬ್ಬಿ ಕಂಡು ಹಿಡಿದ. ಕಾರ್ಬನ್-೧೪ ನೈಸರ್ಗಿಕವಾಗಿ ದೊರೆಯುವ ಇಂಗಾಲದ ಐಸೋಟೋಪು. ಇದು ವಾತಾವರಣದಲ್ಲಿ ಇಂಗಾಲದ ಡೈ ಆಕ್ಸೈಡ್ ರೂಪದಲ್ಲಿದ್ದು ಸಸ್ಯಗಳಿಂದ ಬಳಸಲ್ಪಟ್ಟು, ಈ ಕಾರ್ಬನ್-೧೪ರ ಪ್ರಮಾಣವು ನಿರಂತರವಾಗಿ, ಸಾವಕಾಶವಾಗಿ ಕ್ಷೀಣಿಸುತ್ತದೆಯಾದರೂ ಆಹಾರ ಆ ಮೂಲಕ ಪ್ರಾಣಿಗಳ ದೇಹವನ್ನು ಸೇರುವುದು. ಸಸ್ಯಪ್ರಾಣಿ ಮೃತವಾದಗ ಹೊರಗಿನಿಂದ ಕಾರ್ಬನ್-೧೪ ಸೇರಲಾರದು. ಆದ್ದರಿಂದ ಈಗ ಕಾರ್ಬನ್-೧೪ ಈ ಅಂಗಾಂಶಗಳಿಂದ ಕ್ರಮವಾಗಿ ಕ್ಷೀಣಿಸುತ್ತಲೆ ಸಾಗುವುದು. ಕಾರ್ಬನ್-೧೪ ಪರಮಾಣುವಿನ ಅರ್ಧಾಯುಷ್ಯವು ಹಲವಾರು ಕೋಟಿ ವರ್ಷಗಳು. ಇದರ ಸಹಾಯದಿಂದ ಭೂಮಿಯ ವಯಸ್ಸು ೪೬೦ ಕೋಟಿ ವರ್ಷಗಳೆಂದು ತಿಳಿದು ಬಂದಿದೆ.

ವೈಜ್ಞಾನಿಕ ಕಾಲ ನಿರ್ಣಯದ ನಿಖರತೆಯ ಉದಾಹರಣೆಯಾಗಿ ಕೆಲವು ವರ್ಷಗಳ ಹಿಂದೆ ಅಮೇರಿಕಾದಲ್ಲಿ ಕಣ್ಣೆದುರಿಗೇ ನಡೆದ ಒಂದು ಘಟನೆಯೆಂದರೆ, ಅಮೇರಿಕಾದ ಒಂದು ಹಳ್ಳಿಯಲ್ಲಿ ಹಗಲು ಸಂಜೆಯ ವೇಳೆ ಪ್ರಕಾಶಮಾನವಾಗಿ ಶೋಭಿಸುತ್ತಿರುವ ಒಂದು ಆಕಾಶ ಕಾಯವು ವೇಗವಾಗಿ ಭೂಮಿಯ ಕಡೆ ಧಾವಿಸಿ ಬರುವುದನ್ನು ಹಳ್ಳಿಯ ಜನರು ಭಯಮಿಶ್ರಿತ ಕುತೂಹಲದಿಂದ ನೋಡುತ್ತಿದ್ದಂತೆ ನೆಲಕ್ಕೆ ಅಪ್ಪಳಿಸಿತು. ಆ ಹೊತ್ತಿಗೆ ಪಿರಿಡೀನ್ ಎಂಬ ರಾಸಾಯನಿಕ ವಸ್ತುವಿನ ವಾಸನೆಯ ಅನುಭವವಾಯಿತೆಂದು ತಿಳಿದು ಬಂದಿದೆ. ನಂತರ ಅದು ತಣ್ಣಗಾದ ಮೇಲೆ ಒಂದು ಸ್ಯಾಂಪಲ್ ತೆಗೆದು ಯುರೇನಿಯಂ ವಿಕೀರಣದ ಕಾಲನಿರ್ಣಯ ಪ್ರಯೋಗಕ್ಕೆ ಒಳಪಡಿಸಿದಾಗ ಆ ಆಕಾಶಕಾಯ ನಮ್ಮ ಭೂಮಿಯಷ್ಟೇ ವಯಸ್ಸಿನದು ಅಂದರೆ ಸುಮಾರು ೪೬೦ ಕೋಟಿ ವರ್ಷಗಳ ಹಿಂದೆ ಉಂಟಾಯಿತು ಎಂದು ವೈಜ್ಞಾನಿಕವಾಗಿ ಕಂಡು ಹಿಡಿಯಲಾಗಿದೆ. [೮]

ಮಹಾಸ್ಫೋಟದ ಸಿದ್ಧಾಂತದ ಪ್ರಕಾರ ವಿಶ್ವದಲ್ಲಿನ ಸರ್ವಪದಾರ್ಥಗಳು ಆದಿಕಾಲದ ಅಣುವೆಂದು ಕರೆಯಲ್ಪಡುವ ಬೃಹತ್ ಸಾಂದ್ರಗೋಳವೊಂದರಲ್ಲಿ ತುಂಬಿಕೊಂಡಿದ್ದವು. ಈ ಆದಿ ಸ್ವರೂಪದ ಅಣು ಅಸಂಖ್ಯಾತ ಸೂಕ್ಷ್ಮಕಣಗಳು ಆಕಸ್ಮಿಕವಾಗಿ ಸ್ಫೋಟಗೊಂಡಿತು. ಈ ಸ್ಫೋಟವನ್ನು ಮಹಾಸ್ಫೋಟ ಎಂದು ಕರೆಯಲಾಗಿದೆ. ಮಹಾಸ್ಫೋಟವಾದ ೫೦ ಮಿಲಿಯನ್ ವರ್ಷಗಳ ನಂತರ ನಮ್ಮ ಆಕಾಶಗಂಗಾ ನಕ್ಷತ್ರ ಪುಂಜವು ರೂಪಗೊಂಡಿದೆ. ಸುಮಾರು ೫ ಮಿಲಿಯನ್ ವರ್ಷಗಳ ಹಿಂದೆ ನಮ್ಮ ಸೌರವ್ಯೂಹವು ಅನಿಲದ ಮೋಡದಿಂದ ರೂಪಗೊಳ್ಳಲು ಪ್ರಾರಂಭವಾಯಿತು. ಸೌರ್ಯವ್ಯೂಹದ ರಚನೆಯ ಬಗ್ಗೆ ಇರುವ ಹಲವಾರು ಸಿದ್ಧಾಂತಗಳ ಪ್ರಕಾರ ಗ್ರಹಗಳು ಹಾಗೂ ಸೌರವ್ಯೂಹದ ಇತರ ಸದಸ್ಯ ಆಕಾಶಕಾಯಗಳು ಸೂರ್ಯನ ಒಂದು ಭಾಗವಾಗಿವೆ. ಸೂರ್ಯನ ಸಮೀಪ ಆಕಸ್ಮಿಕವಾಗಿ ಯಾವುದೋ ಒಂದು ಬೃಹತ್ ನಕ್ಷತ್ರ ಹಾದು ಹೋಯಿತು ಎಂದು ಹೇಳಲಾಗಿದೆ. ಈ ನಕ್ಷತ್ರದ ಆಕರ್ಷಣೆಯಿಂದಾಗಿ ಸೂರ್ಯನ ಮೇಲ್ಮೈಯಲ್ಲಿ ಬಹುದೊಡ್ಡ ಭಾಗವು ಸ್ಪರ್ಶಿಸಲ್ಪಟ್ಟಿತು. ಕಾಲಕ್ರಮೇಣ ಆ ಭಾಗವು ತಂಪಾಗಿ, ಘನೀಕರಿಸಿ, ಗ್ರಹಗಳು, ಉಪಗ್ರಹಗಳು ಮತ್ತು ಅನೇಕ ಇತರ ಆಕಾಶಕಾಯಗಳು ಜನ್ಮತಾಳಿದವು. ಅವುಗಳೆಲ್ಲವೂ ಸೂರ್ಯನ ಸುತ್ತ ಸುತ್ತ ತೊಡಗಿದವು. ನವ

---

೮ (ಅಡಿ ಟಿಪ್ಪಣಿ: ದೇವರು ಧರ್ಮ ವೈಚಾರಿಕತೆ, ಲೇಖಕರು ಸಿ.ಎನ್.ಸೆಟ್ಟಿ ಪುಟ ಸಂಖ್ಯೆ - ೨೯)

ಗ್ರಹಗಳಾದ ಬುಧ, ಶುಕ್ರ, ಭೂಮಿ, ಮಂಗಳ, ಗುರು, ಶನಿ, ಯುರೇನಸ್, ನೆಪ್ಚ್ಯೂನ್ (ತೆಗೆದುಹಾಕಲಾಗಿದೆ) ಹಾಗೂ ಪ್ಲೂಟೋ, ಉಪಗ್ರಹಗಳು, ಕ್ಷುದ್ರಗ್ರಹಗಳು, ಧೂಮಕೇತುಗಳು, ಮತ್ತು ಉಲ್ಕೆಗಳು ನಮ್ಮ ಸೌರವ್ಯೂಹದ ಇತರ ಕಾಯಗಳು.

ಸೂರ್ಯನಿಂದ ಸಿಡಿದು ಬಂದ ಭೂಮಿ ಸಹಸ್ರ ವರ್ಷಗಳವರೆಗೆ ಉರಿದು ಅದರ ಮೇಲೆ ವರ್ಷಗಟ್ಟಲೆ ಮಳೆಸುರಿದಾಗ ಅದರ ಫಲವಾಗಿಯೇ ಇಲ್ಲಿ ಹಸಿರು ಹುಲ್ಲು ಗಿಡಮರಗಳು ಕಾಣಿಸಿಕೊಂಡವು. ಭೂಮಿಯು ಜೀವಿಗಳಿರುವ ಏಕೈಕ ಗ್ರಹವಾಗಿದೆ. ಏಕೆಂದರೆ ಭೂಮಿ ಸೂರ್ಯನಿಂದ ಸೂಕ್ತ ಅಂತರದಲ್ಲಿದೆ. ಇದು ಜೀವಿಗಳ ಅಸ್ತಿತ್ವಕ್ಕೆ ಅತಿ ಉಷ್ಣವಾಗಿರುವಷ್ಟು ಸೂರ್ಯನಿಗೆ ಸಮೀಪದಲ್ಲಿಲ್ಲ. ಹಾಗೆ ಅತಿ ಶೀತವಾಗಿರುವಷ್ಟು ಸೂರ್ಯನಿಂದ ದೂರವಾಗಿಯೂ ಇಲ್ಲ. ಉಷ್ಣಾಂಶದ ಪರಿಮಿತಿಯು ನೀರನ್ನು ಘನ, ದ್ರವ ಮತ್ತು ಅನಿಲ ರೂಪದಲ್ಲಿಡಲು ಸೂಕ್ತವಾಗಿದೆ. ಇದರ ವಾಯುಗೋಳವು ಸಮರ್ಪಕವಾದ ಅನಿಲಗಳ ಸಂಯೋಜನೆಯನ್ನೊಳಗೊಂಡಿದೆ. ಭೂಮಿಯ ಆಕಾರದ ಬಗ್ಗೆ ಆರಂಭದಲ್ಲಿ ಬೆಬಿಲೋನಿಯರು ಭೂಮಿ ದುಂಡಾಗಿದೆ ಅದು ಓಕಿನೋಸ್ ಎಂಬ ನದಿಯಿಂದ ಸುತ್ತುವರೆದಿದೆ. ಎಂದು ಭಾವಿಸಿದರು. ಅನಾಕ್ಸಿಮಾಂಡರ್ ಭೂಮಿ ಆಕರ ಉರುಳಾಕಾರವಾಗಿದೆ ಎಂದೆಣಿಸಿದ್ದವು. ಪ್ರಾಚೀನ ಭಾರತೀಯರು ಚಪ್ಪಟೆಯೆಂದರು. ಪೈಥಾಗೋರಸ್, ಎರಾಟೋಸ್ಥನೀಸ್, ಆರ್ಯಭಟ, ಟಾಲೆಮಿ ಭೂಮಿ ಗೋಳಾಕಾರವಾಗಿದೆ ಎಂಬುದನ್ನು ಸಾಧಿಸಿ ತೋರಿಸಲು ಹೋದ ಮೆಗಲನ್ ಫಿಲಿಪೈನ್ಸ್ ದ್ವೀಪದಲ್ಲಿ ಮೃತನಾದ. ನಾವಿಕರು ಭೂಮಿಯು ಗೋಳಾಕಾರವಾಗಿದೆ ಎಂಬುದನ್ನು ಸಾಧಿಸಿ ತೋರಿಸಿದರು. ಒಬ್ಬನ ನಂಬಿಕೆಯನ್ನು ಮತ್ತೊಬ್ಬರು ಅದನ್ನು ಬದಲಾಯಿಸಿ ದೃಢಪಡಿಸಿ ಭೂಮಿ ಸಂಪೂರ್ಣವಾಗಿ ಗೋಳಾಕಾರವಾಗಿರದೆ ಅದು ಧ್ರುವಗಳಲ್ಲಿ ಚಪ್ಪಟೆ ಮತ್ತು ಸಮಭಾಜಕ ವೃತ್ತದಲ್ಲಿ ಉಬ್ಬಿರುತ್ತದೆ. ಇದನ್ನು 'ಭೂಮ್ಯಾಕಾರ' ಎಂದು ಕರೆಯಲಾಗುವುದು.

ಭೂಮಿ ಮೇಲೆ ಜೀವಿಯ ಸೃಷ್ಠಿಯು ಸುಮಾರು ೭೦ ಕೋಟಿ ವರ್ಷಗಳ ಹಿಂದೆ ಆಯಿತು. ಕಾಲಾಂತರದಲ್ಲಿ ೫೦ ಕೋಟಿ ವರ್ಷಗಳ ಏಕಕೋಶ ಜೀವಿ ಅಮೀಬಾ ಆವಿರ್ಭಾವವಾಯಿತು. ಈ ಅಮೀಬಾವೇ ಆದಿಮಾನವನ ಹುಟ್ಟಿಗೆ ಕಾರಣವಾಯಿತೆಂದು ಜೀವ ವಿಜ್ಞಾನಿಗಳ ವಂಶೋತ್ಪತ್ತಿಗೆ ಸಾಗಿತು. ಮೀನು, ನೆಲ, ಜಲಗಳಲ್ಲಿ ಸಂಚರಿಸುವ ಕಪ್ಪೆ, ಹಲ್ಲಿ, ಉಡ ಮುಂದೆ ಸರಿಸೃಪಗಳು, ಇನ್ನೂ ಮುಂದೆ ಹಾಲುಡುವ ಸಸ್ತನಿಗಳು ಉದಯಿಸಿದವು. ಮಾನವನ ವಿಕಾಸಕ್ಕೆ ಕಾರಣವಾದ ಸಣ್ಣ ಪ್ರಾಣಿಗಳು ೩೦ ಲಕ್ಷ ವರ್ಷಗಳ ಹಿಂದೆ ಕಾಣಿಸಿದವು. ಅವೇ ವಿಕಾಸವಾಗಿ ಅನೇಕ ರೀತಿಯ ಕಪಿಗಳು ಬಾಲವಿಲ್ಲದ ಚಿಂಪಾಂಜಿ, ಗೋರಿಲ್ಲಾ (ಗಿಬ್ಬನ್) ಕಾಣಿಸಿಕೊಂಡವು. ಗೋರಿಲ್ಲಾ ಕಪಿ ಮಾನವನಾಗಲು ಸಾವಿರಾರು ವರ್ಷಗಳು ಬೇಕಾದವು. "ವಾನರ>ನರ>ಮಾನವ" ಇವು ಜೀವ ವಿಕಾಸದ ಸರಣಿಯೆಂದು ನಾಡಿನ ಹಿರಿಯ ವಿದ್ವಾಂಸ ಡಾ॥ ಶಂಬಾ ಜೋಶಿಯವರು ಅಭಿಪ್ರಾಯ ಪಡುತ್ತಾರೆ.[೯]

ವಾನರ ಮತ್ತು ಮಾನವ ಇವರ ನಡುವಣ ಜೀವಿಯನ್ನು ಮಿಸ್ಸಿಂಗ್ ಲಿಂಕ್ ಎಂದು ಕರೆಯಲಾಗಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

---

[illegible]

ಭಾರತವು ವಿಶ್ವದ ಪುರಾತನ ಸಂಸ್ಕೃತಿಗಳಲ್ಲಿ ಒಂದಾಗಿದೆ. ಸುಮಾರು ೩೨ ಲಕ್ಷ ವರ್ಷಗಳಷ್ಟು ಪೂರ್ವದಲ್ಲಿ ಮಾನವನ ಆಗಮನವಾಗಿದೆ. ಮುಂದಿನ ೨೮ ಲಕ್ಷ ವರ್ಷಗಳ ಕಾಲ ಆತನು ಇತರ ಪ್ರಾಣಿಗಳಂತೆ ಬದುಕಿದನು. ಈ ಕಾಲಾವಧಿಯಲ್ಲಿ ಯಾವುದೇ ರೀತಿಯ ಬೆಳವಣಿಗೆ ಹಾಗೂ ಕಾರ್ಯ ಚಟುವಟಿಕೆಗಳು ಬರದೇ ಇರುವುದಕ್ಕಾಗಿ ಭಾರತದ 'ಪ್ರೋಟೋ ಹಿಸ್ಟರಿ' ಯುಗ (ಇತಿಹಾಸ ಪೂರ್ವಕಾಲ) ಎನ್ನಲಾಗಿದೆ. ೪ ಲಕ್ಷ ವರ್ಷಗಳ ನಂತರ ಮನುಷ್ಯನ ಭಾವನೆಗಳ ಅಭಿವ್ಯಕ್ತಿಗಳು, ಚಿತ್ರಕಲೆ, ಗುಹೆಗಳ ಕೆತ್ತನೆ, ಕಲ್ಲಿನ ಕೆತ್ತನೆ ಕಂಡು ಬಂದಿವೆ.

ಚಾರ್ಲ್ಸ್‌ಡಾರ್ವಿನ್ ಕ್ರಿ.ಶ. ೧೮೫೯ರಲ್ಲಿ ದೇವರು ಲೋಕ ಸೃಷ್ಟಿಸಿದ ಎನ್ನುವ ಧಾರ್ಮಿಕ ಚಿಂತನೆ ತನ್ನ ಉಗಮ ಸಿದ್ಧಾಂತದ ಮೂಲಕ ತಿರಸ್ಕರಿಸಿದರು. ಹಾಗೆಯೇ ನವೆಂಬರ್ ೨೦೧೦ರಲ್ಲಿ ಸ್ಟೀಫನ್ ಹಾಕಿಂಗ್ಸ್ ಕೂಡ ಇದನ್ನೇ ಹೇಳಿದ್ದಾರೆ. ೧೮೬೩ರಲ್ಲಿ ಥಾಮಸ್ ಹಕ್ಸಿ 'ಲೋಕ ಮತ್ತು ಅದರಲ್ಲಿನ ಸೃಷ್ಟಿ ನಿರಂತರ ಪ್ರಗತಿ ಶೀಲ ಪ್ರಕ್ರಿಯೆಯ ಫಲ'. ಎಂದು ಶೋಧಿಸಿ ತೋರಿಸಿದ ಅನಂತರ ವಿಶ್ವದ ಅಧ್ಯಯಿಗಳು ಮಾನವ ಜನಾಂಗದ ಉದಯದ ಕುರಿತು ನಿರಂತರ ಅಧ್ಯಯನ ಆರ್ರಂಭಿಸಿದರು. ಮೂವತ್ತೆಂಟು ಲಕ್ಷ ವರ್ಷದ ಹಿಂದಿನ ಕಾಲದಲ್ಲಿ ಪೂರ್ವ ಆಫ್ರಿಕಾದಲ್ಲಿ ಕಂಡು ಬಂದ 'ಅಸ್ಟ್ರಲೋಪಿಥೇನ್ಸಿಸ್' ಮಾನವ ನಮ್ಮೆಲ್ಲರ ಆದಿ ಪಿತಾಮಹ ಎಂದು ನಂಬಲಾಗಿದೆ. ಕ್ರಿ.ಪೂ. ಮೂವತ್ತೆರಡು ಲಕ್ಷ ವರ್ಷಗಳ ಹಿಂದೆ ಇಥಿಯೋಪಿಯಾದಲ್ಲಿ ಲೂಸಿ ಎಂದು ಹೆಸರಿಸಲಾಗಿರುವ ಅಸ್ಟ್ರೊಲೋಪಿಥೇನ್ಸಿಸ್ ಅಪರೇನ್ಸಿಸ್ ಸ್ತ್ರೀಯರನ್ನು ಗುರುತಿಸಲಾಗಿದೆ.

**೪. ಪ್ರಾಚೀನ ಮಾನವನ ಉದಯ :**

ನಂಬಿಕೆ ಮತ್ತು ಆಚರಣೆಗಳ ಆರಂಭಕ್ಕೆ ಕಾರಣವಾದ ಮಾನವನ ಹುಟ್ಟು ಬೆಳವಣಿಗೆ ಹೇಗಾಯಿತು. ಇವುಗಳಿಗೆ ಅನುಸಾರವಾಗಿ ಮಾನವ ಜೀವನದ ವಿವಿಧ ಮಜಲುಗಳನ್ನು ಹೇಗೆ ದಾಟಿ ಬಂದ ಎನ್ನುವುದು ತಿಳಿಯಬೇಕಾಗುತ್ತದೆ. ಪ್ರಾಚೀನ ಮಾನವನ ಆರಂಭದ ಕಾಲವನ್ನು ಪ್ರಾಗಿತಿಹಾಸಕಾಲದಿಂದಲೇ ಗುರುತಿಸಲಾಗುತ್ತದೆ. ಭಾರತದಲ್ಲಿ ಪ್ರಾಗಿತಿಹಾಸವನ್ನು ಶಿಲಾಯುಗ, ಲೋಹಯುಗಗಳೆಂದು ವಿಂಗಡಿಸಲಾಗಿದೆ. ಶಿಲಾಯುಗದಲ್ಲಿ ಮತ್ತೆ ಮೂರು ಪ್ರಕಾರಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ; ೧) ಹಳೆ ಶಿಲಾಯುಗ ೨) ಸೂಕ್ಷ್ಮ ಶಿಲಾಯುಗ ೩) ನವ ಶಿಲಾಯುಗ ಲೋಹಯುಗದಲ್ಲಿ ಎರಡು ಪ್ರಕಾರಗಳಾಗಿ ವಿಂಗಡಿಸಲಾಗಿದೆ, ಅವುಗಳೆಂದರೆ; ೧) ತಾಮ್ರಯುಗ ೨) ಕಬ್ಬಿಣಯುಗ ಎಂದು ವಿಭಾಗಿಸಲಾಗಿದೆ. ಅದರಂತೆ ಅಮೇರಿಕಾದ ಪುರೋಗಾಮಿ ವಿಜ್ಞಾನಿಯಾದ ಎಲ್.ಜಿ. ಮಾರ್ಗನರು ಮಾನವನ ಇತಿಹಾಸ ಪೂರ್ವಕಾಲದ ಸ್ಥಿತಿಗತಿಗಳನ್ನು ಅಧ್ಯಯನ ಮಾಡಿದ ವ್ಯಕ್ತಿಗಳಲ್ಲಿ ಮೊದಲಿಗರು. ಇವರು ಇತಿಹಾಸ ಪೂರ್ವಕಾಲದ ಸ್ಥಿತಿಗತಿಗಳನ್ನು ಕಿರಾತಾವಸ್ಥೆ, ಅನಾಗರಿಕಾವಸ್ಥೆ ಹಾಗೂ ನಾಗರಿಕಾವಸ್ಥೆ ಎಂದು ಈ ಮೂರು ಪ್ರಧಾನ ಕಾಲ ಘಟಗಳಲ್ಲಿ ವರ್ಗೀಕರಿಸಿದ್ದಾರೆ. ಮಾರ್ಗನರು ಸಹಜವಾಗಿಯೇ ಮೊದಲು ಎರಡು ಘಟ್ಟಗಳಲ್ಲಿ ಒಂದೊಂದನ್ನು ಅವರು ಮತ್ತೆ ಕೆಳ, ಮಧ್ಯಮ ಹಾಗೂ ಮೇಲು ಮಜಲುಗಳೆಂದು ವಿಭಾಗಿಸಿದ್ದಾರೆ. ಎರಡು ಘಟ್ಟಗಳಲ್ಲಿ ಮತ್ತು ಮೂರನೆಯ ಘಟ್ಟದಲ್ಲಿ ಆದ ಪರಿವರ್ತನೆಯ ಬಗ್ಗೆ ಹೆಚ್ಚು ಆಸಕ್ತರಾಗಿದ್ದಾರೆ.

"ಈ ನಿಟ್ಟಿನಲ್ಲಿ ಮಾನವನ ಕೌಶಲ್ಯದ ಮೇಲೆಯೇ, ಇಳೆಯ ಮೇಲೆ ಅವನ ಪಾರಮ್ಯದ ಪ್ರಶ್ನೆ, ನಿಸರ್ಗದ ಮೇಲೆ ಅವನ ಅಧಿಪತ್ಯದ ಪ್ರಶ್ನೆ ಅವಲಂಬಿಸಿದ್ದುದು. ಮಾನವರಷ್ಟೆ ತಮ್ಮ ಆಹಾರೋತ್ಪಾದನೆಯ

ಮೇಲೆ ಸಂಪೂರ್ಣ ಹತೋಟಿ ಪಡೆದುಕೊಂಡಜೀವಿಗಳು ಎಂದು ಹೇಳಬಹುದು. ಜೀವನೋಪಾಯ ಸಾಧನಗಳ ಮೂಲಗಳನ್ನು ವಿಸ್ತರಿಸಿದ ಕಾಲಘಟ್ಟಗಳೇ ಹೆಚ್ಚು ಕಡಿಮೆ ಮಾನವ ಪ್ರಗತಿಯ ಮಹೋನ್ನತ ಕಾಲ ಘಟ್ಟಗಳೂ ಆಗಿವೆ" [೧೦].

ಭಾರತ ಇತಿಹಾಸದ ಹಳೆಶಿಲಾಯುಗ ಎಂದು ಕರೆಯಲಾಗುವ ಈ ಕಾಲಾವಧಿಯನ್ನು ಎಲ್.ಜಿ.ಮಾರ್ಗನರು ಕಿರಾತಾವಸ್ಥೆ ಎಂದು ಗುರುತಿಸಿದ್ದಾರೆ. ಈ ಕಾಲಾವಧಿಯಲ್ಲಿ ಕಾಣಿಸಿಕೊಂಡ ಕಪಿಮಾನವರು ಮಾನವ ಕುಲದ ಶೈಶಾವಸ್ಥೆಯಲ್ಲಿದ್ದವರು. ಇವರಲ್ಲಿ ಆಲೋಚಿಸುವ ಶಕ್ತಿ ತುಂಬಾ ಕಡಿಮೆ. ಅವನಿಗೂ ಉಳಿದ ಪ್ರಾಣಿಗಳ ನಡುವೆ ಹೆಚ್ಚು ವ್ಯತ್ಯಾಸ ವಿರಲಿಲ್ಲ. ಸ್ಥಿತ ಪ್ರಜ್ಞನಾದ ಅವನು ಪ್ರಕೃತಿಯ ಆಗು ಹೋಗುಗಳ ಬಗ್ಗೆ ವಿಚಾರಿಸುತ್ತಿರಲಿಲ್ಲ. ಸಾಮಾನ್ಯವಾಗಿ ಗುಹೆ, ಕಲ್ಲಾಸರೆ ಹಾಗೂ ಮರದ ಪೊಟರೆಗಳಲ್ಲಿ ವಾಸವಾಗಿದ್ದು ಮಳೆ, ಗಾಳಿ, ಬಿಸಿಲು ಮತ್ತು ಹಿಂಸಮೃಗಗಳಿಂದ ರಕ್ಷಣೆ ಪಡೆದುಕೊಳ್ಳುತ್ತಿದ್ದರು. ಇದು ಈ ಕಾಲಘಟ್ಟದ ಕೆಳಮಜಲು ಆಗಿದ್ದು ಸಾವಿರಾರು ವರ್ಷಗಳವರೆಗೆ ಮುಂದುವರೆದುಕೊಂಡು ಬಂದಿತು. ಈ ಕಾಲಘಟ್ಟದ ಮಧ್ಯಮವಾದ ಮಜಲಿನಲ್ಲಿ ಮೀನನ್ನು ಆಹಾರವನ್ನಾಗಿ ಬಳಸುವುದು ಮತ್ತು ಬೆಂಕಿಯನ್ನು ಬಳಸುವುದು ಗುರುತಿಸಿಕೊಂಡಿದ್ದರು. ಒರಟಾದ ನಯವಿಲ್ಲದ ಶಿಲಾಯುಧಗಳು ಈ ಕಾಲಘಟ್ಟಕ್ಕೆ ಇಡಿಯಾಗಿ ಅಥವಾ ಪ್ರಧಾನವಾಗಿ ಸೇರಿದಂಥ ಶಿಲಾಯುಧಗಳು. ಎಲ್ಲಾ ಖಂಡಗಳಲ್ಲೂ ಹರಡಿ ಹಂಚಿರುವುದು ಮಾನವನು ಸ್ಥಳದಿಂದ ಸ್ಥಳಕ್ಕೆ ಹೋದುದಕ್ಕೆ ಸಾಕ್ಷಿಯಾಗಿದೆ. ಆಹಾರ ಪದಾರ್ಥಗಳ ಆಕರಗಳು ಅನಿಶ್ಚಿತವಾಗಿದ್ದುದರ ಫಲವಾಗಿ ಈ ಘಟ್ಟದಲ್ಲಿ ನರಭಕ್ಷಣೆ ಪ್ರಾರಂಭವಾಗಿ ದೀರ್ಘಕಾಲ ಮುಂದುವರೆಯಿತೆಂದು ಕಂಡು ಬರುತ್ತದೆ. ಆಸ್ಟ್ರೇಲಿಯನ್ನರೂ, ಅನೇಕ ಪಾಲಿನೇಷ್ಯಾನ್ನರೂ ಇಂದೂ ಕಿರಾತಾವಸ್ಥೆಯ ಈ ಮಧ್ಯಮ ಮಜಲಿನಲ್ಲಿದ್ದಾರೆ. ಈ ಕಿರಾತಾವಸ್ಥೆಯ ಮೇಲಿನ ಮಜಲಿನಲ್ಲಿ ವರ್ಣಚಿತ್ರಗಳ ರಚನೆ. ಮೂರ್ತಿಗಳನ್ನು ರೂಪಿಸುವುದು ಧಾರ್ಮಿಕ ನಂಬಿಕೆಗಳು ಮೂಡಿದವು. ಬಿಲ್ಲು ಬಾಣ ಉಪಯೋಗಿಸಿ ಬೇಟೆಯಾಡುವುದು ಸಾಮಾನ್ಯ ವೃತ್ತಿಗಳಲ್ಲೊಂದಾಯಿತು. ಜೀವನೋಪಾಯ ಸಾಧನಗಳ ಮರದ ಪಾತ್ರೆ ಪರಟೆಗಳು, ತೊಗಟೆ ನಾರಿನಿಂದ ಕೈ ಬೆರಳುಗಳಿಂದಲೇ ನೆಯ್ದ ವಸ್ತುಗಳು ಬುಟ್ಟಿ ತಯಾರಿಸುವುದು. ಇವುಗಳ – ಉತ್ಪಾದನೆಯ ಮೇಲೆ ಒಂದಿಷ್ಟು ಪ್ರಮಾಣದಲ್ಲಿ ಪ್ರಭುತ್ವ ಪಡೆದಿದ್ದನ್ನು ವಾಯುವ್ಯ ಅಮೇರಿಕಾದ ಇಂಡಿಯನ್ನರ ಮಧ್ಯೆ ಕಾಣುತ್ತೇವೆ.

ಹತ್ತು–ಹನ್ನೆರಡು ಸಾವಿರ ವರ್ಷಗಳ ಹಿಂದೆ ಇಡಿ ವಿಶ್ವದ ಹವಮಾನದಲ್ಲಿ ಆದ ಬದಲಾವಣೆಯೆಂದರೆ ಆ ಹಿಂದಿನ ಚಳಿಯ ಹಿಮಯುಗ ಕಳೆದು, ಈಗ ಇರುವ ಬೆಚ್ಚಗಿನ ಹವಮಾನ ಪಸರಿಸಿತು. ಈ ವಾತಾವರಣಕ್ಕನುಗುಣವಾಗಿ ಮಾನವ ಜೀವನ ವಿಧಾನ ಬದಲಾಯಿತು. ಇದರಿಂದಾಗಿ ಈ ಅವಧಿ 'ಸೂಕ್ಷ್ಮ ಶಿಲಾಯುಗ' ವೆಂದೇ ಕರೆಯಲಾಗಿದೆ. ಈ ಕಾಲಘಟ್ಟದ ಕೆಳಮಜಲು ಕುಂಬಾರ ಕಲೆ ಜಾರಿಗೆ ಬಂದಂದಿನಿಂದ ಪ್ರಾರಂಭವಾಗುತ್ತದೆ. ಬುಟ್ಟಿಗಳು ಅಥವಾ ಮರದ ಪಾತ್ರೆಗಳು ಬೆಂಕಿಯಲ್ಲಿ ಸುಡದಂತೆ ಮಾಡಲು ಅವುಗಳ ಸುತ್ತ ಮಣ್ಣು ಮೆತ್ತುವುದರೊಂದಿಗೆ ಕುಂಬಾರ ಕಲೆ ಬಹುಶಃ ಎಲ್ಲೆಲ್ಲೂ. ಕೆಲವು ಕಡೆಗಳಲ್ಲಿ ಹೆಚ್ಚು ಎಮ್ಮ

೧೦. (ಅಡಿ ಟಿಪ್ಪಣಿ: ಕುಟುಂಬ ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ. ಲೇಖಕರು ಎಂಗಲ್ಸ್ ಪುಟ ಸಂಖ್ಯೆ ೩೩).

ಕಾಣುವಂತೆ ಪ್ರಾರಂಭವಾಯಿತು. ಈ ಅವಸ್ಥೆಯ ವಿಶಿಷ್ಟ ಲಕ್ಷಣವೆಂದರೆ, ಪ್ರಾಣಿಗಳ ಪಾಲನೆ ಪೋಷಣೆ ಹಾಗೂ ಬೇಸಾಯ, ನೈಸರ್ಗಿಕ ಪರಿಸ್ಥಿತಿಗಳು ಬೇರೆ ಬೇರೆ ಇದ್ದುದರಿಂದ ಈ ಒಂದೊಂದು ಗೋಳಾರ್ಧದ ಜನರು ತಮ್ಮದೇ ವಿಶೇಷ ರೀತಿಯಲ್ಲಿ ಬೆಳೆಯತೊಡಗಿದರು. ಹಾಗಾಗಿ ಈ ಜನತೆಗಳಲ್ಲಿ ಬೆಳವಣಿಗೆಯ ವಿವಿಧ ಘಟ್ಟಗಳನ್ನು ಪ್ರತ್ಯೇಕಿಸುವ ಗಡಿ ರೇಖೆಗಳ ಹೆಗ್ಗುರುತುಗಳು ಒಂದೊಂದು ಪ್ರಸಂಗದಲ್ಲೂ ಬೇರೆ ಬೇರೆಯಾಗಿವೆ.

ಮಧ್ಯಮ ಮಜಲಿನಲ್ಲಿ ನೀರಾವರಿಯ ಮೂಲಕ ಆಹಾರ ಯೋಗ್ಯವಾದ ಬೆಳೆಗಳನ್ನು ಬೆಳೆಯುವುದರೊಂದಿಗೂ ಮನೆಗಳನ್ನು ಕಟ್ಟಲು ಇಟ್ಟಿಗೆಗಳನ್ನೂ ಕಲ್ಲುಗಳನ್ನೂ ಉಪಯೋಗಿಸಲು ತೊಡಗಿದುದರೊಂದಿಗೂ ಪ್ರಾರಂಭವಾಗುತ್ತದೆ. ಇಂಡಿಯನ್ನರು ಮೊದಲು ಪಾಶ್ಚಾತ್ಯ ಜಗತ್ತಿಗೆ ಗೊತ್ತಾಗಿರುವಾಗ ಅನಾಗರಿಕಾವಸ್ಥೆಯ ಕೆಳ ಮಜಲಿನಲ್ಲಿದ್ದರು. ಇಂಡಿಯನ್ನರಂತಹವರು, ಮೆಕ್ಸಿಕನ್ನರು, ಮಧ್ಯ, ಅಮೇರಿಕನ್ನರು ಹಾಗೂ ಪೆರುವಿಯನ್ನರು 'ಯುರೋಪಿಯನ್ ದಾಳಿ' ಯ ಸಮಯದಲ್ಲಿ ಅನಾಗರಿಕಾವಸ್ಥೆ ಮಧ್ಯಮ ಮಜಲಿನಲ್ಲಿದ್ದರು. ಅವರು ಕೃತಕ ನೀರಾವರಿ ವ್ಯವಸ್ಥೇ ಏರ್ಪಡಿಸಿದ್ದ ತೋಟಗಳಲ್ಲಿ ಮುಸುಕಿನ ಜೋಳ ಮತ್ತೀತರ ಆಹಾರ ಯೋಗ್ಯ ಬೆಳೆಗಳನ್ನು ಬೆಳೆಯುತ್ತಿದ್ದರು. ಸ್ಥಳ ಹಾಗೂ ಹವಾಗುಣಗಳಿಗೆ ಅನುಗುಣವಾಗಿ ಈ ಬೆಳೆಗಳೂ ಬೇರೆ ಬೇರೆಯಾಗಿದ್ದವು. ಮೇಲಿನ ಮಜಲು ಕಬ್ಬಿಣದ ಅದಿರನ್ನು ಕರಗಿಸುವುದನ್ನು ಮಾನವನು ಕಲಿಯುವುದರೊಂದಿಗೆ ಆರಂಭವಾಗುತ್ತದೆ. ಅಕ್ಷರಗಳ ಮೂಲಕ ಬರವಣಿಗೆಯನ್ನು ಹಿಡಿದುದರ ಮೂಲಕ ಮತ್ತು ಈ ಬರವಣಿಗೆಯನ್ನು ಮೌಖಿಕ ಸಾಹಿತ್ಯ ಕೃತಿಗಳ ದಾಖಲೆಗಳಿಗಾಗಿ ಬಳಸುವ ಮೂಲಕ ಈ ಮಜಲು ನಾಗರಿಕಾವಸ್ಥೆಯ ಮಜಲಿಗೆ ಪ್ರವೇಶಿಸುತ್ತದೆ.

ಈ ಯುಗದ ಗ್ರೀಕರು, ರೋಮ್ ಸಂಸ್ಥಾಪನೆಗೆ ಸ್ವಲ್ಪ ಮುನ್ನ ಇದ್ದ ಇಟಾಲಿಯ ಬುಡಕಟ್ಟುಗಳೂ ಟಾಟ್ಸಿಟಸ್‌ನ ಜರ್ಮನರೂ ವಿಕಿಂಗ್‌ರ ದಿನಗಳ ನಾರ್ಮನ್ನರ ಈ ಘಟ್ಟಕ್ಕೇ ಸೇರಿದವರು ಕಬ್ಬಿಣದ ನೇಗಿಲು ಊಳುಮೆ ಬಳಸಿದ್ದನ್ನು ಕಾಣುತ್ತೇವೆ. ಕೊಡಲಿ, ಗುದ್ದಲಿ ಬಳಸಿ ಕಾಡುಗಳನ್ನು ಕಡಿದು ಕೃಷಿಗೆ ಯೊಗ್ಯವಾದ ಭೂಮಿಯನ್ನಾಗಿ ಪರಿವರ್ತಿಸಿಕೊಂಡರು. ನಮ್ಮ ಇತಿಹಾಸದಲ್ಲಿ ಈ ಕಾಲಾವಧಿ ನವಶಿಲಾಯುಗ ಮತ್ತು ಅದರ ಮುಂದುವರೆದ ಕಾಲ ಲೋಹಯುಗ ಎನಿಸಿದೆ.

ಬೇರೆ ಬೇರೆ ಖಂಡಗಳಲ್ಲಿ ಬೇರೆ ಬೇರೆ ರೂಪಗಳಲ್ಲಿ ಈ ಲೋಹಯುಗದ ಮಾನವ ಸಮುದಾಯ ರೂಪ ತಾಳಿತು. ಸಾಂಸ್ಕೃತಿಕ ವೈವಿಧ್ಯ ಸ್ಪಷ್ಟವಾಗಿ ಕಾಣಿಸುವಂತಾಯಿತು. ಈ ಸಂಸ್ಕೃತಿ ಬೆಳೆದು ಮುಂದೆ ವಿಕಸಿತ ರೂಪದಲ್ಲಿ ಹರಪ್ಪ, ಈಜಿಪ್ಟ, ಮೆಸಪೊಟೋಮಿಯಾ ನಾಗರೀಕತೆಗಳು ಮೂಡಿದವು.

ಮಾರ್ಗನ್‌ರು ಮಾಡಿದಂಥ ಕಾಲಾವಧಿಗಳ ವಿಭಜನೆಯನ್ನು ಈ ಕೆಳಗಿನಂತೆ ಸಾಮಾನ್ಯೀಕರಿಸಬಹುದು; ಕಿರಾತಾವಸ್ಥೆ-ಬಳಕೆಗೆ ಸಿದ್ಧವಾಗಿದ್ದಂತ ನೈಸರ್ಗಿಕ ಉತ್ಪನ್ನಗಳನ್ನು ಸ್ವಾಧೀನ ಪಡಿಸಿಕೊಳ್ಳುವುದು. ಮೇಲುಗೈ ಪಡೆದಿದ್ದ ಕಾಲಾವಧಿ; ಮಾನವನು ಉತ್ಪಾದಿಸಿದ ವಸ್ತುಗಳೆಲ್ಲ ಮುಖ್ಯವಾಗಿ ಹೀಗೆ ಸ್ವಾಧೀನಪಡಿಸಿಕೊಳ್ಳುವುದಕ್ಕೆ ನೆರವಾಗುತ್ತಿದ್ದ ಸಲಕರಣೆಗಳಾಗಿದ್ದವು. ಅನಾಗರಿಕಾವಸ್ಥೆ – ಪಶುಪಾಲನೆ ಹಾಗೂ ಭೂಮಿ ಸಾಗುವಳಿಯ ಜ್ಞಾನ ಪಡೆದುಕೊಂಡ ಕಾಲಾವಧಿ. ಮಾನವ ಚಟುವಟಿಕೆಯ ಮೂಲಕ ನಿಸರ್ಗದ ಉತ್ಪಾದಕತೆಯನ್ನು ಹೆಚ್ಚಿಸುವ ವಿಧಾನಗಳನ್ನು ಈ ಕಾಲಾವಧಿಯಲ್ಲಿ ಕಲೆಯಲಾಯಿತು. ನಾಗರಿಕಾವಸ್ಥೆ ನೈಸರ್ಗಿಕ ಉತ್ಪನ್ನಗಳ ಮತ್ತಷ್ಟು ಪರಿಷ್ಕರಣೆಯ-ನಿಜವಾದ ಕೈಗಾರಿಕೆಯ ಹಾಗೂ ಕಲೆಯ ಜ್ಞಾನ ಪಡೆದ ಕಾಲಾವಧಿ.

**೫. ದೇವತೆಗಳ ಆರಾಧನೆ :**

ಲಕ್ಷಾಂತರ ವರ್ಷಗಳ ಜೀವ ವಿಕಾಸದ ಕ್ರಿಯೆಯಲ್ಲಿ ಬದಲಾವಣೆ ಹೊಂದಿದ ಮನುಷ್ಯ ಶಾರೀರಿಕ ಮತ್ತು ಬೌದ್ಧಿಕ ವಿಕಾಸ ಹೊಂದಿ ಬುದ್ಧಿವಂತನಾದನು. ತನ್ನ ಅಕ್ಕಪಕ್ಕ ಪ್ರಪಂಚವನ್ನು ಅದ್ಭುತದಿಂದ ನೊಡಲಾರಂಭಿಸಿದನು. ದಟ್ಟವಾದ ಅರಣ್ಯ–ಗುಡ್ಡಬೆಟ್ಟ, ಪರ್ವತ–ನದಿ ಕಣಿವೆಗಳು, ಹಗಲು–ರಾತ್ರಿ, ಮಳೆ–ಚಳಿ, ಗಾಳಿ–ಬೆಂಕಿ, ಮೋಡ–ಮಿಂಚು, ಸಿಡಿಲು–ಗುಡುಗು, ನೆರೆ–ತೊರೆ, ಭೂಕಂಪ–ಚಂಡಮಾರುತ, ಆಕಾಶ–ನಕ್ಷತ್ರ ಹಾಗೂ ಸಸ್ಯ ಸಂಪತ್ತು ಇವೆಲ್ಲ ನೋಡಿದ ಆತನಿಗೆ ಒಂದು ಕಡೆ ಆಶ್ಚರ್ಯ ಎನಿಸಿದರೆ ಇವುಗಳ ಇನ್ನೊಂದು ಮುಖ ಭಯಾನಕ ಎನಿಸಿದವು. ಈ ಭಯಾನಕಗಳಿಂದ ರಕ್ಷಿಸಿಕೊಳ್ಳಲು ದೈವಿಶಕ್ತಿಯನ್ನು ಗುರುತಿಸಿಕೊಂಡನು.

ಪ್ರಕೃತಿಯ ಈ ಆಟೋಪಕ್ಕೆ ಕಾರಣವಾದ ಯಾವುದೊಂದು ಶಕ್ತಿಯಿದೆ ಎಂದು ಕಲ್ಪನೆ ಮಾಡಿಕೊಂಡ. ಈ ಭಯದಿಂದ ರಕ್ಷಿಸಿಕೊಳ್ಳಲು ಆ ಶಕ್ತಿಯನ್ನು ಪುನಃ ಪುನಃ ಆರಾಧಿಸಿ ಒಲಿಸಿಕೊಳ್ಳಲು ಯೋಚಿಸಿದನು. ಹೀಗೆ ಪ್ರಕೃತಿ ವೈಚಿತ್ರ್ಯಗಳ ಭಯವೇ ದೇವರ ಕಲ್ಪನೆಗೆ ಕಾರಣವಾಯಿತು. ಭಯದಿಂದ ಭಕ್ತಿ ಹುಟ್ಟಿತು. ವಿಶ್ವದ ಉಗಮ ಕಾರ್ಯಕಾರಣ ಸಂಬಂಧದಿಂದಾದರೆ ಉಳಿದುದ್ದನ್ನು ಸೃಷ್ಟಿಸಿಕೊಂಡಿದ್ದು ಮಾನವನ ಆಲೋಚನ ಶಕ್ತಿಯೇ ಆಗಿದೆ. ಬಿರುಗಾಳಿಗೆ ಮೈಯನ್ನು ಬಲವಾಗಿ ದೂಡಿದರು. ಅದೃಶ್ಯವಾಗಿರುವ ಪರಿ ಹೇಗೆ ಇದ್ದಕ್ಕಿಂದಂತೆ ಕೆರಳುವುದರ ರಹಸ್ಯವೇನು ಎಂದು ಆದಿಮಾನವ ಚಿಂತಿಸಿದ ವರ್ಷಧಾರೆಯಾದಾಗ ಹೆದರಿ ಸ್ತೋತ್ರಗಳನ್ನು ಪಠಿಸಿದ ಹರಕೆಗಳನ್ನು ಹೊತ್ತ. ಪ್ರಕೃತಿ ಮೇಲ್ಮೈಲಕ್ಷಣ ಒಂದು ನಿಯಂತ್ರಣಕ್ಕೆ ಬಂದಾಗ ಇವೆಲ್ಲದರ ಫಲಶೃತಿ ಎಂದು ಕೃತಜ್ಞತೆಯಿಂದ ಬಾಗಿದ". [೧೧]

ಒಂದೆಡೆ ವಾಸವಾಗಿ ಕೃಷಿ ಕಾರ್ಯ ಆರಂಭವಾದ ಮೇಲೆ ಅವರಿಗೆ ತನ್ನ ಆಹಾರ ಸಂಗ್ರಹಣೆಗಾಗಿ ಅಲೆಮಾರಿ ಜೀವನ ಸಾಗಿಸುವುದು ತಪ್ಪಿತ್ತು ಮತ್ತು ರಕ್ಷಣೆಗೆಂದು ಮನೆಯು ನಿರ್ಮಿಸಿಕೊಂಡು ಈ ಎರಡು ಸಮಸ್ಯೆಗಳಿಗೆ ಪರಿಹಾರ ಕಂಡುಕೊಂಡನು. ಮುಂದೆ ತನ್ನ ಆಲೋಚನ ಲಹರಿಯನ್ನು ತಾನು ಬೆಳೆದ ಬೆಳೆಗಳತ್ತ ಹರಿಸಿದನು. ಬೆಳೆಯನ್ನು ಪ್ರಾಣಿಗಳಿಂದ ಕಾಪಾಡುತ್ತಾ ವಾರ, ತಿಂಗಳಗಟ್ಟಲೆ ಕಾಯುತ್ತ ಕುಳಿತನು. ಈ ಸಮಯದಲ್ಲಿ ತನ್ನ ಸುತ್ತ ಮುತ್ತಲೂ ಇರುವ ಪರಿಸರ ಪ್ರಾಣಿಗಳು ಆಕಾಶದ ಚಲನೆ, ಸೂರ್ಯ, ಚಂದ್ರ, ನಕ್ಷತ್ರ, ಮೋಡ, ಮಿಂಚು, ಗುಡುಗು, ಸಿಡಿಲು, ಹಗಲು, ರಾತ್ರಿಗಳ ಬಗೆಗೆ ವಿಚಾರಿಸಿದನು. ತನ್ನ ಜ್ಞಾನ ಬುದ್ಧಿ ಮಟ್ಟಕ್ಕೆ ತನ್ನದೆ ಆದ ಅರ್ಥಕಲ್ಪನೆ ಸಿದ್ಧಾಂತ, ನಿಯಮಗಳು ಹುಡುಕಿಕೊಂಡರು. ಮಳೆ, ಗಾಳಿ ಹಾಗೂ ಕಾಣದ ಶಕ್ತಿಗಳ ಬಗೆಗೆ ಊಹೆ ಮಾಡಿಕೊಂಡು ಅವುಗಳಿಗೆ ಹೆದರಿ ಅವುಗಳು ತಮ್ಮ ಮೇಲೆ ಕೋಪಿಸಿಕೊಳ್ಳುವಂತೆ ಮಾರ್ಗ ಗುರುತಿಸಿಕೊಂಡನು. ಸಂತುಷ್ಟಪಡಿಸಲು ಪೂಜೆ, ಪ್ರಾರ್ಥನೆ ಸಲ್ಲಿಸಿದ. ಆಹಾರದ ಬೆಳೆಯ ರಾಶಿ ಹಗಲು ರಾತ್ರಿ ಮಾಡುವ ಸಂದರ್ಭದಲ್ಲಿ ಕಾಲ ಕಳೆಯಲು ಹಾಡನ್ನು ಹಾಡುವುದು ಕಲಿತುಕೊಂಡ. ತನ್ನ ಪೈರನ್ನು ಪ್ರಾರ್ಥನೆ ಸಲ್ಲಿಸಿದ ಶಕ್ತಿಗಳು ಕಾಪಾಡಿವೆ ಎಂದು ಪ್ರತಿಯಾಗಿ ದೇವರಿಗೆ ನೈವೇದ್ಯವಾಗಿ ಕಾಣಿಕೆ ಕೊಡುವುದನ್ನು ರೂಢಿಸಿದ. ಇಂತಹವುಗಳೇ ನಂಬಿಕೆಗಳಾಗಿ ಮುಂದುವರೆದುಕೊಂಡು ಬಂದವು. ಹೀಗೆ ತನಗೆ ಸಮೀಪಿಸಿದ ಅನುಕೂಲವಾದವುಗಳನ್ನು ಪೂಜಿಸಿದ. ಇವುಗಳಿಂದ ಭಿನ್ನವಾಗಿ ಕಂಡ ದೈತ್ಯ

---

೧೧ [illegible]

ಸ್ವರೂಪದಿಂದ ದೂರ ಉಳಿದ. ಅವುಗಳಿಂದ ಭಯ ಹೆಚ್ಚಿಸಿಕೊಂಡನೆ ಹೊರತಾಗಿ ಅವುಗಳಿಗೆ ಸಮೀಪಸಲಿಲ್ಲ. ಅಂತಹವುಗಳೇ ದೆವ್ವ ಭೂತಗಳಾಗಿ ಕಂಡಿರಬೇಕು. ಆತ ಜೀವದಾಯಿ, ನೆಲಸಲುವ ತಾಯಿ, ಬೆಂಕಿ ಬೆಳೆಸುವ ಹಸಿವೆ, ಗಾಳಿ ಚಲನಶೀಲ ಶಕ್ತಿ, ಆಕಾಶ ಎಲ್ಲವನ್ನು ತನ್ನಲ್ಲಿ ಅರಗಿಸಿಕೊಳ್ಳುವ ಅನಂತ ಎಂದು ಪಂಚಭೂತಗಳಲ್ಲೂ ದೈವಿಶಕ್ತಿ ಕಂಡುಕೊಂಡ. ಪ್ರಕೃತಿಯ ಚೈತನ್ಯ ಶಕ್ತಿಯ ಎದುರು ಹೋರಾಡಿ ಬದುಕುವುದು ಅಸಾಧ್ಯ. ಆ ಶಕ್ತಿಗೆ ವಿಧೇಯರಾಗಿದ್ದರೆ, ತಮ್ಮ ಬದುಕು ಸುಖಮಯವಾಗಿ ಸಾಗುತ್ತದೆಂಬುದನ್ನು ಅರಿತುಕೊಂಡ. ಜಗತ್ತಿನಲ್ಲಿ ಅರಿಯದ ಏನೋ ನಿಯಮವಿದೆ. ಆ ಅದ್ಭುತ ಶಕ್ತಿಯೇ ಈ ಕ್ರಿಯೆಗಳನ್ನು ನಡೆಸುತ್ತದೆ. ಪ್ರಪಂಚದ ಆಗು ಹೋಗುಗಳ ಮುಂದೆ ತಾನು ನಿಸ್ಸಾಹಾಯಕನೆಂಬ ಅರಿವಿನಿಂದಾಗಿ ಪ್ರಾಕೃತಿಕ ವಿಕೋಪದಿಂದ ಎಲ್ಲವುಗಳನ್ನು ರಕ್ಷಿಸಿಕೊಳ್ಳುವ ಉಪಾಯದ ಬಗ್ಗೆ ದೀರ್ಘಚಿಂತನೆ ಮಾಡಿದನು. ಚಿಂತನೆಗಳ ಪ್ರತಿರೂಪಗಳಾಗಿ ದೇವರಲ್ಲಿ ಪ್ರಾರ್ಥಿಸಿಕೊಂಡ ಬೇಡಿಕೆಗಳಾದವು. ಪುರಾತನ ಕಾಲದಿಂದ ಆಪತ್ಕಾಲದಲ್ಲಿ ದೇವರು ಅಥವಾ ದೈವ ತನ್ನನ್ನು ರಕ್ಷಿಸುತ್ತದೆ ಎಂದು ನಂಬಿದರು. ಪ್ರಾಚೀನ ಕಾಲದಿಂದ ಆದಿಮಾನವನು ಶುರುಮಾಡಿದ ಶಕ್ತಿಯ ಪರಿಕಲ್ಪನೆ, ನಂಬಿಕೆ ಮತ್ತು ಆಚರಣೆಗಳು ಬೇರೆ ಬೇರೆ ಪ್ರದೇಶಗಳಲ್ಲಿ ಪರಿಸರ, ಸನ್ನಿವೇಶ, ಪರಿಸ್ಥಿತಿ, ವಿಭಿನ್ನ ವಿಚಾರ, ಸೌಲಭ್ಯಗಳಂತೆ ಬೇರೆ ಬೇರೆಯಾಗಿ ಬೆಳೆದು ಬಂದವು. ಸಮಾಜದಲ್ಲಿ ಮಾನವನ ಪ್ರಗತಿಯಾದಂತೆ ನಂಬಿಕೆಗಳು ಬೇರೆ ಸ್ವರೂಪದಲ್ಲೋ ಅಥವಾ ಯಥಾವತ್ತಾಗಿ ಮುಂದುವರೆದು ಬಂದವು.

ಪ್ರಕೃತಿಯ ಮುನಿಸನ್ನು ಇಂದಿಗಿಂತ ಅತಿ ಹೆಚ್ಚು ಮಟ್ಟದಲ್ಲಿ ಎದುರಿಸಬೇಕಾಗಿದ್ದ ಸಂದರ್ಭದಲ್ಲಿ ದೇವರನ್ನು ಮೊರೆ ಹೋಗುವ ಅನಿವಾರ್ಯತೆ ಉಂಟಾಯಿತು. ಅದರ ಬದಲಾಗಿ ಅವರು ಮಂತ್ರ ಉಚ್ಚರಿಸಿ ಆಯಾ ಪ್ರಕೃತಿ ವೈಚಿತ್ರ್ಯಗಳನ್ನು ಹತೋಟಿಗೆ ತಂದುಕೊಳ್ಳಲು ನೃತ್ಯವು ಮಾಡುತ್ತಿದ್ದರು. ಇದಕ್ಕೆ ಜಾರ್ಜ್‌ಥಾಮ್ಸನ್ ಎಂಬ ವಿಖ್ಯಾತ ವಿದ್ವಾಂಸರು ನ್ಯೂಜಿಲೆಂಡಿನ ಮಾವೋರಿ ಪಂಗಡದ ಒಂದು ಪದ್ಧತಿಯನ್ನು ಉದಾಹರಿಸುತ್ತಾರೆ.

"ಈ ಬುಡಕಟ್ಟಿನ ಜನಾಂಗದವರಲ್ಲಿ ಹೆಣ್ಣು ಮಕ್ಕಳು ಆಲೂಗಡ್ಡೆ ಬೆಳೆ ಇರುವಲ್ಲಿ ನೃತ್ಯವೊಂದನ್ನು ಮಾಡುತ್ತಾರಂತೆ. ಸಸಿಯು ಸುಂಟರಗಾಳಿಯ ಪ್ರಕೋಪಕ್ಕೆ ಆಹುತಿಯಾಗಬಹುದಾದಂತಹ ಸಂದರ್ಭಕ್ಕೆ ಮುನ್ನ ಅವರು ಈ ನೃತ್ಯದಲ್ಲಿ ತೊಡಗುವುದು. ಸುಂಟರಗಾಳಿಯಿಂದಾಗಿ ಸಸಿ ಮತ್ತು ಲತೆ ಹೇಗೆ ತತ್ತರಿಸಿ ನಲುಗಾಡುವವೋ ಹಾಗೆ ನಲುಗಾಡುವುದು ಆ ನೃತ್ಯಭಂಗಿಯಸಾರ. ಗಾಳಿಯ ಹೊಡತಕ್ಕೆ ಸಿಕ್ಕಿದವರಂತೆ ನಲುಗಾಡಿ ಆಮೇಲೆ ಅವರು ಹೇಗೆ ಚೇತರಿಸಿಕೊಳ್ಳುತ್ತಾರೋ ಹಾಗೆ ಸಸಿಯೂ ಚೇತರಿಸಿಕೊಳ್ಳುತ್ತದೆಯೆಂದು ಅವರ ಸದೃಢ ನಂಬಿಕೆ"[೧೨]

ನಿಜಕ್ಕೂ ನೃತ್ಯದಿಂದಾಗಿ ಸಸಿ ಚೇತರಿಸಿಕೊಳ್ಳುತ್ತದೇಯೇ ? ಎನ್ನುವ ಪ್ರಶ್ನೆಗೆ ಲೇಖಕರಾದ ಡಾ॥ ಪುರುಷೋತ್ತಮ ಬಿಳಿಮಲೆಯವರು ಹೀಗೆ ಅಭಿಪ್ರಾಯಪಡುತ್ತಾರೆ. ಇಲ್ಲ. ಹಾಗಾದರೆ ಮಾವೋರಿಗಳ ನಂಬಿಕೆ ಏಕೆ ಹಾಗೆಯೇ ಉಳಿಯಿತು ? ವೈಯಕ್ತಿಕವಾಗಿ ಒಂದು ಗಾಢನಂಬಿಕೆಯನ್ನು ತಾಳಿದ ಮಾವೋರಿ

೧೨ (ಅಡಿಟಿಪ್ಪಣಿ: ವಿಚಾರ ಸಾಹಿತ್ಯ-೧೯೯೨. ಲೇಖಕರು ಡಾ॥ ಪುರುಷೋತ್ತಮ ಬಿಳಿಮಲೆ ಪುಟ ಸಂಖ್ಯೆ ೭೮)

ಹೆಣ್ಣುಮಕ್ಕಳು ನಂತರ ಆಲೂಗಡ್ಡೆ ಸಸಿಯನ್ನು ಎಚ್ಚರದಿಂದ ಸಲಹುತ್ತಾರೆ. ಅದು ಉಳಿದೇ ತೀರುತ್ತದೆಂಬ ಖಾತರಿ ಅವರಿಗೆ. ಹುಮ್ಮಸ್ಸಿನಿಂದ ಕೆಲಸಮಾಡಿ ಅವರು ಕೃಷಿಯನ್ನು ವೃದ್ಧಿಪಡಿಸುತ್ತಾರೆ. ಸಸಿ ಚೇತರಿಸಿಕೊಂಡು ಫಲ ನೀಡುತ್ತದೆ.

**೬. ನಾಗರಿಕತೆಗಳ ಹುಟ್ಟು ಬೆಳವಣಿಗೆ :**

ನವಶಿಲಾಯುಗದಲ್ಲಿಯೇ ಊರು, ಹಳ್ಳಿ ಕೊಪ್ಪಲು, ಪೇಟೆ, ಸಂಘ, ಸಂಸ್ಥೆ ಹುಟ್ಟಲು ಕಾರಣನಾದ ಮಾನವ ಮುಂದೆ ನಾಗರಿಕತೆಗಳ ಜನಕನೂ ಆದ ಜಗತ್ತಿನ ಪ್ರಾಚೀನ ನಾಗರೀಕತೆಗಳೆನಿಸಿದ ಹರಪ್ಪ, ಈಜಿಪ್ಟ್, ಮೆಸಪೋಟೋಮಿಯಾ, ಚೀನಾನಾಗರಿಕತೆಗಳ ಬಗ್ಗೆ ನೋಡಿದಾಗ ಇವುಗಳ ಕಾಲಾವಧಿಯಲ್ಲಿ ಶರವೇಗದಲ್ಲಿ ಬೆಳವಣಿಗೆಯಾಗಿರುವುದು ಕಂಡು ಬರುತ್ತದೆ.

ಈ ಬೆಳವಣಿಗೆ ಆಧುನಿಕ ವಿಜ್ಞಾನದ ಬೆಳವಣಿಗೆಯಂತೆ ಹೊಸತನ್ನು ಅವಿಷ್ಕಾರ ಮಾಡುವ ಜ್ಞಾನ ನಾಗರಿಕತೆಗಳ ಜನರಿಗೆ ಹೇಗೆ ಉಂಟಾಯಿತೆಂದು ಆಶ್ಚರ್ಯವೆನಿಸುತ್ತದೆ. ಇಂದು ನಾವು ಬದುಕುತ್ತಿರುವ ಸಮಾಜದಲ್ಲಿ ಕಂಡು ಬರುವ ಕೃಷಿ, ಕೈಗಾರಿಕೆ, ವಾಣಿಜ್ಯ, ಸಾಹಿತ್ಯ, ಶಿಲ್ಪಕಲೆ, ವರ್ಣಚಿತ್ರಕಲೆ, ಸಂಗೀತ, ವಿಜ್ಞಾನ ಖಗೋಳಶಾಸ್ತ್ರ, ಜ್ಯೋತಿಷಶಾಸ್ತ್ರ, ಪಂಚಾಂಗ ವರ್ಷಗಳ ಕಾಲಾವಧಿಮಿತಿ, ಸೂರ್ಯಗ್ರಹಣ, ಚಂದ್ರಗ್ರಹಣ, ಸಮಯ ನಿರ್ಧಾರ, ಆಡಳಿತ ನಿರ್ಮಾಣ, ನಗರಗಳ ನಿರ್ಮಾಣ, ದಿಕ್ಸೂಚಿ ಹೀಗೆ ಒಂದೇರೆಡೇ ನೂರಾರು ವಿಷಯಗಳಲ್ಲಿ ನಂಬಿಕೆ ಮತ್ತು ಆಚರಣೆಗಳು ಗೊತ್ತುಪಡಿಸಿದ ನಾಗರಿಕತೆಗಳ ಜನರ ಜ್ಞಾನ ಯಾವುದಕ್ಕೆ ಕಡಿಮೆ ಎನ್ನಬಹುದು ? ಇಲ್ಲ. ಇವರ ಜ್ಞಾನ ಕಡಿಮೆ ಎಂದು ಹೇಳಲಾಗುವುದಿಲ್ಲ. ಚೀನಾ ನಾಗರಿಕತೆ ಜನರು ಗೊತ್ತುಪಡಿಸಿದ ದಿಕ್ಸೂಚಿಗಳ ನಂಬಿಕೆಯ ಮೇಲೆ ಯೂರೋಪಿಯನ್ನರಾದ ಪೋರ್ಚಗೀಸರು ಜಲಮಾರ್ಗ ಕಂಡು ಹಿಡಿದರು. ಇದರಿಂದಾಗಿ ನಮ್ಮ ಭಾರತ ಇತಿಹಾಸದ ದಿಕ್ಕನ್ನೇ ಬದಲಾಯಿಸಿಟ್ಟಿದ್ದನ್ನು ನಾವು ಎಂದೆಂದಿಗೂ ಮರೆಯುವಂತಿಲ್ಲ.

೧೯೨೧ರಲ್ಲಿ ಸರ್ ದಯಾರಾಂ ಸಹಾನಿ ಹರಪ್ಪದ ನೆಲೆಯನ್ನು ಎರಡು-ಮೂರು ಸಾವಿರ ವರ್ಷ ಪೂರ್ವದ್ದು ಎಂದು ತಿಳಿಸಿದರು. ವೈಜ್ಞಾನಿಕ ತೆರೆ ಬರೆದ ಮಾರ್ಷಲ್‌ರು ೧೯೨೪ರಲ್ಲಿ ಈ ಮಹಾನ್ ಸಂಸ್ಕೃತಿ ಸುಮಾರು ಕ್ರಿ.ಪೂ.೩೦೦೦ ಕಾಲದ್ದೆಂದರು. ೧೯೨೯ರಲ್ಲಿ ಮೆಸಪೋಟೋಮಿಯ ಪ್ರಾಕನ್ತಶಾಸ್ತ್ರ ಪಂಡಿತ ಎ.ಎಚ್.ಸ್ಯಾಸ್ ತಳಿಗಳ ಪರಿಚಯ ಸಂಶೋಧನೆ ಮಾಡಿ ಈ ಸಂಸ್ಕೃತಿ ಕ್ರಿ.ಪೂ.೩೦೦೦ದ ಕಾಲದೆಂದು ಘೋಷಿಸಿದರು.

ಸಿಂಧೂ ಸಂಸ್ಕೃತಿಯ ನೆಲೆಗಳು ವಿಸ್ತಾರದಲ್ಲಿ, ನಿರ್ಮಾಣದಲ್ಲಿ, ನಗರ ಗ್ರಾಮೀಣ ಪರಿಕಲ್ಪನೆಗಳಲ್ಲಿ ವಿಪರೀತ ವೈಶಿಷ್ಟ ಹೊಂದಿಕೊಂಡಿವೆ. ರಸ್ತೆ, ಸುಂದರ ನಗರವಿನ್ಯಾಸ ೨೫ ರಿಂದ ೩೦ ಕೊಠಡಿ ಹೊಂದಿರುವ ದೊಡ್ಡ ಮನೆಗಳ ನಿರ್ಮಾಣ ಮಾಡಿಕೊಂಡಿದ್ದರು. ಕಾಳುಗಳು ಹಿಟ್ಟು ಮಾಡುವ ಕಲ್ಲಿನ ಸಾಧನಗಳು. ಬೆಂಕಿಯ ಮತ್ತು ಆಹಾರ ಬೇಯಿಸುವ ತಂತ್ರಜ್ಞಾನದ ವಿವರ ಇತಿಹಾಸದ ಅಧ್ಯಯನದಿಂದ ತಿಳಿಯುತ್ತದೆ. ಜನರು ಕೃಷಿ ಮೇಲೆ ಅವಲಂಬಿತದೊಂದಿಗೆ ವಿವಿಧ ರೀತಿ ವೃತ್ತಿಗಳು ಅನುಸರಿಸುತ್ತಿದ್ದರು. ಮುದ್ರೆಗಳು ಚಿನ್ನ. ಬೆಳ್ಳಿ ಇತರ ಲೋಹದ ವಸ್ತುಗಳು. ಬಳೆಗಳು. ಚೂಪು. ಈಟಿ. ಮೊನೆಗಳು. ಮಡಿಕೆ. ಆಯುಧಗಳು ಇಲ್ಲಿ

ತಯಾರಾಗುತ್ತಿದ್ದವು. ಈ ನಾಗರಿಕತೆಯ ಅವಧಿಯಲ್ಲಿ ಕಂಚು, ಚಿನ್ನ, ಬೆಳ್ಳಿ, ಸತುಗಳ ಬಳಕೆ ಮತ್ತು ತಾಮ್ರ ಪ್ರಧಾನವಾಗಿರುವ ಹಿನ್ನಲೆಯಲ್ಲಿ ಈ ಸಂಸ್ಕೃತಿಯನ್ನು 'ತಾಮ್ರ ಸಂಸ್ಕೃತಿ'ಯೆಂದು ಸಂಶೋಧಕರು ಗುರುತಿಸುತ್ತಾರೆ.

ಕೃಷಿಯಲ್ಲಿ ಪ್ರಗತಿ ಸಾಧಿಸಿದ ಈ ನಾಗರಿಕತೆಯ ಜನ್ಮ ಬಿಲಿಷ್ಠ ಜನವರ್ಗದವರಾಗಿದ್ದರು. ದನ, ಹಂದಿ, ಕುರಿ, ನದಿಸಾಗರಗಳ ಮೀನು, ಕಾಡು ಹಂದಿ, ಜಿಂಕೆ, ಗೋಧಿ ಬಾರ್ಲಿ, ಖರ್ಜೂರ ಹಣ್ಣು ಹಂಪಲು ಹಾಲು ಇವರ ಪ್ರಮುಖ ಆಹಾರವಾಗಿತ್ತು.

ಹರಪ್ಪ ನಾಗರಿಕತೆಯ ಜನರು ಮಾತೃದೇವತೆಗಳು ಪ್ರಧಾನವೆಂದು ತಿಳಿದಿದ್ದರು. ತಮ್ಮ ಸಾಕು ಪ್ರಾಣಿಗಳ ರಕ್ಷಕನಾಗಿರುವ ಪಶುಪತಿ ಇನ್ನೊಬ್ಬ ದೇವನಾಗಿದ್ದನು. ಲಿಂಗ ಆಶ್ವತ್ಥ (ಅರಳಿ) ವೃಕ್ಷಗಳನ್ನು ಪೂಜಿಸುತ್ತಿದ್ದರು. ಬಸವ ಅಥವಾ ಡುಬ್ಬದ ನಂದಿಯನ್ನು ಪೂಜಿಸುವ ನಂಬಿಕೆಗಳು ಇಂದಿಗೂ ಮುಂದುವರೆದ ಆಚರಣೆಗಳಾಗಿವೆ.

ಸೂರ್ಯನನ್ನು ಈಜಿಪ್ಟ್ ನಾಗರಿಕತೆ ಜನರು 'ರಾ' ಅಥವಾ 'ರೇ' ಎಂದು ಕರೆದರೆ ಅದೇ ಸೂರ್ಯನನ್ನು ಮೆಸಪೋಟೋಮಿಯನ್ನರು 'ಶಮಾಶ' ಎಂದು ಕರೆದಿದ್ದಾರೆ. ಇಲ್ಲಿ ಮೂಲತಹ ಸೂರ್ಯನನ್ನೇ ಪೂಜಿಸುವ ಉದ್ದೇಶ ಒಂದೇ ಆಗಿದ್ದರೂ ಬೇರೆ ಬೇರೆ ಹೆಸರುಗಳಿಂದ ಸೂಚಿಸಲಾಗಿದೆ. ಹಾಗೆಯೇ ಆಯಾ ಪ್ರದೇಶಗಳಲ್ಲಿನ ಜನರು ಆಚರಿಸಿದಂತೆ ಒಂದೊಂದೆ ಮೂಲ ನಂಬಿಕೆ ಒಂದೇ, ಆ ಆಚರಣೆ ಭಿನ್ನವಾಗಿರುತ್ತವೆ. ಉದಾಹರಣೆಗೆ ಕರ್ನಾಟಕದಲ್ಲಿ ಸಂಕ್ರಾಂತಿ ಅಥವಾ ಸಂಕ್ರಮಣ ಎನ್ನುವುದು ಕೇರಳದಲ್ಲಿ ಪೊಂಗಲ್ ಎಂದು ಕರೆಯುವುದು. ಈಜಿಪ್ಟ್ ಜನತೆಯಲ್ಲಿಯೂ ಕೂಡಾ ಗಂಗೆಯನ್ನು ಪೂಜಿಸುವುದು ರೂಢಿಯಾಗಿತ್ತು ಈಜಿಪ್ಟ ನಾಗರಿಕತೆಗೆ ಮೂಲ ಆಧಾರವಾಗಿರುವ 'ನೈಲ್' ಎನ್ನುವ ಮಾತೃದೇವತೆಯನ್ನು ಪೂಜಿಸುತ್ತಿದ್ದರು. ಹಾಗಾಗಿ ಈಜಿಪ್ಟ್ ನಾಗರಿಕತೆಯನ್ನು ನೈಲ್ ನದಿಯ ವರ ಪ್ರಸಾದವೆಂದೇ ಕರೆಯಲಾಗಿದೆ. ಈಜಿಪ್ಷನರು ಮರಣದ ನಂತರದ "ಜೀವನದಲ್ಲಿ ನಂಬಿಕೆಯುಳ್ಳವರಾಗಿದ್ದರು. ಆತ್ಮವು ಸಾವಿನ ನಂತರ ಸಾವಿನ ದೇವತೆ ಒಸಿರಿಸ್‌ನ ಬಳಿ ಹೋಗುತ್ತದೆ. ನಮ್ಮ ಭಾರತೀಯ ಸಂಪ್ರದಾಯ ಯಮಧರ್ಮ ಪ್ರಾಣ ಒಯ್ಯುವ ಧೂತನಾದರೆ ಸಾವಿನ ದೇವತೆ ಚಿತ್ರಾಂಗದೆ ಎಂದು ನಂಬುತ್ತಾರೆ. ಈಜಿಪ್ಷನ ಜನರು ಸಮಾಧಿಗಳಲ್ಲಿ ಸತ್ತ ವ್ಯಕ್ತಿಗೆ ಎಲ್ಲಾ ಅನುಕೂಲ ರೀತಿಯಲ್ಲಿ ಇಡಲಾಗುತ್ತಿತ್ತು. ನಮ್ಮಲ್ಲೂ ಕೂಡಾ ಸತ್ತವರ ಆಸೆ ಪೂರೈಸಬೇಕೆನ್ನುವ ನಂಬಿಕೆಯಿದೆ. ಈ ನಾಗರಿಕತೆಯ ಇನ್ನೊಂದು ವಿಶೇಷ ಎಂದರೆ ಸೌರ ಪಂಚಾಂಗ ಮೊದಲು ಬಳಕೆಗೆ ತಂದದ್ದು, ಹಾಗೂ ನೆರಳಿನ ಆಧಾರದ ಮೇಲೆ ಗಡಿಯಾರ ರೂಪಿಸಿದರು. ನಮ್ಮಲ್ಲಿಯೂ ನೆರಳಿನ ಮೂಲಕ ಸಮಯ ಗುರುತಿಸುವ ಹಿರಿಯ ಜನಪದರನ್ನು ಇಂದಿಗೂ ಕಾಣುತ್ತೇವೆ. ಮೆಸಪೋಟೋಮಿಯರು ಗ್ರಹಗಳ ಬಗ್ಗೆ ತಿಳುವಳಿಕೆ ಹೊಂದಿದ್ದರು. ಬುಧ, ಶುಕ್ರ, ಮಂಗಳ, ಗುರು ಮತ್ತು ಶನಿ ಎಂಬ ಐದು ಗ್ರಹಗಳಿವೆ; ಅಲ್ಲದೆ ಸೂರ್ಯ ಮತ್ತು ಚಂದ್ರರು ಮಾನವನ ಜೀವನದ ಮೇಲೆ ನಿಯಂತ್ರಣ ಹಾಗೂ ಪ್ರಭಾವವನ್ನು ಬೀರುವುದೆಂದು ನಂಬಿದ್ದರು. ಒಂದು ವರ್ಷದಲ್ಲಿ ಹನ್ನೆರಡು ತಿಂಗಳುಗಳಾಗಿ ವಿಂಗಡಿಸಿ ೩೬೦ ದಿವಸಗಳನ್ನು ಎಣಿಕೆ ಮಾಡಿದರು. ಚಂದ್ರಮಾನದ ಪಂಚಾಂಗ ಸರಿಪಡಿಸಲು ಆಗಾಗ್ಗೆ ಒಂದು ಹೆಚ್ಚಿನ ತಿಂಗಳನ್ನು ಅಧಿಕ ಮಾಸವಾಗಿ ವರ್ಷದಲ್ಲಿ ಸೇರಿಸುತ್ತಿದ್ದರು. ಈ ನಂಬಿಕೆ ಇಂದಿಗೂ ಆಚರಣೆಯುಳ್ಳಿದೆ. ಅಧಿಕಮಾಸ ಬಂದಾಗ

ನಮ್ಮಲ್ಲಿ ವಿಶೇಷ ಆಚರಣೆಗಳನ್ನು ಆಚರಿಸುವುದನ್ನು ಕಾಣುತ್ತೇವೆ. ಅಧಿಕ ಮಾಸದ ನಂಬಿಕೆ ಮತ್ತು ಆಚರಣೆ ಕುರಿತು ಮುಂದಿನ ಅಧ್ಯಾಯದಲ್ಲಿ ತಿಳಿಯುತ್ತೇವೆ.

ಚೀನಿಯರು ನಿಸರ್ಗ ಹಾಗೂ ಪೂರ್ವಿಕರನ್ನು ಪೂಜಿಸುತ್ತಿದ್ದರು. ನಿಸರ್ಗದ ಶಕ್ತಿಗಳಾದ ಮಳೆ, ಗಾಳಿ, ಗಿಡ, ಮರ, ಪರ್ವತ, ಹಾವು ಮೊದಲಾದವುಗಳ ಪೂಜೆ ಶ್ರೇಷ್ಠವೆಂದು ತಿಳಿದುಕೊಂಡಿದ್ದರು. ಚಂದ್ರಮಾನ ಪಂಚಾಂಗ ಗ್ರಹಣಗಳು ಸಂಭವಿಸುವ ಕಾಲದ ಬಗ್ಗೆ ತಿಳಿದಿದ್ದರು. ಇವರ ವೈಜ್ಞಾನಿಕ ದೃಷ್ಟಿಕೋನವು ಮೂಢನಂಬಿಕೆಯೊಂದಿಗೆ ಮೀಲನವಾಗಿತ್ತು. ಈ ಅವಧಿಯಲ್ಲಿಯೇ ಶರೀರ ಶಾಸ್ತ್ರ ಹಾಗೂ ರಕ್ತ ಚಲನೆ ಬಗ್ಗೆ ತಿಳಿದಿತ್ತು.

ಹೀಗೆ ಪ್ರಪಂಚದ ನಾಗರಿಕತೆಗಳ ಕಾಲಾವಧಿಯಲ್ಲಿ ರೂಢಿಸಿಕೊಂಡ ನಂಬಿಕೆಗಳು ಅವರ ಅನುಭವದ ಸುತ್ತಮುತ್ತಲಿನ ಪರಿಸರ. ಹೊಂದಾಣಿಕೆ ಅಥವಾ ಒತ್ತಡದಿಂದಾಗಲಿ ಬಂದರೆ, ಕೆಲವೊಂದು ಅವಶ್ಯಕತೆಯಿಂದಾಗಿ, ರಕ್ಷಣೆಗಾಗಿ, ಭಯ ಭಕ್ತಿ ಹಾಗೂ ಹೊಸತನ್ನು ಗುರುತಿಸುವ ಕುತೂಹಲದಿಂದಾಗಿ ಹುಟ್ಟಿಕೊಂಡವು. ಇವುಗಳೇ ಪುನಃ -ಪುನಃ ಆಚರಿಸಿಕೊಂಡು ಬರುವುದರಿಂದ ಸಂಸ್ಕೃತಿಯಾಗಿ ಪರಂಪರಾನುಗತವಾಗಿ ಮುಂದುವರೆದುಕೊಂಡು ಬಂದಿವೆ. ಹಾಗೂ ವಿಜ್ಞಾನದ ಅವಿಷ್ಕಾರಕ್ಕೆ ಕಾರಣಿಭೂತವಾದವು. ಸಮಾಜ ಬದಲಾವಣೆಯೊಂದಿಗೆ ಬೆಳವಣಿಗೆಗೆ ಮಾಡಿಕೊಟ್ಟವು. ಅಂದಿನ ಜ್ಞಾನ ವಿಜ್ಞಾನ ಕ್ಷೇತ್ರಗಳ ಅವಿಭಾಜ್ಯ ಅಂಗಗಳಾಗಿದ್ದುದು ಪ್ರಾಚೀನ ನಾಗರೀಕತೆಯ ಜನರು ನಂಬಿಕೊಂಡು ಬಂದ ನಂಬಿಕೆಗಳು. 'ನಂಬಿಕೆ' ಹುಟ್ಟು 'ಆಚರಣೆ' ಬೆಳವಣಿಗೆಯಾಗಿರುತ್ತದೆ. ನಂಬಿಕೆ ಇದ್ದು ಆಚರಣೆಯಲ್ಲಿ ಬಾರದಿದ್ದರೆ ಅದು ತನ್ನ ಅಸ್ತಿತ್ವ ಗುರುತಿಸಿಕೊಳ್ಳುವುದಿಲ್ಲ. ಆದರಿಂದ ನಂಬಿಕೆ ಉಸಿರಾದರೆ ಆಚರಣೆ ದೇಹವಾಗಿ ಚಲನೆಯ ಕ್ರಿಯೆಯಲ್ಲಿರುತ್ತದೆ. ಎಲ್ಲರೂ ಆರಂಭಿಕ ಹಂತದಲ್ಲಿ ಪ್ರಕೃತಿ ಪೂರಕರಾಗಿದ್ದುದು ಸಾಮಾನ್ಯಾಂಶ.

**೬. ಸಮಾಜದ ಬದಲಾವಣೆ :**

ನಮ್ಮ ದೇಶದ ಇತಿಹಾಸವು ಪುರಾತನ ಕಾಲದಿಂದಲೂ ಬೇರೆ ದೇಶಗಳ ಇತಿಹಾಸಕ್ಕಿಂತಲೂ ಸಂಕೀರ್ಣವಾಗಿದೆ. ಅತ್ಯಂತ ಪ್ರಾಚೀನ ನಾಗರಿಕತೆಯನ್ನು ಹೊಂದಿದ ಕೆಲವೇ ದೇಶಗಳಲ್ಲಿ ಭಾರತವು ಒಂದಾಗಿದೆ. ಭಾರತದ ಹರಪ್ಪನಾಗರಿಕತೆಯು ಅತ್ಯಂತ ಮುಂದುವರೆದ ಹಾಗೂ ಪರಿಪೂರ್ಣತೆಯ ನಾಗರಿಕತೆಗಳಲ್ಲಿ ಒಂದು ಎಂದು ಖ್ಯಾತಿ ಪಡೆದಿದೆ. ಇಲ್ಲಿ ನೂರಾರು ಬುಡಕಟ್ಟುಗಳು, ವಿವಿಧ ಧರ್ಮ, ಜಾತಿ, ಭಾಷೆ, ಸಂಸ್ಕೃತಿಗಳಿದ್ದರೂ ತಮ್ಮ ಪಾಡಿಗೆ ತಾವು ನೆಮ್ಮದಿಯಿಂದ ಇಲ್ಲಿನ ಮೂಲ ನಿವಾಸಿಗಳು ಜೀವಿಸುತ್ತಿದ್ದರು. ಕೃಷಿಯಿಂದ ಮೊದಲಾಗಿ ಇತರ ಕೆಲಸ ಕಾರ್ಯಗಳಲ್ಲಿ ಉತ್ಪಾದನೆಯ ಹೆಚ್ಚಳ. ಸ್ತ್ರೀ-ಪುರುಷರ ಪರಸ್ಪರ ಸಹಾಯದ ಅನಿವಾರ್ಯತೆಯಿಂದ ಕುಟುಂಬಗಳ ರಚನೆ, ಪ್ರಬಲ ಜನಾಂಗದ ದಬ್ಬಾಳಿಕೆಗಳ ಕಾರಣದಿಂದಾಗಿ ಸಮಾಜ ವಿವಿಧ ಮಾರ್ಗಗಳಲ್ಲಿ ತನ್ನ ಬದಲಾವಣೆಯಾಗುತ್ತಾ ಬಂತು. ಈ ಹಿಂದೆ ಕಾರ್ಯರೂಪಕ್ಕೆ ಬಂದ ಚಟುವಟಿಕೆಗಳೆಲ್ಲಾ ಹೊಸದಾಗಿ ಸೇರುವ ಚಟುವಟಿಕೆಗಳನ್ನು ನಿರಂತರವಾಗಿ ಕೊಂಡೊಯ್ಯುತ್ತದೆ.

ಸಮಾಜದ ಮೂಲ ಘಟಕವಾದ ಕುಟುಂಬ, ವಿವಾಹ, ವರ್ಣ ವ್ಯವಸ್ಥೆ, ಧಾರ್ಮಿಕ ಪದ್ಧತಿ. ಆಡಳಿತ ವ್ಯವಸ್ಥೆಗಳೆಲ್ಲವು ಸಮಾಜ ಬದಲಾವಣೆಗೆ ಕಾರಣಗಳಾದವು.

ಸೃಷ್ಟಿಯಲ್ಲಿ ಮಾನವ ನಿನ್ನೆ ಮೊನ್ನೆಯವನಲ್ಲ. ಮಾನವನ ಜೀವನ ವಿಕಾಸ ಹೊಂದಿದಂತೆ, ಅವನ ಬದುಕಿನ ಪದ್ಧತಿ ಬದಲಾಯಿತು. ಭಾವನೆಗಳು ಬದಲಾದವು ವಿಜ್ಞಾನ ಬದಲಾಯಿತು. ಇನ್ನೂ ಬದಲಾಗುತ್ತಲೇ ಇವೆ. ಬದಲ್ಲಾಗುತ್ತಲೆ ಇರುತ್ತವೆ. ಅದರಂತೆ ವಿವಾಹ ಕೂಡಾ. ನಾಗರಿಕತೆ ಬೆಳೆದಂತೆ ಗಂಡು ಹೆಣ್ಣಿನ ಲೈಂಗಿಕ ಸಂಬಂಧಕ್ಕೆ ಸಾಮಾಜಿಕ ಚೌಕಟ್ಟು ನಿರ್ಮಾಣವಾಯಿತು. ಸಮಾಜ ಬದಲಾವಣೆಯಲ್ಲಿ ವಿವಾಹ ಕೂಡಾ ಸೇರಿದೆ. ಪ್ರಾಚೀನ ಕಾಲದಿಂದ ವಿವಾಹ ಹೇಗೆ ಆರಂಭವಾದವು ? ಏಕೆ ಆರಂಭವಾದವು ? ವಿವಾಹ ಎಂದರೇನು ? ಹೀಗೆ ಅನೇಕ ವಿಚಾರಗಳೊಂದಿಗೆ ವಿವಾಹ ತನ್ನ ಸ್ವರೂಪ ಪಡೆದುಕೊಂಡಿತು.

ಗಂಡಸು-ಹೆಂಗಸರೆಲ್ಲಾ ಒಂದೇ ಕಡೆ ಕಲೆತು ಮಲೆತು ಬದುಕುತ್ತಾರೆ. ಮನುಷ್ಯರಲ್ಲಿ ಜೊತೆಗೂಡುವಿಕೆಯೆಂಬ ಮನೋದ್ರೇಕವಾದ ಗುಣವೊಂದಿರುತ್ತದೆ. ಪ್ರಕೃತಿಯಲ್ಲಿ ಇರುವ ಪ್ರಾಣಿಗಳು, ಪಕ್ಷಿಗಳು, ಹುಳುಗಳು ಕಡೆಗೆ ಹೂವುಗಳಿಗೆ ಜೊತೆಗೂಡದೆ ವಿಧಿಯಿಲ್ಲ. ಅದು ಮಹಾಸ್ವಭಾವ ಸಿದ್ಧವಾದ ಕ್ರಿಯೆ. ಮನುಷ್ಯರೂ ಸಹ ಆ ಕೆಲಸವನ್ನೇ ಮಾಡುತ್ತಾರೆ. ಮಾಡದೆ ವಿಧಿಯಿಲ್ಲ. ಅದು ಒಬ್ಬರ ಇಷ್ಟದ ಮೇಲಾಧಾರ ಪಟ್ಟ ವಿಷಯವಲ್ಲ ಪ್ರಕೃತಿ ಸೂತ್ರ.

ಪ್ರಾರಂಭ ದಿಶೆಯಲ್ಲಿನ ಮಾನವರು ಸ್ವೇಚ್ಛೆಯಾಗಿ ಸಂಚರಿಸುತ್ತಿದ್ದರು. ಇಂದಿಗೂ ಆಫ್ರಿಕಾದ ಪಿಗ್ಮಿಗಳಲ್ಲಿ ಗಂಡಸರೂ ಹೆಂಗಸರೂ ಯಥೇಚ್ಛೆಯಾಗೇ ವರ್ತಿಸುತ್ತಾರೆ. ಮದುವೆ ಏನೆಂದು ಗೊತ್ತಿಲ್ಲ. ರಷ್ಯಾದಲ್ಲೂ ಬಹುಕಾಲದ ಹಿಂದೆ ಪ್ರತಿ ಗಂಡಸೂ ಪ್ರತಿ ಹೆಣ್ಣಿನೊಂದಿಗೆ ಜೊತೆಗೂಡಲು ಅವಕಾಶವಿರುತ್ತಿತ್ತು. ಹೆಂಗಸಿಗೆ ಒಬ್ಬನೇ ಗಂಡನೆಂಬ ನಿಯಮವಿರಲಿಲ್ಲ.

ಹೀಗೆ ಕುಟುಂಬದ ಇತಿಹಾಸವನ್ನು ಹೆಚ್ಚು ಹೆಚ್ಚು ಹಿಂದಿನ ಕಾಲದಲ್ಲಿರಬಹುದಾಗಿದ್ದಂತೆ ರಚಿಸುತ್ತಾ ಹೋದಾಗ ಅಮೇರಿಕಾದ ಪುರೋಗಾಮಿ ವಿಜ್ಞಾನಿ ಎಲ್.ಜಿ. ಮಾರ್ಗನ್‌ರು ತಮ್ಮ ಸಹೋದ್ಯೋಗಿಗಳಲ್ಲಿ ಬಹುಮಂದಿಯ ಅಭಿಪ್ರಾಯವನ್ನು ಒಪ್ಪಿಕೊಳ್ಳುತ್ತ ಒಂದು ಆದಿಕಾಲದ ಘಟ್ಟ ತಲುಪಿದರು.

ಆ ಘಟ್ಟದಲ್ಲಿ ಬುಡಕಟ್ಟಿನೊಂದರೊಳಗೇ ಸ್ವಚ್ಛಂದ ಲೈಂಗಿಕ ಸಂಬಂಧವಿದ್ದಿತು. ಆಗ ಪ್ರತಿಯೊಬ್ಬ ಹೆಂಗಸು ಸಮಾನವಾಗಿ ಪ್ರತಿಯೊಬ್ಬ ಗಂಡಸಿಗೂ ಸೇರಿದವಳಾಗಿದ್ದಳು. ಮತ್ತು ಅದೇ ರಿತಿ ಪ್ರತಿಯೊಬ್ಬ ಗಂಡಸು ಪ್ರತಿಯೊಬ್ಬ-ಹೆಂಗಸಿಗೂ ಸೇರಿದವನಾಗಿದ್ದನು ಎಂಬ ತೀರ್ಮಾನಕ್ಕೆ ಬಂದರು. ಮಾರ್ಗನರವರ ಪ್ರಕಾರ ಸ್ವಚ್ಛಂದ ಲೈಂಗಿಕತೆಯ ಈ ಮೂಲ ಪರಿಸ್ಥಿತಿಯಿಂದ ಬಹುಶಃ ಅತ್ಯಂತ ಆರಂಭಿಕ ಘಟ್ಟದಲ್ಲಿ ಈ ಕೆಳಗಿನವು ವಿಕಾಸಗೊಂಡವು.

**ರಕ್ತ ಸಂಬಂಧಿ ಕುಟುಂಬ :** ಇದು ಕುಟುಂಬದ ಮೊದಲ ಘಟ್ಟ. ಇದರಲ್ಲಿ ವಿವಾಹ ಪೀಳಿಗೆಗಳಿಗೆ ಅನುಗುಣವಾಗಿ ಅಣಿಗೊಳಿಸಲಾಗಿರುತ್ತದೆ. ಕುಟುಂಬದ ಮಿತಿಗಳೊಳಗೆ ಬರುವ ಎಲ್ಲ ಅಜ್ಜ ಅಜ್ಜಿಯರೂ ಪರಸ್ಪರ ಗಂಡ ಹೆಂಡತಿಯರು ಅವರ ಮಕ್ಕಳ ತಂದೆಯರ ಹಾಗೂ ತಾಯಂದಿರ ಪ್ರಸಂಗದಲ್ಲೂ ಇದೇ ನಿಜವಾಗಿರುತ್ತದೆ. ಇವರ ಮಕ್ಕಳು ಮತ್ತೆ ಸಾಮಾನ್ಯ ಗಂಡ-ಹೆಂಡಿರ ಮೂರನೆಯ ವೃತ್ತ ರೂಪಿಸುತ್ತಾರೆ.

ಇವರ ಮಕ್ಕಳು – ಮೊದಲನೆಯವರು ಮೊಮ್ಮಕ್ಕಳು – ಅಂತಹುದೇ ನಾಲ್ಕನೆಯ ವೃತ್ತವನ್ನು ರೂಪಿಸುತ್ತಾರೆ. ಕ್ರಮೇಣವಾಗಿ ಬುದ್ಧಿ ಬಲಿತ ನಂತರ ಮತ್ತು ಕೆಲವು ನಿಷೇಧಗಳು ಅಸ್ತಿತ್ವಕ್ಕೆ ಬಂದ ತರುವಾಯ ರಕ್ತ ಸಂಬಂಧ ಇರುವಾಗ ಜೊತೆಗೂಡುವುದು ಒಳ್ಳೆಯದಲ್ಲ ಎಂಬ ಅಭಿಪ್ರಾಯ ಉಂಟಾಯಿತು.

ಮೊದಮೊದಲಿಗಿದ್ದ ಸ್ವೇಚ್ಛೆಯಾಗಿ ಜೊತೆಗೂಡುವ ಪದ್ಧತಿ ಬರು ಬರುತ್ತಾ ಕೆಲವು ನಿಯಮಗಳಿಗೊಳಪಡಬೇಕಾಯಿತು. ಅಕ್ಕ-ತಮ್ಮ, ತಾಯಿ-ಮಗ ಸಂಬಂಧಗಳು ಗುರುತಿಸಿಕೊಂಡರು. ಈ ಘಟ್ಟವನ್ನು ಮಾರ್ಗನ್ನರು ಪುನಾಲು ಆನ್ ಕುಟುಂಬ ಎಂದು ಗುರುತಿಸಿದ್ದಾರೆ. ತಾಯಿ ತಂದೆಯರೂ ಮಕ್ಕಳೂ ಪರಸ್ಪರ ಲೈಂಗಿಕ ಸಂಬಂಧ ಹೊಂದಿರುವುದನ್ನು ಹೊರತಾಗಿಸಿದುದು ಕುಟುಂಬ ಸಂಘಟನೆಯಲಾದ ಮೊದಲ ಮುನ್ನಡೆಯಾಗಿದ್ದಲ್ಲಿ, ಸೋದರ ಸೋದರಿಯರು ಲೈಂಗಿಕ ಸಂಬಂಧ ಹೊಂದಿರುವುದನ್ನು ಹೊರತಾಗಿಸಿದುದು ಎರಡನೆಯ ಮುನ್ನಡೆಯಾಗಿದ್ದಿತು. ಈ ಎರಡನೆ ಮುನ್ನಡೆ ಅಲ್ಲಲ್ಲಿ ಪ್ರತ್ಯೇಕ ಪ್ರಸಂಗಗಳಲ್ಲಿ ಇದನ್ನು ಜಾರಿಗೆ ತರಲಾಯಿತು. ಅನಂತರ ಇದು ಕ್ರಮೇಣ ಸರ್ವೇ ಸಾಮಾನ್ಯ ನಿಯಮವಾಯಿತು. ಇದರ ಪರಿಣಾಮ ಎಷ್ಟು ಪ್ರಬಲವಾಗಿದ್ದಿತೆಂಬುದನ್ನು ಗೋತ್ರ (ಸಮೂಹ)ಗಳ ವ್ಯವಸ್ಥೆ ಸ್ಥಾಪನೆಯಾದುದು ಸಾಧಿಸಿ ತೋರುತ್ತದೆ. 'ಪುನಾಲು ಆ' ಎಂದರೆ ನಿಕಟ ಸಹವರ್ತಿ ಅಥವಾ ಸಹಭಾಗಿ ಎನ್ನುವಂತೆ ಕರೆದುಕೊಳ್ಳುತ್ತಿದ್ದರು. ಇದೇ ರೀತಿ ಸಹಜವಾಗಿ ಪುರುಷರು ಇತರ ಸ್ತ್ರೀಯನ್ನು ಹೆಂಡತಿಯನ್ನು ವಿವಾಹ ಮಾಡಿಕೊಂಡರು. ಈ ರೂಪದ ಸಾರಭೂತ ವಿಶಿಷ್ಟ ಲಕ್ಷಣವೆಂದರೆ – ಒಂದು ನಿರ್ಧಿಷ್ಟ ಕುಟುಂಬ ವೃತ್ತದೊಳಗೆ ಗಂಡು ಹೆಣ್ಣುಗಳು ಪರಸ್ಪರ ಪತಿ ಪತ್ನಿ ಸಾಮಾನ್ಯತೆಯಾಗಿದ್ದಿತು.

ಸಮೂಹ ಕುಟುಂಬದ ಎಲ್ಲ ರೂಪಗಳಲ್ಲೂ ಮಗುವೊಂದರ ತಂದೆ ಯಾರೆಂಬುದು ಖಚಿತವಿರುವುದಿಲ್ಲ. ಆದರೆ ತಾಯಿ ಯಾರೆಂಬುದು ಖಚಿತವಿರುತ್ತದೆ. ಅವಳು ಸಮಷ್ಠಿ ಕುಟುಂಬದ ಎಲ್ಲ ಮಕ್ಕಳನ್ನೂ ತನ್ನ ಮಕ್ಕಳಂದೇ ಕರೆದು ಅವರ ಬಗೆಗೆ ತಾಯಿಯ ಕರ್ತವ್ಯಗಳೆಲ್ಲವನ್ನೂ ಪಾಲಿಸಿದರೂ ತನ್ನ ಸ್ವಂತ ಮಕ್ಕಳನ್ನು ಅವಳು ಇತರರಿಂದ ಪ್ರತ್ಯೇಕಿಸಿ ತಿಳಿಯಬಲ್ಲಳು. ಆದ್ದರಿಂದ ಎಲ್ಲೆಲ್ಲಿ ಸಮೂಹ ವಿವಾಹ ಅಸ್ತಿತ್ವದಲ್ಲಿರುತ್ತದೋ ಅಲ್ಲಿ ವಂಶಾವಳಿಯನ್ನು ತಾಯಿಯ ಕಡೆಯಿಂದಷ್ಟೆ ಗುರುತಿಸಲು ಸಾಧ್ಯ. ಹೀಗೆ ತಾಯಿಯ ವಂಶವನ್ನಷ್ಟೇ ಮನ್ನಿಸಲಾಗುತ್ತದೆ. ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಇದನ್ನು ಮೊದಲು ಬಾರಿಗೆ ಪತ್ತೆ ಹಚ್ಚಿದವರು ಬಾಹೂ ಫೆನ್‌ನರು.

ವಿವಾಹದ ಬದಲಾವಣೆ ಯುಗ್ಮ ಕುಟುಂಬ ವ್ಯವಸ್ಥೆಯೂ ಒಂದಾಗಿದೆ. ಸಮೂಹ ವಿವಾಹದ ಕಾಲ ಘಟದಲ್ಲೇ ಅಥವಾ ಅದಕ್ಕೂ ಮುನ್ನವೇ, ಹೆಚ್ಚು ಅಥವಾ ಸ್ವಲ್ಪ ಕಾಲದಗಳವರೆಗೆ ಗಂಡು ಹೆಣ್ಣುಗಳು ಜೋಡಿ ಜೋಡಿಯಾಗಿರುವ ಪರಿಸ್ಥಿತಿಯೂ ಇದ್ದಿತು. ಅನೇಕಾನೇಕ ಪತ್ನಿಯರ ಮಧ್ಯೆ ಪುರುಷನು ಒಬ್ಬ ಪ್ರಧಾನ ಪತ್ನಿಯನ್ನು ಹೊಂದಿರುತ್ತಿದ್ದ ಮತ್ತು ಅವನು ಅವಳ ಇತರ ಗಂಡಂದಿರ ಮಧ್ಯೆ ಮುಖ್ಯ ಗಂಡನಾಗಿರುತ್ತಿದ್ದನು. ಗೋತ್ರಗಳ ಪದ್ಧತಿ ಬೆಳದಂತೆಯೂ ವಿವಾಹ ಅಸಾಧ್ಯವಾದ 'ಸೋದರ' 'ಸೋದರಿ'ಯರ ವರ್ಗಗಳ ಸಂಖ್ಯೆ ಹೆಚ್ಚಿದಂತೆಯೂ ಅವಶ್ಯವಾಗಿಯೇ ಹೆಚ್ಚು ಹೆಚ್ಚು ಸ್ಥಿರವಾಗುತ್ತ ಹೋಯಿತು. ರಕ್ತ ಸಂಬಂಧಿಗಳ ನಡುವೆ ವಿವಾಹವನ್ನು ತಪ್ಪಿಸಲು ಗೋತ್ರ ಪದ್ಧತಿಯು ನೀಡಿದ ಪ್ರಚೋದನೆಯು ಈ ಪರಿಸ್ಥಿತಿಯನ್ನು ಮತ್ತಷ್ಟು ಮುಂದೊಯ್ಯಿತು.

ಹೀಗೆ ಇತಿಹಾಸ ಪೂರ್ವಕಾಲದಲ್ಲಿ ಕುಟುಂಬ ವಿಕಾಸದಲ್ಲಿ ಕುಟುಂಬ ವೃತ್ತವು ಸತತವಾಗಿ ಸಂಕುಚಿತಗೊಳ್ಳುತ್ತ ಹೋಯಿತು. ಮೂಲದಲ್ಲಿ ಅದು ಇಡೀ ಬುಡಕಟ್ಟನ್ನು ಒಳಗೊಂಡಿದ್ದಿತು. ಈ ವೃತ್ತದೊಳಗೆ ಗಂಡು ಹೆಣ್ಣುಗಳ ವೈವಾಹಿಕ ಸಾಮಾನ್ಯತೆಯಿದ್ದಿತು. ಯುಗ್ಮ ಕುಟುಂಬದ ಪದ್ಧತಿಯ ಜೊತೆಗೆ ಸ್ತ್ರೀಯರ ಅಪಹರಣ ಹಾಗೂ ಕೊಳ್ಳಾಟ ಮಾರಾಟವೂ ಪ್ರಾರಂಭವಾದವು ಇವು ವಿಸ್ತೃತವಾಗಿ ಹರಡಿದ್ದ ಚಿಹ್ನೆಗಳಷ್ಟೇ ಆಗಿದ್ದವು. ಆಗಲೆ ಪ್ರಾರಂಭವಾಗಿದ್ದ ಹೆಚ್ಚು ಆಳವಾಗಿ ಬೇರು ಬಿಟ್ಟಿದ ಬದಲಾವಣೆಯೊಂದರ ಚಿಹ್ನೆಗಳಲ್ಲದೆ ಬೇರೇನೂ ಆಗಿರಲಿಲ್ಲ. ಈ ಚಿಹ್ನೆಗಳು ಸ್ತ್ರೀಯರನ್ನು ಪಡೆಯುವ ವಿಧಾನಗಳಷ್ಟೇ ಸೂಚಿಸುತ್ತಿದ್ದವು ಅವನ್ನು 'ಅಪಹರಣದ ಮೂಲಕ ಮದುವೆ' ಹಾಗೂ 'ಕೊಳ್ಳುವ ಮೂಲಕ ಮದುವೆ' ಎಂದು ಕರೆದರು.

ಬಾಹೊಫೆನನರು ಯಾವುದನ್ನು ವೇಶ್ಯಗಾರಿಕೆ ಅಥವಾ ಆಶ್ರಮ ಲೈಂಗಿಕ ಸಂಬಂಧ ಎಂದು ಕರೆಯುತ್ತಾರೋ ಅದರಿಂದ ಏಕಪತ್ನೀ ಪದ್ಧತಿಗೆ ಪರಿವರ್ತನೆಯನ್ನು ಸಾರಭೂತವಾಗಿ ಸ್ತ್ರೀಯರೇ ಉಂಟು ಮಾಡಿದುದು ಎಂದು ಪ್ರತಿಪಾದಿಸುತ್ತಾರೆ. ಹಳೆಯ ಪಾರಂಪರಿಕ ಲೈಂಗಿಕ ಸಂಬಂಧಗಳು ತಮ್ಮ ಋಜುವಾದ ಒರಟಾದ ಸ್ವಭಾವವನ್ನು ಹೆಚ್ಚು ಹೆಚ್ಚು ಕಳೆದುಕೊಂಡಂತೆ ಅವು ಸ್ತ್ರೀಯರಿಗೆ ಅಷ್ಟು ಹೆಚ್ಚು ಹೀನಾಯಕರವಾಗಿ ಪೀಡಕವಾಗಿ ಕಂಡು ಬಂದಿರಬೇಕು. ಅವರು ಸತೀತ್ವದ ಹಕ್ಕಿಗಾಗಿ ಮುಕ್ತಿ ಮಾರ್ಗವಾಗಿ ಒಬ್ಬನೇ ವ್ಯಕ್ತಿಯೊಂದಿಗೆ ತಾತ್ಕಾಲಿಕವಾಗಿಯೋ ಅಥವಾ ಶಾಶ್ವತವಾಗಿಯೊ ವಿವಾಹವಾಗುವುದಕ್ಕಾಗಿ ಅಷ್ಟು ಹೆಚ್ಚು ತೀವ್ರತೆಯೊಂದಿಗೆ ಹಂಬಲಿಸಿರಬೇಕು. ಕುಟುಂಬದ ಸಂಪತ್ತು ಹೆಚ್ಚಿದಂತೆ ಅದು ಒಂದು ಕಡೆ ಕುಟುಂಬದಲ್ಲಿ ಹೆಂಡತಿಗಿಂತ ಗಂಡನಿಗೆ ಹೆಚ್ಚು ಮುಖ್ಯವಾಗಿ ಸ್ಥಾನಮಾನವನ್ನು ಒದಗಿಸಿಕೊಟ್ಟಿತು. ಮತ್ತೊಂದು ಕಡೆ ತನ್ನ ಆಸ್ತಿಗೆ ಉತ್ತರಾಧಿಕಾರದ ಪಾರಂಪರಿಕ ಪದ್ಧತಿಯನ್ನು ಕಿತ್ತೊಗೆದು ಅದನ್ನು ತನ್ನ ಸ್ವಂತ ಮಕ್ಕಳ ಪರವಾಗುವಂತೆ ಬದಲಿಸಲು ತನ್ನ ಈ ದೃಢಗೊಂಡ ಸ್ಥಾನಮಾನವನ್ನು ಬಳಸಿಕೊಳ್ಳುವಂತೆ ಅವನಿಗೆ ಉತ್ತೇಜನ ನೀಡಿತು.

ಹೀಗೆ ಕಿರಾತಾವಸ್ಥೆಗೆ ಅನುಗುಣವಾದುದು ಸಮೂಹ ವಿವಾಹ, ಅನಾಗರಿಕಾವಸ್ಥೆಗೆ ಯುಗ್ಮವಿವಾಹ, ನಾಗರಿಕಾವಸ್ಥೆಗೆ ಏಕಪತ್ನೀ ವಿವಾಹ ಪದ್ಧತಿ ಮತ್ತು ಇದಕ್ಕೆ ಅನುಬಂಧವಾಗಿ ವ್ಯಭಿಚಾರ ಹಾಗೂ ವೇಶ್ಯಾವೃತ್ತಿ. ಅನಾಗರಿಕಾವಸ್ಥೆಯ ಮೇಲಿನ ಮಜಲಿನಲ್ಲಿ ಯುಗ್ಮ ವಿವಾಹ ಹಾಗೂ ಏಕ ಪತ್ನೀತ್ವಗಳಿಗೆ ಮಧ್ಯದಲ್ಲಿ ಪುರುಷರು ಸ್ತ್ರೀ ಗುಲಾಮರು ಮೇಲೆ ಹೊಂದಿದ್ದ ಅಧಿಪತ್ಯವೂ ಬಹುಪತ್ನೀತವೂ ಇರುತ್ತಿದ್ದವು.

ಆದ್ದರಿಂದ ಸಮಾಜ ಮುಂದುವರಿದಂತೆ ವಿವಾಹ ಮುಂದುವರೆಯಲೇಬೇಕು. ಸಮಾಜ ಬದಲಾದಂತೆ ಅದೂ ಬದಲಾಗಲೇಬೇಕು. ಅದು ಹಿಂದೆಯೂ ಹಾಗೆಯೇ ಮಾಡಿತು. ಅದು ಸಾಮಾಜಿಕ ಪದ್ಧತಿಯಿಂದ ಹುಟ್ಟಿಕೊಂಡದ್ದು. ಆ ಪದ್ದತಿಯೇ ಬೆಳವಣಿಗೆಯ ಸ್ಥಿತಿಯನ್ನೇ ಪ್ರತಿಬಿಂಬಿಸುವುದು. ನಾಗರಿಕಾವಸ್ಥೆಯು ಪ್ರಾರಂಭವಾದಂದಿನಿಂದ ಏಕ ಪತ್ನೀ ಕುಟುಂಬವು ಬಹುವಾಗಿ ಸುಧಾರಿಸಿರುವುದರಿಂದ ಆಧುನಿಕ ಕಾಲದಲ್ಲಿ ತುಂಬ ವಿವೇಕಯುತವಾಗಿ ಸುಧಾರಿಸಿರುವುದರಿಂದ ಗಂಡು ಹೆಣ್ಣುಗಳ ಸಮಾನತೆಯನ್ನು ಸಾಧಿಸುವವರೆಗೂ ಅದು ಇನ್ನೂ ಹೆಚ್ಚು ಸುಧಾರಿಸಬಲ್ಲುದಾಗಿದೆ ಎಂದು ಕೊನೆಯ ಪಕ್ಷ ಊಹಿಸಬಹುದಾಗಿದೆ. ಹೀಗೆ ವಿವಾಹದ ಮೂಲಕ ರಚನೆಗೊಂಡ ಕುಟುಂಬವು ಸಾಮಾಜಿಕ-ರಾಜಕೀಯ ವ್ಯವಸ್ಥೆಯ ಮೂಲ ತಳಹದಿಯಾಗಿ ತನ್ನ ಅಸ್ತಿತ್ವ ಉಳಿಸಿಕೊಂಡಿದೆ.

ನಾಲ್ಕು ಸಾವಿರ ವರ್ಷಗಳ ಹಿಂದೆ ಮಧ್ಯ ಏಷ್ಯಾದಿಂದ ಬಂದ ಇಂಡೋ ಯುರೋಪಿನ ಗುಂಪಿಗೆ ಸೇರಿದ ಆರ್ಯರ ದಾಳಿಯಿಂದಾಗಿ ಸಾಮಾಜಿಕ, ಸಾಂಸ್ಕೃತಿಕ ಅವನತಿಗೆ ಕಾರಣವಾಯಿತು. ಇತಿಹಾಸದ ಉದ್ದಕ್ಕೂ ಸಾಮಾಜಿಕ ಕ್ಷೋಭೆಗಳು ನಿರಂತರ ನಡೆದು ನಾನಾ ತರಹದ ರೂಪ ತಾಳಿ ಸಮಸ್ಯೆಗಳುಂಟಾದವು. ಇಂದಿಗೂ ಅಂತಹ ಸಮಸ್ಯೆಗಳಿಂದ ದೂರವಾಗಿಲ್ಲ. ಒಂದು ಸಂಸ್ಕೃತಿಯ ಪ್ರಭಾವ ಇನ್ನೊಂದು ಸಂಸ್ಕೃತಿಯ ಮೇಲಾದಾಗ ಉಂಟಾಗುವ ಸಮಸ್ಯೆಗಳ ಅಂತ್ಯ ಎಲ್ಲಿಯವರೆಗೆ ಕಾಣುವುದು ಎಂಬುದಕ್ಕೆ ನಮ್ಮ ದೇಶದ ಇತಿಹಾಸವೇ ಸೂಕ್ತ ನಿದರ್ಶನಯೆನಿಸುತ್ತದೆ.

ವಲಸೆ ಬಂದ ಆರ್ಯರು ನೆಲೆಸಿದ್ದು ಸಿಂಧೂ ನದಿಯ ಬಯಲಿನಲ್ಲಿ ಸುಮಾರು ೫೦೦ ವರ್ಷಗಳ ಹೋರಾಟದಿಂದ ಗಂಗಾನದಿಯ ಬಯಲು ಪ್ರದೇಶ ಆಕ್ರಮಿಸಿಕೊಂಡರು ಎಂದು ಇತಿಹಾಸ ತಜ್ಞರು ಹೇಳುತ್ತಾರೆ. ಇಲ್ಲಿನ ಮೂಲ ನಿವಾಸಿಗಳನ್ನು ಸದೆ ಬಡಿದು ಆರ್ಯ ಸಂಸ್ಕೃತಿಯನ್ನು ಒತ್ತಾಯ ಮಾಡಿ ಅವರ ಮೇಲೆ ಹೇರಿದರು. ಮೂಲ ನಿವಾಸಿಗಳನ್ನು ಗುಲಾಮರನ್ನಾಗಿ ಮಾಡಿಕೊಂಡರು.

ಅತ್ಯಂತ ಪ್ರಾಚೀನ ಕಾಲದ ಋಥ ಎನ್ನುವ ಅಮೂಲ್ಯವಾದ ಆಚಾರ ಆರ್ಯ ಜೀವನದಲ್ಲಿ ಭವ್ಯವಾದ ಹಾಗೂ ವಿಶಿಷ್ಟವಾದ ಒಂದು ವ್ಯವಸ್ಥೆ ಆಗಿತ್ತು. ಮುಂದೆ ಈ ಋಥ ಎನ್ನುವುದು ಬರಿಯ ಕಲ್ಪನೆಯಲ್ಲಿಯೇ ಉಳಿಯಿತು. ಆದರೆ ಗಣ ವ್ಯವಸ್ಥೆಯು ಅಂದರೆ ಒಬ್ಬನಿಗಾಗಿ ಎಲ್ಲರೂ, ಎಲ್ಲರಿಗಾಗಿ ಒಬ್ಬನು ಎನ್ನುವ ವ್ಯವಸ್ಥೆಯು ಮುಂದುವರಿಯುತ್ತಿತ್ತು. ಮುಂದೆ ಬೇಸಾಯ ಹಾಗೂ ಇತರ ಹೊಸ ಕಸಬುಗಳು ತಲೆದೋರಿದವು. ಆಹಾರ ಧಾನ್ಯಗಳು ಇತರ ಸಾಮಗ್ರಿಗಳು ಬಾರೀ ಪ್ರಮಾಣದಲ್ಲಿ ಉತ್ಪಾದನೆಯಾದಾಗ ಅವುಗಳ ನಿರ್ವಹಣೆ ಅವಶ್ಯಕವಾಗಿರುವುದರಿಂದ ಸಮಾಜದಲ್ಲಿ ಶ್ರಮ ವಿಭಜನೆಯು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರೆಂದು ವಿಂಗಡಿಸಿದ ಇತಿಹಾಸ ಜಗತ್ಪ್ರಸಿದ್ಧ. ಈ ಪ್ರಕ್ರಿಯೆ ಸುಮಾರು ೩೦೦ ರಿಂದ ೫೦೦ ವರ್ಷಗಳ ಕಾಲ ನಡೆಯಿತು. ಶ್ರಮ ವಿಭಜನೆಯ ಪರಿಣಾಮವಾಗಿ ಗಣವ್ಯವಸ್ಥೆಯ ಶಿಥಿಲೀಕರಣ ಮತ್ತು ಚಾತುರ್ವರ್ಣ್ಯ ವ್ಯವಸ್ಥೆಯ ಸ್ಥಾಪನೆಯು ಒಟ್ಟೊಟ್ಟಿಗೆ ನಡೆಯಿತು. ಬೆಳೆದ ಸಾಮಾಜಿಕ ಉತ್ಪಾದನೆಯಿಂದ ಹೆಚ್ಚುವರಿಯಾಗಿ ಉಳಿತಾಯ ಆಗುವುದೆಲ್ಲಾ ತೆಗೆದುಕೊಂಡು ತಮ್ಮ ಸ್ವಂತ ಸ್ವತ್ತಾಗಿ ಮಾಡಿಕೊಂಡರು. ಸಾಮಾಜಿಕ ಮುಖಂಡರೆನಿಸಿದ ಬ್ರಾಹ್ಮಣರು ಮತ್ತು ಕ್ಷತ್ರಿಯರು ಸರ್ವಾಧಿಕಾರ ಸಮಾಜದ ಮೇಲೆ ಪ್ರಯೋಗಿಸಿದರು. ಅದರಿಂದಾಗಿ ಶೋಷಕರು ಮತ್ತು ಶೋಷಿತರು ಎಂಬ ವರ್ಗಗಳು ತಲೆದೂರಿದವು.

ಎಲ್ಲಾ ಪ್ರಾಚೀನ ಸಮಾಜಗಳಂತೆ ವೇದ ಪೂರ್ವ ಭಾರತೀಯ ಬುಡಕಟ್ಟುಗಳು ಜಾತಿ ಮತ್ತು ವರ್ಗರಹಿತವಾಗಿದ್ದವು. ಈ ಪರಿಕಲ್ಪನೆಯ ಮೇಲೆ ಬುದ್ಧ, ಬಸವೇಶ್ವರರು ವರ್ಗ, ವರ್ಣರಹಿತ ಸಮಾಜದ ಕಲ್ಪನೆ ಮುಂದಿಟ್ಟುಕೊಂಡು ಬೋಧನೆ ಮಾಡಿರಬೇಕೆನಿಸುತ್ತದೆ. ಪ್ರಾಚೀನತೆಯ ಪ್ರತಿಯೊಂದು ಬುಡಕಟ್ಟು ತಾನು ವಿಶೇಷವಾಗಿ ಸಂಬಂಧ ಹೊಂದಿರುವ ಪ್ರಾಣಿ ಅಥವಾ ಮರದ ಹೆಸರಿನಿಂದ ಕರೆಯಲ್ಪಡುತ್ತಿತ್ತು. ಮತ್ಸ್ಯ, ಅಜ, ಗೋತಮ, ಮತ್ಸ, ಶುನಕ, ಕೌಶಿಕ, ಮಂಡೋಕೆಯ ಕಶ್ಯಪ ಇತ್ಯಾದಿ ಗುಂಪುಗಳ ಹೆಸರುಗಳು, ಸಾಮಾನ್ಯವಾಗಿ ಒಂದು ಗುಂಪನ್ನು ಇನ್ನೊಂದರಿಂದ ಬೇರ್ಪಡಿಸಲು ಆ ಗುಂಪಿಗೆ ಗೆಳೆಯರೋ ಶತ್ರುಗಳೋ ಇಟ್ಟ ಅಡ್ಡ ಹೆಸರು ಮಾತ್ರ. ಬುಡಕಟ್ಟಿಗೆ ಸೇರಿದ ಆಸ್ತಿಯ ಮೇಲೆ ಸಾಮೂಹಿಕ ಒಡೆತನ ಇತ್ತು. ಆದರೆ ವ್ಯಕ್ತಿ ಎಷ್ಟೇ ಬಲಶಾಲಿಯಾದರೂ ಖಾಸಗಿ ಆಸ್ತಿಯನ್ನು ಹೊಂದಲು ಅವಕಾಶವಿರಲಿಲ್ಲ. ನಾಗರಿಕರಿಗಿಂತ ಪಿಸ್ತು

ಸಂಪನ್ನರಾಗಿದ್ದ ಬುಡಕಟ್ಟಿನ ಜನರು ಸಂವಿಧಾನದತ್ತ ಪ್ರಜಾ ತಂತ್ರವೇನೂ ರೂಢಿಸಿಕೊಳ್ಳಲಿಲ್ಲ. ಆದರೂ ಹೊಂದಾಣಿಕೆಯ ಸರಳ ನಿರಾಡಂಬರದ ಮೂಲಭೂತ ಪ್ರಜಾತಾಂತ್ರಿಕ ರೂಢಿಸಿಕೊಂಡಿದ್ದರು. ಅವರು ಸಾಮೂಹಿಕ ಸಹಕಾರದೊಂದಿಗೆ ಸುಖದಾಯಕ ಜೀವನ ನಡೆಸುತ್ತಿದ್ದರು. ಆಳುವ ವರ್ಗ, ಸೇವಕ ವರ್ಗ, ಎಂದು ವರ್ಗಭೇದವಿರಲಿಲ್ಲ. ಅದಕ್ಕೆ ಅವರ ಸಹಬಾಳ್ವೆಯ ಬದುಕೇ ಕಾರಣವಾಗಿರಬೇಕು.

ಸಾಮೂಹಿಕ ಬದುಕನ್ನು ಅಳವಡಿಸಿಕೊಂಡಿರುವ ಪ್ರಾಚೀನ ಸಮಾಜಗಳಿಂದ ವರ್ಣಗಳು, ವರ್ಗಗಳು ಹೇಗೆ ಉದಯಿಸಿದವು ? ಉದಯಿಸಲು ಕಾರಣವೇನು ? ಎಂಬುವವು ಕುತೂಹಲದ ಪ್ರಶ್ನೆಗಳಾಗಿವೆ. ಈ ಪ್ರಶ್ನೆಗಳ ಉತ್ತರವಾಗಿ ವಿವಾದಾಸ್ಪದವಾದ, ಪುರುಷ ಸೂಕ್ತದ ಸೃಷ್ಟಿಯ ಉಗಮವನ್ನು ವಿವರಿಸುವ ಒಂದು ಸಿದ್ಧಾಂತವಿದೆ. ಪ್ರಪಂಚದ ಬೇರೆ ಬೇರೆ ಭಾಗಗಳಲ್ಲೂ ಸೃಷ್ಟಿಯ ಮೂಲವನ್ನು ಕುರಿತು ಬೇರೆ ಬೇರೆ ಸಿದ್ಧಾಂತಗಳಿವೆ. ಈಜಿಪ್ಟ್ ಜನರ ನಂಬಿಕೆಯಂತೆ ಖುಮ್ಮು ಎಂಬ ದೇವತೆ ಎಲ್ಲಾ ಜೀವಿಗಳನ್ನೂ ಕುಂಬಾರದ ಚಕ್ರದ ಮೇಲೆ ರೂಪಿಸಿದ. ಅವನು ಚರಾಚರ ವಸ್ತುಗಳೆಲ್ಲದರ ಜನಕ. ಬೈಬಲ್ಲಿನ ಪುರಾತನ ಒಡಂಬಡಿಕೆಯಲ್ಲೂ ಇಂಥದೇ ಒಂದು ಸಿದ್ಧಾಂತ ವಿದೆ.

೧೧-೧೨ ಋಕ್ಕುಗಳು ಆಳವಾದ ಅಧ್ಯಯನಕ್ಕೆ ಅರ್ಹವಾಗಿವೆ. ಚಾತುರ್ವರ್ಣ್ಯಗಳ ಸೃಷ್ಟಿಕರ್ತನಾದ ಪುರುಷನ ದೇಹದಿಂದ ಹೇಗೆ ಉದ್ಭವಿಸಿದುವೆಂಬುದನ್ನು ಮಾತ್ರ ತಿಳಿಸುತ್ತವೆ. ಪುರುಷನ ತಲೆಯಿಂದ ಬ್ರಾಹ್ಮಣ, ಬಾಹುಗಳಿಂದ ಕ್ಷತ್ರಿಯ ತೊಡೆಗಳಿಂದ ವೈಶ್ಯ ಮತ್ತು ಪಾದಗಳಿಂದ ಶೂದ್ರರು ಉದಿಸಿದರೆಂದು ಅವು ಹೇಳುತ್ತವೆ. ಆದರೆ ಇದು ಸತ್ಯಕ್ಕೆ ದೂರವಾದ ಮಾತೆಂದೆ ಹೇಳಬಹುದು. ಇದು ವೈಜ್ಞಾನಿಕವಾಗಿ ದೂರವಾಗಿ ಉಳಿದಿದೆ. ಅಂಡಾಣು ಮತ್ತು ವೀರ್ಯಗಳ ಸಮ್ಮಿಲನಗಳಿಂದಾಗಿ ಮಾತ್ರ ಸಂತಾನೋತ್ಪತ್ತಿಗೆ ತಾಯಿ ಗರ್ಭದಲ್ಲಿ ಪಿಂಡಬೆಳೆದು ಮಗುವಿನ ರೂಪ ಪಡೆಯುತ್ತದೆ. ಅದು ಒಂಭತ್ತು ತಿಂಗಳಿಗೆ ಮಗುವಾಗಿ ಜನಿಸುತ್ತದೆ. ಅಂದ ಮೇಲೆ ತಲೆ, ಬಾಹು, ತೊಡೆ, ಪಾದಗಳಿಂದ ಅದು ಪುರುಷ ವ್ಯಕ್ತಿಯಲ್ಲಿ ಮಾನವನಾಗಿ ಹುಟ್ಟಬಹುದೇ ! ಶರೀರದ ಒಂದೊಂದು ಭಾಗದಲ್ಲಿ ಮಾನವ ರೂಪ ಪಡೆದರೆ ಸ್ತ್ರೀ-ಪುರುಷರ ದೇಹದಲ್ಲಿ ಜನಿಸುವ ಮಕ್ಕಳ ಸಂಖ್ಯೆಗೆ ಎಣಿಕೆಯೇ ಇರುತ್ತಿರಲಿಲ್ಲ. ಚಾತುರ್ವರ್ಣ್ಯಗಳ ಆಧಾರದ ಮೇಲೆ ಸಮಾಜ ರಚಿಸಬೇಕು ಎಂಬ ಸೃಷ್ಟಿಕರ್ತನ ಆದೇಶವನ್ನು ಅವು ಹೊಂದಿವೆಯೆಂದು ಆಗಿನ ಆರ್ಯರು ಭಾವಿಸಿದರು. ಋಕ್ಕುಗಳು ಸಮಾಜ ರಚನೆಯನ್ನು ವಿವರಿಸುವ ದೈವಿ ಆಜ್ಞೆಯಾಗಿ ಕಂಡವು. ಇದರ ಪರಿಣಾಮವಾಗಿ ಶೂದ್ರರರು ಅನೇಕ ಅನಾನೂಕೂಲಗಳನ್ನು ಎದುರಿಸಬೇಕಾಯಿತು.

ಶೂದ್ರರು ಹಿಂಡಿದ ಹಾಲು ಅಗ್ನಿಹೋತ್ರಕ್ಕೆ ಬಳಸದೆ ಇರುವುದು. ಯಜ್ಞಗಳಿಂದ ದೂರ ಸೋಮಪಾನ ಸೇವೆಗೆ ಸೇರಿಸದೆ ಇರುವುದು. ಹೀಗೆ ಅವನು ಇತರರ ಸೇವಕನಾಗಿರಬೇಕಾಗಿತ್ತು ಹೊರತಾಗಿ ಸಹಭಾಗಿಯಾಗಿ ಅಲ್ಲ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ದ್ವಿಜರು ಎನಿಸಿಕೊಂಡರೆ ಶೂದ್ರರು ಅದ್ವಿಜ ಎನಿಸಿ ಅವರಂತೆ ಇವರಿಗೆ ಉಪನಯನವಿಲ್ಲ. ಶೂದ್ರನು ಬ್ರಾಹ್ಮಣರ ಸೇವೆ ಎಷ್ಟು ಹೆಚ್ಚಾಗಿ ಮಾಡುತ್ತಾನೋ ಅಷ್ಟು ಅವನಿಗೆ ಪುಣ್ಯ ಬರುತ್ತದೆ. ಮುಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿ ಹುಟ್ಟುತ್ತಾನೆ. ಮೋಕ್ಷ ಪಡೆಯುತ್ತಾನೆಂಬ ನಂಬಿಕೆ ಹುಟ್ಟು ಹಾಕಿದರು. ಉತ್ಪಾದನೆಯ ಸಾಧನೆ ಹೆಚ್ಚಿದಂತೆಲ್ಲಾ ವರ್ಗರಹಿತ ಸಮಾಜದಲ್ಲಿ ಶ್ರಮ ವಿಭಜನೆ ಅನಿವಾರ್ಯವಾಗಿ ವರ್ಗಗಳ ಉಗಮಕ್ಕೆ ಕಾರಣವಾಯಿತು.

ಋಗ್ವೇದ, ಸಾಮವೇದ, ಯಜರ್ ವೇದ, ಅಥರ್ವವೇದ ಎಂಬ ನಾಲ್ಕು ವೇದಗಳನ್ನು ಆರ್ಯರು ರಚಿಸಿದರು. 'ವಿದ್' ಎಂದರೆ ತಿಳಿದುಕೊಳ್ಳುವುದು, ಜ್ಞಾನ ಎಂದರ್ಥ ವೇದಗಳನ್ನು ಶೃತಿ (ಕೇಳಿದ್ದು) ಸಾಹಿತ್ಯ ಎನ್ನುತ್ತಾರೆ. ಅವುಗಳನ್ನು 'ಅನಾದಿ' ಎಂದು ಕರೆಯುತ್ತಾರೆ. ವೇದಗಳು ವಿವಿಧ ಕಾಲಗಳ ಅನುಭವದ ಮೂಲಕ ಸೃಷ್ಠಿಯಾದವು. ಭಾರತದಲ್ಲಿ ಮೂಲ ನೆಲೆಯನ್ನು ಸ್ಥಾಪಿಸಿದ ಕಾಲದಲ್ಲಿ ಪ್ರಥಮ ವೇದವಾದ "ಋಗ್' ವೇದವು ರಚನೆಯಾಯಿತು. ವೇದಗಳ ಕಾಲದ ಜನರು ಉತ್ತಮ ಮಟ್ಟದ ಜೀವನ ಹಾಗೂ ರಾಜಕೀಯ ಪ್ರಬುದ್ಧತೆ ಹೊಂದಿದರು ಎನ್ನುವ ಅಭಿಪ್ರಾಯ ಪ್ರಚಲಿತವಿದೆ. ರಾಜ್ಯವನ್ನು ರಾಜನು ಆಳುತ್ತಿದ್ದನು. ಸೇನಾನಿ ದಂಡನಾಯಕನಾಗಿ, ಪುರೋಹಿತ ಧಾರ್ಮಿಕವಾಗಿ, ಗ್ರಾಮೀಣ ರಾಜಕೀಯವಾಗಿ ಅವನ ಸಹವರ್ತಿಗಳಾಗಿದ್ದರು. ಕುಟುಂಬ, ಗ್ರಾಮ, ವಿಷ್, ಜನ (ರಾಜ್ಯ)ಗಳ ರಚನೆಯಾಗಿ ಅಧಿಕಾರಿಗಳು ಕುಲಗಳು ಹೆಚ್ಚುತ್ತಾ ಬಂದವು. ಯುದ್ಧದಲ್ಲಿ ರಾಜನ್ ನಾಯಕತ್ವ ವಹಿಸುತ್ತಿದ್ದ. ರಾಜನಿಗೆ ಸಹಾಯಕವಾಗಿ ಕಲಹಗಳಲ್ಲಿ ವಿವಿಧ ಜವಾಬ್ದಾರಿ ಹೊತ್ತು ಕೆಲಸ ಮಾಡುವವರ ಆಧಾರದ ಮೇಲೆ ವಿವಿಧ ಸಾಮಾಜಿಕ ವಿಭಜನೆಗಳಿಗೆ ರಾಜಕೀಯ ವೃತ್ತಿಗಳಿಗೆ ಕಾರಣರಾದರು. ಯುದ್ಧಕ್ಕೆ ಸಾಗುವ ಮುನ್ನ ಹರಕೆ ಪಡೆಯಲು, ಗೆದ್ದು ಬಂದಾಗ ದೇವರ ಸ್ತುತಿ ಮಾಡಲು ರಾಜನ್ ಕುರಿತ ವೀರಗಾಥೆ ಹಾಡಲು ಬ್ರಾಹ್ಮಣ ಪುರೋಹಿತ ವರ್ಗ ರಾಜ್ಯಭಾರದ ವಿವಿಧ ಕಾರ್ಯಗಳು ನಡೆಸಲು ಕ್ಷತ್ರಿಯ ವರ್ಗ, ಕೈಗಾರಿಕೆ ವ್ಯಪಾರ ನಡೆಸಲು ವೈಶ್ಯ ವರ್ಗ ಹಾಗೂ ಯುದ್ಧ ಕಾರ್ಯ ಹಾಗೂ ಈ ಮೂರು ವರ್ಗದ ಜನರ ಸೇವೆ ಮಾಡಲು ಶೂದ್ರ ವರ್ಗ ಹುಟ್ಟಿಕೊಂಡಿತು.

ವೇದಗಳಲ್ಲಿ ಸ್ಪಷ್ಟವಾಗಿ ಮೊದಲು ಸಿಕ್ಕುವ ವರ್ಣಗಳು ಎರಡೇ ಎರಡು ಒಂದು 'ಬ್ರಾಹ್ಮಣ' ವಾದರೆ ಇನ್ನೊಂದು 'ಕ್ಷತ್ರಿಯ' ವೈಶ್ಯ ವರ್ಣವೂ ಸ್ಪಷ್ಟವಾಗಿದ್ದರೂ ಅದನ್ನು ಪ್ರತ್ಯೇಕವಾಗಿ ಒಂದು ವರ್ಣ ಎಂದು ಗುರುತಿಸಲಿಲ್ಲ. ಎಂದರೆ ವೈಶ್ಯವರ್ಣವೂ ಶೂದ್ರ ವರ್ಣದಲ್ಲಿ ಸೇರಿಹೋಗಿತ್ತು. ಆಗ ತ್ರೈವರ್ಣ ಎಂದೇ ಕರೆಯಿಸಿಕೊಂಡಿತು. ವೈಶ್ಯ ಮತ್ತು ಶೂದ್ರರಲ್ಲಿ ಬೌದ್ಧಿಕವಾಗಿ ತಲೆಯತ್ತಿದ್ದವರು ವೈಶ್ಯರು ಹೀಗಾಗಿ ಇವರು ಪ್ರತಿಷ್ಠಿತ ವರ್ಣಗಳೊಂದಿಗೆ ಸರಿಸಮಾನವಾಗಿ ಹೋರಾಡುವ ಶಕ್ತಿಯನ್ನು ಪಡೆದುಕೊಂಡಿದ್ದರಿಂದ ತಮ್ಮ ಅಸ್ತಿತ್ವಕ್ಕೆ ಹೋರಾಟ ಮಾಡಿರುವುದು ಕಂಡು ಬರುತ್ತದೆ. ಬೌದ್ಧಿಕ ಮಟ್ಟದಲ್ಲಿ ಕಡಿಮೆಯೆನಿಸಿದ ಶೂದ್ರರು ದೈಹಿಕ ಶ್ರಮದಿಂದ ಸೇವೆಯನ್ನು ಮಾಡುತ್ತಲೇ ಉಳಿದುಕೊಂಡು ಶೂದ್ರರೆನಿಸಿದರು.

ಋಗ್ವೇದ ಕಾಲದ ಜನರು ದೇವಲೋಕ ಅಂತರಿಕ್ಷಲೋಕ, ಭೂಲೋಕದ ದೇವತೆಗಳನ್ನು ಪೂಜಿಸುತ್ತಿದ್ದರು. 'ಎಲ್ಲಾ ದೇವರು ಒಂದೇ ಶಕ್ತಿಯ ಮೂಲ ಹೊಂದಿ ಹಲವು ಹೆಸರಾದ ಒಂದೇ ವ್ಯಕ್ತಿ' ಎಂದು ನಂಬಿದ್ದರು. ಪ್ರಕೃತಿ ಶಕ್ತಿಗಳ ಆರಾಧನೆ ಮತ್ತು ಗೋವಿನ ಪೂಜೆಯಲ್ಲಿ ನಂಬಿಕೆಯಿಟ್ಟಿದ್ದರು. ಋಗ್ವೇದ ಕಾಲದಲ್ಲಿ ನಿರ್ಧಿಷ್ಟ ದೇವಸ್ಥಾನಗಳು, ಸ್ಥಾಪಿತ ಪುರೋಹಿತ ವರ್ಗ ಕಂಡು ಬರುವುದಿಲ್ಲ.

ಉತ್ತರ ವೇದಗಳ ಕಾಲದಲ್ಲಿ ಆರ್ಯರು ವಿವಿಧ ಪ್ರಾಂತ್ಯಗಳನ್ನು ರಚಿಸಿ ನಿಯಂತ್ರಣದಲ್ಲಿರಿಸಿಕೊಂಡಂತೆ, ಸಾಂಸ್ಕೃತಿಕ, ರಾಜಕೀಯ, ಧಾರ್ಮಿಕ ಬದುಕಿನಲ್ಲಿ ಅಗಾಧ ಬದಲಾವಣೆಗಳಿಗೆ ಕಾರಣರಾದರು. ನಿರ್ಧಿಷ್ಟ ಪ್ರಾಂತ್ಯಗಳನ್ನು ವಶಪಡಿಸಿಕೊಂಡಿದ್ದರ ಪರಿಣಾಮವಾಗಿ ಜನ ಸಾಮಾನ್ಯರು ಕಬ್ಬಿಣ ಮತ್ತು ಬೆಂಕಿ ಬಳಸಿ ಕೃಷಿ ಭೂಮಿ ಸಿದ್ಧಗೊಳಿಸಿದರು. ಕೃಷಿ ಕುಟುಂಬದ ಒಡೆತನಕ್ಕೆ ಒಳಪಟ್ಟಿತು. ಕಬ್ಬಿಣದ ತಾಂತ್ರಿಕತೆಯು ಕೃಷಿಗೆ ಹೆಚ್ಚು ಜನರ ಅಗತ್ಯವಿಲ್ಲದಂತೆ ಮಾಡಿತು. ಇದರ ಪರಿಣಾಮವಾಗಿ ಹೊಸ ಜನ್ಮದ ಹುಟ್ಟಿಗೆ ಕಾರಣಳಾದ ಹೆಣ್ಣು

ಮೂಲೆ ಗುಂಪಾದಳು. ಹೀಗೆ ಹೆಣ್ಣಿನ ಹುಟ್ಟು ದುಃಖಕ್ಕೆ ಕಾರಣವೆಂದು ಪರಿಗಣಿಸಲ್ಪಟ್ಟಿತು ಹಾಗೂ ಪುತ್ರ ಸಂತಾನಕ್ಕಾಗಿ ಯಾಗ ಯಜ್ಞಾದಿಗಳನ್ನು ನಡೆಸುವ ಪರಿಪಾಠ ಬೆಳೆಯಿತು.

ಧಾರ್ಮಿಕವಾಗಿ ಹದಿನಾರು ಬಗೆಯ ವಿವಿಧ ಪುರೋಹಿತ ಪೂಜಾವರ್ಗ ಬೆಳೆಯಿತು. ಯಜ್ಞಯಾಗಾದಿಗಳು ಹಲವು ವಿಧದಲ್ಲಿ ವಿಭಜನೆಗೊಂಡವು. ಬ್ರಹ್ಮ, ವಿಷ್ಣು, ಮುಂತಾದ ಹೊಸ ದೇವತೆಗಳ ಪೂಜೆ ಆರಂಭಗೊಂಡಿತು. ಸಾವಿರಾರು ವರ್ಷಗಳಿಂದ ವೈದಿಕ ಪುರೋಹಿತ ಶಾಹಿಗಳ ಒಂದು ಸಣ್ಣ ಗುಂಪಿನ ವಶದಲ್ಲಿ ಎಲ್ಲಾ ಅಧಿಕಾರವು ಉಳಿದುಕೊಂಡು ಬಂದಿದೆ. ಅಂದರೆ ನಮ್ಮ ಪ್ರಾಚೀನ ಅರಸರ ಅರಸೊತ್ತಿಗೆ ಹೋಗಿ ಪ್ರಜಾಪ್ರಭುತ್ವ ಸರಕಾರ ಜಾರಿಗೆ ಬಂದಿದೆ. ಆದರೆ ಪುರೋಹಿತ ವರ್ಗದವರು ಜನರನ್ನು ಶೋಷಿಸುವದು ಇಂದಿಗೂ ತಪ್ಪಿಲ್ಲ. ಎಲ್ಲಿ ದುಡ್ಡು ಹೆಚ್ಚು ಸಿಗುವದೋ ಅಂತಹ ಕಡೆ ಕೆಲಸ ಮಾಡಲು ಮುಂದಾಗುವುದು ಇವತ್ತಿನ ದೇವಸ್ಥಾನಗಳಲ್ಲೂ ಕಾಣುತ್ತೇವೆ. ಹಣಕ್ಕೆ ತಕ್ಕಂತೆ ಪೂಜಾ ವಿಧಾನ, ದೇವರದರ್ಶನ, ತೀರ್ಥಪ್ರಸಾದ ಸಿಗುವುದು. ಇಂತಹ ಘಟನೆಗಳು ಜನರ ಹಿತಕ್ಕೆ ಧಕ್ಕೆ ತರುತ್ತವೆ.

ಪೌರೋಹಿತ್ಯ, ಶೋಷಣೆಯ ಸಾಧನವಾದರೆ, ಸುಳ್ಳು ತತ್ವಜ್ಞಾನವು ಇವೆರೆಡರ ಸಮರ್ಥನೆಯಾಗಿದೆ. ಈ ಹಿಂದೆ ಮಾಡುತ್ತಿದ್ದ ರಾಜರ ಅದ್ದೂರಿ ಪಟ್ಟಾಭಿಷೇಕ ಸಾಮಾನ್ಯರಿಗೆ ಅರ್ಥವಾಗದ ಸಂಸ್ಕೃತ ಮಂತ್ರ ಘೋಷಣೆ ಅವರ ಸ್ವಾರ್ಥಸಾಧನೆಗಾಗಿ ರಾಜರು ಪುರೋಹಿತರಿಗೆ ಬೆಂಬಲಿಸದಿದ್ದರೆ ಅವರನ್ನು ಕೊಲೆ ಮಾಡುವ ಸಂಚು ತಮಗೆ ಬೆಂಬಲಿಸುವರನ್ನು ಕೂರಿಸುವ ವಂಚನೆ, ವಿದೇಶಿಗರನ್ನು ಆಮಂತ್ರಿಸಿ ಸ್ವಾಂತಂತ್ರ್ಯ ಸೂರೆ ಮಾಡಿದ ಘಟನೆಗಳು ಇತಿಹಾಸದ್ದುದ್ದಕ್ಕೂ ಕಂಡು ಬರುತ್ತವೆ. ಇಂತಹ ಸರ್ವಾಧಿಕಾರ ಹೊಂದಿದ್ದ ಪುರೋಹಿತರು ಹೇಳಿದಂತೆ ಜನರು ನಂಬಲೇಬೇಕಾಗಿತ್ತು. ಸುಮಾರು ಮೂರು ಸಾವಿರ ವರ್ಷಗಳಿಗಿಂತಲೂ ಹೆಚ್ಚಿನ ಕಾಲದಿಂದ ಭಾರತದಲ್ಲಿ ಬ್ರಾಹ್ಮಣ ಪುರೋಹಿತ ಆಡಳಿತ ಸ್ಥಾಪಿತವಾಗಿದೆ ಎಂದು ಹೇಳಲಾಗುತ್ತದೆ. ಬ್ರಾಹ್ಮಣರು ಶೂದ್ರರ ಮೇಲೆ ನಿಯಂತ್ರಣ ಯಾವಾಗಲೂ ಇರುವಂತೆ ಅವರಿಗೆ ಭಯಕ್ಕೊಳಪಡಿಸುವಂತೆ ಕೃತ್ರಿಮ ಗ್ರಂಥಗಳನ್ನು ರಚಿಸಿ ಅದನ್ನು ನಂಬುವಂತೆ ಮಾಡುತ್ತಿದ್ದರು. ಬ್ರಾಹ್ಮಣತ್ವ ದೈವದತ್ತವಾಗಿದೆ. ಎಂಬುದನ್ನು ತೋರಿಸಲು ಪ್ರಯತ್ನಿಸುತ್ತಿದ್ದರು.

**೭. ವಿಜ್ಞಾನದ ಬೆಳವಣಿಗೆಯಿಂದಾದ ಪ್ರಭಾವ :**

ಮನುಷ್ಯನು ಸುಮಾರು ಹತ್ತು ಲಕ್ಷ ವರ್ಷಗಳಿಂದಲೂ ಜೀವಿಸುತ್ತಿದ್ದಾನೆ. ಸುಮಾರು ಆರು ಸಾವಿರ ವರ್ಷಗಳಿಂದ ಅವನು ಬರಹವನ್ನು ಬಳಸುತ್ತಿದ್ದಾನೆ. ಅವನಿಗೆ ವ್ಯವಸಾಯವು ಇದಕ್ಕಿಂತ ಹಿಂದಿನಿಂದ ತಿಳಿದಿದ್ದರೂ ಬಹುಶಃ ತುಂಬ ಹಿಂದಿನಿಂದಲ್ಲ. ವಿಜ್ಞಾನವು ವಿದ್ಯಾವಂತ ಜನರ ನಂಬಿಕೆಗಳನ್ನು ರೂಪಿಸುವ ಶಕ್ತಿಯಾಗಿ ೩೦೦ ವರ್ಷಗಳಿಂದಲೂ, ಆರ್ಥಿಕ, ತಂತ್ರಜ್ಞಾನದ ಆಕಾರವಾಗಿ ೧೫೦ ವರ್ಷಗಳಿಂದಲೂ ಬಳಕೆಯಲ್ಲಿದೆ. ಈ ಕಡಿಮೆ ಅವಧಿಯಲ್ಲಿ ತಾನೆಂಥ ಪ್ರಬಲ ಕ್ರಾಂತಿಕಾರಕ ಶಕ್ತಿಯೆಂಬುದನ್ನು ತೋರಿಸಿಕೊಟ್ಟಿದೆ. ಹಾಗೆ ಅದರ ಪ್ರಭಾವ ಅಷ್ಟು ವಿಸ್ತೃತವಾದರೂ ಅದು ಜನರ ಮೇಲೆ ಪ್ರಭಾವಶಾಲಿಯಾಗಿ ಕಾರ್ಯಾರಂಭ ಮಾಡಿರುವುದು ಇತ್ತೀಚಿಗೆ ಮಾತ್ರ. ವಿಜ್ಞಾನದ ಪ್ರಭಾವ ನಾನಾ ವಿಧಗಳಲ್ಲಿ ತುಂಬ ಭಿನ್ನವಾಗಿ ಕಂಡು ಬರುತ್ತದೆ. ಅನೇಕ ಸಂಪ್ರದಾಯ ನಂಬಿಕೆಗಳನ್ನು ಹೋಗಲಾಡಿಸುವುದರೊಂದಿಗೆ ಹೊಸ ನಂಬಿಕೆಗಳನ್ನು

ಬಿತ್ತುವುದು. ನವೀನ ತಂತ್ರಜ್ಞಾನದ ಪರಿಣಾಮವಾಗಿ ಸಾಮಾಜಿಕ ರಚನೆಯಲ್ಲಿ ಅಗಾಧವಾದ ಬದಲಾವಣೆಗಳಾಗಿವೆ. ಹಾಗೂ ಸಮಾಜದಲ್ಲಿ ನಂಬಿಕೆಗಳ ಕಂತೆಯು ಹೇಗೆ ಪ್ರಭಾವ ಬೀರಬಹುದೆಂಬುದನ್ನು ಸ್ಪಷ್ಟವಾಗಿ ಗೊತ್ತಾಗಿರುವುದು ಮಾನವ ಶಾಸ್ತ್ರದ ಅಭ್ಯಾಸದಿಂದ. ಎಂದು ಬ್ರರ್ಟಂಡ್ ರಸಲ್ ಎನ್ನುವ ಲೇಖಕರು ಗುರುತಿಸುತ್ತಾರೆ.[೧೩] ಮಾಟದಿಂದ ರೋಗವನ್ನುಂಟು ಮಾಡಬಹುದೆಂಬ ನಂಬಿಕೆ; ಬೆಳೆ ಸರಿಯಾಗಿ ಬಾರದಿರಲು ದೇವತೆಗಳ ಕೋಪವೋ ದೈತ್ಯರ ಕಾಟವೋ ಕಾರಣ; ನರಬಲಿಗಳಿಂದ ಯುದ್ಧದಲ್ಲಿ ಗೆಲ್ಲಬಹುದು; ಗ್ರಹಣ ಧೂಮಕೇತುಗಳು ಮುಂದಾಗುವ ಅನಾಹುತ ಸೂಚಿಸುತ್ತವೆ. ಅನಾಗರಿಕ ಜೀವನವು ಇಂತಹ ಅನೇಕ ನಿಷೇಧಗಳಿಂದ ಹೆಣೆಯಲ್ಪಟ್ಟಿವೆ. ಇವುಗಳನ್ನು ಪಾಲಿಸದಿದ್ದರೆ ಏನಾಗುವುದೋ ಎನ್ನುವ ಭಯ ಅವರಲ್ಲಿ ಕಾಡುತ್ತಿತ್ತು.

ಇಂತಹ ಮೂಢನಂಬಿಕೆಯ ವಲಯದಿಂದ ಹೊರ ಬಂದ ವೈಜ್ಞಾನಿಕ ವಲಯಕ್ಕೆ ನುಸುಳಿಕೊಂಡ ಪ್ರಾಕೃತಿಕ ಸಂಗತಿಗಳಲ್ಲಿ ಗ್ರಹಣಗಳೇ ಮೊಟ್ಟ ಮೊದಲನೆಯವಾಗಿವೆ. ಬ್ಯಾಬಿಲೋನಿಯನ್ ಜನರು ಗ್ರಹಣಗಳು ಉಂಟಾಗುವುದನ್ನು ಭವಿಷ್ಯ ಹೇಳಬಲ್ಲವರಾಗಿದ್ದರು. ಆದರೆ ಅವರ ಭವಿಷ್ಯ ಎಲ್ಲಾ ಪ್ರಸಂಗಗಳಲ್ಲಿ ಸರಿಯಾಗಿರುತ್ತಿರಲಿಲ್ಲ. ಪುರೋಹಿತರು ಗುಟ್ಟುನ್ನು ಬಹಿರಂಗಪಡಿಸದೆ ಜನರ ಮೇಲೆ ಹತೋಟಿಯನ್ನು ಬಲಪಡಿಸುವ ಸಾಧನವನ್ನಾಗಿ ಬಳಸಿಕೊಂಡರು. ಮುಂದೆ ಗ್ರೀಕರು ಕೂಡಾ ಗ್ರಹಣ ಸಂಭವಿಸುವುದನ್ನು ಗುರುತಿಸುವುದು ಕುಲಿತುಕೊಂಡ ನಂತರ, ಅವರು ಬಹುಬೇಗ ಅತ್ಯಾಶ್ಚರ್ಯಕರವಾದ ಅನಾವರಣಗಳನ್ನು ಖಗೋಳಶಾಸ್ತ್ರದ ಕ್ಷೇತ್ರದಲ್ಲಿ ಮಾಡಿದರು. ಥ್ಯೂಸಿಡ್ಸೆನು ಸೂರ್ಯಗ್ರಹಣವೊಂದನ್ನು ಉದಾಹರಿಸಿ ಅಮವಾಸ್ಯೆಯಂದು ಸಂಭವಿಸುವುದೆಂದು ತಿಳಿಸಿದಲ್ಲದೆ, ಸೂರ್ಯಗ್ರಹಣ ಕೇವಲ ಅಮವಾಸ್ಯೆಯೆಂದು ಮಾತ್ರ ಸಂಭವಿಸುತ್ತದೆಂದು ಖಚಿತ ತೀರ್ಮಾನಕ್ಕೆ ಬರುತ್ತಾರೆ. ಪೈಥಾಗೋರಾಸನ ಅನುಯಾಯಿಗಳು ಸೂರ್ಯ-ಚಂದ್ರ ಗ್ರಹಣಗಳ ಬಗ್ಗೆ ನಿಖರವಾಗಿ ಸಿದ್ಧಾಂತವನ್ನು ರೂಪಿಸಿ ಚಂದ್ರನ ಮೇಲೆ ಬೀಳುವ ಭೂಮಿಯ ನೆರಳಿನಿಂದ ಭೂಮಿಯು ಒಂದು ಗೋಳವೆಂದು ವೈಜ್ಞಾನಿಕವಾಗಿ ಊಹಿಸಿದರು. ವಿಜ್ಞಾನದ ಈ ಶೋಧನೆಯಿಂದ ಶಿಕ್ಷಣ ಪಡೆದುಕೊಂಡ ಬುದ್ಧಿವಂತರು ಗ್ರಹಗಳ ಬಗ್ಗೆ ಇದ್ದ ತಪ್ಪು ಕಲ್ಪನೆಗಳಿಂದ ದೂರ ಸರಿದರು ಆದರೆ ಈ ವಿಷಯ ಸಾಮಾನ್ಯರ ಒಪ್ಪಿಗೆ ಪಡೆಯಲು ದೀರ್ಘಕಾಲ ಹಿಡಿಯಿತು. ಆದರೂ ಗ್ರಹಣ ಸಂಭವಿಸಿದಾಗ ಮಾಡುವ ಆಚರಣೆಗಳು ಇಂದಿಗೂ ರೂಢಿಯಲ್ಲಿರುವುದನ್ನು ಕಾಣುತ್ತೇವೆ.

ಧೂಮಕೇತುಗಳನ್ನು ವೈಜ್ಞಾನಿಕ ವಿವರಣೆಯ ಪರಧಿಯೊಳಗೆ ತರಲು ಇನ್ನೂ ಬಹಳ ಸಮಯಬೇಕಾಯಿತು. ಇದು ನ್ಯೂಟನ್ ಮತ್ತು ಅವನ ಮಿತ್ರ ಹ್ಯಾಲಿಯವರು ವಿವರಣಾ ಕ್ರಮದಿಂದ ಪೂರ್ಣಗೊಳಿಸಿದರು. "ಧೂಮಕೇತುಗಳು ರಾಜ್ಯ ಕ್ರಾಂತಿ, ಸಾಂಕ್ರಮಿಕ ರೋಗ, ಯುದ್ಧ, ಬಿರುಗಾಳಿ ಇವುಗಳನ್ನು ಸೂಚಿಸುವ ಭವಿಷ್ಯ ವಾಣಿ"[೧೪] ಎಂದು ಪರಮಪೂಜ್ಯ ಬೀಡ್ ಹೇಳುತ್ತಾನೆ. ಧೂಮಕೇತುಗಳು ದೇವತೆಗಳ ಕೋಪವನ್ನು ಸೂಚಿಸುತ್ತದೆಂದು ಜಾನ್ ನಾಕ್ಸ್ ನಂಬಿದ್ದರೆ, ಅವನ ಅನುಯಾಯಿಗಳು ಅವು "ಪೋಪನ್ ಓಂಬಾಲಕರನ್ನು ಮೂಲೋತ್ಪಾಟನೆ ಮಾಡುವಂತೆ ರಾಜನಿಗೆ ನೀಡುತ್ತಿರುವ ಎಚ್ಚರಿಕೆಯ

೧೩. (ಅಡಿ ಟಿಪ್ಪಣಿ: ಸಮಾಜದ ಮೇಲೆ ವಿಜ್ಞಾನದ ಪ್ರಭಾವ ಲೇಖಕರು ಬ್ರರ್ಟಂಡ್ ರಸಲ್ ಪುಟ ಸಂಖ್ಯೆ-೭)
೧೪. (ಅಡಿಟಿಪ್ಪಣಿ : ಸಮಾಜದ ಮೇಲೆ ವಿಜ್ಞಾನದ ಪ್ರಭಾವ. ಲೇಖಕರು ಬ್ರರ್ಟಂಡ್ ರಸಲ್ ಪುಟ ಸಂಖ್ಯೆ೪)

ಸೂಚನೆ"[೧೫] ಎಂದು ಹೇಳಿದರು ಪ್ರಾಯಶಃ ಧೂಮಕೇತುಗಳು ಗುರುತ್ವಾಕರ್ಷಣೆಯ ನಿಯಮವನ್ನು ಅನುಸರಿಸುವುವೆಂದು ಕಂಡು ಹಿಡಿದ ಮೇಲೆ, ಕೆಲವು ಧೂಮಕೇತುಗಳ ಕಕ್ಷೆಯನ್ನಾದರೂ ಲೆಕ್ಕಚಾರಗಳಿಂದ ನಿರ್ಧರಿಸಬಹುದೆಂದು ಕಂಡು ಹಿಡಿದ ಮೇಲೆ ವಿದ್ಯಾವಂತರು ಸಾಮಾನ್ಯವಾಗಿ ಇವುಗಳನ್ನು ಭವಿಷ್ಯ ಸೂಚಕಗಳೆಂದು ನಂಬಲು ನಿರಾಕರಿಸಿದರು.

ವಿಜ್ಞಾನಿಗಳ ಹೊಸ ಸಂಶೋಧನೆಯಿಂದ ಸೂರ್ಯಗ್ರಹಣ, ಧೂಮಕೇತುಗಳಲ್ಲಿದ್ದ ವಿಚಾರಗಳು ಬದಲಾದಂತೆ ಮಾಟವು ಒಂದು ಮೂಢನಂಬಿಕೆ ಎಂದು ಪರಿಗಣಿತವಾಯಿತು. ಮೊದಲನೆ ಜೇಮ್ಸ್ ವಾದಿಗಳ ಕಡು ವಿರೋಧಿಯಾಗಿದ್ದ, ಷೇಕ್ಸಪಿಯರನ 'ಮ್ಯಾಕಬೆತ್' ಸರ್ಕಾರದ ಅಧಿಕೃತ ಪ್ರಚಾರ; ಆ ನಾಟಕವು ರಾಜನ ಹೊಗಳಿಕೆಯಾಗಿ ಪರಿಣಮಿಸಲು ಅಲ್ಲಿ ಬರುವ ಮಂತ್ರವಾದಿನಿಯರೇ ಕಾರಣವೆಂಬುದಾಗಿತ್ತು. ಬೇಕನ್‌ನ ಸಹ ಮಾಟ ಮಂತ್ರಗಳಲ್ಲಿ ನಂಬಿಕೆಯಿಟ್ಟದ್ದವನಂತೆ ನಟಿಸಿದ; ಆದರೆ ಮಂತ್ರವಾದಿಗಳಿಗೆ ವಿಧಿಸುತ್ತಿದ್ದ ಶಿಕ್ಷೆಯನ್ನು ತೀವ್ರತರನ್ನಾಗಿ ಮಾಡುವ ಶಾಸನವೊಂದನ್ನು ಪಾರ್ಲಿಮೆಂಟ್ ಅಂಗಿಕರಿಸಿದಾಗ ಆ ಸಭೆಯ ಸದಸ್ಯನಾಗಿದ್ದರೂ ಬೇಕನ್ ಅದನ್ನು ಪ್ರತಿಭಟಿಸಲಿಲ್ಲ. ಮಾಟ ಮಂತ್ರಗಳಲ್ಲಿನ ನಂಬಿಕೆಯು ಕಾಮನ್ ವೆಲ್ತ್‌ನ ಆಶ್ರಯದಲ್ಲಿ ತನ್ನ ತುತ್ತ ತುದಿಯನ್ನು ಮುಟ್ಟಿತು. ಏಕೆಂದರೆ ಮುಖ್ಯವಾಗಿ ಪ್ಯೂರಿಟನ್‌ರು ಸೈತಾನ ಶಕ್ತಿಯಲ್ಲಿ ನಂಬಿಕೆಯಿಟ್ಟಿದ್ದರು. ಎರಡನೆ ಚಾರ್ಲ್ಸ್ ಸರ್ಕಾರವು ಮಾಟದ ಶಕ್ತಿ ಸಾಮಾರ್ಥ್ಯಗಳನ್ನು ಅಲ್ಲಗಳೆಯುವ ಸಾಹಸಕ್ಕೆ ಕೈ ಹಾಕದೆ, ಅದನ್ನು ಅನುಸರಿಸುವವರನ್ನು ಪತ್ತೆ ಹಚ್ಚುವುದರಲ್ಲಿ ತನ್ನ ಹಿಂದಿನವರಿಗಿಂತ ಉತ್ಸಾಹ ಕಡಿಮೆಯಾಯಿತು.

ಕೊನೆ ವಿಚಾರಣೆ ಇಂಗ್ಲೇಂಡಿನಲ್ಲಿ ೧೬೬೪ರಲ್ಲಿ ಸರ್ ಥಾಮಸ್ ಬ್ರೌನ್ ಮಾಟಗಾರರ ವಿರುದ್ಧ ಸಾಕ್ಷಿಯಿತ್ತವರಲ್ಲಿ ಒಬ್ಬ. ೧೭೬೮ರಿಂದ ಇತ್ತೀಚಿಗೂ ಜಾನ್ ವೆಸ್ಲಿ ಈ ಹಳೆ ನಂಬಿಕೆಯನ್ನು ಸಮರ್ಥಿಸಿದರೂ ಅದನ್ನು ನಿಷೇಧಿಸುವ ಶಾಸನ ನಿಧಾನವಾಗಿ ಮೂಲೆ ಗುಂಪಾಗುತ್ತ ಬಂದು ೧೭೩೬ರಲ್ಲಿ ಅದನ್ನು ಹಿಂತೆಗೆದುಕೊಳ್ಳಲಾಯಿತು. ಸ್ಕಾಟ್ಲೆಂಡಿನಲ್ಲಿ ಈ ನಂಬಿಕೆ ಹೆಚ್ಚು ಕಾಲ ಪ್ರಚಲಿತವಾಗಿತ್ತು. ಅಲ್ಲಿ ಆರೋಪಣೆಯ ಕಾರಣಕ್ಕಾಗಿ ನಡೆದ ಇತ್ತೀಚಿನ ವಿಚಾರಣೆಯೆಂದರೆ ೧೭೨೭ರಲ್ಲಿ ನಡೆದದ್ದು.

ಈ ವಿಷಯದಲ್ಲಿ ಮಾನವಿಯತೆ ಹಾಗೂ ಸಾಮಾನ್ಯ ಪರಿಜ್ಞಾನಗಳಿಗೆ ಗೆಲವು ದೊರೆಯಲು ಸಂಪೂರ್ಣವಾಗಿ ಕಾರಣ ಭೂತವಾದುದೆಂದರೆ, ವೈಜ್ಞಾನಿಕ ಮನೋಭಾವನೆಯ ಹರಡುವಿಕೆ ಇದಕ್ಕೆ ಕಾರಣ. ಯಾವ ನಿರ್ಧಿಷ್ಟವಾದವೂ ಅಲ್ಲ. ೧೭ನೇ ಶತಮಾನದ ಮಹಾಪುರುಷರ ಕೃತಿಗಳಿಂದಾಗಿ ಜನರಲ್ಲಿ ಈ ಜಗತ್ತಿನ ಬಗ್ಗೆ ಒಂದು ಹೊಸ ದೃಷ್ಟಿಕೋನವುಂಟಾಯಿತು. ಭವಿಷ್ಯ ವಾಣಿ. ಮಾಟ, ದುಷ್ಟಶಕ್ತಿಗಳು ಮೈಮೇಲೆ ಬರುವುದು ಮುಂತಾದವುಗಳ ಬಗೆಗಿದ್ದ ಮೂಢನಂಬಿಕೆಯನ್ನು ಹೋಗಲಾಡಿಸಲು ಈ ಹೊಸ ದೃಷ್ಟಿಕೋನವು ಕಾರಣವಾಯಿತೇ ಹೊರತು ಯಾವುದೇ ನಿರ್ಧಿಷ್ಟವಾದ ಸರಣಿಯಲ್ಲ.

ಮುಂದೆ ವೈಜ್ಞಾನಿಕ ದೃಷ್ಟಿಕೋನದಿಂದ ಸಮಾಜದಲ್ಲಿ ಕಂಡು ಬಂದ ಅಂಶಗಳೆಂದರೆ ೧) ಯಾವುದೇ ವಸ್ತುವಿನ ಬಗ್ಗೆ ಇರುವ ಹೇಳಿಕೆಗಳು ವೀಕ್ಷಣೆಯನ್ನು ಅವಲಂಬಿಸಿರಬೇಕು. ಹೊರತು ಅಸಮರ್ಥವಾದ ಪ್ರಮಾಣ ವಾಕ್ಯಗಳನ್ನೆಲ್ಲ. ೨) ಅಚೇತನ ಜಗತ್ತು ಸ್ವಯಂ ಕ್ರಿಯಾಶೀಲವಾದ ಒಂದು ವ್ಯವಸ್ಥೆ ಅದರ ಎಲ್ಲಾ

---

೧೫. (ಅಡಿ ಟಿಪ್ಪಣಿ: ೧೫ ಸಮಾಜದ ಮೇಲೆ ವಿಜ್ಞಾನ [illegible])

ಬದಲಾವಣೆಗಳು ಪ್ರಕೃತಿ ನಿಯಮಗಳಿಗೆ ಬದ್ಧವಾಗಿರುತ್ತವೆ. ೩) ಭೂಮಿಯು ವಿಶ್ವದ ಕೇಂದ್ರವಲ್ಲ. ಬಹುಶಃ ಮನುಷ್ಯನು ಅದರ ಉದ್ದೇಶವಲ್ಲ ಮೇಲಾಗಿ 'ಉದ್ದೇಶ' ಎಂಬುದು ವೈಜ್ಞಾನಿಕವಾಗಿ ಉಪಯುಕ್ತವಲ್ಲದ ಒಂದು ಪರಿಕಲ್ಪನೆ.

ವೈಜ್ಞಾನಿಕ ಪ್ರಪಂಚದಲ್ಲಿ ಹೆಜ್ಜೆಯಿಟ್ಟು ನಂತರ ಸಮಾಜದ ಪರಿಸ್ಥಿತಿಯಲ್ಲಿ ಬದಲಾವಣೆಗಳೂ ಆದವು. ದೇವರ ಮುಂದೆ ಪ್ರಾರ್ಥನೆ ಮಾಡುವದಾಗಲಿ, ಅನುಕಂಪ ತೋರಿಸಲಿ ಎಂದು ವಿನಮ್ರತೆಯಿಂದಾಗಲಿ ಇಚ್ಛೆಗಳನ್ನು ಈಡೇರಿಸಿಕೊಳ್ಳುವುದು ಸಾಧ್ಯವಿಲ್ಲ. ಇಚ್ಛೆಗೆ ಅನುಗುಣವಾಗಿ ಸಾಧ್ಯವಾಗುವುದು ನಮ್ಮ ಸುತ್ತಲಿನ ನಿಯಮಗಳು ತಿಳಿದುಕೊಳ್ಳುವುದರಿಂದ ಇಂತಹ ಅರಿವಿನ ಸಾಮರ್ಥ್ಯ, ಪ್ರಾರ್ಥನೆಯಿಂದ ಪಡೆಯಬಹುದೆಂದು ಹಿಂದಿನ ಜನರು ನಂಬಿದ ಶಕ್ತಿಗಿಂತ ತುಂಬ ಹೆಚ್ಚಾದುದು. ಏಕೆಂದರೆ ಪ್ರಾರ್ಥನೆಯಿಂದ ಇಹಲೋಕದ ಹಾಗೂ ಪರಲೋಕದ ಬೇಡಿಕೆಗಳು ಈಡೇರುತ್ತಿದ್ದವೋ ಇಲ್ಲವೋ ಎಂದು ಹೇಳುವುದು ಸಾಧ್ಯವಾಗುತ್ತಿರಲಿಲ್ಲ. ಆದರೂ ಪ್ರಾರ್ಥನೆಯ ಶಕ್ತಿಗಳಿಗೆ ಇತಿಮಿತಿಗಳಿದ್ದವು. ಹೆಚ್ಚಿನದನ್ನು ಬೇಡುವುದು ಅಧಾರ್ಮಿಕ ಎನಿಸುತ್ತಿತ್ತು. ಆದರೆ ವಿಜ್ಞಾನದ ಬೆಳವಣಿಗೆಯಿಂದಾಗಿ ಇಂತಹ ವಿಷಯಗಳಲ್ಲಿ ಮಿತಿಗಳು ಯಾವುವೂ ಇಲ್ಲ. ವ್ಯಕ್ತಿಗಳ ಮನೋ ನಿರ್ಧಾರ ಮೇಲೆ ಬಿಟ್ಟಿದ್ದು ಎನ್ನುವುದು ಅರ್ಥ ಮಾಡಿಕೊಂಡ. ತಾನು ಮಾಡುವ ಕೆಲಸದ ಮೇಲೆ ನಂಬಿಕೆಯಿಟ್ಟು ಮಾಡಿದ್ದಾದರೆ ಅದು ಯಶಸ್ವಿಯಾಗುತ್ತದೆ ಎಂದು ಆಧುನಿಕರ ಛಲವಾಯಿತು. ಆದರೆ ಪ್ರಾಚೀನರು ತಮ್ಮ ಕೆಲಸಗಳ ಯಶಸ್ಸಿಗೆ ದೈವಶಕ್ತಿಯೇ ಕಾರಣ ಎನ್ನುವ ನಂಬಿಕೆ ಅವರಾದಾಗಿತ್ತು.

ಪ್ರಾಚೀನ ಮಾನವ ಯಾವುದೇ ಕಾರಣಕ್ಕೂ ಪರಿಸರದ ಬಗ್ಗೆ ಚಿಂತಿಸದೆ ಹೋದರೆ, ಅವನು ಆರಂಭಿಸಿದ ಕೆಲಸಗಳು ಸರಿಯೋ ತಪ್ಪು ಎನ್ನುವ ಆಲೋಚನೆ ಮುಂದಿನ ಜನಾಂಗದವರು ಮಾಡುವ ಅವಶ್ಯಕತೆಯಿರುತ್ತಿರಲಿಲ್ಲ. ಒಂದು ವೇಳೆ ಈ ವಿಶ್ವ ಕ್ರಿಯೆಯಗೆಳ ಬಗ್ಗೆ ಆಲೊಚಿಸದೆ ಇದ್ದರೆ ಭೂಮಿಯು ತನ್ನ ಮಹತ್ವ ಕಳೆದುಕೊಂಡು ವಾಸಕ್ಕೆ ಅಯೋಗ್ಯವೆನಿಸುತ್ತಿತ್ತು. ವ್ಯಕ್ತಿಯು ಬದುಕಿನಲ್ಲಿ ಕಾಳಜಿ ವಹಿಸದಿದ್ದರೆ ಜೀವನದಲ್ಲಿ ಅಗಾಧವಾದ್ದುದೇನನ್ನು ಇಲ್ಲವೆನಿಸುತ್ತದೆ. ಆದರೆ ಇಂತಹ ಕಾಳಜಿಯಿಲ್ಲದ ನಿರಾಸಕ್ತ ಆಲೋಚನೆ ಹುರುಳಿಲ್ಲದ್ದು ಎನಿಸುತ್ತದೆ. ಮರುಭೂಮಿಯೆನಿಸಿದ ಅರಬ್ ರಾಷ್ಟ್ರವು ಆಸಕ್ತಿಯಿಂದ ಸಂಶೋಧನೆ ನಡೆಸಿ ತೈಲ ನಿಕ್ಷೇಪದಿಂದಾಗಿ ಫಲವನ್ನು ಕಂಡು ಕೊಂಡು ಪ್ರಪಂಚದ ಶ್ರೀಮಂತ ರಾಷ್ಟ್ರಗಳಲ್ಲಿ ತಾವೇನು ಹಿಂದೆಯಿಲ್ಲ ಎನ್ನುವುದನ್ನು ತೋರಿಸಿದವು. ಇದು ಆದದ್ದು ವೈಜ್ಞಾನಿಕ ಮತ್ತು ತಂತ್ರಜ್ಞಾನಗಳಿಂದ. ಹೀಗೆ ನಾವು ಮಾಡುವ ಕೆಲಸಗಳಲ್ಲಿ ಒಳ್ಳೆಯದ್ದು, ಕೆಟ್ಟದ್ದರಲ್ಲಿ ನಮ್ಮ ಸಾಮರ್ಥ್ಯ ವ್ಯಕ್ತವಾಗುತ್ತದೆ.

ಡಾರ್ವಿನ್ ವಾದವು ಜೀವ-ಜಗತ್ತುಗಳ ಬಗೆಗಿನ ಮಾನವನ ದೃಷ್ಟಿಕೋನದ ಮೇಲೆ ಅನೇಕ ರೀತಿಯಲ್ಲಿ ಪ್ರಭಾವನ್ನುಂಟು ಮಾಡಿದೆ. ಮಾನವ - ಮಂಗಮಾನವರ ನಡುವೆ ನಿಖರವಾದ ವ್ಯತ್ಯಾಸ ಸೂಚಕ ರೇಖೆಯಿಲ್ಲದಿರುವುದು ದೈವಶಾಸ್ತ್ರಕ್ಕೆ ತೊಡಕು ಉಂಟುಮಾಡಿದೆ.

ಹೀಗೆ ವಿಜ್ಞಾನದ ಬೆಳವಣಿಗೆಯಿಂದ ಸಮಾಜದ ಜನರ ಆಲೋಚನಾ ಶಕ್ತಿ ಹೆಚ್ಚಾಯಿತು. ರೂಢಿಯಲ್ಲಿ ಬಂದ ನಂಬಿಕೆಗಳ ಬಗ್ಗೆ ತಾರ್ಕಿಕ ಭಾವನೆ ಬೆಳೆಸಿಕೊಂಡರು. ವಿಜ್ಞಾನದ ಬೆಳವಣಿಗೆಯೊಂದಿಗೆ ಕಾಕತಾಳೀಯ ಹೊಂದಿದ ಕೆಲವೊಂದು ನಂಬಿಕೆಗಳು ಇಂದಿಗೂ ಮುಂದುವರೆದುಕೊಂಡು ಬರುತ್ತಲಿವೆ.

೯. ಆಧುನಿಕ ಯುಗದ ಪ್ರಭಾವ ಮತ್ತು ಆಧುನಿಕ ಸಂಪ್ರದಾಯ :

ಕ್ರಿ.ಶ. ೧೪೯೨ ರಿಂದ ಯುರೋಪನಲ್ಲಾದ ಬದಲಾವಣೆಗಳೊಂದಿಗೆ ಆಧುನಿಕ ಯುಗ ಆರಂಭವಾಯಿತು. ಮಾನವ ಜೀವನ, ಅವನ ಸುಖ ದುಃಖಗಳ ಅಥವಾ ಲೌಕಿಕ ಜೀವನದ ಬಗ್ಗೆ ಚಿಂತನೆ ಹೆಚ್ಚಿತು. ಮಾನವಾಸಕ್ತಿ (ಹ್ಯುಮನಿಸಂ)ಗೆ ಪ್ರಾಧಾನ್ಯ ಬಂತು.' ಅಲ್ಲದೆ ಪ್ರತಿಯೊಂದು ನಂಬಿಕೆಯನ್ನು ಅನೇಕ ಧಾರ್ಮಿಕ ಆಚರಣೆಗಳನ್ನೂ ಪ್ರಶ್ನಿಸುವ ವೈಚಾರಿಕ ಪ್ರಜ್ಞೆ ಹಾಗೂ ಕುತೂಹಲಗಳು ಬೆಳೆದವು.

ವಿಜ್ಞಾನವು ಧಾರ್ಮಿಕ ನಂಬಿಕೆಗಳನ್ನು ದಾಟಿ ಹೊಸ ಶೋಧಗಳನ್ನು ಪ್ರಕಟಿಸಿತು. ಕೊಪರ್ನಿಕಸ್ ಎಂಬ ಪೋಲೆಂಡಿನ ವಿಜ್ಞಾನಿ ಸೂರ್ಯನು ಈ ವಿಶ್ವದ ಕೇಂದ್ರವೆಂದು ಸಾರಿದ (ಭೂಮಿಯೇ ಕೇಂದ್ರವೆಂದು ಆವರೆಗಿನ ನಂಬಿಕೆ) ಸೂರ್ಯನು ತನ್ನ ಅಕ್ಷದ ಸುತ್ತ ಸುತ್ತುತ್ತಿದ್ದು ಉಳಿದ ಗ್ರಹಗಳೂ, ಭೂಮಿಯೂ ಸೂರ್ಯನ ಪರಿಭ್ರಮಣೆ ಮಾಡುವವೆಂದು ತಿಳಿಸಿದ. ಕೆಪ್ಲರ್ ಎಂಬ ಜರ್ಮನಿ ವಿಜ್ಞಾನಿ ಎಲ್ಲ ಗ್ರಹಗಳೂ ಸೂರ್ಯನ ಸುತ್ತ ದೀರ್ಘ ವೃತ್ತದ ಮಾರ್ಗದಲ್ಲಿ ಪರಿಭ್ರಮಣೆ ಮಾಡುತ್ತಿವೆಯೆಂದು ಹೇಳಿದ. ಇಟಲಿಯ ಗೆಲಿಲಿಯೊ ದೂರದರ್ಶಕದ ನೆರವಿನಿಂದ ಗ್ರಹಗಳ ಬಗ್ಗೆ ಅನೇಕ ವಿವರಗಳನ್ನು ನೀಡಿದ. ನ್ಯೂಟನ್ ಗುರುತ್ವಾಕರ್ಷಣ ಶಕ್ತಿಯ ಬಗ್ಗೆ ವಿವರ ನೀಡಿದ. ಗ್ರಹಗಳ ದ್ವಿವಿಧ ಚಲನೆಗೆ ಕಾರಣ ಹೇಳಿದ. ಇವು ಎಲ್ಲದರ ಪರಿಣಾಮವಾಗಿ ಪರಲೋಕದ ಚಿಂತನೆಯ ಬದಲಿಗೆ ಜನರಲ್ಲಿ ಇಹಲೋಕದ ಮಾನವಾಸಕ್ತಿಯ ಚಿಂತನೆ ಬೆಳೆಯಿತು. ಲೌಕಿಕ ಚಿಂತನೆಯಿಂದ ಮಾನವನ ಜೀವನ ಸುಗಮ, ಸುಖಕರಗೊಳಿಸುವ ಮಾರ್ಗಗಳ ಶೋಧನೆಗೆ ದಾರಿಯಾಯಿತು.

ಮುಂದುವರೆದು ಐರೋಪ್ಯರು ೧೫ನೇ ಶತಮಾನಕ್ಕೆ ಮೊದಲು ಏಷ್ಯಾದ ದೇಶಗಳೊಂದಿಗೆ ಕೇವಲ ಭೂಮಾರ್ಗದ ಮೂಲಕ ವಾಣಿಜ್ಯ ವ್ಯವಹಾರ ನಡೆಸುತ್ತಿದ್ದರು. ಕ್ರಿ.ಶ. ೧೪೫೩ರಲ್ಲಿ ಅಟ್ಟೋಮಾನ ಟರ್ಕರು ಕಾನ್ ಸ್ಟಾಂಟಿನೋಪಲ್ ನಗರ ವಶಪಡಿಸಿಕೊಂಡರು. ಇದರಿಂದಾಗಿ ಯುರೋಪಿಯನ್ನರಿಗೆ ಭಾರತದಲ್ಲಿನ ಸಾಂಬಾರ ಪದಾರ್ಥಗಳು ಅವಶ್ಯಕವಾಗಿ ಬೇಕಾಗಿರುವದರಿಂದ ೧೫ನೇ ಶತಮಾನದ ಉತ್ತರಾರ್ಧದಲ್ಲಿ ಕೆಲವು ಸಾಹಸಿ ನಾವಿಕರು ದೀರ್ಘ ಪ್ರಯಾಣದ ಫಲವಾಗಿ ಪೋರ್ಚಗಲ್ ನಾವಿಕ ವಾಸ್ಕೋ-ಡ-ಗಾಮನು ಕ್ರಿ.ಶ. ೧೪೯೮ರಲ್ಲಿ ಭಾರತವನ್ನು ತಲುಪಿದನು. ಭಾರತಕ್ಕೆ ಆಗಮಿಸಿದ ಯುರೋಪಿಯನ್ನರಲ್ಲಿ ಬಹುಕಾಲ ಉಳಿದು ಭಾರತವನ್ನು ತಮ್ಮ ಪರಮಾಧಿಕಾರಕ್ಕೆ ಒಳಪಡಿಸಿಕೊಂಡು ಇಲ್ಲಿನ ಆಡಳಿತ, ಕಾನೂನು, ಶಿಕ್ಷಣ, ಸಾಮಾಜಿಕ, ಧಾರ್ಮಿಕ, ಕ್ಷೇತ್ರಗಳಲ್ಲಿ ಭಾರತೀಯರು ಅನುಸರಿಸುತ್ತಿದ್ದ ನಿಯಮಗಳನ್ನು ಸಡೀಲಗೊಳಿಸಿದರು. ಹಾಗೂ ಅವರು ಜಾರಿಗೆ ತಂದ ಇಂಗ್ಲೀಷ ಶಿಕ್ಷಣದಿಂದಾಗಿ ಮತ್ತು ಕಾನೂನುಗಳಿಂದಾಗಿ ನಮ್ಮ ಭಾರತೀಯ ಸಂಸ್ಕೃತಿಯ ದಿಕ್ಕನ್ನೇ ಬದಲಾಯಿಸಿದರು.

ಆಧುನಿಕ ಭಾರತದ ಇತಿಹಾಸದಲ್ಲಿ ೧೯ನೇ ಶತಮಾನವನ್ನು ಭಾರತೀಯ ಪುನರುಜ್ಜೀವನ ಅಥವಾ ನವೋದಯಕಾಲವೆಂದು ಕರೆಯಲಾಗಿದೆ. ಬ್ರಿಟಿಷ್ ಆಡಳಿತದಿಂದ ಉಂಟಾದ ಶಾಂತಿ ಮತ್ತು ಸುವ್ಯವಸ್ಥೆಯ ಪ್ರಭಾವ ವಿದ್ಯಾವಂತ ಭಾರತೀಯರಲ್ಲಿ ತಮ್ಮ ಆತ್ಮ ಪರೀಕ್ಷೆಗೆ ಅವಕಾಶ ಒದಗಿಸಿತು. ಇಂಗ್ಲೀಷ್ ವಿದ್ಯಾಭ್ಯಾಸದ ಮೂಲಕ ದೊರೆತ ಪಾಶ್ಚಿಮಾತ್ಯ ವೈಚಾರಿಕತೆ ಭಾರತದಲ್ಲಿದ್ದ ಸತಿ ಸಹಗಮನ ಪದ್ಧತಿ (ಕ್ರಿ.ಶ. ೧೮೨೯ರಲ್ಲಿ ವಿಲಿಯಂ ಬೆಂಟಿಂಕನು ನಿಷೇಧಿಸಿದನು) ಬಾಲ್ಯವಿವಾಹ. ವಿಧವೆಗೆ ಮರುವಿವಾಹಕ್ಕೆ ಅವಕಾಶ ಇಲ್ಲದಿರುವುದು. ಅಸ್ಪೃಶ್ಯತೆಗಳಂತಹ ಮೂಢನಂಬಿಕೆಗಳನ್ನು ಪ್ರಶ್ನಿಸಲು ಸಹಾಯವಾಯಿತು.

ಪಾಶ್ಚಿಮಾತ್ಯ ಸಂಸ್ಕೃತಿ ತರ್ಕ ಮತ್ತು ಕಾರಣಕ್ಕೆ ಪ್ರಾಥಮಿಕ ಆದ್ಯತೆ ನೀಡುವ ಮೂಲಕ ಮಾನವನ್ನು ಧರ್ಮ ಮತ್ತು ಮೂಢನಂಬಿಕೆಯಿಂದ ಬಿಡುಗೆ ಮಾಡಿತು. ಭಾರತೀಯರು ಪಾಶ್ಚಿಮಾತ್ಯ ವೈಚಾರಿಕತೆಯ ಪ್ರಜ್ಞೆಯನ್ನು ಸುಲಭವಾಗಿ ಅಳವಡಿಸಿಕೊಂಡರು. ಏಕೆಂದರೆ ವೈಚಾರಿಕತೆ ಭಾರತೀಯ ಸಂಸ್ಕೃತಿಯ ಒಂದು ಅಂಗವಾಗಿತ್ತು. ಪಾಶ್ಚಿಮಾತ್ಯ ಪರಿಕಲ್ಪನೆಯ ಪ್ರಜಾಪ್ರಭುತ್ವ, ಸ್ವಾಂತಂತ್ರ್ಯ, ಸಮಾನತೆ, ರಾಷ್ಟ್ರೀಯತೆ ಮುಂತಾದ ವಿಚಾರಗಳು ಭಾರತೀಯರನ್ನು ಎಚ್ಚರಗೊಳಿಸಿದವು. ಮೂಢನಂಬಿಕೆಯು ವಿಜ್ಞಾನಕ್ಕೆ ದಾರಿ ಮಾಡಿಕೊಟ್ಟಿತು. ಈ ಹಿನ್ನಲೆಯಲ್ಲಿ ರಾಜಾರಾಮ ಮೋಹನರಾಯ. ದಯಾನಂದ ಸರಸ್ವತಿ, ಮಾಹದೇವ ಗೋವಿಂದ ರಾನಡೆ, ಜ್ಯೋತಿಬಾಫುಲೆ, ಸ್ವಾಮಿ ವಿವೇಕಾನಂದ ಆನಿಬೆಸೆಂಟ್, ಮುಂತಾದವರು ಭಾರತದ ಸಾಮಾಜಿಕ ಹಾಗೂ ಧಾರ್ಮಿಕ ಪುನರುತ್ಥಾನಕ್ಕೆ ಶ್ರಮಿಸಿದರು. ಅಲ್ಲದೆ ಈ ಕಾಲದಲ್ಲಿ ವೃತ್ತ ಪತ್ರಿಕೆಗಳ ಬೆಳವಣಿಗೆಯಿಂದ ಸಹಾಯವಾಯಿತು. ಸತಿ ಸಹಗಮನ ಪದ್ಧತಿಯ ನಿಷೇಧದೊಂದಿಗೆ ಸ್ತ್ರೀಯರ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ಕೊಡಲಾಯಿತು. ವಿಧವಾ ಪುನರವಿವಾಹಕ್ಕೆ ಚಾಲನೆ ನೀಡಲು ನಿದರ್ಶನ ವ್ಯಕ್ತಿಗಳಾಗಿ ದೊಂಡೋ ಕೇಶವ ಕರ್ವೆ ಸಂಪ್ರದಾಯವಾದಿಗಳ ವಿರೋಧದದ ಮಧ್ಯದಲ್ಲಿ ಒಬ್ಬ ವಿಧವೆಯನ್ನು ಮದುವೆಯಾದರು. ಈ ರೀತಿಯಾಗಿ ಸಮಾಜದಲ್ಲಿರುವ ಕಟ್ಟುಪಾಡುಗಳು ಸಡೀಲಗೊಂಡವು.

ಪಾಶ್ಚಿಮಾತ್ಯ ಶಿಕ್ಷಣ, ಸಂಸ್ಕೃತಿ, ವೇಷಭೂಷಣ ಆಧುನಿಕರ ಜೀವನಕ್ಕೆ ಮಾರುಹೋದ ಭಾರತೀಯರು ಅದನ್ನು ಅನುಕರಣೆ ಮಾಡುತ್ತಿರುವುದು ಇಂದಿನ ವಾಸ್ತವಿಕ ಬದುಕಿನ ಸತ್ಯಾಂಶವಾಗಿದೆ. ಕೇವಲ ನಗರವಷ್ಟೇ ಏಕೆ, ಆಧುನಿಕ ಕಾಲದಲ್ಲಿ ಬಂದ ದೂರದರ್ಶನ, ಕಂಪ್ಯೂಟರ್, ದೂರವಾಣಿ, ಮೊಬೈಲ್, ಸಾರಿಗೆ ಸಂಪರ್ಕಗಳ ಬಳಕೆಯಿಂದಾಗಿ ಹಳ್ಳಿಯ ಬದುಕು ನಗರ ಜೀವನಕ್ಕೆ ಹತ್ತಿರವಾಗುತ್ತಿದೆ. ಹಳ್ಳಿಯ ಬದುಕಿನಲ್ಲಿಯೂ ಉಚಿತ ಮತ್ತು ಕಡ್ಡಾಯ ಶಿಕ್ಷಣದ ಸೌಲಭ್ಯ. ರಸ್ತೆಗಳ ಅಭಿವೃದ್ಧಿ ಕೃಷಿಯ ಆಧುನೀಕರಣ, ಮನೆಯಲ್ಲಿ ಅಡುಗೆ ಮಾಡಲು ಆಧುನಿಕ ಸಾಧನ ಸಲಕರಣೆಗಳ ಬಳಕೆಯೊಂದಿಗೆ ಹೊಸತನ್ನು ಗುರುತಿಸಿಕೊಂಡಿದೆ.

ಹೊಸತನ್ನು ಗುರುತಿಸಿಕೊಳ್ಳಲು ಹೊರಟಿರುವ ಹಳ್ಳಿಗರ ಬದುಕು ಅಡ್ಡಗೋಡೆಯ ಮೇಲೆ ದೀಪ ಇಟ್ಟಂತಾಗಿದೆ. ಏಕೆಂದರೆ ನಗರ ಜೀವನದಂತೆ ಬದುಕು ಸಾಗಿಸಲು ಹೊರಟಿರುವ ಇವರು ನಗರದಲ್ಲಿರುವ ಮನೆಗಳಂತೆ ಹೋಲಿಕೆ ಮಾಡಿ ಮನೆ ನಿರ್ಮಿಸುತ್ತಿರುವರು. ಆದರೆ ತಮ್ಮ ದಿನನಿತ್ಯದ ಬದುಕಿಗೆ ಬೇಕಾಗುವ ಆಹಾರ ಬೇಯಿಸಿಕೊಳ್ಳಲು ಒಲೆಗಳು ನಿರ್ಮಿಸುತ್ತಿಲ್ಲ ! ಇದಕ್ಕೆ ಕಾರಣ ಮನೆಗಳು ಹೊಗೆಯಿಂದ ಕಪ್ಪಾಗುತ್ತವೆಂದು. ಹೀಗಿರುವಾಗ ಗ್ಯಾಸ್ ಬಳಕೆ ದುಬಾರಿ ಖರ್ಚಿನದು ಮತ್ತು ಹೆಚ್ಚು ಸೌದೆ ಸಿಗುವ ಸೌಲಭ್ಯಗಳಿರುವುದರಿಂದ ಒಲೆ ಹಚ್ಚುವುದು ಅನಿವಾರ್ಯ ಮನೆ ಕಪ್ಪಾಗುತ್ತದೆ ಎನ್ನುವ ದುಗುಡ ಇನ್ನೊಂದು ಕಡೆ. ಆದರಿಂದ ತಿನ್ನುವ ಆಹಾರ ಬೇಯಿಸುವುದು ಮನೆಯ ಹೊರಗಡೆ ಸ್ಥಳದಲ್ಲಿ. ಆಹಾರ ಬೇಯಿಸುವಷ್ಟರಲ್ಲಿ ಗಾಳಿಧೂಳಿಯಿಂದಾಗಿ, ಸೊಳ್ಳೆಗಳಂತ ಕ್ರಿಮಿ ಕೀಟಗಳು ಎಷ್ಟು ಪ್ರಮಾಣದಲ್ಲಿ ಆಹಾರದಲ್ಲಿ ಸೇರುತ್ತವೆಯೋ ಅದಕ್ಕೆ ಚಿಂತಿಸುವುದಿಲ್ಲ. ಆದರೆ ತಾವು ಕಟ್ಟಿಸಿದ ಹೊಸ ಮಾದರಿಯ ಮನೆಗಳು ಮಾತ್ರ ಹೊಗೆಯಿಂದ ಕಪ್ಪಾಗಬಾರದು ಎನ್ನುವ ಮನೋಭಾವ. ಇಂತಹ ಎಷ್ಟೋ ಬದಲಾವಣೆಗಳು ಅತಂತ್ರ ಸ್ಥಿತಿಯಲ್ಲಿರುವುದು ಕಂಡು ಬರುತ್ತವೆ. ಹಳ್ಳಿಯ ಬದುಕಿನಲ್ಲಿಯೂ ಆಧುನಿಕತೆ ಎಷ್ಟರ ಮಟ್ಟಿಗೆ ಬೆಳೆದು ಬಂದಿದೆ ಎನ್ನುವುದಕ್ಕೆ ಒಂದು ನಿದರ್ಶನವೆಂದರೆ ಹುಟ್ಟುಹಬ್ಬದ ಆಚರಣೆ. ಇದು ಇತರರನ್ನು ಕಂಡು ನಾವ

ಅನುಸರಿಸುತ್ತಿರುವ ಬಹುವ್ಯಾಪಿಯಾದ 'ಬರ್ತಡೇ' ಆಚರಣೆ ಇಂದು ಜಗತ್ತಿನಾದ್ಯಂತ ಆಚರಿಸಲಾಗುತ್ತಿರುವ ಬರ್ತಡೇಗಳೆಲ್ಲ ಒಂದೇ ಥರ, ಒಂದೇ ವಿಧ. ಅದೇ ಕೇಕು, ಅದೇ ಕ್ಯಾಂಡಲ್ ಅದೇ 'ಹ್ಯಾಪಿ ಬರ್ತಡೇ ಟು ಯೂ' ಹಾಡು – ಅದೇ ಅದೇ, ಸ್ವಲ್ಪವೂ ವ್ಯತ್ಯಾಸವಿಲ್ಲ – ವೈವಿಧ್ಯವಿಲ್ಲ. ಇದೇನು ಚಂದ ? ನಮ್ಮ ಸಾಂಪ್ರದಾಯಿಕ ಹುಟ್ಟು ಹಬ್ಬಗಳಲ್ಲಿ ಪ್ರತಿ ಮನೆಯುದ್ಧಕ್ಕೂ ಒಂದೊಂದು ವಿಭಿನ್ನ ಸೊಬಗು. ವೈವಿಧ್ಯತೆಯ ಸೌಂದರ್ಯ ಅಲ್ಲಿ ಕಂಡು ಬರುತ್ತಿತ್ತು.

ಇಂದು ನಮ್ಮ ಸಂಪ್ರದಾಯಗಳನ್ನು ಕೈ ಬಿಟ್ಟುರುವುದರ ಪರಿಣಾಮವೆಂದರೆ, ಬದುಕಿನ ಜೀವಾಳವಾದ ವೈವಿಧ್ಯತೆಯ ರಸವನ್ನು ಕಳೆದುಕೊಂಡಿರುವುದು. ಎಲ್ಲಾ ಸಂದರ್ಭಗಳಲ್ಲಿಯೂ ಎಸ್.ಎಂ.ಎಸ್. ಇಲ್ಲವೆ ಇ-ಮೇಲ್ ಗ್ರೀಟಿಂಗ್ಸ್ ಯಂತ್ರಗಳನ್ನು ಆಶ್ರಯಿಸಿ ಬದುಕು ಪೂರ್ಣವಾಗಿ ಯಾಂತ್ರಿಕವಾಗುತ್ತಿದೆ.

ನಮ್ಮ ಸಂಪ್ರದಾಯದಲ್ಲಿದ್ದ ಕೆಲವು ಮಡಿ, ಮೈಲಿಗೆ, ಸೂತಕ ಮುಂತಾದ ಆಚರಣೆಗಳು ನಂಬಿಕೊಂಡು ಬಂದಿದ್ದುಂಟು. ಇವುಗಳಿಗೆ ಶುಚಿತ್ವ, ಆರೋಗ್ಯ ರಕ್ಷಣೆ, ಸೋಂಕು ನಿವಾರಣೆಗಳ ದೃಷ್ಟಿಯಿಂದ ಮಹತ್ವವಿತ್ತು. ಎಲೆ ಶಿಶುಗಳಿಗೆ ಹೊರಗಿನ ಸೋಂಕು ತಗಲದಂತೆ ನೋಡಿಕೊಳ್ಳಲ್ಗೋಸ್ಕರ 'ಮಗುಬಾಣಂತಿಯನ್ನು ಹೊರಗಿನಿಂದ ಬಂದು ಹಾಗೆ ಮುಟ್ಟಬಾರದೆಂದು ನಿಷೇಧ ಮಾಡಿದರು. 'ಶವದರ್ಶನ ಮಾಡಿ ಬಂದವರು ಸ್ನಾನ ಮಾಡದೆ ಮನೆಯೊಳಗೆ ಬರಬಾರದು' ಎಂಬ ನಿಯಮದಲ್ಲಿಯೂ ಕಾಯಿಲೆ ಕಸಾಲೆಗಳ ಸೊಂಕು ಮುಂತಾದವುಗಳನ್ನು ನಿರ್ಬಂಧಿಸುವ ತಂತ್ರವಿತ್ತು. ಇಂತಹ ಉತ್ತಮವಾದ ಜನಪದ ನಂಬಿಕೆ ಮತ್ತು ಆಚರಣೆಗಳು ನಮ್ಮ ಸ್ವೇಚ್ಛೆಯ ಬದುಕಿಗೆ ಕಡಿವಾಣ ಹಾಕಿ ಬಾಳಿಗೊಂದು ಶಿಸ್ತು, ವ್ಯವಸ್ಥೆ, ಸೌಂದರ್ಯ ತರಬಲ್ಲವು. ಅರ್ಥವಿಲ್ಲದ ಮೂಢನಂಬಿಕೆಗಳು ನಮ್ಮ ಬದುಕಿಗೆ ಮಾರಕ. ಆದ್ದರಿಂದ ನಾವು ಹಂಸಕ್ಷೀರ ನ್ಯಾಯದಂತೆ, ನೀರನ್ನು ಗುರುತಿಸಿ ಪ್ರತ್ಯೇಕಿಸಿಕೊಂಡು ಅವುಗಳ ಮೌಲ್ಯವನ್ನು ಮುಂದುವರೆಸಿಕೊಂಡು ಹೋಗಬೇಕಾಗಿದೆ.

ನಂಬಿಕೆಗಳು ಬಂಗಾರದ ಗಟ್ಟಿಗಳು ಎನ್ನುವ ವಿವೇಕಾನಂದರ ಹೇಳಿಕೆಗಳು ನಂಬಿಕೆಗಳ ಮಹತ್ವವನ್ನು ಎತ್ತಿ ತೋರಿಸುತ್ತವೆ. ದೇಹದಲ್ಲಿ ಪ್ರಾಣ ಇರುವವರೆಗೂ ಉಸಿರಾಟ ಕ್ರಿಯೆ ನಡೆದಿರುತ್ತದೆಯೋ ಹಾಗೆಯೇ ನಂಬಿಕೆಗಳು ಕೂಡಾ ಸಮಾಜ ಭೂಮಿ ಇರುವವರೆಗೂ ಇರುವಂತಹವು. ನಮ್ಮ ಬದುಕಿಗೆ ಭದ್ರ ಬುನಾದಿ ಒದಗಿಸುತ್ತವೆ. ಮೂಲತಃ ಬದುಕಿನ ಬಗ್ಗೆ ಮತ್ತು ನನ್ನ ಬಗ್ಗೆ ನನಗೆ ನಂಬಿಕೆಯಿರದಿದ್ದರೆ ಜೀವನ ಬರಡಾದೀತು. ಅರ್ಥಹೀನವಾದೀತು. ನಂಬಿಕೆಟ್ಟುವರಿಲ್ಲವೋ ? ಎನ್ನುವಂತೆ.

ನಂಬಿಕೆಗಳು ಸಾರ್ವತ್ರಿಕ, ಸರ್ವಕಾಲಿಕವಾದವು ತಂದೆ-ಮಕ್ಕಳಲ್ಲಿ, ಮಕ್ಕಳು-ತಂದೆಯಲ್ಲಿ, ಅಕ್ಕ-ತಂಗಿಯರಲ್ಲಿ, ಅಣ್ಣ-ತಮ್ಮಂದಿರಲ್ಲಿ, ಪ್ರಾಣಿ-ಪಕ್ಷಿಗಳಲ್ಲಿ, ಆಳು-ಒಡೆಯನಲ್ಲಿ, ಗುಮಾಸ್ತ-ಅಧಿಕಾರಿಯಲ್ಲಿ ಮಾನವ-ಪ್ರಕೃತಿಯಲ್ಲಿ, ಸಾಕುಪ್ರಾಣಿ-ಯಜಮಾನನಲ್ಲಿ, ಧರ್ಮ-ಅನ್ಯಧರ್ಮಗಳಲ್ಲಿ, ಕಾಲಮಾನ-ಪ್ರದೇಶಗಳಲ್ಲಿ ನಂಬಿಕೆ ಎನ್ನುವ ಸಂಕೋಲೆ ವಿಸ್ತ್ರತವಾಗಿ ಆತ್ಮ ವಿಶ್ವಾಸವನ್ನು ಗಟ್ಟಿಗೊಳಿಸುತ್ತವೆ. ವಿಚಾರ ಶಕ್ತಿಯನ್ನು ಹೊಂದಿರುವ ಮಾನವ ಇತರರ ಮೇಲಿಟ್ಟ ನಂಬಿಕೆ ಕಳೆದುಕೊಳ್ಳಬಹುದು. ಆದರೆ ವಿಚಾರ ಶಕ್ತಿಯನ್ನೇ ಹೊಂದಿರದ ಪ್ರಾಣಿ-ಪಕ್ಷಿಗಳೂ ನಂಬಿಕೆಯನ್ನು ಸುಳ್ಳಾಗಿಸುವುದಿಲ್ಲ. 'ಸೋಮನಗೌಡರ ನಾಯಿ' ಎನ್ನುವ

ಕಥೆಯಲ್ಲಿ ಬರುವ ಗೌಡರ ನಾಯಿ ಸದಾ ಮನೆಯ ಕಾವಲಾಗಿದ್ದು ಕಳ್ಳತನ ಆಗುವುದನ್ನು ತಪ್ಪಿಸಿ ತನ್ನ ಯಜಮಾನನಿಂದ ವಿಶ್ವಾಸ, ನಂಬಿಕೆ ಹೆಚ್ಚಿಸಿಕೊಂಡಿತು. ಅದರಂತೆ ಪೋಲಿಸರ ನಾಯಿಗಳೂ ಕೂಡಾ ನಂಬಿಕೆಗೆ ಪಾತ್ರವಾಗಿವೆ. ಮತ್ತು ರೈತನು ಸಾಕಿದ ದನಕರುಗಳು ಕೂಡಾ ಸಂಜೆ ವೇಳೆಗೆ ತನ್ನ ಮಾಲೀಕನ ಮನೆಯನ್ನೇ ಹುಡುಕಿಕೊಂಡು ನೇರವಾಗಿ ಬಂದು ಬಿಡುತ್ತವೆ. ಹಾಲು ಉಣಿಸುವ ಎಮ್ಮೆ, ಆಕಳು ಸಹಿತ ತಮ್ಮ ಕರಳುಬಳ್ಳಿಯ ಎಳೆಗರುಗಳಿಗೆ ಹಾಲು ಉಣಿಸುತ್ತವೆ ವಿನಹ ಮತ್ತೊಂದಕ್ಕಲ್ಲ. ಹಾಗೆಯೇ ತಮ್ಮ ಯಜಮಾನನ್ನು ಗುರುತಿಸುವುದು. ಎಲ್ಲಾ ಜೀವಿಗಳ ಅಸ್ತಿತ್ವದಲ್ಲಿ ನಂಬಿಕೆಗಳು ಸ್ನೇಹ, ಶಿಸ್ತು, ಕ್ರಮಬದ್ಧತೆ, ಆತ್ಮವಿಶ್ವಾಸ, ಸಮಯಪ್ರಜ್ಞೆ, ಅಹಿಂಸೆ, ತ್ಯಾಗ, ಸತ್ಯ, ಪ್ರಾಮಾಣಿಕ, ಕರುಣೆ, ಅನುಕಂಪ ಮುಂತಾದ ಗುಣಗಳು ಬೆಳೆಸುತ್ತವೆ.

ವಿಜ್ಞಾನದ ನಂಬಿಕೆ, ಒಬ್ಬ ವ್ಯಕ್ತಿಯ ಅಥವಾ ಗ್ರಂಥದ ಬಗೆಗಿನ ನಂಬಿಕೆಗಿಂತ ಗುಣಾತ್ಮಕವಾಗಿವೆ. ಆದರೆ ಸ್ವತ ವಿಜ್ಞಾನವಾದರೂ ನಂಬಿಕೆಯ ಆಧಾರದ ಮೇಲೆ ತನ್ನ ಶೋಧನೆಗಳನ್ನು ಮುಂದುವರಿಸಿದೆ.

"ದೇವರು ಎಂದೂ ಕುಹಕಿ ಅಲ್ಲ ಅಥಪಾ ಮಾನವನೊಂದಿಗೆ ಭಗವಂತ ಕಪಟದ್ಯೂತ ಆಡುವುದಿಲ್ಲ" [೧೬] ಇದು ಐನ್ ಸ್ಟೈನರು ಹೇಳಿರುವ ಪ್ರಸಿದ್ಧ ಉಕ್ತಿಗಳಲ್ಲಿ ಒಂದು. 'ದೇವರು' ಮತ್ತು 'ಭಗವಂತ' ನಿಸರ್ಗ ಪ್ರತೀಕಿಸುತ್ತವೆ. ವಿಜ್ಞಾನ ನಿಸರ್ಗ ಜೊತೆ ಮಾನವ ಆಡುವ ಆಟ ಎಂದು ಹೇಳಲಾಗಿದೆ. ಇದರಲ್ಲಿ ನಿಸರ್ಗವೆಂದೂ ಪಕ್ಷಪಾತ ಧೋರಣೆ ತಳೆಯದು ಅಥವಾ ವಂಚನೆ ಮಾಡದು. ತನ್ನ ರಹಸ್ಯಗಳನ್ನು ಮಾನವರಿಗೆ ತಿಳಿಯಪಡಿಸಬೇಕೆಂಬ 'ಸದ್ಬುದ್ದಿ'ಯಾಗಲಿ ತಿಳಿಯಪಡಿಸಬಾರದೆಂಬ 'ದುರ್ಬುದ್ದಿ'ಯಾಗಲಿ ಅದಕ್ಕಿಲ್ಲ.

ಉಪನಿಷತ್ತುಗಳು ವೈದಿಕ ಸಾಹಿತ್ಯದ 'ಕೆನೆ'. 'ಸತ್ಯಮೇವ ಜಯತೆ' ಮುಂಡಕೋಪ ನಿಷತ್ತಿನಲ್ಲಿ ಬರುವ ವಾಕ್ಯ. ಇವು ಪ್ರಾಚೀನ ಕಾಲದ ಸ್ಥಿತಿಯನ್ನು ಹೇಳುವ ಉಕ್ತಿಗಳಾದರೂ ನಮ್ಮ ರಾಷ್ಟ್ರ ಲಾಂಛನದಲ್ಲಿ 'ಸತ್ಯ ಮೇವ ಜಯತೆ' ಎನ್ನುವುದು ವ್ಯಕ್ತವಾಗಿದೆ. ತ್ಯಾಗ, ಅಹಿಂಸೆ, ಸತ್ಯ, ಧರ್ಮಗಳ ಪ್ರತೀಕವಾಗಿ ನಂಬಿಕೊಂಡು ಬಂದ ಅಶೋಕ ಚಕ್ರವು ರಾಷ್ಟ್ರದ ಬಾವುಟದಲ್ಲಿ ಎತ್ತರಕ್ಕೆ ಹಾರುತ್ತಿದೆ. ಅಂದಾಗ ಹಿಂದಿನಿಂದಲೂ ಧರ್ಮದ ಪಥದಲ್ಲಿ ಚಲಿಸುತ್ತಾ ಬಂದ ನಂಬಿಕೆಗಳು ಯಾವುದಕ್ಕೂ ಕಡಿಮೆಯಿಲ್ಲ. ವೇದ ಉಪನಿಷತ್ತುಗಳಲ್ಲಿ ಬರೆಯದೇ ಇರುವ ಜನಪದ ನಂಬಿಕೆಗಳು ಮೌಖಿಕವಾಗಿ ಆಚರಿಸುತ್ತಾ ಬಂದಿರುವರು. ಅವುಗಳು ಇಂದಿಗೂ ಉಳಿದು ಬರಬೇಕಾದರೆ ಪ್ರಾಚೀನರು ಪಟ್ಟ ಶ್ರಮ ಶ್ರದ್ಧೆಗಳನ್ನು ಗೌರವಿಸಲ್ಪಡಬೇಕಾದವುಗಳೇ ಪ್ರಾಚೀನತೆಯಿಂದ ಇಂದಿನವರೆಗೂ ರೂಢಿಯಲ್ಲಿ ಬಂದಿರುವ ನಂಬಿಕೆಗಳನ್ನು ಕಾಯ್ದುಕೊಂಡ ಪರಂಪರೆ ಜಗತ್ತಿನ ಎಲ್ಲಾ ಕಡೆ ಕಂಡು ಬರುತ್ತವೆ. ಆದ್ದರಿಂದಲೇ ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎನ್ನುವ ಮಾತು ಪ್ರಚಲಿತವಿದೆ. ಕೈಗಾರಿಕೀಕರಣ, ಆಧುನೀಕರಣ, ಶಿಕ್ಷಣ ಹಾಗೂ ವೈಜ್ಞಾನಿಕತೆಯ ಹೊಸ ಚಿಗುರಿನಲ್ಲಿ ಹಳೆಯ ಸಂಪ್ರದಾಯಗಳ ಎಲೆ ಉದರಿದರೂ, ನಂಬಿಕೆ ಮತ್ತು ಆಚರಣೆಗಳ ಬೇರು ಭೂಮಿಯ ಆಳಕ್ಕೆ ಇಳಿದಿವೆ; ಆಲದ ಮರದ ಬೇರಿನಂತೆ !

---

೧೬ (ಅಡಿಟಿಪ್ಪಣಿ: ೧೬ ಭವಿಷ್ಯವಾಚನ, ಲೇಖಕರು– ಜಿ.ಟಿ.ನಾರಾಯಣರಾವ್ ಪುಟ ಸಂಖ್ಯೆ ೩೨)

# ಅಧ್ಯಾಯ-೩

## ಆಚರಣೆಗಳು

### ಭಾಗ-೧ : ಧರ್ಮ-ದೇವರು

**ಪ್ರಸ್ತಾವನೆ:**

ಜನಪದವೆಂಬ ಬಂಡಿಯ ಚಕ್ರವೇ ಆಚರಣೆ. ಚಕ್ರ ಇರದಿದ್ದರೆ ಬಂಡಿ ಅಲ್ಲಿಯೇ ನಿಲ್ಲುತ್ತದೆ. ಬಂಡಿ ಸುಲಭವಾಗಿ ಚಲಿಸಲು ತನ್ನ ಕಾರ್ಯ ನಿರ್ವಹಿಸಲು ಚಕ್ರ ಬೇಕೆ ಬೇಕು. ಜನಪದ ಸಂಸ್ಕೃತಿಯ ಆ ಚಕ್ರಕ್ಕೆ ನಂಬಿಕೆಯೆನ್ನುವ ಕಡೇಗೀಲು ಇದೆ. ಕಡೇಗೀಲು ಇರದೆ ಚಕ್ರ ಮುಂದೆ ಸಾಗಲಾರದು. ಕಡೆಗೀಲು ಮತ್ತು ಚಕ್ರ ಎರಡು ಇದ್ದಾಗ ಬಂಡಿ ಕೆಲಸ ಸಾಗಿಸಬಲ್ಲದು. ಆಚರಣೆಗಳು ಒಂದು ನಿರ್ದಿಷ್ಟ ಸಮಯದಲ್ಲಿ ವ್ಯಕ್ತಿಯಿಂದ ಆರಂಭಗೊಂಡಿರುತ್ತವೆ. ವ್ಯಕ್ತಿಯಿಂದ ಇತರರು ಒಳಗೊಂಡು ತನ್ನ ಸುತ್ತಲಿನ ಸಮಾಜ ಕಾಲಾನುಕ್ರಮದಲ್ಲಿ ಪಾಲಿಸಿಕೊಂಡು ಬಂದ ವ್ಯವಸ್ಥೆಯು ಸಂಪ್ರದಾಯ ಒಪ್ಪಿಕೊಂಡ ಕ್ರಮಗಳೇ ಆಚರಣೆಗಳು. ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಮುಂತಾದ ಚಟುವಟಿಕೆಗಳು ಒಳಗೊಂಡಿರುತ್ತವೆ. ನಂಬಿಕೆಯ ಸಿದ್ಧಾಂತ ಆಚರಣೆಯನ್ನು ಮುಂದುವರೆಸಿಕೊಂಡು ಹೋಗುವಂತೆ ಮಾಡುತ್ತದೆ. ಆಚರಣೆಯ ಹಿಂದೆ ಮುಂದೆ ಹುಟ್ಟಿದ ಪುರಾಣ, ಕತೆ ಮರೆಯಬಹುದು. ಆದರೆ ಆಚರಣೆಗಳು ಮಾತ್ರ ಯಾವಾಗಲೂ 'ನವನವೊನ್ಮೇಷ ಶಾಲಿನಿ ಯಾಗಿರುತ್ತವೆ. ದ.ರಾ.ಬೇಂದ್ರೆಯವರು ಹೇಳಿರುವ 'ಯುಗಾದಿ' ಪದ್ಯದಲ್ಲಿ ಯುಗ ಯುಗಾದಿ ಕಳೆದರೂ ಯುಗಾದಿ ಮರಳಿ ಬರುತ್ತಿದೆ. ಹಾಗೂ 'ನಿದ್ದೆಗೆಮ್ಮೆ ನಿತ್ಯ ಮರಣ ಎದ್ದ ಸಲ ನವೀನ ಜನನ' ಎನ್ನುವ ಸಾಲಿನಲ್ಲಿ ಪ್ರತಿ ವರ್ಷ ಆಚರಿಸಿದಂತಹ ಆಚರಣೆಗಳಾದರೂ ಒಂದಲ್ಲಾ ಒಂದು ರೀತಿಯಲ್ಲಿ ಹೊಸತನ್ನು ಕಾಣುತ್ತೇವೆ.

"ಪುನರಾವರ್ತನೆ ಮತ್ತು ಸಾಮೂಹಿಕ ವೀಕ್ಷಣೆಯಿಂದ ಸಾಂಪ್ರದಾಯಿಕವಾಗಿ ಒಪ್ಪಿತವಾಗಿರುವ ಭೂತ, ವರ್ತಮಾನ, ಭವಿಷ್ಯ ಕಾಲಗಳಿಗೆ ಸಂಬಂಧಿಸಿದಂತೆ ಕಾರ್ಯ-ಕಾರಣ ಸಂಬಂಧವನ್ನು ಸೂಚಿಸುವ ಕಲ್ಪನೆಯನ್ನೇ ನಂಬಿಕೆ"[೧೭] ಎಂದು ಲೇಖಕರಾದ ಸಿದ್ಧಲಿಂಗಯ್ಯನವರ ಅಭಿಪ್ರಾಯ.

ಜನಪದ ನಂಬಿಕೆ ಮತ್ತು ಆಚರಣೆಗಳು ತಾತ್ವಿಕ ಚಿಂತನದ ಮೂಲಕ ಬರವಣಿಗೆಯ ಆಕಾರ ಪಡೆದವು ಅಲ್ಲ. ಅಲೌಕಿಕ ಜೀವಿಗಳ ಆರಾಧನೆ ಹಾಗೂ ಅನೇಕ ಬಗೆಯ ಧಾರ್ಮಿಕ ನಂಬಿಕೆಗಳಿಂದ ಕೂಡಿವೆ. ಪ್ರಪಂಚದ ಪ್ರತಿಯೊಂದು ಸಮಾಜವು ಅನಾದಿಕಾಲದಿಂದ ತನ್ನದೇ ಆದ ನಂಬಿಕೆಗಳನ್ನು ಆಚರಣೆಯಲ್ಲಿಟ್ಟುಕೊಂಡು ಬಂದಿದೆ. ಕಾಲ ದೇಶಗಳಿಗೆ ಅನುಗುಣವಾಗಿ ಇವು ಬದಲಾಗುತ್ತಲೂ ಇರುತ್ತವೆ. ಇಂತಹ ನಂಬಿಕೆಗಳಲ್ಲಿ ಹಾಗೂ ಉತ್ಕಟವಾದ ಆಶಾಪೂರ್ಣ ಹಾರೈಕೆಗಳಲ್ಲಿ ಎಷ್ಟೋ ಆ ಸಮಾಜದ ಸಂಸ್ಕೃತಿ ಮತ್ತು ನಾಗರಿಕತೆಗಳ ಬೆಳವಣಿಗೆಗೆ ರೂಪು ಕೊಡುತ್ತವೆ. ನಾಗರಿಕತೆಗಳು ಬೆಳೆದಂತೆ ನಗರ ಮತ್ತು ರಾಜ್ಯ ನಿರ್ಮಿಸಿ, ಆಡಳಿತ ರಾಜಕೀಯ ಜೀವನದೊಂದಿಗೆ ಧಾರ್ಮಿಕ ಸಾಮಾಜಿಕ ಸಾಂಸ್ಕೃತಿಕ ಕ್ಷೇತ್ರಗಳು ಬೆಳೆದು ಬಂದವು. ಅದರಲ್ಲಿ ಧಾರ್ಮಿಕ ವಿಷಯಗಳನ್ನೊಳಗೊಂಡಂತೆ ಕ್ಲಿಷ್ಟತೆಯನ್ನು ಸಡಿಲಗೊಳಿಸಲು ಅನೇಕ ಧರ್ಮಗಳು ಉದಯಿಸಿದವು.

---

೧೭ (ಅಡಿಟಿಪ್ಪಣಿ ೧೭: ಗ್ರಾಮದೇವತೆಗಳು, ಲೇಖಕರು ಸಿದ್ಧಲಿಂಗಯ್ಯ ಪುಟ ಸಂಖ್ಯೆ-೭೦)

ಒಂದು ನಿರ್ದಿಷ್ಟ ನಂಬಿಕೆ ಮತ್ತು ಆಚರಣೆಗಳಿಗೆ ವ್ಯಕ್ತಿಗತವಾಗಿ ಅಥವಾ ಸಮುದಾಯಿಕವಾಗಿ ಬದ್ಧವಾದಾಗ; ವ್ಯಕ್ತಿ ತನ್ನ ಸ್ವಂತ ಬದುಕನ್ನು ಹೇಗೆ ನಡೆಸುತ್ತಾನೆ. ಅಥವಾ ಒಂದು ನಿರ್ದಿಷ್ಟ ಬದ್ಧತೆಯ ಬೆಳಕಿನಲ್ಲಿ ಸ್ವಂತ ಬದುಕು ಹೇಗೆ ನಡೆಯುತ್ತದೆ ಎನ್ನುವುದು ಮುಖ್ಯ. ಜನಪದ ಭಾಷೆಯಲ್ಲಿ ಹೇಳಬೇಕೆಂದರೆ ಜೀವನ ವಿಧಾನ ಎನ್ನುವುದು ವ್ಯಕ್ತಿಯೊಬ್ಬನ ವೈಯಕ್ತಿಕ ಧರ್ಮವಾಗುತ್ತದೆ. 'ನಂಬಿಕೆ' ಎನ್ನುವ ಆಲೋಚನೆಯನ್ನು ಧರ್ಮ ವ್ಯಕ್ತಿಗತವಾಗಿ ಒಪ್ಪಿಕೊಳ್ಳಬೇಕಾಗುತ್ತದೆ. ನೈತಿಕ, ಆಧ್ಯಾತ್ಮಿಕ ಮತ್ತು ಸಾಮಾಜಿಕ ಮೌಲ್ಯಗಳನ್ನು ವ್ಯಕ್ತಿಯ ನಂಬಿಕೆಗಳ ಮೂಲಕ ಧರ್ಮ ಸಂರಕ್ಷಿಸುತ್ತದೆ.

**ಧರ್ಮ :**

ಧರ್ಮದ ಚೌಕಟ್ಟಿನಲ್ಲಿ ಪ್ರತಿಯೊಬ್ಬ ವ್ಯಕ್ತಿ ಒಳಿತು – ಕೆಡಕನ್ನು ಗುರುತಿಸಿ ತನ್ನ ಪಂಚೇಂದ್ರಿಯಗಳನ್ನು ನಿಗ್ರಹಿಸಿಕೊಂಡು ಒಳ್ಳೆ ಗುಣ, ಕಾರ್ಯ, ಸಹಕಾರ, ತ್ಯಾಗ, ಕರುಣೆ ರೂಢಿಸಿಕೊಂಡು ಬರುವಂತೆ ಪ್ರಚೋದಿಸುವ ಮಾರ್ಗವಾಗಿದೆ. "ಸಕಲ ಜೀವಿಗಳಿಗೂ ಹಿತವೆನಿಸುವ ಸಾರ್ವತ್ರಿಕವಾದ ಒಂದು ನಿಯಮವನ್ನು ಧರ್ಮ ಎಂದೊಪ್ಪಿರುವುದು ಕಾಣುತ್ತದೆ. ಕರ್ತವ್ಯಗಳು ಗುಣಗಳು, ಮಾನವನನ್ನು ಪರಿಪೂರ್ಣತ್ವಕ್ಕೇರಿಸುವಂಥದ್ದು"[೧೮] ಎನಿಸುತ್ತದೆ. ಬದುಕಿನ ಪುರುಷಾರ್ಥಗಳಿಗೆ ಆಧಾರ ಭೂತವಾದುದು ಧರ್ಮ. ಧರ್ಮಾಧಾರಿತವಾಗಿ ಅರ್ಥ ಕಾಮಗಳನ್ನು ನಿಯಂತ್ರಿಸುತ್ತದೆ.

'ಧರ್ಮ' ಎನ್ನುವುದು ಜಗತ್ತಿನಲ್ಲಿ ಅತ್ಯಂತ ಚರ್ಚೆಗೆ ಈಡಾದ ಅತ್ಯಂತ ಹೆಚ್ಚು ತಪ್ಪು ಕಲ್ಪನೆಗೆ ಒಳಗಾದ ಪದವಿದು. ಅದ್ಭುತ ನಾಗರಿಕತೆಗಳ ಉದಯಕ್ಕೂ ಅನಾಗರಿಕ ಮಾರಣಹೋಮ ಹತ್ಯೆಗಳಿಗೂ ಕಾರಣವಾದ ವಿಷಯವಿದು. ಅತಿ ಹೆಚ್ಚಿನ ಜನರಿಂದ ವ್ಯಾಖ್ಯಾನಿಸಲ್ಪಟ್ಟು ನಂಬಲ್ಪಟ್ಟರೂ ಅತಿ ಕಡಿಮೆ ಜನರಿಂದ ಪಾಲಿಸಲ್ಪಟ್ಟ ತತ್ವವಿದು. ಸಮಸ್ತ ಪ್ರಪಂಚದ ಹಿತಕ್ಕಾಗಿ ಯಾವುದು ಧಾರಣೆ ಮಾಡಲ್ಪಡುತ್ತವೆಯೋ ಅಂತಹ ಮೌಲ್ಯಗಳು ಧರ್ಮವೆಂದು ಕರೆಯಲ್ಪಟ್ಟಿವೆ. ಆದ್ದರಿಂದ ಈ ನಿಯಮಗಳನ್ನು ಮೀರಿ ಹಣ ಸಂಪಾದನೆಯಾಗಲಿ, ಬಯಕೆಗಳ ಪೂರೈಕೆಯನ್ನಾಗಲಿ (ಕಾಮ) ಮಾಡಕೂಡದು ಎಂದು ವಿಧಿಸಲ್ಪಟ್ಟಿದೆ. ಏಕೆಂದರೆ ಕೊನೆಯದಾಗಿ ಮೋಕ್ಷ (ಭವಬಂಧನದಿಂದ ಬಿಡುಗಡೆ) ಎಂಬುವುದು ಇರುವುದರಿಂದ ಅದನ್ನು ಸಾಧಿಸಲು ಧರ್ಮಾಧಾರಿತವಾದ ಹಣ ಸಂಪಾದನೆ ಮತ್ತು ಬಯಕೆಗಳ ಪೂರೈಕೆ ಮಾಡಬೇಕು.

'ಧರ್ಮೋ ರಕ್ಷತಿ ರಕ್ಷಿತಃ ಎನ್ನುವುದು ಧರ್ಮವನ್ನು ನಾವು ರಕ್ಷಿಸಿದರೆ; ನಮ್ಮನ್ನು ಧರ್ಮ ರಕ್ಷಿಸುತ್ತದೆ. ಅನಾದಿಯಾದ ಈ ಜೀವನ ಪ್ರವಾಹ ಅತ್ಯಂತ ಉದಾರವಾದ 'ಸನಾತನ' ಧರ್ಮವಾಗಿದೆ. ಧರ್ಮ ಪ್ರಭುತ್ವ ಮತ್ತು ವಿಜ್ಞಾನ ಮೂರು ಮಾನವಮತಿಯ ಸೃಷ್ಟಿಗಳು. ಇವು ಬದುಕಿನ ಸಮಸ್ತ ಸ್ತರಗಳನ್ನು ನಿಯಂತ್ರಿಸುತ್ತವೆ ಮತ್ತು ವಿಲೋಮವಾಗಿ ಅವುಗಳಿಂದ ನಿಯಂತ್ರಿಸಲ್ಪಡುತ್ತವೆ; ಅಲ್ಲದೆ ನಾಗರಿಕತೆಯ ಗತಿಯನ್ನು ನಿರ್ದೇಶಿಸುತ್ತವೆ ಕೂಡ. ಇವು ಪರಸ್ಪರ ಪೂರಕ ಮತ್ತು ಪೋಷಕ ಆಗಿದ್ದರೆ ಜೀವನ ವರ್ಧಿಸುತ್ತದೆ. ಆದರೆ ಐತಿಹಾಸಿಕವಾಗಿ ಹೇಳುವುದಾದರೆ ಇದೊಂದು ದಿವ್ಯಾದರ್ಶನ ಸನ್ನಿವೇಶ. ಧರ್ಮ ಹುಟ್ಟುಹಾಕುವ 'ನಂಬಿಕೆ' ಯ ಸ್ಥಾನಕ್ಕೆ 'ಪ್ರಜ್ಞೆ'ಯನ್ನು 'ಭಕ್ತಿ'ಯ ಸ್ಥಾನಕ್ಕೆ 'ಕರುಣೆ'ಯನ್ನು 'ಭಯ'ದ ಸ್ಥಾನಕ್ಕೆ 'ಕ್ರಿಯಾಶೀಲತೆಯನ್ನು ಮುಕ್ತ ವಿಚಾರ: ಅಥವಾ ಬಂಡಾಯ ತೆರೆಯುತ್ತದೆ. ಇದು ಉತ್ತಮ ಸಮಾಜ ರೂಪಗೊಳ್ಳಲು ಕಾರಣವಾಗುತ್ತದೆ.

---

೧೮. (ಅಡಿ ಟಿಪ್ಪಣಿ:೧೮ ಹಿಂದೂ ಧರ್ಮ ನಂಬಿಕೆ ಮತ್ತು ನಡವಳಿಕೆ. ಲೇಖಕರು ಅವಿನಾಶ ಕೊಡೆಂಕಿರಿ ಪುಟ ಸಂಖ್ಯೆ ೨)

ಬಸವಣ್ಣನವರು ಹೇಳಿದ ದಯವೇ ಧರ್ಮದ ಮೂಲವಯ್ಯ ಎಂಬ ನುಡಿ ಸಾರ್ಥಕವಾಗಬೇಕು. 'ಮನುಷ್ಯ ಜಾತಿ ತಾನೊಂದೆವಲಂ' ಎಂಬ ನಾಡೋಜ ಪಂಪನ ಉಕ್ತಿಗೆ ಶಕ್ತಿ ಬರಬೇಕು. ಪ್ರೀತಿ, ದಯೆ, ಸಮಾನತೆ, ಸೋದರತೆ ನಮ್ಮ ನಡವಳಿಕೆಯಲ್ಲಿ ಮೂರ್ತವಾಗಬೇಕು. ಅಂದರೆ ಮಾತ್ರ ಧರ್ಮದ ಅರ್ಥ ಸಾರ್ಥಕವಾಗುತ್ತದೆ. ಅದಿಲ್ಲದಿದ್ದರೆ ಧರ್ಮದ ಮುಖಾಂತರ ನಾವು ದೇವರ ಮನೆಗೆ ಹೋಗುವ ಬದಲು ದೈತ್ಯದ ಮನೆಗೆ ಹೊಗುತ್ತೇವೆ.

ಈ ಹೊತ್ತು ಸುಸಂಸ್ಕೃತವೆನಿಸಿ ಮೆರೆಯುತ್ತಿರುವ ಮಾನವ ಜನಾಂಗಗಳಲ್ಲಿ ಅಂತರಂಗ ಪ್ರವೃತ್ತಿ ಪರವಾದ ಧಾರ್ಮಿಕ ಚಟುವಟಿಕೆಗಳು ಅದೃಶ್ಯವಾಗಿವೆ. ಆಧುನಿಕರಲ್ಲಿ ಹೆಚ್ಚಿನವರಿಗೆ ಧಾರ್ಮಿಕ ಜೀವನದಲ್ಲಿ ಆಸಕ್ತಿ ಇಲ್ಲ. ನೈತಿಕ ಭಾವನೆಗಳಿಗೆ ಕೊಡುವಷ್ಟಾದರೂ ಮಹತ್ವವನ್ನು ಧಾರ್ಮಿಕ ಚಟುವಟಿಕೆ ಅಥವಾ ಮತ ಸಂಬಂಧವಾದ ಮೂಲಭಾವನೆಗಳಿಗೆ ನಾವು ಕೊಡುತ್ತಾ ಇಲ್ಲ. ಯುಗ ಯುಗಾಂತರಗಳಿಂದ ಧರ್ಮ ಪ್ರವೃತ್ತಿಯೂ ಧರ್ಮಸ್ಫೂರ್ತಿಯೂ ಮಾನವ ಜೀವನವನ್ನು ವಿಕ್ಷಿಸುತ್ತಾ ಬಂದಿದೆ. ಈ ಹಿಂದಿನ ಶತಮಾನಗಳಲ್ಲಿ ಧರ್ಮವು ಕುಟುಂಬ ಜೀವನಕ್ಕೂ ಗುಂಪುಗಳ ಜೀವನಕ್ಕೂ ತನ್ಮೂಲಕ ಸಮಾಜ ಜೀವನಕ್ಕೂ ತಳಹದಿಯಾಗಿತ್ತು.

**ಧರ್ಮದ ಮುಖಗಳು ಎರಡು ೧) ಆಚರಣೆ ಪ್ರಧಾನ ೨) ತತ್ವ ಪ್ರಧಾನ.**

ಧರ್ಮ ಒಂದು ಮನೋದೈಹಿಕ – ನೈಸರ್ಗಿಕ ಸಂಬಂಧ. ಪ್ರಾಯಶಃ ಮಾನವಗತಿ ವಿಜ್ಞಾನದಲ್ಲಿ ಅನಿವಾರ್ಯ. ಈ ಕಲ್ಪನೆಯ ಅನೇಕ ರೂಪಗಳಾಗಿ ಧ್ಯಾನ, ಪೂಜೆ, ಪ್ರಾರ್ಥನೆ, ಭಜನೆ ಮುಂತಾದವುಗಳನ್ನು ಒಟ್ಟಿಗೆ ಧರ್ಮ ಎನಿಸುತ್ತದೆ. ವ್ಯಕ್ತಿ–ವ್ಯಕ್ತಿ, ವ್ಯಕ್ತಿ–ಸಮಾಜ, ಸಮಾಜ–ವ್ಯಕ್ತಿ ಮತ್ತು ನಿಸರ್ಗ–ವ್ಯಕ್ತಿ ಕುರಿತಂತೆ ಭಾವನಾತ್ಮಕ ಸಂಬಂಧಗಳನ್ನು ನಿಯಂತ್ರಿಸುವ ಬಲವೆ ಧರ್ಮ. ಧರ್ಮದ ತಳಹದಿ ಶ್ರದ್ಧೆ ಅಥವಾ ನಂಬಿಕೆ, ಋಷಿ, ಸಂತ, ಪ್ರವಾದಿ, ದೇವಮಾನವ ಮೊದಲಾದವರಲ್ಲಿ ಅಚಲ ಶ್ರದ್ಧೆ, ಪ್ರಾಚೀನ ಧರ್ಮ ಗ್ರಂಥಗಳಲ್ಲಿ ಅಪಾರ ಶ್ರದ್ಧೆ ಪರಂಪರೆ ಒಯ್ದು ತಂದಿರುವ ವಿಧಿ ನಿಷೇಧ ಮತ್ತು ವಿಧಾನಗಳಲ್ಲಿ ದೃಢ ಶ್ರದ್ಧೆ ಮುಂತಾದವು ಇದರಲ್ಲಿ ನಿಹಿತವಾಗಿವೆ.

ಬಾಯಿಂದ ಹೇಳುವುದು ಧರ್ಮವಲ್ಲ ನಡೆಯುವುದು ಧರ್ಮ ನಮ್ಮದು ಮಾನವ ಧರ್ಮವಾಗಬೇಕು. ವಿಶ್ವಧರ್ಮವಾಗಬೇಕು. ಅದು ನಮ್ಮ ದಿನ ನಿತ್ಯದ ನಡತೆಯಲ್ಲಿ ಮನುಷ್ಯ ಮಾತ್ರರೆಲ್ಲರನ್ನು ಹೃದಯದಿಂದ ಸ್ಪರ್ಶಿಸಬೇಕು. ಸ್ವಾತಂತ್ರ್ಯ ಸಮಾನತೆ ಸೋದರತೆಯು ಇಂದಿನ ಧರ್ಮವಾಗಬೇಕು. ಸತ್ಯ, ದಯೆ, ಅಹಿಂಸೆ ಆತ್ಮ ವಿಮರ್ಶೆ ಮುಂತಾದ ಮೌಲ್ಯಗಳು ಒಳಗೊಂಡಿರುವುದು ಧರ್ಮ. ಇಂತಹ ಧರ್ಮಗಳನ್ನು ಅನುಸರಿಸಿಕೊಂಡು ಬರುವಂತೆ ಸಂವಿಧಾನದ ಧಾರ್ಮಿಕ ಹಕ್ಕು ಮೂಲಭೂತ ಹಕ್ಕು ಎಂದು ಪರಿಗಣಿತವಾಗಿದೆ.

**ದೇವರು :**

ಧರ್ಮದ ಕೇಂದ್ರ ಬಿಂದುವೆ ದೇವರು. ದೇವರ ಕಲ್ಪನೆ ಮೂಡಿದ್ದು ಪ್ರಾಚೀನರಲ್ಲಿ. ಪುರಾತನ ಮಾನವರು ಕಾಡಿನಲ್ಲಿ ಅಲೆಮಾರಿ ಜೀವನ ನಡೆಸುತ್ತಿದ್ದರು. ಪ್ರಾಣಿಗಳನ್ನು ಬೇಟೆಯಾಡಿ ಮತ್ತು ಗೆಡ್ಡೆಗೆಣಸು

ತಮ್ಮ ಆಹಾರವಾಗಿ ಸಂಗ್ರಹಿಸುತ್ತಿದ್ದರು. ಕಾಲಾನಂತರ ಕೃಷಿಯ ಮೂಲಕ ಆಹಾರ ಧಾನ್ಯ ಬೆಳೆಯುವುದನ್ನು ಗುರುತಿಸಿಕೊಂಡರು. ಉದರಂಭರಣದ ಚಿಂತೆಯಿಂದ ಮುಕ್ತವಾದ ಮನಸ್ಸು ನೈಸರ್ಗಿಕ ವಿದ್ಯೆ ಮಾನಗಳನ್ನು ಗಮನಿಸತೊಡಗಿದರು. ಪ್ರಕೃತಿಯ ಚಟುವಟಿಕೆಗಳಿಗೆ ತನಗಿಂತ ಬಲಶಾಲಿಯಾದ ಚೈತನ್ಯ ಶಕ್ತಿ ಇರುವುದನ್ನು ಖಚಿತಪಡಿಸಿದ್ದು ಆ ಪರಾತ್ಪರ ಶಕ್ತಿಗೆ ಚಿನ್ಮಯರೂಪ ಅಥವಾ ದೇವರು ಎಂದು ಕರೆದರು. ಆರಂಭದಲ್ಲಿ ಮಾನವ ದೇವರಲ್ಲ ಎಂದು ತಿಳಿದಿತ್ತು. ಆದರೆ ನಿರ್ಧಿಷ್ಟ ಗುರುತು ಅಥವಾ ಸಂಕೇತವಿಲ್ಲದೆ ಪೂಜಿಸುವುದು ಕಷ್ಟವಾಯಿತು. ಈ ತೊಂದರೆ ನಿವಾರಿಸಲು ಸಾಕಾರವೆ ಎಂಬ ವಾದಕ್ಕೆ ಅದೇ ಮಾನವನ ಸಾಚೆಯಲ್ಲಿ ದೇವರೆಂದು ಅಚ್ಚು ಹೊಯ್ದು ದೇವರಿಗೆ ಮೂರ್ತಿರೂಪ ಕೊಟ್ಟರು. ಇದಕ್ಕೆ ಆಧಾರ ಭಯ. ಭಯಾನಕವಾಗಿ ಸರ್ವಶಕ್ತನನ್ನು ಹೇಗೆ ಒಲಿಸಿಕೊಳ್ಳುವುದೆಂದು ವಿಚಾರಿಸಿದರು. ಇದಕ್ಕೆ ಧರ್ಮವೇ ಆತನೆಡೆಗೆ ನಡೆಯುವ ಋಜುಮಾರ್ಗವೆಂದು ತಿಳಿದು ಧ್ಯಾನ, ಪ್ರಾರ್ಥನೆ, ಪೂಜನೆ ಮುಂತಾದವು ಇಲ್ಲಿಯ ವಿಧಾನಗಳಾದವು. ಶ್ರದ್ಧೆ ಮಾತ್ರ ಯಾವಾಗಲೂ ಚಲಾವಣೆ ನಾಣ್ಯವಾಯಿತು. ತರ್ಕ, ಪ್ರಯೋಗ, ವಿಚಾರ ಮಂಥನವಿರಲಿಲ್ಲ.

ಪ್ರಾಕೃತಿಕ ಘಟನೆಗಳು ತಮ್ಮ ನಿಯಂತ್ರಣಕ್ಕೆ ಒಳಪಡದ ಸಂದರ್ಭಗಳಲೆಲ್ಲಾ ಒಂದೊಂದು ದೇವತೆಗಳನ್ನು ಕಲ್ಪಿಸಿಕೊಳ್ಳುತ್ತಿದ್ದರು. ಇದರಿಂದ ತಮ್ಮ ಕಾರ್ಯಸಾಧನೆ ಆಗುತ್ತಿತ್ತೋ ಅಥವಾ ಇಲ್ಲವೋ ಮನಸ್ಸಿನ ಸಮಾಧಾನವೇ ಹೊರತು ವಾಸ್ತವವಂತೂ ಆಗಿರಲಿಲ್ಲ. ಆದರೆ ಕಲ್ಪನೆ ಅನಾವಶ್ಯಕವಾಗಿ ಆದದ್ದಲ್ಲ ಎನ್ನುವುದು ಮುಖ್ಯ. ಬೆಟ್ಟ ಇಲ್ಲದ ಜಾಗದಲ್ಲಿ ಬೆಟ್ಟದೇವತೆ, ಸಮುದ್ರ ಇಲ್ಲದ ಜಾಗದಲ್ಲಿ ಸಮುದ್ರ ದೇವತೆಗಳೇನು ಕಲ್ಪಿಸಿಕೊಂಡಿರಲಿಲ್ಲ.

ಮ್ಯಾಕ್ ಗ್ರೇಗರ್ ಹೇಳುವಂತೆ "ಪುರಾತನರು ಮೊದಲು ದೇವತೆಗಳನ್ನು ಕಲ್ಪಿಸಿಕೊಂಡು ಅವರಿಗೆ ಪ್ರಾಕೃತಿಕ ಘಟನೆಗಳನ್ನು ಅಥವಾ ವಿಭಾಗಗಳನ್ನು ಕೊಡುತ್ತಿರಲಿಲ್ಲ. ಬದಲಾಗಿ ಪ್ರಾಕೃತಿಕ ಘಟನೆಗಳನ್ನು ನೋಡಿ, ಅವುಗಳ ಹಿಂದೆ ದೇವತೆಗಳು ಇರಬೇಕೆಂದು ತರ್ಕಿಸುತ್ತಿದ್ದರು.[೧೯]

ಆರ್ಯರು ತಮ್ಮ ರಕ್ಷಣೆಯ ಹೊಣೆಯನ್ನು ಇಂದ್ರನಿಗೆ ಕೊಟ್ಟರು. ಥಿಬ್ಸ್ ನಗರದ ರಕ್ಷಕ ಏಮೋನ್ ದೇವತೆ ಇದ್ದರೆ, ಅಥೆನ್ಸ್‌ನ ರಕ್ಷಕ ದೇವತೆ ಅಥೀನಾ ಆಗಿದ್ದ. ಹೀಗೆ ಅಗತ್ಯಗಳಿಗೆ ಅನುಗುಣವಾಗಿ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಸನ್ನಿವೇಶಕ್ಕೆ ಅನುಗುಣವಾಗಿ ಬೇರೆ ಬೇರೆ ದೇವತೆಗಳು ಹುಟ್ಟಿಕೊಂಡರು. ಬಹು ದೇವತಾವಾದವು ರೂಢಿಯಾಯಿತು. ಈ ಸಾಮಾಜಿಕ ಪರಿವರ್ತನೆಯಿಂದ ನಾನಾ ರೂಪ ಪಡೆದು ಜಗತ್ತಿನ ವಿವಿಧ ಭಾಗಗಳಲ್ಲಿ ಭಿನ್ನ ಭಿನ್ನ ಪೂಜಾ ವಿಧಿಗಳು ಆಚರಣೆಗೆ ಬಂದವು. ತನ್ನ ಬೇಡಿಕೆಗಳು ಈಡೇರಲಿ ಎಂದು ಭ್ರಮಾತ್ಮಕವಾಗಿ ದೇವರಲ್ಲಿ ಕೇಳಿಕೊಂಡರು.

ಪಿತೃಪ್ರಧಾನ ಮಾತೃ ಪ್ರಧಾನ ದೇವತೆಗಳ ಭಿನ್ನತೆ ಇರುವುದು ಕಾಣುತ್ತದೆ. ಮರ, ನಾಗ, ಪಿತೃ ಪ್ರಧಾನ ದೇವತೆಗಳೆನಿಸಿದರು. ಆದರೂ ಎಲ್ಲವನ್ನು ರಕ್ಷಿಸಬಲ್ಲ ಸ್ತ್ರೀದೇವತೆ ಮಾತೆಯಾದಳು. ಅಡವಿಯಲ್ಲಿ ಜೀವಿಸುತ್ತಿದ್ದ ದೈವಮ್ಮನೇ ದ್ಯಾವಮ್ಮ, ಮರದಮ್ಮನೇ ಮರಗಮ್ಮ. ಊರಿನ ಎಲ್ಲೆಯ ಅಮ್ಮನೇ ಎಲ್ಲಮ್ಮ. ಕಾಳಿ ಅಮ್ಮನೇ ಕಾಳಮ್ಮ, ಪೋಷಿಸುವ ಅಮ್ಮನೇ ಪೋಚಮ್ಮ. ದುರ್ಗದ ಅಮ್ಮನೇ ದುರ್ಗಮ್ಮಳಾಗಿ ಗ್ರಾಮೀಣರ

---

೧೯ [illegible] ಲೇಖಕರು ಯಳನಾಡು [illegible]

ಬದುಕಿನಲ್ಲಿ ಬೆಳೆದು ಬಂದರು. ಈ ಬೇರೆ ಬೇರೆ ಹೆಸರಿನ ಅಮ್ಮಗಳು ಮೈಮೇಲೆ ಬಂದು ಕುಟುಂಬಕ್ಕೆ ಹೆಸರಿಸುವ ಬಲಿ ತೆಗೆದುಕೊಳ್ಳುವ ಸಾಂಕ್ರಮಿಕ ಕಾಯಿಲೆಗಳ ಕಾಲದಲ್ಲಿ ಅವುಗಳ ನಿವಾರಣೆಗೆ ಬಲಿ ಕೊಡುವುದು ಇತ್ಯಾದಿಯಾಗಿ ಪುರಾತನ ಕಾಲದಿಂದ ಆಪತ್ಕಾಲದಲ್ಲಿ ದೇವರು. ದೈವ ತನ್ನನ್ನು ರಕ್ಷಿಸುತ್ತದೆ ಎಂದು ನಂಬಿದರು. ಗ್ರಾಮೀಣ ಜೀವನದಲ್ಲಿ ಅನಾದಿಕಾಲದಿಂದಲೂ ಹಾಸುಹೊಕ್ಕಾಗಿ ಬೆರೆತು ಬಂದಿರುವ ಗ್ರಾಮದೇವತೆಗಳು ಜನಪದರ ಬದುಕಿನ ಒಂದು ಭಾಗವಾಗಿದೆ. ಜನಪದರ ಭಕ್ತಿಯ ವಿಷಯದಲ್ಲಿ ಮುಖ್ಯವಾಗಿ ಎರಡು ಅಂಶಗಳನ್ನು ಗಮನಿಸಬೇಕಾಗುತ್ತದೆ. ಸ್ಥಾಯಿಯಾಗಿರುವ ದೈವಭಕ್ತಿ ಹಾಗೂ ಆ ಭಕ್ತಿಯ ಆಶ್ರಯದಲ್ಲಿ ಬೆಳೆದು ಬಂದ ಸಾಂಪ್ರದಾಯಿಕ ಆಚರಣೆಗಳು ಆಗೀಗ ನಡೆಯುವ ಜಾತ್ರೆ ಉತ್ಸವಗಳಲ್ಲಿ ಜನ ಪಡೆಯುವ ಸಡಗರ ತಾದಾತ್ಮ್ಯಗಳು ಅವರ ಬತ್ತದ ಜೀವನೋತ್ಸಾಹಕ್ಕೆ ಸಂಕೇತಗಳಾಗುತ್ತವೆ.

ಜನಪದರು ಪೂಜಿಸುವ ದೇವರನ್ನು ಮನೆ ದೇವರು, ಕುಲದೇವತೆ, ಗ್ರಾಮದೇವತೆ ಸೀಮೆ ದೇವರು ಎಂದು ವರ್ಗಿಕರಿಸುವುದುಂಟು. ಗ್ರಾಮದ ತುಂಬ ತೋರುವ ಗುಡಿಗಳು ಗ್ರಾಮೀಣರ ದೈವಶಕ್ತಿಯನ್ನು ಪ್ರತಿನಿಧಿಸುತ್ತವೆ. ಈ ದೇವಾಲಯಗಳಲ್ಲಿ ನಿತ್ಯವು ಪೂಜೆ ನಡೆಯಲು ಅವಶ್ಯಕತೆಗಳಿಗೆಲ್ಲ ವ್ಯವಸ್ಥೆಯಿರುತ್ತದೆ. ಒಂಬಳಿಗಳು, ಸಾರ್ವಜನಿಕ ಸಹಾಯ ಈ ದೇವಾಲಯಗಳ ಪೂಜಾರಿಗಳ ಜೀವನೋಪಾಯಕ್ಕೆ ಆಸರೆಯಾಗಿವೆ. ದೇವರನ್ನು ನಿರ್ಧಿಷ್ಟ ಪಡಿಸಿದ ಜಾತಿಯವರೂ ಪೂಜಿಸಿದರೂ ಇತರ ಜಾತಿಯವರು ದೇವರನ್ನು ತಿರಸ್ಕರಿಸುವುದಿಲ್ಲ. ಮತ್ತು ಪೂಜಿಸುವವರು ಇತರ ಜಾತಿಯವರು ಬಂದಾಗ ಭಿನ್ನವಾಗಿ ಕಾಣುವುದಿಲ್ಲ. ಹೀಗಾಗಿ ಜನಪದರ ಮಾನಸಿಕ ಹದ ಮತ್ತು ಭಾವೈಕ್ಯತೆಯ ಬಗ್ಗೆ ಅಭ್ಯಾಸ ಯೋಗ್ಯವೆನಿಸುತ್ತದೆ. ಇದೆಲ್ಲ ಕಂಡಾಗ ಈ ಧರ್ಮಶಾಸ್ತ್ರ ಏಕ ಮುಖವಾಗಿರದೆ ಸಮಾಜಶಾಸ್ತ್ರ, ಮಾನವಶಾಸ್ತ್ರ, ತತ್ವಶಾಸ್ತ್ರ ದೇವಜ್ಞಾನ ಶಾಸ್ತ್ರ, ಭೂಗೋಳಶಾಸ್ತ್ರ, ಕಲೆ, ಸಂಗೀತ, ವೈಚಾರಿಕತೆ ಜ್ಞಾನಗಳನ್ನು ಒಳಗೊಂಡಿರುವ ಅದ್ಭುತವಾದ ರಚನೆಯಾಗಿದೆ.

ಜಗತ್ತಿನ ಎಲ್ಲಾ ಜನಾಂಗಗಳಲ್ಲೂ ಸಾಮಾನ್ಯವಾಗಿ 'ದೇವರ' ಕಲ್ಪನೆಯಿದೆ. ಮಾನವತೀತವಾದ ಒಂದು ಶಕ್ತಿ ದೇವರೆಂದು ಅದು ಇಡಿ ಜಗತ್ತನ್ನೇ ನಿಯಂತ್ರಿಸುತ್ತದೆಂದು ಇತರರು ದೇವರಲ್ಲಿಯೇ ಮೊರೆ ಇಡುತ್ತಾರೆ. ದೇವರು ಸರ್ವವ್ಯಾಪ್ತಿ, ಸರ್ವಶಕ್ತಿ, ಸರ್ವಜ್ಞಾನಿ, ದಯಾಮಯ, ಅಪದ್ಬಾಂಧವ, ಆನಂದಕಾರಕ ಎಂದು ನಂಬುತ್ತಾರೆ. ಇವರನ್ನು ಆಸ್ತಿಕರೆಂದು ದೇವರನ್ನು ನಂಬದೇ ಇರುವವರನ್ನು ನಾಸಿಕ್ತರು ಎನ್ನಲಾಗುವುದು. ಕಷ್ಟ, ನಿರಾಶೆ, ಆದಾಗ ಮನಸಿಗೆ ಒಂದು ಆಸರೆಬೇಕು. ಭರವಸೆ ತುಂಬಬಲ್ಲ ಒಂದು ಮೂಲಬೇಕು. ದೇವರ ಕಲ್ಪನೆಯಿಂದ ಆ ಆಸರೆ ಭರವಸೆ ಸಿಕ್ಕರೆ ಏಕೆ ಉಪಯೋಗಿಸಿಕೊಳ್ಳಬಾರದು ಎಂಬುವುದು ಆಸ್ತಿಕರವಾದ. ಇತಿಹಾಸದುದ್ದಕ್ಕೂ ದೇವನಲ್ಲಿ ನಂಬಿಕೆ ತಾಳಿದ್ದು ಆಶ್ಚರ್ಯವೇ ಸರಿ. ಬಹುಶಃ ಭಾರತೀಯ ತತ್ವ ಜ್ಞಾನಿಗಳು ಜನಸಾಮಾನ್ಯರಿಂದ ದೂರನಿಂತ ತರ್ಕಶಾಸ್ತ್ರ ನಿಪುಣರಾಗಿದ್ದರೆಂದು ತೋರುತ್ತದೆ. ಇದು ಅವರ ಹಿರಿಮೆಯಾಗಿರುವಂತೆ ದೌರ್ಬಲ್ಯವು ಆಗಿದೆ. ಇದರಿಂದ ದೊರೆತ ಅವಕಾಶವನ್ನು ಮತಧರ್ಮಪ್ರಚಾರಕರು ಉಪಯೊಗಿಸಿಕೊಂಡು ತಮ್ಮ ವರ್ಗದ ಸ್ವಾರ್ಥಕ್ಕಾಗಿ ಜನರಲ್ಲಿ ದೈವಿಭಾವನೆ, ಮೂಢನಂಬಿಕೆಗಳನ್ನು ಬಿತ್ತಿದರು.

ವಾಸ್ತವವಾಗಿ ದೈವಿಭಾವನೆಯ ಬೇರುಗಳು ತಾತ್ವಿಕ ಸಿದ್ಧಾಂತದ ಹೊರವಲಯದಲ್ಲೇ ಬೇರುಬಿಟ್ಟವು. ಆದ್ದರಿಂದ ತತ್ವಜ್ಞಾನಿಗಳು ಎಷ್ಟೇ ಹರಿತವಾದ ತಮ್ಮ ವಾದಗಳನ್ನು ಮಂಡಿಸಿದರೂ ದೈವದ ಮಧ್ಯಭಾವನೆಯನ್ನು ಕಿತ್ತು ಹಾಕಲಿಲ್ಲ. ದೈವಿಕಲ್ಪನೆಯ ತಳಹದಿಯನ್ನು ಸರಿಯಾಗಿ ಗ್ರಹಿಸಿದ ಮೊದಲ ತತ್ವಜ್ಞಾನಿ ಕಾಲ ಮಾರ್ಕ್ಸ್

ಎನ್ನಬಹುದು. 'ಧರ್ಮವೆಂಬುದು ಜನರನ್ನು ಮರಳುಗೊಳಿಸುವ ಅಫೀಮು" ಎಂದು ಕರೆದು, ದೈವಿಕಲ್ಪನೆಯನ್ನು ಧಿಕ್ಕರಿಸಿ ಮಾನವನು ಬೆಳೆಯುವ ವಿಧಾನವನ್ನು ಅವನು ವಿವರಿಸಿದ್ದಾನೆ. ದೇವರ ಅಸ್ತಿತ್ವವು ನಂಬಿಕೆಯನ್ನು ಅವಲಂಬಿಸಿರುತ್ತದೆ. ದೇವರ ಬಗ್ಗೆ ಜನರಿಗಿರುವ ನಂಬಿಕೆ ಹೊರಟು ಹೋದರೆ. ದೇವರು ಇದ್ದು ಇಲ್ಲವಾಗಿ ಬಿಡುತ್ತಾನೆ. ಆದ್ದರಿಂದ ಜಗತ್ತಿನ ವಿವಿಧ ಪ್ರಮುಖ ಧರ್ಮಗಳು "ದೇವರನ್ನು ನಂಬಿ ಪ್ರವಾದಿಯನ್ನು ನಂಬಿ ದೇವರ ಆಜ್ಞೆಗಳನ್ನು ಪಾಲಿಸಿ ಉಲ್ಲಂಘಿಸಬೇಡಿ" ಎಂದು ಹೇಳುವುದು. ದೇವರು ಪ್ರಾರ್ಥನೆ, ಪೂಜೆ ಮುಂತಾದವು ಕೇವಲ ವ್ಯಕ್ತಿಯ ನಂಬಿಕೆಯ ನೆಲೆಯಲ್ಲಿ ಚಲಾವಣೆಯಲ್ಲಿದ್ದು ಆತನ ಆತ್ಮ ಸಂಸ್ಕಾರವನ್ನು ಸಾಧಿಸಬಲ್ಲ ವೈಯಕ್ತಿಕ ಧಾತುಗಳು ಮಾತ್ರ ಎಂದು ಅಂಗೀಕರಿಸಬಹುದು. ಇವು ಸಾಮಾಜಿಕ ಪಿಡುಗಿಗೆ ಕಾರಣವಾಗತಕ್ಕದ್ದಲ್ಲ. ನಂಬಿದಾತ ನಂಬದಾತನಿಗಿಂತ ಶ್ರೇಷ್ಠನೂ ಅಲ್ಲ ಕನಿಷ್ಠನೂ ಅಲ್ಲ. ನಂಬಿದಾತನೇ ಇರಲಿ ನಂಬದಾತನೆ ಇರಲಿ ಆತನ ವೈಯಕ್ತಿಕ ಮತ್ತು ಸಾಮಾಜಿಕ ಮುಖಗಳೆರಡರಲ್ಲೂ ಸಾಮರಸ್ಯವಿದ್ದು ಆತ ಸಾಮಾಜಿಕವಾಗಿ ಉಪಯುಕ್ತ ಜೀವನ ನಡೆಸುವುದರ ಮೇಲೆ ಅವನ ನಿಜಯೋಗ್ಯತೆ ನಿರ್ಣಯವಾಗತ್ಕಕದ್ದು.

ರಾಮಕೃಷ್ಣ ಪರಮಹಂಸರು ತಾನು ದೇವರನ್ನು ನೋಡಿದ್ದೇನೆ ಎಂದು ಹೇಳುತ್ತಿದ್ದರು. ಅವರು ಸುಳ್ಳು ಹೇಳಲಿಲ್ಲ. ವಂಚಿಸಲಿಲ್ಲ. ಹಾಗಾದರೆ ನಿಜವಾಗಿ ಅವರು ದೇವರನ್ನು ನೋಡಿದರೆ? ವಿಜ್ಞಾನಿಗಳು, ವಿಚಾರವಂತರೂ ಬುದ್ಧಿ ಜೀವಿಗಳು ಇಲ್ಲವೆಂದೇ ಹೇಳುತ್ತಾರೆ. ಹಾಗಾದರೆ ನಿಜವಾಗಿ ಅವರು ನೋಡಿದೇನು ? ಮನಶಾಸ್ತ್ರಜ್ಞರ ಮತ್ತು ವಿಜ್ಞಾನಿಗಳ ವಿಶ್ಲೇಷಣೆ ಪ್ರಕಾರ ಅದು ಒಂದು ಮಾನಸಿಕ ಭ್ರಾಂತಿ. ಆಧ್ಯಾತ್ಮ ಜೀವಿಗಳೆಂದು ಹೇಳಿಕೊಳ್ಳುವವರು ಮಾತ್ರವಲ್ಲ ಕೆಲವೊಮ್ಮೆ ಸಾಮಾನ್ಯ ಜನರಿಗೂ ಅಂಥ ಭ್ರಾಂತಿ ಉಂಟಾಗುವುದು ಸಾಧ್ಯ. ಅಮಲು ಮದ್ದನ್ನು ಸೇವಿಸಿ ಭ್ರಾಂತಿಯನ್ನು ತಂದುಕೊಳ್ಳಲು ಸಾಧ್ಯವಿದೆ ಎಂದು ಆಧುನಿಕ ಮನಃಶಾಸ್ತ್ರ ಮತ್ತು ವೈದ್ಯಕೀಯ ವಿಜ್ಞಾನ ತೋರಿಸಿಕೊಟ್ಟಿದೆ. ರಾಮಕೃಷ್ಣ ಪರಮಹಂಸರು ಪ್ರತಿಯೊಂದು ಮತವನ್ನು ಕೆಲಕಾಲ ಕಟ್ಟು ನಿಟ್ಟಿನಿಂದ ಪಾಲಿಸಿ ಆಯಾ ಮತ ಪ್ರತಿಪಾದಿಸಿದಂತೆ ದೇವರ ಕಲ್ಪನೆಯನ್ನು ಅವರು ಸಾಕ್ಷಾತ್ಕಾರ ಮಾಡಿದ್ದರೆಂದು ನಂಬಿಕೆಯಿದೆ. ಮೂರ್ತಿಪೂಜೆ ಸರಿಯೆಂದು ನಂಬಿದ್ದರು. ಇಲ್ಲಿ ಚಿಕ್ಕ ನಿದರ್ಶನದ ಮೂಲಕ ಮೂರ್ತಿಪೂಜೆಯ ಉದ್ದೇಶ ನಾವು ತಿಳಿಯಬಹುದು ನಮ್ಮ ಹೆತ್ತ ತಂದೆ ತಾಯಿಗಳನ್ನು ಪ್ರೀತಿಸುತ್ತೇವೆ ಗೌರವಿಸುತ್ತೇವೆ. ಹೊರತಾಗಿ ಬೇರೊಬ್ಬ ವ್ಯಕ್ತಿಯಲ್ಲಿ ತಂದೆ ತಾಯಿಗಳ ಪ್ರತಿರೂಪ ಕಾಣಲು ಸಾಧ್ಯವೇ ? ಹಾಗಾಗಿ ನೆನೆದಾಕ್ಷಣ ನಿರ್ಧಿಷ್ಟವಾಗಿ ಕಣ್ಮುಂದೆ ತಂದೆ ತಾಯಿಗಳ ಪ್ರತಿರೂಪವೆ ಕಾಣುವದು. ಹಾಗೆಯೇ ದೇವರಿಗೆ ಸಾಕಾರ ರೂಪದಲ್ಲಿ ನಿರ್ಧಿಷ್ಟವಾಗಿ ನೋಡಿದಾಗ ಇಂದ್ರಿಯಗಳೆಲ್ಲಾ ಮೂರ್ತಿಯನ್ನು ಕೇಂದ್ರಿಕರಿಸಿದಾಗ ಏಕಾಗ್ರತೆಗೆ ಒಳಗಾಗಿ ತದೇಕ ಭಾವದಿಂದ ದೇವರನ್ನು ಸ್ಮರಿಸಬಹುದು. ಇದರಿಂದ ಮನಸ್ಸಿಗೆ ತೃಪ್ತಿಯಾಗುವುದು ಎಂದು ಪರಮಾಹಂಸರ ಹೇಳಿಕೆಯ ಅರ್ಥವಾಗಿರಬಹುದು.

ಇಂದು ಸಮಾಜವು ತೀವ್ರವಾದ ಬದಲಾವಣೆಗಳಿಗೆ ಒಳಗಾಗುತ್ತಿವೆ. ವೈಜ್ಞಾನಿಕ ಸಂಶೋಧನೆ ಕೈಗಾರಿಕೀಕರಣ, ನಗರೀಕರಣ ಇವುಗಳ ಫಲವಾಗಿ ಮಾನವನ ಆಲೋಚನೆಗಳು ಬದಲಾಗುತ್ತಿವೆ. ಜಗತ್ತಿನ ನಾನಾ ಭಾಗಗಳ ಕಡೆ ಕಣ್ಣಾಡಿಸುತ್ತಿದ್ದಾನೆ. ಚಂದ್ರ ಗ್ರಹವನ್ನು ಕಂಡು ಬಂದದ್ದೂ ಆಗಿದೆ. ಇಂಥ ಸ್ಥಿತಿಯಲ್ಲಿ ನಮ್ಮ ಜನಪದ ಸಂಸ್ಕೃತಿಯ ರೂಪವು ಬದಲಾವಣೆಗೆ ಒಳಗಾಗುತ್ತಿದೆ.

ಪ್ರಾಚೀನರಿಂದಲೂ ಧರ್ಮ-ದೇವರು ಕುರಿತು ನಂಬಿಕೆ ಮತ್ತು ಆಚರಣೆಗಳು ಈ ರೂಢಿಯಲ್ಲಿವೆ. ಅವುಗಳಲ್ಲಿ ಉಪಯುಕ್ತವೆನಿಸಿದ ಕೆಲವುಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

**೧. ಓಂಕಾರ ನಾದದಲ್ಲಿ ದೇವರು ಇರುವನು :**

ಓಂ ಎನ್ನುವ ಶಬ್ದದಲ್ಲಿ ಬ್ರಹ್ಮಾಂಡವೆ ಅಡಗಿದೆ. ಎಲ್ಲಾ ದೇವತೆಗಳನ್ನು ಒಳಗೊಂಡಿರುವುದು ಎಂಬ ನಂಬಿಕೆಯಿದೆ. ಇದು ಒಂದು ಶಬ್ಧವು ಆಗಿದೆ. ನಾದವೂ ಆಗಿದೆ. ಅಂದರೆ ಅಕಾರ + ಉಕಾರ + ಮಕಾರದಿಂದ – ಓಂಕಾರವಾಗಿದೆ. ಘಂಟೆ ಶಬ್ದದಿಂದ ಹೊರಡುವ ತರಂಗಗಳಲ್ಲಿಯೂ ಓಂಕಾರನಾದ ಮೂಡುತ್ತದೆ. ಜನಪದರು ಎರಡು ಕೈಯಗಳಿಂದ ರೊಟ್ಟಿ ಬಡೆಯುವ ಶಬ್ದದಲ್ಲೂ ಓಂಕಾರನಾದ ಗುರುತಿಸುತ್ತಾರೆ. ಘಂಟಾರವಕ್ಕೆ ಕಾರಣವಾಗುವಂತೆ ಆಧ್ಯಾತ್ಮಿಕ ಸ್ವರೂಪದ ಘಂಟಾರವಕ್ಕೂ ಕಾರಣವಾಗುತ್ತದೆ. ಪ್ರತಿಯೊಂದು ದೇವರ ನಾಮಸ್ತೋತ್ರಗಳು 'ಓಂ'ದಿಂದಲೇ ಆರಂಭವಾಗುವವು. ಓಂ ನಮಃ ಶಿವಾಯ ಓಂ ಅಸತೋಮಾ ಸದ್ಗಮಯ . . . . . . ಹೀಗೆ ಕೊನೆಗೂ ಹೆಚ್ಚಾಗಿ ಓಂ ಶಾಂತಿ, ಓಂ ಶಾಂತಿ . . . . ಎನ್ನುವ ಶಬ್ದಗಳಿಂದಲೇ ಮುಗಿಯುವುದು.

ಈ ಓಂಕಾರ ನಾದವು ಧ್ಯಾನದಲ್ಲಿ ಲೀನವಾಗಿಸುತ್ತದೆ. ಮನಸ್ಸಿಗೆ ಶಾಂತಿಯನ್ನು ನೀಡಿ ಪ್ರಸನ್ನಗೊಳಿಸುತ್ತದೆ. 'ಓಂ' ಎನ್ನುವ ನಾದದ ನಂಬಿಕೆ ಮನಸ್ಸಿನ ಮೇಲೆ ಎಷ್ಟರ ಮಟ್ಟಿಗೆ ಪ್ರಭಾವ ಬೀರಿದೆ ಎಂಬುದನ್ನು ದೇವರಿಲ್ಲ ಎಂದು ಒಪ್ಪುವ ಸ್ಥಿತಿಯಲ್ಲಿ ಇಲ್ಲದೆ ವಿಜ್ಞಾನವು ಒಂದಿಲ್ಲಾ ಒಂದು ಒತ್ತಡಕ್ಕಾಗಿ ಒಪ್ಪಿಕೊಳ್ಳುತ್ತದೆ. ಹೃದಯದ ಕಾಯಿಲೆ ಇದ್ದವರಿಗೆ ಭಾವೋದ್ರೇಕ ಆಗಬಾರದು; ಮನಸ್ಸು ಶಾಂತವಾಗಿರಬೇಕು ಎಂದು ಡಾಕ್ಟರ್ ಹೇಳುತ್ತಾರೆ. ಆಸ್ಪತ್ರೆ ಸೇರಿದ ಹೃದ್ರೋಗಿಗಳ ಮನಸ್ಸನ್ನು ಪ್ರಸನ್ನವಾಗಿಡಬೇಕೆಂದು ತರಾವರಿ ಪ್ರಯೋಗಗಳು ನಡೆಯುತ್ತಿವೆ. ನಾಯಿ, ಬೆಕ್ಕು, ಗಿಳಿಗಳನ್ನು ರೋಗಿಯ ಮಂಚದ ಬಳಿ ತರಲಾಗುತ್ತಿದೆ. ಸರ್ಜರಿ ಮುಗಿದ ಮೇಲೆ ರೋಗಿಯ ಚೇತರಿಕೆಗೆಂದು ಅಮೇರಿಕಾದ ಕೆಲವು ಆಸ್ಪತ್ರೆಗಳಲ್ಲಿ ಈಗ· ಮೇಲುಧ್ವನಿಯ 'ಓಂ'ಕಾರ ವೇದ ಪಠನದ ಧ್ವನಿ ಮುದ್ರಿಕೆಗಳನ್ನೂ ಹಾಕಲಾಗುತ್ತಿದೆ.

**೨. ದಿನಾಲೂ ದೇವರನ್ನು ಪೂಜಿಸುವುದು :**

ಈ ಜಗತ್ತಿನ ಸೃಷ್ಟಿಕರ್ತನೆ ದೇವರು ಎಂದು ನಂಬಿರುವ ಜನಪದರು ಅಣು-ತೃಣಗಳಲ್ಲಿ, ಉರಿಯುವ ಜ್ಯೋತಿಯಲ್ಲಿ, ಹರಿಯುವ ನೀರಿನಲ್ಲಿ, ಗುಡಿಯ ಗಂಟೆನಾದದಲ್ಲಿ ಸರ್ವಶಕ್ತನಾದ ದೇವರು ಇರುವನೆಂದು ನಂಬಿಕೆ. ಹಾಗಾಗಿ ದಿನಾಲೂ ಮೊಟ್ಟ ಮೊದಲು ಏಳುವಾಗಲೆ ಕೈಯಲ್ಲಿ ದೇವತೆಗಳು ವಾಸವಾಗಿರುವರೆಂಬ ನಂಬಿಕೆಯಿಂದ ದೇವತೆಯನ್ನು ಸ್ಮರಿಸುವರು. ಪೂಜೆ ಮಾಡುವ ನೆಪದಲ್ಲಿ ದಿನಾಲೂ ಸ್ನಾನ ಮಾಡಿ ಶುಚಿಯಾಗಿ ಆರೋಗ್ಯ ಕಾಪಾಡಿಕೊಳ್ಳುವುದಾಗಿದೆ. ಶಿಸ್ತು ಕ್ರಮಬದ್ಧತೆಯಿಂದು ಶಾಂತ ಮನಸ್ಸಿನಿಂದ ಪೂಜೆ ಮಾಡಿಯೇ ದಿನದ ಕೆಲಸಗಳನ್ನು ಮಾಡುವರು. ಈ ಪೂಜೆಯಿಂದ ದಿನನಿತ್ಯದ ಕಾರ್ಯಗಳಿಗೆ ಯಾವುದೇ ಸಮಸ್ಯೆಗಳು ಎದುರಾಗದಂತೆ ಕೆಲಸಗಳು ನೆರವೇರಲಿ ಎಂದು ನಂಬಿಕೊಂಡು ಬಂದಿರುವುದಾಗಿದೆ.

**೩. ದೇವರಿಗೆ ಬಿಲ್ವಪತ್ರೆ – ಪುಷ್ಪಗಳನ್ನು ಮುಡಿಸುವುದು :**

ಜನಪದರು ನಂಬಿಕೊಂಡು ಬಂದಿರುವ ನಂಬಿಕೆಗಳಲ್ಲಿ ಇದು ಒಂದಾಗಿದೆ. ದೇವರ ಪೂಜೆ ಮಾಡಿದ ಬಳಿಕ ಬಿಲ್ವಪತ್ರೆ – ಪುಷ್ಪಗಳಿರದಿದ್ದರೆ ಅಪೂರ್ಣ ಎನ್ನುವರು. ಪೂಜೆಗೆ ಮೊದಲು ಹೂ–ಪತ್ರಿ ತಂದಿಟ್ಟುಕೊಳ್ಳುವುದು ರೂಢಿಯಾಗಿದೆ. ಋತುಮಾನಗಳಿಗೆ ಅನುಸಾರವಾಗಿ ಸಿಗುವ ಪುಷ್ಪಗಳನ್ನು ಮತ್ತು ಬಿಲ್ವ ಪತ್ರೆಗಳನ್ನು ದೇವರಿಗಿಡುವುದು ರೂಢಿಯಾಗಿದೆ. ಅದರಲ್ಲಿ ಕೆಲವೊಂದು ಹೂಗಳನ್ನು ದೇವರಿಗೆ ಮೂಡಿಗೆ ಹಾಕಿದರೆ ಹಾಕಿದಷ್ಟು ಹೆಚ್ಚಿನ ಫಲ ಸಿಗುತ್ತದೆಂಬ ನಂಬಿಕೆ. ಉದಾಹರಣೆಗೆ: ಹಳದಿ ಬಣ್ಣದ ಜಾಜಿ ಹೂ ಏರಿಸಿದರೆ ಒಂದು ತೊಲಿ ಬಂಗಾರಕ್ಕೆ ಸಮ ಎಂಬ ನಂಬಿಕೆ ಹಾಗೂ ಗಣೇಶನಿಗೆ ದಾಸವಾಳ, ಲಕ್ಷ್ಮಿಗೆ ಗುಲಾಬಿ ಹೂ, ಶಿವನಿಗೆ ಪ್ರಿಯವಾದ ಏಕ್ಕಿಗಿಡದ ಹೂ. ಶಿವರಾತ್ರಿಯಲ್ಲಿ ಮುತ್ತಲು ಗಿಡದ ಹೂ ವಿಶೇಷವಾಗಿ ಎಂದು ಹೇಳುತ್ತಾರೆ. ಇಲ್ಲಿ ದೇವರಿಗೆ ಯಾವ ಹೂ ಇಷ್ಟ ಎನ್ನುವುದಕ್ಕಿಂತ ಮುಖ್ಯವಾಗಿ ವಿವಿಧ ಪುಷ್ಪಗಳ ಸುಗಂಧ ಪರಿಮಳದ ವಾಸನೆಯನ್ನು ಸೇವಿಸುವ ಅವಕಾಶ ಸಿಗುತ್ತದೆ. ಇಂಥಹ ನಂಬಿಕೆ ನೆಪದಲ್ಲಾದರೂ ಔಷಧೀಯ ಗುಣ ಹಾಗೂ ಪರಿಮಳದ ಉಪಯುಕ್ತವಾಗಿ ಹೂಗಳನ್ನು ಬಳಸುವುದು ಉಪಯುಕ್ತವೆ ಆಗಿದೆ. ಆಯಾ ಋತುಮಾನದಲ್ಲಿ ಸಿಗುವ ಪುಷ್ಪಗಳಿಂದ ಔಷಧಿಗಳಿಗಾಗಿ ಬಳಸುವುದುಂಟು. ದುಂಡುಮಲ್ಲಿಗೆ ಮೂಗಿನಲ್ಲಿ ಹುಣ್ಣಾದರೆ ಅದರ ವಾಸನೆ ತೆಗೆದುಕೊಳ್ಳುವುದು; ಚೆಂಡು ಹೂ ಪ್ರಾಣಿಗಳಿಗೆ ಹುಣ್ಣಾದಾಗ ಚಿಕಿತ್ಸೆಗಾಗಿ ಬಳಸುವರು.

ಇನ್ನೂ ಅನೇಕ ರೋಗಗಳಿಗೆ ರಾಮಬಾಣವಾಗಿರುವ ಬಿಲ್ವ ಪತ್ರೆಯನ್ನು ದೇವರಿಗೆ ಎಷ್ಟೇಷ್ಟು ಹೆಚ್ಚು ಪ್ರಮಾಣದಲ್ಲಿ ಅರ್ಪಿಸಿದರೆ ಅಷ್ಟು ಪುಣ್ಯ ಬರುವುದೆಂಬ ನಂಭಿಕೆಯಿದೆ. ಇದರ ಜೊತೆಗೆ ಹೆಚ್ಚಿನ ಸಂಖ್ಯೆಯಲ್ಲಿ ಬಿಲ್ವಪತ್ರಿ ಏರಿಸುವಾಗ ಅದರ ವಾಸನೆ ಆಸ್ವಾದಿಸಲಾಗುವುದು. ದಿನಾಲೂ ಉಪಯೋಗಿಸುವದಂತೂ ತೀರಾ ಒಳ್ಳೆಯದು. ಇದು ವಿಶೇಷವಾಗಿ ಮಳೆಗಾಲದಲ್ಲಿ ಹೆಚ್ಚಾಗಿ ಸಿಗುವುದರಿಂದ ಶ್ರಾವಣ ಒಂದು ತಿಂಗಳು ಹೆಚ್ಚಾಗಿ ಉಪಯೋಗಿಸುವರು. ದಿನಾಲು ಬಿಲ್ವ ಪತ್ರೆ ಸೇವಿಸುವುದು ಆರೋಗ್ಯಕ್ಕೆ ಒಳ್ಳೆಯದು. ಬಿಲ್ವ ಪತ್ರೆ ಸೇವಿಸುವದರಿಂದ ಜೀರ್ಣ ಶಕ್ತಿ ಹೆಚ್ಚಿಸುತ್ತದೆ. ಹೊಟ್ಟೆ ನೋವು ನಿವಾರಣೆ, ದೇಹದ ಉಷ್ಣತೆ ಮತ್ತು ಸಕ್ಕರೆ ಕಾಯಿಲೆ ಕಡಿಮೆಗೊಳಿಸುವುದು ಹಾಗೂ ರಕ್ತದೊತ್ತಡವನ್ನು ನಿಯಂತ್ರಣದಲ್ಲಿರಿಸುತ್ತದೆ. ಇದರಲ್ಲಿ ಇನ್ನೊಂದು ಬಗೆಯ ಕೊಡ ಪತ್ರಿ ಎನ್ನುವುದು ಕೂಡಾ ನಾಯಿಕೆಮ್ಮಿಗೆ ಮತ್ತು ಮತ್ತು ಜೀರ್ಣಶಕ್ತಿ ಹೆಚ್ಚಿಸುವ ಔಷಧಿಗುಣವುಳ್ಳದ್ದಾಗಿದೆ. ಇದು ಮೂರು ದಳಗಳಿಂದ ಕೂಡಿರುವುದರಿಂದ ಬ್ರಹ್ಮ, ವಿಷ್ಣು, ರುದ್ರ ನೆಲೆಸಿರುತ್ತಾರೆಂದು ಮತ್ತು ಶಿವನ ಕಣ್ಣು ಎಂದು ನಂಬುತ್ತಾರೆ. ಪಂಚೇಂದ್ರಿಯಗಳಲ್ಲಿ ಅತ್ಯಂತ ಪ್ರಭಾವಶಾಲಿಯಾದುದು ಮೂಗು ಇದನ್ನು ಘ್ರಾಣೇಂದ್ರಿಯ ಎನ್ನುವರು. ಇದರಿಂದಾಗಿ ವಾಸನೆ ವ್ಯಕ್ತಿಯ ಮೇಲೆ ಹೆಚ್ಚಿನ ಪ್ರಭಾವ ಬೀರುವುದು. ವಾಸನೆ ಭಾವತಿರೇಕಕ್ಕೆ ಬಹು ಮುಖ್ಯ ಕಾರಣವಾಗಿದೆ.

**೪. ದೇವರಿಗೆ ಧೂಪ ಹಾಕುವುದು :**

ಧೂಪ (ಬೆಂಕಿ) ಹಾಕುವ ಸಾಧನಕ್ಕೆ ಧೂಪಾರ್ತಿ ಎನ್ನುವರು. ಧೂಪಾರ್ತಿಯಲ್ಲಿ ಬೆಂಕಿಹಾಕಿ ಮೇಲೆ ಊದುಗಡ್ಡಿಯ ಪುಡಿ ಹಾಕುವುದರಿಂದ ಅದರ ಹೊಗೆ ಮನೆ ತುಂಬಾ ಹರಡಿ ಸುವಾಸನೆ ಬೀರುತ್ತದೆ. ಹಾಗೂ

ಊದುಗಡ್ಡಿಯಲ್ಲಿನ ಅಗರು ಚಂದನ ಮತ್ತು ಸಾಂಬ್ರಾಣಿಯ ರಾಳಕ್ಕೆ ಕೀಟನಾಶಕ ಗುಣವಿರುವುದರಿಂದ ಗಾಳಿಯ ಮೂಲಕ ಪಸರಿಸುವ ಆ ಹೊಗೆಯಿಂದಾಗಿ ರೋಗಾಣುಗಳಿಂದ ಮುಕ್ತವಾಗಿರಿಸುತ್ತದೆ. ಇದನ್ನು ಹಾಕುವುದರಿಂದ ಯಾವುದೇ ದುಷ್ಟ ಶಕ್ತಿಗಳು ಮನೆಯನ್ನು ಪ್ರವೇಶಿಸುವುದಿಲ್ಲ. ಎನ್ನುವುದು ಜನಪದರ ನಂಬಿಕೆಯಾಗಿದೆ. ಮಲೇರಿಯಾ ರೋಗಕ್ಕೆ ಕಾರಣವಾದ ಸೊಳ್ಳೆ ಹಾಗೂ ಇತ್ತೀಚಿಗಷ್ಟೇ ಕಾಣಿಸಿದ ಡ್ವೆಂಗಿ ಜ್ವರ, ಎಚ್.ವನ್ ಎನ್.ವನ್ ಜ್ವರಕ್ಕೆ ಕಾರಣವಾದಂತಹ ಸೊಳ್ಳೆಗಳು ದುಷ್ಟ ಶಕ್ತಿಗಳೇ ಅನ್ನಬೇಕಲ್ಲವೇ ? ದೇವರ ನೆಪದಲ್ಲಿಯಾದರೂ ಈ ಧೂಪ ಬಳಸಲಾಗುತ್ತದೆ. ಅಲ್ಲದೆ ನೆಗಡಿ ನಿವಾರಣೆಗಾಗಿ ಅದರ ವಾಸನೆ ಶ್ವಾಸದ ಮೂಲಕ ಸೇವಿಸಲಾಗುವುದು. ಆದರೆ ಇಂದಿನ ದಿನಗಳಲ್ಲಿ ಊದುಕಡ್ಡಿ ಹೆಚ್ಚಾಗಿ ಬಳಸುವುದರಿಂದಾಗಿ ಊದು ಹಾಕುವುದು ಕಡಿಮೆಯಾಗಿದೆ. "ದೇವರ ಕೋಣೆಯ ಧೂಪ-ಧೂಮಗಳಿಗೆ ನಮ್ಮನ್ನು ನಾವು ಒಡ್ಡಿಕೊಳ್ಳವುದು ಎಂದ ಅದೊಂದು ಅರ್ಥದಲ್ಲಿ ನಮ್ಮನ್ನು ನಾವು ಸ್ಟೇರಿ ಲೈಝ್ ಮಾಡಿಕೊಳ್ಳುವ ವಿಧಾನ" ಎಂದು ಬಿ.ಎಸ್.ಸೋಮಶೇಖರ ಎನ್ನುವ ಲೇಖಕರು ಆಹಾರ ಮತ್ತು ಆರೋಗ್ಯ ಎನ್ನುವ ಪುಸ್ತಕದಲ್ಲಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿರುವರು.[೨೦]

**೫. ನೈವೇದ್ಯ ಅರ್ಪಿಸುವುದು :**

ದೇವರಿಗೆ ಪೂಜೆಯ ನಂತರ ನೈವೇದ್ಯ ಅರ್ಪಿಸುವುದು ರೂಢಿಯಲ್ಲಿದೆ. ಹಬ್ಬ ಮತ್ತು ವಿಶೇಷ ಪೂಜಾದಿನಗಳಲ್ಲಿ ತಯಾರಾಗುವ ವಿಶೇಷ ಭೋಜನಗಳಲ್ಲೂ ಆರೋಗ್ಯಕ್ಕೆ ಬೇಕಾಗಿರುವ ಪೌಷ್ಟಿಕಾಂಶವನ್ನು ಒದಗಿಸುವ ಗುಣ ಹೊಂದಿದ ಆಹಾರ ಪದಾರ್ಥಗಳಾಗಿರುತ್ತವೆ. ಮಾಡಿದೆಲ್ಲಾ ದೇವರು ಊಟ ಮಾಡುತ್ತಾನೆಯೇ ಎನ್ನುವವರು ಇದ್ದಾರೆ. ಬೇರೆ ಬೇರೆ ಋತುಗಳಲ್ಲಿ ಕಾಣುವ ವಾತವರಣದ ವೈಪರಿತ್ಯಗಳಿಂದಾಗಿ ಆರೋಗ್ಯದ ಮೇಲೆ ಆಗಬಹುದಾದ ಪರಿಣಾಮಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಆರೋಗ್ಯ ಪಾಲನೆಗಾಗಿ ರೂಢಿಗೆ ಬಂದವುಗಳಾಗಿವೆ. ಔಷಧಿ ಸಸ್ಯಗಳ ಆರೋಗ್ಯಪಾಲನಾ ಗುಣಗಳನ್ನು ನಮ್ಮ ಸಂಪ್ರದಾಯಗಳಲ್ಲಿ ಬೆಸೆಯಲು ವರ್ಷಗಟ್ಟಲೆ ಪ್ರಯತ್ನಿಸಿರಬೇಕು. "ಬೇರೆ ಬೇರೆ ತರಹದ ಪ್ರಯೋಗಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಸಮುದಾಯಗಳ ಮೇಲೆ ಮಾಡಿ ನೋಡಿ ಜನಪದರು ಕಡೆದು ತೆಗೆದ ಕೆನೆಬೆಣ್ಣೆ ಇದು.[೨೧] ದೇವರು ಈ ಜಗತ್ತಿನಲ್ಲಿ ಸಕಲವನ್ನೂ ಸೃಷ್ಟಿಸಿ ನಮಗೆ ಬದುಕಲು ಅನುವು ಮಾಡಿಕೊಟ್ಟ ನಾನು ತಿನ್ನುವ ಅನ್ನ ಆಹಾರಾದಿಗಳು ನೀನು ಸೃಷ್ಟಿಸಿದ ವಸ್ತುಗಳು ನಿನಗೆ ಅರ್ಪಿಸಿ ನಿನ್ನ ಪ್ರಸಾದ ರೂಪದಲ್ಲಿ ಈ ಶರೀರದ ಪೋಷಣೆ ಮಾಡಿಕೊಳ್ಳುವುದಾಗಿದೆಂಬುವುದೇ ಜನಪದರ ನಂಬಿಕೆ.

**೬. ತೀರ್ಥ ಕುಡಿಯುವುದು :**

ದೇವರಿಗೆ ಅರ್ಪಿಸಿದ ತೀರ್ಥಕ್ಕೆ ಬಳಸಿರುವುದು ತೆಂಗಿನ ನೀರು ಈ ತೆಂಗಿನ ಎಳೆ ನೀರಿನಲ್ಲಿ ಹಲವು ಬೆಳವಣಿಗೆಕಾರಕ ಹಾರ್ಮೋನುಗಳಿವೆ. ಇದು ಆರೋಗ್ಯಕ್ಕೆ ಒಳ್ಳೆಯದು. ಆದ್ದರಿಂದ ಇದರಲ್ಲಿ ಔಷಧೀಯ ಗುಣವೂ ಕಂಡು ಬರುತ್ತದೆ. ಹಾಗೇಯೇ ದೇವರಿಗೆ ಅಭಿಷೇಕವಾಗಿ ಬಳಸಲ್ಪಡುವ ಪಂಚಾಮೃತಗಳಾದ ಹಾಲು, ಮೊಸರು, ತುಪ್ಪ, ಜೇನುತುಪ್ಪ ಮತ್ತು ಗೋಮೂತ್ರಗಳಿಂದ ತೀರ್ಥ ತಯಾರಿಸಿದ್ದು ಇದರ ಸೇವನೆಯು

---

೨೦ (ಅಡಿಟಿಪ್ಪಣಿ:೨೦: ಆಹಾರ ಮತ್ತು ಆರೋಗ್ಯ ಲೇಖಕರು ಬಿ.ಎಸ್.ಸೋಮಶೇಖರ ಪುಟ ಸಂಖ್ಯೆ ೮೫)
೨೧ (ಅಡಿಟಿಪ್ಪಣಿ:೨೧: ಆಹಾರ ಮತ್ತು ಆರೋಗ್ಯ ಲೇಖಕರು ಬಿ.ಎಸ್.ಸೋಮಶೇಖರ ಪುಟ ಸಂಖ್ಯೆ ೯೫)

ರೂಢಿಯಾಗಿದೆ. ಇವುಗಳು ಕೂಡಾ ದೇಹಕ್ಕೆ ಬೇಕಾದ ಪ್ರೊಟಿನಾಂಶಗಳು ಒದಗಿಸುತ್ತವೆ. ಹೀಗೆ ಜನಪದರು ದೇವರಿಗೆ ಅರ್ಪಿಸಿದ ತೀರ್ಥಿನಲ್ಲೂ ಆರೋಗ್ಯಕರವಾದ ವಸ್ತುಗಳು ಬಳಸಿರುವುದು ಅವರ ಜಾಣ್ಮೆ ತೋರಿಸುತ್ತದೆ. ತೀರ್ಥ ಪ್ರಸಾದ ದೇವರದ್ದಾಗಿರುವುದರಿಂದ ಎಲ್ಲರೂ ಭಕ್ತಿಯಿಂದಲೂ ಅಥವಾ ದೇವರು ಕೋಪಿಸಿಕೊಳ್ಳುವನೋ ಎನ್ನುವ ಭಯದಿಂದಲಾದರೂ ತೀರ್ಥ ಸ್ವಿಕರಿಸುತ್ತಾರೆ.

**೭. ಶಂಖನಾದ, ಗಂಟೆ ಜಾಗಟೆ ಬಾರಿಸುವುದು :**

ಮನೆಯಲ್ಲಿ ದಿನ ನಿತ್ಯ ಪೂಜೆಯ ನಂತರ ಗಂಟೆ ಬಾರಿಸುವುದು ಮತ್ತು ದೇವರ ಗುಡಿಯಲ್ಲಿಯೂ ಶಂಖನಾದ ಮತ್ತು ಗಂಟೆಯನ್ನು ಬಾರಿಸುವ ನಂಬಿಕೆಯುಂಟು. ಗಂಟೆ ಬಾರಿಸುವುದರಿಂದ ದೆವ್ವ ಭೂತಗಳು ಓಡಿ ಹೋಗುತ್ತವೆ. ದೇವರನ್ನು ಎಚ್ಚರಿಸದಂತಾಗುತ್ತದೆ. ಎನ್ನುವ ಜನಪದರ ಅನಿಸಿಕೆಗಳಾಗಿವೆ. ಆದರೆ ಇದರ ಹಿಂದಿರುವ ಉದ್ದೇಶವೆಂದರೆ ಘಂಟಾನಾದದಿಂದ ಹೊರಡುವ ಶಬ್ದ ತರಂಗಗಳು ಕಿವಿಯ ಮೇಲೂ ಮತ್ತು ಕಿವಿಗಳಿಗೆ ಸಂಬಂಧಪಟ್ಟ ನರಗಳು ಮೇಲ್ಯೂ ಒಳ್ಳೆಯ ಪ್ರಭಾವ ಬೀರುತ್ತದೆ. ಹಾಗೂ ಸುತ್ತಲೂ ಇರುವ ಸೂಕ್ಷ್ಮ ಕ್ರಿಮಿಗಳನ್ನು ನಾಶಪಡಿಸುತ್ತದೆ. ಸದ್ದು ಗದ್ದಲ ಪ್ರಧಾನವಾಗಿರುವ ಇಲ್ಲಿನ ವಾತಾವರಣದಲ್ಲಿ ಮಾನಸಿಕ ಏಕಾಗ್ರ ಉಂಟಾಗುವುದು ಕಷ್ಟವೇ ಸರಿ. ಇದರಿಂದ ದೇವರತ್ತ ಮನಸ್ಸನ್ನು ಕೇಂದ್ರಿಕರಿಸಬೇಕೆನ್ನುವುದೇ ಆಗಿದೆ. ಮಂಗಳಾರತಿಯ ಸಮಯದಲ್ಲಿಯಾದರೂ ಭಕ್ತಾದಿಗಳ ಗಮನ ದೇವರ ಕಡೆಗೆ ಹರಿಯಲೆಂಬ ಉದ್ದೇಶದಿಂದ ಘಂಟೆ ಜಾಗಟೆ ಬಾರಿಸುವ ಉದ್ದೇಶ ರೂಢಿಗೆ ಬಂದಿರಬೇಕು. ಅದೇ ರೀತಿಯಾಗಿ ಮುಸ್ಲಿಂರಲ್ಲಿ ನಮಾಜು ಮಾಡುವಾಗ ಬೆರಳುಗಳಿಂದ ಕಿವಿ ಮುಚ್ಚಿಕೊಳ್ಳವುದು ಈ ಕಾರಣಕ್ಕಾಗಿಯೇ ಇರಬಹುದು.

ಶಂಕಾಸುರ ಎಂಬ ದೈತ್ಯನ ಉಪಟಳ ತಡೆಗಟ್ಟಲು ಶಿವನು ಶಂಖಾಸುರನನ್ನು ಸಂಹರಿಸಿದ. ನಂತರ ಶಂಖದ ಆಕಾರವಿದ್ದ ಆತನ ಕಿವಿ, ಮೂಳೆ ಮತ್ತು ತಲೆ ಶಿವ ಊದಲು 'ಓಂ' ಎಂಬ ನಾದ ಹೊರಹೊಮ್ಮಿತು. ವೇದಗಳ ಸಮಸ್ತ ಜ್ಞಾನವೂ ಓಂಕಾರದ ವಿಸ್ತೀರ್ಣವೇ. ಸಂಖಾಸುರನಿಂದ ಓಂಕಾರ ಹೊರಹೊಮ್ಮಿದರಿಂದ ಈ ನಾದಕ್ಕೆ 'ಶಂಖ' ಎಂಬ ಹೆಸರು ಬಂದಿದೆ. ಪರಮಾತ್ಮನು ಉಪಯೋಗಿಸಿದ ಈ ಶಂಖಕ್ಕೆ 'ಪಾಂಚ ಜನ್ಯ' ಎಂದು ಹೆಸರು. ಈ ನಾದ ಅಧರ್ಮದ ಮೇಲೆ ಧರ್ಮ ವಿಷಯವನ್ನು ಉದ್ಘೋಷಿಸುವುದು. ವೈಜ್ಞಾನಿಕವಾಗಿ ನೋಡುವುದಾದರೆ ಶಂಖವು ಕ್ಯಾಲ್ಸಿಯಂ ಅಂಶದಿಂದ ಕೂಡಿದಾಗಿದ್ದು ಪೂಜಾ ಸಮಯದಲ್ಲಾದರೂ ಶಂಖ ಊದುವುದರಿಂದ ಶರೀರ ಅಲ್ಪ ಪ್ರಮಾಣದಲ್ಲಾದರೂ ಕ್ಯಾಲ್ಸಿಯಂ ಪಡೆದುಕೊಳ್ಳುತ್ತದೆ. ಇದರಿಂದ ದೇಹಾರೋಗ್ಯಕ್ಕೆ ಅದರಲ್ಲಿಯೂ ಅಸ್ಥಿ ಬೆಳವಣಿಗೆಗೆ ಸಹಕಾರಿಯಾಗುತ್ತದೆ.

**೮. ತೆಂಗಿನ ಕಾಯಿಯನ್ನು ಒಡೆಯುವುದು :**

ತೆಂಗಿನ ಕಾಯಿಗಳನ್ನು ದೇವರಿಗೆ ಹರಕೆ ಹೊತ್ತಿಕೊಂಡರೆ, ಅಥವಾ ಹುಣ್ಣಿಮೆ, ಅಮವಾಸ್ಯೆ, ಹಬ್ಬಗಳಲ್ಲಿ ಹಾಗೂ ಇನ್ನಿತರ ವಿಶೇಷ ದಿನಗಳಲ್ಲಿ ದೇವರಿಗೆ ಅರ್ಪಿಸುವುದುಂಟು. ಸುಲಿದ ತೆಂಗಿನ ಮೇಲೆ ಕಾಣುವ ಮೂರು ಚುಕ್ಕೆಗಳು ಶಿವನ ಕಣ್ಣೆಂದು ಜನರ ನಂಬಿಕೆ. ಪರಮೇಶ್ವರನ ಪ್ರೀತ್ಯರ್ಥವಾಗಿ ಅಥವಾ ನಮ್ಮಿಚ್ಛೆಗಳನ್ನು ಪೂರೈಸಿಕೊಳ್ಳುವ ಸಲುವಾಗಿ ತೆಂಗಿನಕಾಯಿಯನ್ನು ಸಮರ್ಪಿಸುತ್ತೇವೆ. ಇದರ ಎಳೆ ನೀರು ಎಲ್ಲರಿಗೂ ಅದರಲ್ಲೂ ರೋಗಿಗಳಿಗೆ ಅತ್ಯಂತ ಉಪಯುಕ್ತ. ಅನೇಕ ಆಯುರ್ವೇದಿಕ ಔಷಧಿಗಳ ತಯಾರಿಕೆ ಹಾಗೂ

ಇತರ ಔಷದೋಪಚಾರಗಳಲ್ಲೂ ಇದನ್ನು ಉಪಯೋಗಿಸುವುದುಂಟು. ತೆಂಗಿನ ಮರ ಬೆಳೆಯದೆ ಇರುವ ಪ್ರದೇಶಗಳ ಕಡೆ ಸಾಮಾನ್ಯವಾಗಿ ಎಳೆ ನೀರು ಸಿಗುವುದು ದುರ್ಲಭವೇ ಸರಿ ಹೀಗಾಗಿ ಅಪರೂಪದ ದಿನಗಳಲಾದರೂ ದೇವರ ನೆಪದಲ್ಲಿ ತೆಂಗು ಒಡೆದಾಗ ಆರೋಗ್ಯವನ್ನು ಕಾಪಾಡುವ ತೆಂಗಿನ ನೀರು ಕುಡಿಯುವ ಅವಕಾಶ ಸಿಗುತ್ತದೆ.

**೯. ದೇವರ ಮುಂದೆ ಜ್ಯೋತಿ (ದೀಪ) ಬೆಳಗಿಸುವುದು :**

ದೀಪವು ಕತ್ತಲೆಯನ್ನು ಕಳೆದು ಬೆಳಕನ್ನು ಕೊಡುತ್ತದೆ. ಕತ್ತಲೆ ಅಜ್ಞಾನವನ್ನು ಸೂಚಿಸುತ್ತದೆ. ಪರಮಾತ್ಮನು 'ಜ್ಞಪ್ತಿ' ಸ್ವರೂಪನು ಎಲ್ಲ ವಿಷಯಗಳಿಗೆ ಮೂಲ ಐಚ್ಛಕ್ತ ಮತ್ತು ಜ್ಞಾನವನ್ನು ಪ್ರಚೋದಿಸುವ ಶಕ್ತಿ. ಆದ್ದರಿಂದ ದೀಪವನ್ನು ಪರಮಾತ್ಮನೆಂಬ ನಂಬಿಕೆಯಿದೆ. ನಾವು ದೀಪವನ್ನು ಬೆಳಗಿಸಿ; ಎಲ್ಲ ನಿಧಿಗಳಿಗಿಂತ ಶ್ರೇಷ್ಠವಾದ ಜ್ಞಾನ ನಿಧಿಗೆ ಶಿರಬಾಗಿಸುವ ಪ್ರತೀಕವಾಗಿದೆ. ಶುಭಕಾರ್ಯಗಳಲ್ಲೂ ದೀಪ ಬೆಳಗಿಸುವುದರ ಮೂಲಕ ಉದ್ಘಾಟಿಸುವರು. ದೀಪಕ್ಕೆ ಉಪಯೋಗಿಸುವ ಎಣ್ಣೆ ಅಥವಾ ತುಪ್ಪ ಸಾಂಕೇತಿಕವಾಗಿದೆ; ನಮ್ಮ ವಾಸನೆಗಳು ಅಥವಾ ನಕರಾತ್ಮಕವಾದ ಸಂಸ್ಕಾರವನ್ನೂ ಮತ್ತು ದೀಪದ ಬತ್ತಿ ಅಹಂಕಾರವನ್ನು ಸೂಚಿಸುತ್ತದೆ. ಉರಿದಂತೆ ನಮ್ಮ ದುರ್ಗುಣಗಳು ಸುಟ್ಟು ಪ್ರಕಾಶಮಾನವಾದ ಬೆಳಕು ಕಾಣಿಸಲಿ ಎನ್ನುವ ಉದ್ದೇಶ ಹೊಂದಿರುವುದಾಗಿದೆ. ದೀಪದ ಜ್ವಾಲೆ ಯಾವಾಗಲೂ ಊರ್ಧ್ವಮುಖ ಮಾಡಿ ಉರಿಯುವುದು. ಹಾಗೆಯೇ ನಾವು ಯಾವುದರಿಂದ ನಮ್ಮ ಸರ್ವತೋಮುಖ ಅಭಿವೃದ್ಧಿಯಾಗುವುದೋ,ಅಂತಹ ಉತ್ತಮ ಮಟ್ಟದ ಧ್ಯೆಯೋದ್ಧೇಶವಿರುವ 'ಜ್ಞಾನ' ವನ್ನು ಪಡೆಯಬೇಕು. ಇದನ್ನೇ ದೇವರ ಹೆಸರಲ್ಲಿ ಹಗಲು-ರಾತ್ರಿ ನಿರಂತರ ದೀಪ ಉರಿಯುವುದನ್ನು ನಂದಾದೀಪ ಬೆಳಗಿಸುವುದು ಎನ್ನುತ್ತಾರೆ. ಹಿಂದಿನ ಕಾಲದಲ್ಲಿ ವಿದ್ಯುಚ್ಛಕ್ತಿ ಪೂರೈಕೆಯಿರಲಿಲ್ಲ. ಬೆಂಕಿಪೆಟ್ಟಿಗೆ ಸಿಗುವುದು ಕಡಿಮೆಯಾಗಿತ್ತು. ದೀಪ ಆರಿಸಿದರೆ ಹಚ್ಚುವದು ಕಷ್ಟವೆಂದು ಸದಾ ದೀಪವಿಟ್ಟು ಉರಿಸುವುದಾಗಿರಬೇಕು. ನಂದದ (ಆರದ) ದೀಪವೆ ನಂದಾದೀಪ ತಮ್ಮ ಕಷ್ಟದ ಸಮಯದಲ್ಲಿ ಪರಿಹಾರ ಒದಗಿಸುವರೆಂದು ದೇವರ ಹೆಸರಲ್ಲಿ ನಂದಾದೀಪ ಬೆಳಗಿಸುವುದು ನಂಬಿಕೆಯಿದೆ. ಈಗಲೂ ಸಾಮಾನ್ಯವಾಗಿ ಬೀದರ ಜಿಲ್ಲೆಯಾದ್ಯಂತ ನವರಾತ್ರಿಗಳಲ್ಲಿ ನಂದಾದೀಪ ಹಾಕುವುದು ಕಂಡು ಬರುತ್ತದೆ.

**೧೦. ದೇವರ ಗುಡಿಯ ಬಾಗಿಲು ಚಿಕ್ಕದಾಗಿರುವುದು :**

ದೇವರ ಗುಡಿಯ ಬಾಗಿಲು ಚಿಕ್ಕದಾಗಿರಬೇಕೆಂಬ ನಂಬಿಕೆಯು ದೇವರಿಗೆ ನಮಸ್ಕರಿಸಲು ಬರುವವರು ತಮ್ಮ ಕೆಟ್ಟ ಗುಣಗಳಿಗೆ ತಿಲಾಂಜಲಿ ನೀಡಲು ಎಂಬುವುದೇ ತಲೆಬಾಗಿಸುವುದರ ಉದ್ದೇಶವಾಗಿರಬೇಕು. ಆದರೂ ದೇವರ ಗರ್ಭಗುಡಿಗೆ ಯಾವುದೇ ಕಿಡಿಕೆಗಳು ಸಹ ಬಿಡದೆ ಕತ್ತಲೆ ಆವರಿಸುವ ರೀತಿಯಲ್ಲಿ ಸುತ್ತಲಿನಿಂದಲೂ ಗೋಡೆ ಆವರಿಸಲಾಗುತ್ತದೆ. ಒಳ ಹೋಗಲು ಚಿಕ್ಕ ಬಾಗೀಲು ಮಾತ್ರ ಇರುತ್ತದೆ. ಕಾರಣವೆಂದರೆ ಹೊರಗಿನ ದೃಶ್ಯಗಳಾಗಲಿ, ಶಬ್ಧಗಳಾಗಲಿ ಪೂಜಾ ಸಂದರ್ಭದಲ್ಲಿ ಅಡೆತಡೆ ಮಾಡದಿರಲೆಂದು ಹಾಗೂ ಎಲ್ಲಾ ಋತುಮಾನಗಳಲ್ಲಿಯೂ ತಂಪಾಗಿರಿಸಿ ಮನಸನ್ನು ಶಾಂತವಾಗಿರಿಸುತ್ತದೆ.

**೧೧. ದೇವರಿಗೆ ಪ್ರದಕ್ಷಿಣೆಯನ್ನು ಹಾಕುವುದು :**

ದೇವಸ್ಥಾನಕ್ಕೆ ಹೋದಾಗ ಅಥವಾ ಮನೆಯಲ್ಲಿ ದೇವರನ್ನು ಸ್ಮರಿಸಿ ಪ್ರದಕ್ಷಿಣೆ ಹಾಕುವ ನಂಬಿಕೆಯೊಂದಿದೆ. ಪ್ರದಕ್ಷಿಣೆಯನ್ನು ಹಾಕುವಾಗ ದೇವರ ವಿಗ್ರಹದ ಅಥವಾ ಗರ್ಭಗುಡಿಯ ಬಲಗಡೆಯಿಂದ ಪ್ರದಕ್ಷಿಣೆ ಹಾಕುವುದು ರೂಢಿಯಲ್ಲಿದೆ. ಬಲಗಡೆ ಶುಭವನ್ನು ಸೂಚಿಸುತ್ತದೆ. ಪಾಪ ಪರಿಹರಿಸಿ, ಬರುವ ಕಷ್ಟಗಳನ್ನು ದೂರಮಾಡಿ ಪರಮಾತ್ಮ ತಮ್ಮ ಮೇಲೆ ಕರುಣೆ ಹಾಗೂ ಅನುಗ್ರಹ ತೋರಲಿ ಎಂಬುವುದು ಜನಪದರ ನಂಬಿಕೆಯಾಗಿದೆ.

ಪ್ರದಕ್ಷಿಣೆ ಹಾಕುವಾಗ ಕಾಲುಗಳಷ್ಟೇ ಅಲ್ಲದೆ ದೇಹದ ಇತರ ಅಂಗಾಂಗಳೆಲ್ಲವು ಕ್ರಿಯಾಶೀಲವಾಗಿರುತ್ತವೆ. ನರನಾಡಿಗಳೆಲ್ಲವೂ ತಮ್ಮ ಕಾರ್ಯದಲ್ಲಿ ನಿರತವಾಗಿ ರಕ್ತ ಪರಿಚಲನೆ ಸರಾಗವಾಗಿ ನಡೆಯುವುಂತೆ ಆಗುತ್ತದೆ. ಜೀರ್ಣಶಕ್ತಿ ಹೆಚ್ಚಿಸುತ್ತದೆ. ಹಾಗೆಯೇ ತುಳಸಿ, ಅರಳಿ, ಬೇವಿನ ವೃಕ್ಷಗಳಿಗೆ ಪ್ರದಕ್ಷಿಣೆ ಹಾಕುವಲ್ಲಿ ಇನ್ನೂ ಒಳ್ಳೆಯ ಆಮ್ಲಜನಕ ಸೇವನೆಯ ಅವಕಾಶವು ಆರೋಗ್ಯವನ್ನು ಕಾಪಾಡುವ ವೈಜ್ಞಾನಿಕ ಗುಣ ಕಂಡು ಬರುವದು.

**೧೨. ಉಪವಾಸ ವೃತವನ್ನು ಆಚರಿಸುವುದು :**

ವಾರಕ್ಕೊಮ್ಮೆಯಾಗಲಿ, ಹಬ್ಬ ಹರಿದಿನಗಳಲ್ಲಾಗಲಿ ಅಥವಾ ಇನ್ನಿತರ ವಿಶೇಷ ದಿನಗಳಲ್ಲಿ ಉಪವಾಸ ವೃತವನ್ನು ಆಚರಿಸುವ ಪದ್ಧತಿಯಿದೆ. ಇದು ದೇವರ ಹೆಸರಿನಲ್ಲಿ ಆಹಾರ ಬಿಡುವುದಾಗಿದೆ. ಈ ವೃತದಿಂದಾಗಿ ತ್ಯಾಗ ಮತ್ತು ತಾಳ್ಮೆಯ ಗುಣಗಳನ್ನು ಬೆಳೆಸಿಕೊಳ್ಳವುದು ಕಂಡು ಬರುತ್ತದೆ. ಉಪವಾಸವಿದ್ದಾಗ ನೀರನ್ನು ಮತ್ತು ಇತರ ದ್ರವ ಪದಾರ್ಥದ ಆಹಾರ ಸೇವಿಸಲಾಗುತ್ತದೆ. ಈ ಉಪವಾಸ ವೃತವನ್ನು ಒಂದು ದಿನ, ಒಂದು ವಾರ. ಒಂದು ತಿಂಗಳ ಕಾಲವೂ ಆಚರಿಸುವವರು ಇದ್ದಾರೆ. ವಾರ, ತಿಂಗಳಗಟ್ಟಲೆ ಉಪವಾಸ ಮಾಡುವುದು ಅನಾರೋಗ್ಯಕ್ಕೆ ಎಡೆಮಾಡಿಕೊಡುವುದು. ಆದ್ದರಿಂದ ಹೆಚ್ಚಿನ ಉಪವಾಸ ಆರೋಗ್ಯವನ್ನು ಹದಗೆಡಿಸಿದರೆ, ವಿರಳವಾಗಿ ಉಪವಾಸ ಮಾಡುವುದರಿಂದ ಆರೋಗ್ಯವನ್ನು ಸಮತೂಕದಲ್ಲಿಡುತ್ತದೆ.

ಶರೀರದ ಒಳ ಅಂಗಾಂಗಳೆಲ್ಲ ಸ್ವಚ್ಚತೆಗೊಳಿಸಲು ಹಾಗೂ ಜೀರ್ಣಶಕ್ತಿಯಲ್ಲಿ ಕಾರ್ಯ ನಿರತವಾಗಿರುವ ನರ ನಾಡಿಗಳಿಗೆ ವಿಶ್ರಾಂತಿ ದೊರಕಿಸಲು ಉಪವಾಸ ಅಗತ್ಯವಾಗಿ ಮಾಡಲೇಬೇಕು. ಆಹಾರ ಸರಬರಾಜು ಇರದ ಕಾರಣಕ್ಕಾಗಿ ಆಮ್ಲಜನಕವು ಹೆಚ್ಚಿನ ಪ್ರಮಾಣದಲ್ಲಿ ದೇಹದೊಳಗೆ ಸೇರುವುದರೊಂದಿಗೆ ರಕ್ತ ಪರಿಚಲನೆ ಸುಲಭವಾಗುತ್ತದೆ. ರಕ್ತ ಶುದ್ಧಗೊಳಿಸುತ್ತದೆ. ಉಪವಾಸವು ಅನೇಕ ರೋಗಗಳಿಗೆ ಉತ್ತಮ ಔಷಧಿಯಾಗಿದೆ. ಆಯುರ್ವೇದದಲ್ಲಿ ಮಾತ್ರವಲ್ಲ ಪ್ರಕೃತಿ ಚಿಕಿತ್ಸೆಯಲ್ಲಿ ಉಪವಾಸವನ್ನು ಚಿಕಿತ್ಸಾ ಕ್ರಮವಾಗಿ ಅಳವಡಿಸಿಕೊಂಡಿದ್ದಾರೆ. ಪ್ರತಿಯೊಬ್ಬರು ತಮ್ಮ ಮಿತಿಯನ್ನು ಅರಿತು ಉಪವಾಸ ಆಚರಿಸಬೇಕು. "ವಿದೇಶಗಳಲ್ಲಿ ರೋಗಿಗಳಿಗೆ ಉಪವಾಸ ಮಾಡಲೆಂದೇ ಕ್ಲಿನಿಕ್ ಗಳನ್ನು ತೆರೆದಿದ್ದಾರೆ".[೨೨] ದೇಹಬಲ ಮನೋಬಲವಳ್ಳವರು ಏನನ್ನು ತೆಗೆದುಕೊಳ್ಳದೆ ಉಪವಾಸ ಮಾಡಬಹುದು ಹಸಿವೆ ತಾಳದವರು ಹಣ್ಣು ಹಾಲು ಸೇವಿಸಬಹುದು. ನರವ್ಯೂಹವು ಸ್ಫುರಣೆ ಹೊಂದಿ ತಕ್ಕ ಆದೇಶಗಳನ್ನು ಉದರದ ಅಂಗಾಂಗಗಳಿಗೆ ಕೊಡುತ್ತದೆ.

---

೨೨ (ಅಡಿ ಟಿಪ್ಪಣಿ:೨೨ ಆಹಾರ ಮತ್ತು ಆರೋಗ್ಯ ಲೇಖಕರು ಡಾ: ವಸುಂದರಾ ಭೂಪತಿ [illegible])

ಇದರಿಂದ ಯಕೃತ್ತಿನಲ್ಲಿ ಶೇಖರಿಸಲ್ಪಡುವ ಸಕ್ಕರೆಯೂ ಚರ್ಮದಲ್ಲಿ ಹುದುಗಿರುವ ಮೆದಸ್ಸಿನ ಕಣಗಳು ಮತ್ತು ವಿವಿಧ ಅಂಗಾಂಗಳಲ್ಲೂ ಗ್ರಂಥಿಗಳಲ್ಲೂ ನೆಲೆಸಿರುವ ಸಾರಜನಕಗಳೂ ಮನುಷ್ಯನಿಗೆ ಆಹಾರದಿಂದೊದಗುತ್ತಿದ್ದ ಶಕ್ತಿಯನ್ನೇ ಒದಗಿಸುವವು. ಉಪವಾಸದಿಂದ ಮೈಯ ಕೊಬ್ಬು ಮತ್ತು ಪ್ರೋಟೀನಗಳಲ್ಲಿ ಸಮತೋಲವುಂಟಾಗುವುದು.

**೧೩. ದೇವರಿಗೆ ಮಂಗಳಾರತಿ ಬೆಳಗುವುದು :**

ದೇವರಿಗೆ ನಿರಂತರ ದೀಪ ಉರಿಯುವಂತೆ ದೀಪವೊಂದನ್ನು ಹಚ್ಚಿಟ್ಟರೂ, ಪೂಜೆಯ ಕೊನೆಯಲ್ಲಿ ಮಂಗಳಾರತಿ ಬೆಳಗುವ ಪದ್ಧತಿ ರೂಢಿಯಲ್ಲಿದೆ. ಇದನ್ನು ತುಪ್ಪದ ಬತ್ತಿ, ಎಣ್ಣಿ ಬತ್ತಿ ಮತ್ತು ಕರ್ಪೂರದಿಂದ ಬೆಳಗುತ್ತಾರೆ. ಈ ರೀತಿ ಬೆಳಗುವ ಮುಖ್ಯ ಉದ್ದೇಶ ಹಿಂದೆ ತಿಳಿಸಿದಂತೆ ಕತ್ತಲೆಯನ್ನು ಕಳೆದು ಬೆಳಕಿನ ಮಾರ್ಗ ತೋರಿಸು ಎಂದು ದೇವರಲ್ಲಿ ಪ್ರಾರ್ಥಿಸುವುದಾಗಿದೆ.

ತುಪ್ಪದ ದೀಪ ಉರಿಯುವಾಗ ಉಂಟಾಗುವ ಹೊಗೆಗೆ ಅಣುಶಕ್ತಿಯ ಭಾದೆಯನ್ನು ಕಡಿಮೆ ಮಾಡುವ ಗುಣ ಇದೆ ಎಂದು ವಿಜ್ಞಾನಿಗಳು ಗೊತ್ತುಪಡಿಸಿದ್ದಾರೆ. ಇವುಗಳ ಧೂಮವು ಶರೀರಕ್ಕೆ ಎಷ್ಟು ಪರಿಣಾಮಕಾರಿ ಎಂಬುದನ್ನು ಗಣನೆಗೆ ತೆಗೆದುಕೊಳ್ಳಬೇಕು. ಉರಿಯುವ ಮಂಗಳಾರತಿಯನ್ನು ನಮ್ಮ ಮುಂದೆ ಹಿಡಿದಾಗ ನಾವು ಅದರ ಮೇಲೆ ಕೈ ಹಿಡಿದು ಕಣ್ಣಿಗೆ ಒತ್ತಿ ಬಿಸಿ ಮುಟ್ಟಿಸುತ್ತೇವೆ. ಕಣ್ಣಿನ ಎವೆಗಳಿಗೆ ಬಿಸಿ ಮುಟ್ಟಿಸುವುದರಿಂದ ದೇಹದಲ್ಲಿ ಒಂದು ರೀತಿಯಲ್ಲಿ ಪ್ರಸನ್ನತೆ ಭಾವ ಮೂಡಲು ಕಾರಣವಾಗುತ್ತದೆ. ಹೆಚ್ಚಿನ ಶಾಖವು ಮೃದುವಾದ ಈ ಭಾಗಕ್ಕೆ ಸೂಕ್ತವಲ್ಲ. ಮಂಗಳಾರತಿಯನ್ನು ಮಾಡುವಾಗ ಘಂಟೆ ನಾದ, ಜಾಗಟೆ ಶಂಖನಾದಗಳಿಂದ ಮನಸ್ಸಿಗೆ ಹಿತವನ್ನುಂಟು ಮಾಡುತ್ತವೆ.

ಕರ್ಪೂರ ತನ್ನ ಅಸ್ತಿತ್ವ ಉಳಿಸಿಕೊಳ್ಳದಂತೆ ಸಂಪೂರ್ಣವಾಗಿ ಉರಿದು ತನ್ನ ವಾಸನೆ ಮಾತ್ರ ಸ್ವಲ್ಪ ಕಾಲ ಉಳಿಯುವಂತೆ ಮಾಡುತ್ತದೆ. ಕರ್ಪೂರ ಉರಿದಂತೆ ವ್ಯಕ್ತಿಯಲ್ಲಿ ದುರ್ಗಣಗಳು ಉರಿದು ಹೋಗಲಿ ಎನ್ನುವುದು ಜನಪದರ ನಂಬಿಕೆ. ಆದರೆ ಕರ್ಪೂರದ ಉರಿಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಾರ್ಬನ ಬಿಡುವುದರಿಂದ ಬೆಳಗುವಾಗ ಶ್ವಾಸದ ಮೂಲಕ ಹೊಗೆ ದೇಹ ಸೇರುವುದು. ಆದರಿಂದ ಅತಿಯಾದ ಕರ್ಪೂರದ ಬಳಕೆ ಆರೋಗ್ಯಕ್ಕೆ ಒಳ್ಳೆಯದಲ್ಲ ಎನ್ನುವುದು ನೆನಪಿನಲ್ಲಿರಬೇಕು.

**೧೪. ದೇವಸ್ಥಾನಕ್ಕೆ ಬರೆಗಾಲಲ್ಲಿ ಹೋಗುವುದು :**

ದೇವರ ಮೇಲಿನ ಭಕ್ತಿಯಿಂದಾಗಿ ದೇವರ ಹೆಸರಿನಲ್ಲಿ ಚಪ್ಪಲಿ ಬಿಡುವುದು ಮತ್ತು ಬರೆಗಾಲಲ್ಲಿ ದೇವಸ್ಥಾನಕ್ಕೆ ಹೋಗುವ ನಂಬಿಕೆ ರೂಢಿಯಲ್ಲಿರುವುದು. ಈ ಹಿಂದೆ ಕಾಲದಲ್ಲಿ ಚಪ್ಪಲಿ ಹೆಚ್ಚಿನ ಪ್ರಮಾಣದಲ್ಲಿ ಸಿಗದೆ ಇರುವುದರಿಂದಾಗಿಯೇ ಈ ನಂಬಿಕೆ ರೂಢಿಗೆ ಬಂದಿರಬಹುದು. ಆದರೆ ಇಂದು ಚಪ್ಪಲಿ ಒಯ್ದರು ಹೊರಗಡೆ ಬಿಟ್ಟು ಹೋಗಲು ಕಳೆಯುತ್ತವೆ ಎಂಬ ಭಯ. ಹಾಗಾಗಿ ಒಯ್ಯದೇ ಇರಬಹುದು. ಈ ಚಿಂತೆಯಿಂದ ದೂರಾಗಿರಲು ಈ ಒಂದು ನೆಪ ಮಾಡಿಕೊಂಡಿರಬಹುದು.

ಈ ಹಲವು ಕಾರಣಗಳ ಹಿಂದೆ ಆರೋಗ್ಯ ಪಾಲನೆಯೂ ಸೇರಿದೆ. ಹೇಗೆಂದರೆ ಚಪ್ಪಲಿ ಪಾದಗಳಿಗೆ ಸ್ಪರ್ಶಿಸುವುದರಿಂದ ದೇಹದ ಉಷ್ಣತೆ ಹೊರಗಡೆ ಹೋಗಲು ಅವಕಾಶ ಕೊಡದೆ ಚಪ್ಪಲಿ ಮತ್ತು ಪಾದಗಳ

ನಡುವೆ ಒತ್ತಡ ಉಂಟುಮಾಡುತ್ತದೆ. ಹೀಗೆ ಬರಗಾಲಲ್ಲಿ ಓಡಾಡುವುದರಿಂದ ದೇಹದ ಉಷ್ಣ ಹೊರಹಾಕಲು ಅನುಕೂಲವಾಗುತ್ತದೆ. ಹಾಗೂ ಭೂಮಿಯ ಸ್ಪರ್ಶ ನೇರವಾಗಿ ಪಾದಕ್ಕೆ ಆಗುವದರಿಂದ ತಂಪಿನ ಅನುಭವವಾಗುತ್ತದೆ. ಹೀಗೆ ಉಷ್ಣ ಮತ್ತು ತಂಪಿನ ಅನುಭವದ ಪ್ರಕ್ರಿಯೆಯಿಂದ ಪಾದಗಳು ಗಟ್ಟಿಯಾಗುತ್ತವೆ. ಚಪ್ಪಲಿ, ಬೂಟು, ಸಾಕ್ಸ್ ಗಳಿಂದ ಪಾದ ರಕ್ಷಣೆ ಪಡೆಯುತ್ತೇವುದಾರು ಹೆಚ್ಚಿನ ಗಂಟೆಗಳ ಕಾಲ ಉಪಯೋಗಿಸುವದರಿಂದ ಪಾದಗಳ ಸ್ಥಿತಿ ಯಾವ ರೀತಿಯದ್ದಾಗಿರುತ್ತದೆಂಬುವುದದನ್ನು ಇಂದಿನ ಶಾಲಾ ಮಕ್ಕಳಿಗೆ ಅಥವಾ ಬೂಟ್ ಧರಿಸುವ ಅಧಿಕಾರಿಗಳಿಗೆ ತಿಳಿಸುವ ಅವಶ್ಯಕತೆಯೇ ಇಲ್ಲ.

**೧೫. ದೇವರ ಮುಡಿಗೇರಿಸುವ ಹೂ ಮೂಸಬಾರದು :**

ದೇವರ ಮುಡಿಗೇರಿಸುವ ಹೂ ಮೂಸಬಾರದು ಎನ್ನುವ ನಂಬಿಕೆ ವಿಚಾರವುಳ್ಳದ್ದೇ ಆಗಿದೆ. ಸಾಮಾನ್ಯವಾಗಿ ಹೂಗಳಲ್ಲಿನ ಮಕರಂದ ಹೀರಲು ದುಂಬಿಗಳು ಯಾವಾಗಲೂ ಹೂವನ್ನು ಮುತ್ತಿರುತ್ತವೆ. ಅದರಲ್ಲೂ ಗುಲಾಬಿ, ಚಂಡು ಹೂ, ದಾಸವಾಳಗಳಂತಹವುಗಳಲ್ಲಿ ಹೆಚ್ಚು ಇದರಂತೆ ಇನ್ನೂ ಹೂವಿನ ಮಕರಂದ ರುಚಿಸಲು ಸಣ್ಣ ಸಣ್ಣ ಕೀಟಗಳು ಹೂವಿನಲ್ಲಿರುವವು. ಹೂ ಮುಸೀದಾಗ ಶ್ವಾಸದ ಮೂಲಕ ಶರೀರದ ಒಳಗಡೆ ಸೇರಿದರೆ ಆ ಮೇಲೆ ಪರಿತಪಿಸುವುದು ಸಹಜ. ಯಾವತ್ತಾದರೂ ಮೂಗಿನಲ್ಲಿ ಕಿವಿಯಲ್ಲಿ ನೀರು ಹೋದಾಗಿನ ಸಾಮಾನ್ಯ ಅನುಭವ ನೆನಪಿಸಿಕೊಳ್ಳಿ. ಆದ್ದರಿಂದ ಇಂತಹ ಸಣ್ಣ ಅಪಾಯದಿಂದ ತಪ್ಪಿಸಿಕೊಳ್ಳುವುದೇ ಆಗಿದೆ.

**೧೬. ದೇವರ ಗುಡಿಯಲ್ಲಿ ದೇವರ ಮುಂದೆ ಬಸವಣ್ಣ ಮತ್ತು ಆಮೆಗಳಿರುವುದು :**

ಇಲ್ಲಿ ಬಸವಣ್ಣ ರೈತನಿಗೆ ಕೃಷಿಯಲ್ಲಿ ನಿರಂತರವಾಗಿ ಸಹಾಯಕವಾಗಿರುವ ಪ್ರಾಣಿ. ಅದು ತನ್ನ ವೇದನೆಯು ವ್ಯಕ್ತಪಡಿಸದೆ ನಿರಂತರವಾಗಿ ದುಡಿಯುವ ತಾಳ್ಮೆ ಶಕ್ತಿಯಿದೆ. ಅಲ್ಲದೆ ಇದು ಶಿವನ ವಾಹನ ಎನ್ನುವ ನಂಬಿಕೆಯಿಂದಲೂ ದೇವರ ಎದುರಿಗೆ ಇರುವುದು. ಹಾಗೆಯೇ ಆಮೆಯು ದೀರ್ಘ ಆಯುಷ್ಯವುಳ್ಳ ಪ್ರಾಣಿ ಮತ್ತು ಎಷ್ಟೇ ಭಾರ ಹಾಕಿದರೂ ತಾಳಿಸಿಕೊಳ್ಳುವ ಶಕ್ತಿಯಿರುವುದರಿಂದ ಇಂತಹ ತಾಳ್ಮೆ ದುಡಿಮೆಯಲ್ಲಿ ಮತ್ತು ಜೀವನದ ಕಷ್ಟ, ಸಮಸ್ಯೆಗಳ ಭಾರ ಹೊರುವ ಶಕ್ತಿ ಮನುಷ್ಯರು ತಮ್ಮ ಜೀವನದಲ್ಲಿ ಇಂತಹ ಪ್ರಾಣಿಗಳಿಂದಲಾದರೂ ನೋಡಿ ಕಲಿಯಲಿ ಎನ್ನುವ ಉದ್ದೇಶವಿರಬೇಕು.

**೧೭. ಅಗ್ನಿ ತುಳಿಯುವುದು :**

ಕೆಲವೊಂದು ದೇವರ ಹೆಸರಲ್ಲಿ ವಿಶೇಷವಾಗಿ ಉಗ್ರ ಸ್ವರೂಪ ದೇವರ ಹೆಸರಲ್ಲಿ ಅಗ್ನಿ ತುಳಿಯುವುದು ಪದ್ಧತಿಯಾಗಿದೆ. ಭಕ್ತರನ್ನೂ ದೇವನನ್ನೂ ಪರೀಕ್ಷಿಸುವ ಸಾಧನವಾಗಿದೆ. ಇದರಿಂದ ಜನರಲ್ಲಿ ದೈವದ ಮೇಲಿನ ಭಕ್ತಿ ಹೆಚ್ಚಾಗಿ ತಾವು ಕೆಂಡ ಹಾಯಲು ದೈವ ಬಲವೇ ಕಾರಣವೆಂದು ನಂಬುತ್ತಾರೆ. ಬೆಂಕಿ ತನಗೆ ಸಮೀಪಿಸದನ್ನು ತಕ್ಷಣವೇ ಸುಟ್ಟು ಬಿಡುತ್ತದೆ. ಅಂದ ಮೇಲೆ ನಡೆಯುವುದು ಹೇಗೆ ? ಎನ್ನುವ ಪ್ರಶ್ನೆ ಇದರ ಕುರಿತು ಹಲವಾರು ರೀತಿಯ ಅಧ್ಯಯನ ಚರ್ಚೆ ನಡೆದಿರುವುದು ಕಂಡು ಬರುತ್ತದೆ. ಇದರ ರಹಸ್ಯ ಭೇದಿಸಲು ಶ್ರೀಲಂಕಾದ ಕೊಲಂಬೋ ವೈದ್ಯಕೀಯ ಕಾಲೇಜಿನ ಶರೀರ ವಿಜ್ಞಾನ ಇಲಾಖೆಯ ಡಾ॥ ಪೊನ್ಸೆಕಾ ಅವರು ಪ್ರತಿಪಾದಿಸಿ "ಬೆಂಕಿಯ ನಡಿಗೆಯಲ್ಲಿ ಜನರು ಹಾನಿಗೊಳ್ಳದಿರಲು ಅವರ ಪಾದಗಳು ಒದ್ದೆಯಾಗಿ ತಣ್ಣಗೆ ಮತ್ತು

ಹೊಸಲಾಗಿರುವುದು ಹಾಗೂ ಪಾದಗಳು ಬೆಂಕಿಯ ಸಾಕ್ಷಾತ್ ಸ್ಪರ್ಶ ಹೊಂದುವ ಕಾಲ ತೀರಾ ಅಲ್ಪಾವಧಿಯದ್ದಾಗಿರುವುದು ಕಾರಣವೆಂದು[೨೩] ಅಭಿಪ್ರಾಯಪಟ್ಟರು. ಇನ್ನು ಮುಂದುವರೆದು ಅವರು ಬೆಂಕಿದಾಟಲು ಇಡುವ ಹೆಜ್ಜೆಗಳನ್ನು ಪರೀಕ್ಷಿಸಿ ನೀಡಿದ ವಿವರಣೆ ಇದು "ಸಾಮಾನ್ಯವಾಗಿ ಪಾದದ ತಳಭಾಗದ ಚರ್ಮಕಣಗಳ ಉಷ್ಣತೆಗಿಂತ ಚರ್ಮದ ಮೇಲ್ಪದರದ ಉಷ್ಣತೆ ಕಡಿಮೆಯಿರುತ್ತದೆ ಹಾಗೂ ಶರೀರ ವಿಜ್ಞಾನ ನಿಯಮದಂತೆ ಉಷ್ಣಬೋಧಕವು ಎಷ್ಟೇ ಬಿಸಿಯಾಗಿದ್ದರೂ ಕೂಡ ನಿರ್ಧಿಷ್ಟ 'ಅವಶ್ಯ ಅವಧಿ' ಯವರೆಗೆ ಪ್ರಭಾವ ಬೀದ್ದರೆ ಮಾತ್ರ ಸುಡುವಿಕೆ ಉಂಟಾಗುವುದು. ಧಾರ್ಮಿಕ ಕೆಂಡ ಹಾಯುವುದರಲ್ಲಿ ಬೆಂಕಿ ಸುಟ್ಟು ಗುಳ್ಳೆಗಳಾಗದಿಲು ಕಾರಣಗಳೆಂದರೆ – ಉಷ್ಣ ಚೋದಕಗಳಾದ ಕೆಂಡಗಳು ಸುಡುವಿಕೆಯನ್ನುಂಟು ಮಾಡಲು ಬೇಕಾದ 'ಅವಶ್ಯಕ ಅವಧಿ' ಗಿಂತ ಕಡಿಮೆ ಕಾಲದಲ್ಲಿ ಶರೀರ ಸಂಪರ್ಕವನ್ನು ಹೊಂದುವುದು".

ಅಗ್ನಿಕುಂಡದ ಬೆಂಕಿಯ ಮೇಲೆ ಜಿಂಕ್ ಶೀಟನ್ನು ಹಾಕಿದರೆ ಬೆಂಕಿ ತಾಗುವುದಿಲ್ಲ. ಇದರ ಕುರಿತು ಇನ್ನೊಂದು ವಿಶೇಷತೆಯು ಈ ಮೂಲಕ ಗಮನಿಸಬಹುದು. "ಕೆಂಡ ಹಾಯುವುದು ಈಗ ಕಂದಾಚಾರವಾಗಿ ಉಳಿದಿಲ್ಲ. ಬದಲಿಗೆ ಆಧುನಿಕ ಜೀವನ ಶೈಲಿಯಿಂದ ಉಂಟಾದ ಮಾನಸಿಕ ಒತ್ತಡ ಕಡಿಮೆ ಮಾಡಿಕೊಳ್ಳುವ ವಿಧಾನವೂ ಆಗಿದೆ. ಎಂದು ದೆಹಲಿ ಸಮೀಪದಲ್ಲಿ ನಡೆದ ಘಟನೆಯೊಂದು ತಿಳಿಸುತ್ತದೆ. ಕಾರ್ಪೋರೇಟ್ ಉದ್ಯೋಗಿಗಳು ವಿದ್ಯಾರ್ಥಿಗಳು ಹಾಗೂ ಸರ್ಕಾರಿ ನೌಕರರು ಹೀಗೆ ಆಧುನಿಕ ಜೀವನ ಶೈಲಿಯಿಂದ ಮಾನಸಿಕ ನೆಮ್ಮದಿ ಕಳೆದುಕೊಂಡವರೆಲ್ಲಾ ಈ ಕೆಂಡ ಹಾಯುವ ಚಿಕಿತ್ಸೆಯ ಮೂಲಕ ನೆಮ್ಮದಿ ಕಾಣಲು ಯತ್ನಿಸುತ್ತಿದ್ದಾರೆ. ಜೀವನದಲ್ಲಿ ಎದುರಾಗುವ ಸವಾಲುಗಳನ್ನು ಎದುರಿಸಲು ಬೇಕಾಗುವ ಮಾನಸಿಕ ಸ್ಥೈರ್ಯ ಹಾಗೂ ಆತ್ಮ ವಿಶ್ವಾಸವನ್ನು ಕೆಂಡ ಹಾಯುವ ಚಿಕಿತ್ಸೆಯ ಮೂಲಕ ಪಡೆಯಬಹುದಾಗಿದೆ.[೨೪] ಎಂದು ಕೆಂಡ ಹಾಯುವ ಚಿಕಿತ್ಸಕ ಪಿ.ಎಸ್. ರಾಥೋಡ ತಿಳಿಸುತ್ತಾರೆ. ಪ್ರಾಚೀನ ಕಾಲದಲ್ಲಿ ಗ್ರೀಕರು, ವೇದಕಾಲದ ಸನ್ಯಾಸಿಗಳು ಮತ್ತು ಮುಸ್ಲಿಂ ಫಕೀರರು (ಮೊಹರಂ ಹಬ್ಬದಲ್ಲಿ) ಈಗಲೂ ಕೆಂಡ ಹಾಯುವ ಪದ್ಧತಿ ರೂಢಿಯಲ್ಲಿದೆ. ಆದರೆ ಇತ್ತೀಚಿಗೆ ನಡೆಸುವ ಹೆಚ್ಚಿನ ಅಗ್ನಿ ಕುಂಡದಲ್ಲಿ ನಡೆಯದೆ ಅದರ ಸುತ್ತು ಹಾಕುವುದನ್ನು ಕಂಡು ಬರುತ್ತದೆ.

**೧೮. ವಿಭೂತಿ ಹಚ್ಚಿಕೊಳ್ಳುವುದು :**

ವಿಭೂತಿಯನ್ನು ಹಚ್ಚಿಕೊಂಡವರನ್ನು ಮುಂಜಾನೆ ಎದ್ದು ನೋಡಿದರೆ ಶುಭ ಎನ್ನುವ ನಂಬಿಕೆಯುಂಟು ವಿಭೂತಿ ಮೂರು ಬೆರಳಿನಿಂದ ಹಣೆಯ ಮೇಲೆ ಅಡ್ಡಲಾಗಿ ಹಚ್ಚಿ ಹುಬ್ಬಿನ ಮಧ್ಯ ಚುಕ್ಕಿ ಗೋಲಾಗಿ ಇಡುವುದುಂಟು. ದಿನಾಲು ಮುಂಜಾನೆ ಮತ್ತು ಸಂಜೆ ವೇಳೆಗೆ ಹಚ್ಚಿಕೊಳ್ಳುವುದುಂಟು. ಈ ವಿಭೂತಿ ಮೊದಲು ಭೂಮಿಯ ಮೇಲೆ ಕುರುಬ ಜನಾಂಗಕ್ಕೆ ಸಿಕ್ಕಿತು. ಅದು ಯಾವ ರೀತಿ ಉಪಯೋಗಿಸಬೇಕೆಂದು ತಿಳಿಯದೆ ಲಿಂಗಾಯತ ಜನಾಂಗಕ್ಕೆ ಕೊಟ್ಟಾಗ ಇದನ್ನು ಪವಿತ್ರ ವಸ್ತುವೆಂದು ತಿಳಿದ ತಕ್ಷಣ ಜಾಣನಾದ ಇತ ತೆಗೆದುಕೊಂಡನೆಂಬ ನಂಬಿಕೆ ಜನಪದರಲ್ಲಿದೆ.

ವಿಭೂತಿ ಆಕಳ ಸಗಣಿ ಮತ್ತು ಸುಣ್ಣದ ಮಿಶ್ರಣದಿಂದ ತಯಾರು ಮಾಡುವುದರಿಂದ ಔಷಧೀಯ ಸೌಲಭ್ಯವು ಅದರಲ್ಲಿದೆ. ಮತ್ತು ಇದನ್ನು ಅನೇಕ ಆಯುರ್ವೇದ ಔಷಧಿಗಳಲ್ಲಿ ಉಪಯೋಗಿಸುವುದುಂಟು.

---

೨೩. (ಅಡಿಟಿಪ್ಪಣಿ:೨೩: ಗ್ರಾಮದೇವತೆಗಳು: ಸಿದ್ದಲಿಂಗಯ್ಯ ಪುಟ ಸಂಖ್ಯೆ-೯೧)

೨೪ (ಅಡಿಟಿಪ್ಪಣಿ:೨೪: ಪ್ರಜಾವಾಣಿ ದಿನಪತ್ರಿಕೆ ದಿ:೦೪.೦೧.೨೦೧೦)

ಇದು ಶರೀರದ ಹೆಚ್ಚು ತೇವವನ್ನು ಹೀರಿಕೊಳ್ಳುತ್ತದೆ. ಹಾಗೂ ತಲೆ ನೋವು, ಮೊಡವೆ ನಿವಾರಣೆಗೂ ಉಪಯೋಗಿಸಲಾಗುತ್ತದೆ. ಇದರ ಸೇವನೆಯಿಂದ ಹೊಟ್ಟೆ ನೋವಿನ ನಿವಾರಣೆಯಾಗುವುದು. ಆದ್ದರಿಂದ ವಿಭೂತಿ ಚುಟುಕು ನೀರಿನಲ್ಲಿ ಬೆರೆಸಿ ದಿನಾಲೂ ಸೇವಿಸುತ್ತಾರೆ. ಆದರೆ ಇದರಲ್ಲಿ ಸುಣ್ಣದಂಶವಿರುವದರಿಂದ ಅತಿಯಾದ ಸೇವನೆ ಆರೋಗ್ಯಕ್ಕೆ ಒಳ್ಳೆಯದಲ್ಲ.

ವಿಭೂತಿಯ ಮಹತ್ವ ತಿಳಿಸುವ ಶಿವಲೀಲಾಮೃತ ಕಥೆಗಳಂತಹ ಅನೇಕ ಪೌರಾಣಿಕ ಕಥೆಗಳು ಇವೆ.

**೧೯. ರುದ್ರಾಕ್ಷಿಯನ್ನು ಧರಿಸುವುದು :**

ರುದ್ರಾಕ್ಷಿ ಧರಿಸಿದರೆ ಪೀಡೆಗಳು ದೂರಾಗುತ್ತವೆಂಬ ನಂಬಿಕೆಯಿದೆ. ರುದ್ರಾಕ್ಷಿ ಸರ ಕೊರಳಲ್ಲಿ ಹಾಕಿಕೊಳ್ಳುವುದು ರೂಢಿಯಾಗಿದೆ. ರುದ್ರಾಕ್ಷಿ ಮರದಲ್ಲಿ ದೊರಕುವ ಕಾಯಿಯಾದರೂ ಇದು ಶಿವನ ನೇತ್ರದಿಂದ ಬಂದ ಕಣ್ಣೀರಿನ ಹನಿಯಿಂದ ನಿರ್ಮಾಣವಾದುದೆಂದು ನಂಬಿಕೆ ಇರುವುದಾಗಿ ಕಂಡು ಬರುತ್ತದೆ. ಇದರಲ್ಲಿ ೩೮ ಬಗೆಗಳಿದ್ದ ಕೆಲವು ಪರಿಹರಿಸಿದರೆ ಇನ್ನು ಕೆಲವೊಂದು ಧರಿಸುವುದರಿಂದ ರೋಗವಾಸಿಯಾಗುವವು ಎಂದು ಹೇಳಿಕೆಗಳಿವೆ. ಇದರಲ್ಲಿ ಒಂದರಿಂದ ಇಪ್ಪತ್ತರವರೆಗೆ ಮುಖಗಳಿರುವ ರುದ್ರಾಕ್ಷಿಗಳಿವೆ. ನಿರ್ಧಿಷ್ಟ ಸಂಖ್ಯೆಯ ಮುಖವಿರುವ ರುದ್ರಾಕ್ಷಿಗಳಿಗೆ ಬಹಳ ಮೌಲ್ಯವಿದೆ. ಏಕಮುಖಿ ರುದ್ರಾಕ್ಷಿ ಮೈ ಮೇಲೆ ಧರಿಸಿರುವುದರಿಂದ ಆರೋಗ್ಯಕ್ಕೆ ಒಳ್ಳೆಯದು ಇದು ಜ್ಞಾನ, ಏಕಾಗ್ರತೆ, ಆಧ್ಯಾತ್ಮಿಕತೆ ಹೆಚ್ಚಿಸುತ್ತದೆ. ಮತ್ತು ಎದೆಯ ಮೇಲೆ ಧರಿಸುವುದರಿಂದ ಹೃದಯರೋಗ ನಿವಾರಣೆಯಾಗುತ್ತದೆ. ರುದ್ರಾಕ್ಷಿ ನೀರಿನಲ್ಲಿ ನೆನೆಯಿಟ್ಟು ಅನಂತರ ಆ ನೀರು ಕುಡಿಯುವುದರಿಂದ ರಕ್ತ ಸುದ್ದಿಗೊಳಿಸುತ್ತದೆ. ಇದರ ಔಷಧಿ ಗುಣ ಮತ್ತು ಧಾರ್ಮಿಕ ಮೌಲ್ಯ ಹೊಂದಿರುವುದೆಂಬ ನಂಬಿಕೆಗಳು ಇವೆ. ರುದ್ರಾಕ್ಷಿ ತಂಪು ಪ್ರದೇಶಗಳಲ್ಲಿ ಬೆಳೆಯುವುದರಿಂದ ಭಾರತದ ಈಶಾನ್ಯ ಭಾಗಗಳಲ್ಲಿ ಈ ಮರಗಳು ಬೆಳೆಯಲಾಗುತ್ತದೆ. ದಕ್ಷಿಣ ಭಾರತದ ತಂಪು ಪ್ರದೇಶಗಳಲ್ಲಿಯೂ ಈ ಮರಗಳನ್ನು ಬೆಳೆಯಲು ಪ್ರಾಯೋಗಿಕವಾಗಿ ಬೆಳೆದು ನೋಡಲಾಗಿದೆ ಎಂದು ಹೇಳಿಕೆಗಳುಂಟು.

**೨೦. ಲಿಂಗ ಧರಿಸುವುದು :**

ಲಿಂಗಾಯತರೆನಿಸದಿ ಎಲ್ಲರೂ ಲಿಂಗ ಧರಿಸಬೇಕೆಂಬ ನಂಬಿಕೆ. ಇಷ್ಟಲಿಂಗವನ್ನು ಪೂಜಿಸುವುದು ಬ್ರಹ್ಮಾಂಡದ ಸಂಕೇತವಾದ ಮತ್ತು ಸಕಲ ಜೀವಾತ್ಮರನ್ನು ಒಳಗೊಂಡ ಚೈತನ್ಯದ ಪೂಜೆಯೆಂದು ಭಾವಿಸುತ್ತಾರೆ.

ಲಿಂಗವು ಮಗು ಹುಟ್ಟಿದ ಐದನೆ ದಿನಕ್ಕೆ ಕಟ್ಟಲಾಗುವುದು. ಇದೆ ಆ ಮಗುವಿನ ಕೊನೆಯವರೆಗೂ ಬರುವುದೆಂಬ ನಂಬಿಕೆ. ತನ್ನ ದೇವರು ತನ್ನ ಜೊತೆಗೇ ಸದಾ ಇರುವನೆಂಬ ನಂಬಿಕೆ ಇದರ ಹಿಂದೆ ಇದೆ. ಪ್ರತಿನಿತ್ಯ ಲಿಂಗಪೂಜೆ ಮಾಡುವ ಪದ್ಧತಿಯಿದೆ. ಇದರಿಂದ ಧ್ಯಾನ ಮತ್ತು ತಾಳ್ಮೆ ಶಕ್ತಿ ಹೆಚ್ಚಿಸುತ್ತದೆ. ಏಕಾಗ್ರತೆ ಮೂಡಿಸುತ್ತದೆ. ಮನಸ್ಸು ಶಾಂತಗೊಳಿಸುತ್ತದೆ. ತಲೆ ನೋವು ಮತ್ತು ದೃಷ್ಟಿದೋಷಕ್ಕೆ ವೈದ್ಯರು ಹೇಳುವ ನೇರದೃಷ್ಟಿ ಪ್ರಯೋಗ ಲಿಂಗವನ್ನು ಕೇಂದ್ರಿಕರಿಸುವಲ್ಲಿ ನಡೆದಿರುವುದೆಂಬುದನ್ನು ಗುರುತಿಸುವುದು.

**೨೧. ಹಣೆಯ ಮೇಲ ತಿಲಕ ಇಟ್ಟಿಕೊಳ್ಳುವುದು :**

ಹಣೆಯ ಮೇಲೆ ತಿಲಕ ಇಟ್ಟಿಕೊಳ್ಳುವ ನಂಬಿಕೆಗೆ ಬಹು ಪ್ರಾಶಸ್ತ್ಯ ಕೊಟ್ಟಿರುವುದು ಕಂಡು ಬರುತ್ತದೆ. ಪೂಜೆಯ ನಂತರ ತಿಲಕ ಇಟ್ಟಿಕೊಳ್ಳುವುದು. ಬ್ರಾಹ್ಮಣರು ಗಂಧದ ಮೂರುಗೆರೆ ಉದ್ದವಾಗಿ ಇಟ್ಟಿಕೊಂಡಿರುತ್ತಾರೆ. ಅಂಬಾಭವಾನಿ ಆರಾಧಕರು ಅರಿಶಿಣ ಕುಂಕುಮದ ಎರಡು ನಾಮ ಅಗಲವಾಗಿ ದಪ್ಪವಾಗಿ ಹಚ್ಚಿರುತ್ತಾರೆ. ಮುಸಲ್ಮಾನರು ಮತ್ತು ಕ್ರೈಸ್ತರಲ್ಲಿ ಯಾವುದೇ ತಿಲಕಗಳು ಕಂಡು ಬರುವುದಿಲ್ಲ. ಆದರೆ ಹಿಂದೂ ಸ್ತ್ರೀಯರು ಯಾವಾಗಲೂ ಕುಂಕುಮ ಹಚ್ಚಿಕೊಳ್ಳುತ್ತಾರೆ. ವಿವಾಹಿತ ಮುತ್ತೈದಿಯ ಹಣೆ ಮೇಲೆ ಒಂದು ಕ್ಷಣವೂ ಕುಂಕುಮವಿರದೆ ಇರುವುದಿಲ್ಲ. ಯಾವಾಗಲೂ ಕುಂಕುಮವಿರಲೇಬೇಕು. ಕೆಂಪು ಬಣ್ಣದಾದ್ದರಿಂದ ಇದು ಮುಖದ ಸೌಂದರ್ಯವು ಹೆಚ್ಚಿಸುತ್ತದೆ. ಅಲ್ಲದೆ ಎರಡು ಹುಬ್ಬುಗಳ ಮಧ್ಯದಲ್ಲಿ ಇಟ್ಟುಕೊಳ್ಳಲಾಗುವುದು. ಯೋಗ-ಸೂತ್ರದ ಪ್ರಕಾರ ಈ ಸ್ಥಾನವು 'ಆಜ್ಞಾಚಕ್ರ' ಎಂದೂ ಮತ್ತು ಜನಪದರು ಪಾದನೇತ್ರ ಸ್ಥಾನವೆಂದು ಕರೆಯುತ್ತಾರೆ. ಇದು ನಮ್ಮ ನೆನಪಿನ ಶಕ್ತಿ ಮತ್ತು ಚಿಂತನೆಯನ್ನು ಪ್ರಚೋದಿಸುವ ಕೇಂದ್ರ ಬಿಂದು ಹಾಗೂ ರಕ್ತ ಪರಿಚಲನೆಯು ಈ ಭಾಗ ನಾಡಿನಲ್ಲಿ ಹೆಚ್ಚಾಗಿ ಆಗುವುದರಿಂದ ಅಳ್ಳಿಕಾಯಿ, ಮಾಪುಳಕಾಯಿಯೊಂದಿಗೆ ಸೇರಿದ ಇತರ ಕಾಯಿಗಳೊಂದಿಗೆ ಸೇರಿ ಮಾಡಿದ ಕುಂಕುಮದ ಕೆಂಪು ಬಣ್ಣ ದೇಹದಲ್ಲಿ ಕೆಂಪು ರಕ್ತಕಣಗಳ ಹೆಚ್ಚಳಕ್ಕೆ ಸಹಕರಿಸುವುದು. ಆದರೆ ಇಂದಿನ ಕಾಲಮಾನದಲ್ಲಿ ಕೆಂಪು ಬಣ್ಣದ ಕುಂಕುಮದಲ್ಲಿ ಹೆಚ್ಚಿನ ರಸಾಯನಿಕ ವಸ್ತುಗಳ ಮಿಶ್ರಣದಿಂದಾಗಿ ಚರ್ಮಕ್ಕೆ ಹಾನಿಯುಂಟುಮಾಡುತ್ತಿದೆ. ಹಾಗೂ ಇಂದು ಅದರ ಬದಲಾಗಿ ಚಾಕ್ಲೇಟ್ ಬಣ್ಣದ ಕುಂಕುಮವನ್ನು ಇಲ್ಲವೆ ಹೆಚ್ಚಾಗಿ ರಡಿಮೇಡ್ ಬಿಂದಿಗಳನ್ನೇ ಹೆಚ್ಚಾಗಿ ಉಪಯೋಗಿಸಲಾಗುತ್ತಿದೆ.

ಇಡಿ ಶರೀರವು ತನ್ನ ಅಂತಃಶಕ್ತಿಯನ್ನು ವಿದ್ಯುತ್ಕಾಂತತೆ ಅಲೆಗಳಂತೆ ಹೊರ ಚಿಮ್ಮಿಸುತ್ತದೆ. ಅದರಲ್ಲೂ ಮುಖ್ಯವಾಗಿ ಹಣೆ ಮತ್ತು ಆಜ್ಞಾ-ಚಕ್ರದ ಸ್ಥಾನದಿಂದ ಹೆಚ್ಚು ಶಕ್ತಿ ವ್ಯಯವಾಗುತ್ತದೆ. ಆದ್ದರಿಂದಲೇ ಚಿಂತೆ ಆತಂಕಗಳು ಹೆಚ್ಚಾದಾಗ; ಶರೀರದಲ್ಲಿ ಉಷ್ಣವು ಉಲ್ಬಣಿಸಿ ತಲೆ-ನೋವಿನ ವ್ಯಾಧಿಯು ಬರುವುದುಂಟು. ಆದ್ದರಿಂದ ತಿಲಕದ ಬಳಕೆಯಿಂದಾಗಿ ಹಣೆಗೆ ತಂಪು ನೀಡುತ್ತದೆ.

**೨೪. ಮುತ್ತೈದಿ ಮಾಡುವುದು :**

ಪ್ರತಿ ಮಂಗಳ ಕಾರ್ಯದ ಮುಂಚಿತವಾಗಿ ಅದು ವಿಶೇಷವಾಗಿ ಮದುವೆ, ಗೃಹ ಪ್ರವೇಶಗಳಲ್ಲಿ ಮುತ್ತೈದಿ ಮಾಡುವುದು ಹಾಗೂ ಹಿರಿಯರ ಹೆಸರಲ್ಲಿ ಮುತ್ತೈದಿ ಮಾಡುವುದು ಹಾಗೂ ಹಿರಿಯರ ಹೆಸರಲ್ಲಿ ಮುತ್ತೈದಿ ಕರೆದುಕೊಳ್ಳುವುದು ನಂಬಿಕೆಯಾಗಿ ಬೆಳೆದು ಬಂದಿದೆ.

"ಮುತ್ತೈದೆ (ಮುತ್ + ಐದೆ) ಎಂಬುದು ಗಂಡ ಜೀವಿಸಿರುವ, ವಯಸ್ಸಾಗಿರುವ ಸುಮಂಗಳಿಯನ್ನು ಹೇಳುತ್ತದೆ. 'ಮುತ್' ಎಂದರೆ ಹಿಂದಿನ ಹಳೆಯ ಎಂದರ್ಥ. 'ಐದೆ' ಎಂಬುದು ಅವಿಧವಾ (=ವಿಧವೆಯಲ್ಲದವಳು) ಶಬ್ದದ ತದ್ಭವ (ಅವಿಧವಾ ಮಾತು ಋಗ್ವೇದದಲ್ಲಿದೆ) 'ಐದೆ' ಅಥವಾ 'ಮುತ್ತೈದೆ' ಮಂಗಲದ, ವಿಧವೆಯು ಅಮಂಗಲದ ಸಂಕೇತವಾಗಿ ಪರಿಣಮಿಸಿದಳು[೨೫] ಇಂದಿಗೂ ವಿವಾಹ ಸೇರಿದಂತೆ

೨೫ (ಅಡಿಟಿಪ್ಪಣಿ:೨೫: ಜನ-ಜನಪದ-ಜಾನಪದ ಡಾ.ಎಂ.ಚಿದಾನಂದಮೂರ್ತಿ ಪುಟ ಸಂಖ್ಯೆ-೩೩೩)

ಎಲ್ಲಾ ಶುಭ ಕಾರ್ಯಗಳಲ್ಲಿ ಅವರಿಗೆ ಅಗ್ರಸ್ಥಾನವುಂಟು. ಮಂಗಳಸೂತ್ರ, ಮೂಗುಬೊಟ್ಟು, ಕಾಲುಂಗರ, ಬಳೆ ಓಲೆ, ಆ ಐದು ಲಕ್ಷಣಗಳ ಜೊತೆ ಅರಿಶಿಣ ಕುಂಕುಮವು ಮುತ್ತೈದಿಯ ಅಮೂಲ್ಯ ಸಂಪತ್ತು ಸೌಭಾಗ್ಯದ ಸಂಕೇತಗಳು.

'ಮೂರು ಸಂಜೆಲೆ ಮುತ್ತೈದಿ ಬಾಯಿಲೆ ಕೇಳಿ ಬಾ ತಮ್ಮ ಶಕುನವ' ಎಂಬ ತ್ರಿಪದಿಯೂ ಉಪಲಬ್ದವಿದೆ. ಮುತ್ ಎನ್ನುವ ಶಬ್ದದ ಅರ್ಥದಂತೆ ಹಳೆಯ ಎನ್ನುವ ಶಬ್ದ ಹಿರಿಯರು ಸಂಸಾರದ ಅನುಭವಸ್ಥರು, ತಮ್ಮ ನೋವು ನಲಿವಿನ ಜೀವನದಲ್ಲಿ ಕಂಡುಂಡ ಅನುಭವದ ಆಧಾರ ಮೇಲೆ ತಮಗಿಂತ ಕಿರಿಯರಾದವರಿಗೆ ಬುದ್ಧಿ ಹೇಳುವರಾಗಿರುತ್ತಾರೆ. ಅದಕ್ಕೆ ಅವರಾಡುವ ಮಾತುಗಳು ಸುಳ್ಳಲ್ಲ. ಅವರು ಹೇಳಿದ್ದು ನಿಜವೆಂದು ನಂಬುತ್ತಾರೆ. ಇಲ್ಲಿ ಹಿರಯರು ನಿಜ ಮಾತಾಡಬೇಕೆಂಬುದು ತೋರಿಸಿಕೊಡುತ್ತದೆ. ಹಾಗೆಯೇ ಸಮಾಜದ ಜನಪದರು ತಮಗಿಂತ ಹಿರಿಯರು ತಮ್ಮ ಮನೆಯವರಂದೆ ಭಾವಿಸಿರುವುದು ಕಂಡು ಬರುತ್ತದೆ.

**೨೫. ಗೋವನ್ನು ಪೂಜಿಸುವುದು :**

ಎತ್ತು ಬಸವಣ್ಣನಾದರೆ ಗೋವು ಛತ್ತೀಸ (೩೬) ಕೋಟಿ ದೇವರನ್ನು ಅಡಗಿಸಿಕೊಂಡಿರುವ ದೇವತೆ ಎನ್ನುವ ನಂಬಿಕೆ ಜನರಲ್ಲಿದೆ. ಮೂಕ ಪ್ರಾಣಿಗಳಾದ ಇವುಗಳನ್ನು ತಮ್ಮ ಸಹಾಯಕ್ಕಾಗಿ ಬಳಸಿಕೊಳ್ಳುತ್ತಾರೆ. ಗೋವು ಮುಗ್ಧವಾದ ಪ್ರಾಣಿಯಾಗಿದ್ದು ಅದು ಹಾಲುಕೊಟ್ಟು ಉಪಕರಿಸುತ್ತದೆ. ಆಕಳ ಹಾಲು ಎಮ್ಮೆ ಹಾಲಿಗಿಂತ ಶೇಷ್ಠವೆಂದು ತಿಳಿಯಲಾಗಿದೆ. ಅದಕ್ಕಾಗಿ ತಾಯಿ ಎದೆ ಹಾಲಿಗೆ ಸಮ ಎಂದು ಹೇಳಲಾಗುತ್ತದೆ. ದೇವರ ಪೂಜೆಯಲ್ಲಿ ಆಕಳ ಹಾಲು, ಗೋಮೂತ್ರ ಉಪಯೋಗಿಸುವುದುಂಟು. ಇವುಗಳಲ್ಲದೆ ಅಭಿಷೇಕವೇ ನಡೆಯುವುದಿಲ್ಲ. ಇಂತಹ ಉಪಯುಕ್ತ ಜೀವಿಯಾಗಿರುವ ಆಕಳನ್ನು ಪೂಜಿಸಿ ತಮ್ಮ ಗೌರವ ಸಲ್ಲಿಸುವ ಜನಪದರ ರೂಢಿ ಇಂದಿಗೂ ಪ್ರಚಲಿದತದಲ್ಲಿದೆ. ತಾಯಿಯ ಎದೆ ಹಾಲು ಮಗುವಿಗೆ ಪೌಷ್ಟಿಕತೆಯನ್ನು ಒದಗಿಸುವಂತೆ ಆಕಳ ಹಾಲಿನಲ್ಲೂ ಅಷ್ಟೇ ಉತ್ತಮ ಪೌಷ್ಟಿಕಾಂಶ ಇರುವುದರಿಂದ ಆರೋಗ್ಯಕ್ಕೆ ಉತ್ತಮ ಹಾಗೆಯೇ ಗೋಮೂತ್ರವು ಕೆಮ್ಮು ಮುಂತಾದ ರೋಗಗಳು ನಿವಾರಿಸುತ್ತದೆ. ಕ್ಯಾನ್ಸರ್ ರೋಗ ನಿವಾರಕ ಶಕ್ತಿ ಇದರಲ್ಲಿರುವುದನ್ನು ಇತ್ತೀಚೆಗೆ ಸಂಶೋಧಕರು ಗುರುತಿಸಿದ್ದಾರೆ. ಇದರ ಸಗಣಿಯು ಅಷ್ಟೇ ಉಪಯುಕ್ತವಾದದ್ದು. ಸಗಣಿಯಿಂದ ಮನೆ ಸಾರಿಸುವುದರಿಂದ ಮನೆಯನ್ನು ಉಷ್ಣ ಮತ್ತು ತಂಪಿನಿಂದ ಸಮಪ್ರಮಾಣದಲ್ಲಿರಿಸುತ್ತದೆ. ಆದ್ದರಿಂದ ಗೋವಿನ ಹಾಲು, ಮೂತ್ರ, ಸಗಣಿ ಆರೋಗ್ಯವನ್ನು ಕಾಪಾಡುವ ವೈಜ್ಞಾನಿಕ ಗುಣ ಅದರಲ್ಲಿರುವವು. ಅಲ್ಲದೆ ಅದರ ಸ್ಪರ್ಶದಿಂದಲೂ ಒಳ್ಳೆಯ ಪರಿಣಾಮ ಬೀರಲಿ ಎನ್ನುವ ಉದ್ದೇಶದಿಂದಲೇ ಗೋವನ್ನು ಮುಟ್ಟಿ ನಮಸ್ಕರಿಸುವ ನಂಬಿಕೆಯಿದ್ದಿರಬೇಕು. ಮಕ್ಕಳಿಗಂತು ದೃಷ್ಟಿತಾಗದಿರಲೆಂದು ಅದರ ಬಾಲದಿಂದ ಮೂರು ಬಾರಿ ಮೇಲಿನಿಂದ ಕೆಳಗೆ ಮುಖದ ಎದುರಿಗೆ ಇಳಿಸುತ್ತಾರೆ.

**೨೬. ದೇವರ ಮುಂದೆ ಭಜನೆ ಮಾಡುವುದು :**

ದೇವರ ಮುಂದೆ ಭಜನೆ ಹಾಕುವ ನಂಬಿಕೆಯು ಇಂದಿಗೂ ರೂಢಿಯಲ್ಲಿರುವುದು. ಭಜನೆ ಎಂದರೆ ದೇವರ ಮುಂದೆ ನಾಲ್ಕಾರು ಜನ ಸೇರಿ ಶ್ಲೋಕ, ಪದ್ಯ ಪದಗಳನ್ನು ತಮ್ಮ ತಮ್ಮ ಮನ ಬಂದಂತೆ

ರಚಿಸಿಕೊಂಡು ತಾಳ ತಂಬೂರಿ – ಮದ್ದಳೆಗಳ ಸಮೇತ ಭಗವಂತನನ್ನು ಕುರಿತು ಸ್ಮರಿಸುವುದಾಗಿದೆ. ಹಿಂದಿನ ಕಾಲದಲ್ಲಿ ಜನರು ಹಗಲೆಲ್ಲಾ ಕೃಷಿ ಕೆಲಸದಲ್ಲಿ ತೊಡಗುವುದರಿಂದ ಬಿಡುವು ಸಿಗದೆ ಇರುವುದು. ಕಾರಣವಾಗಿರಬೇಕು. ಒಬ್ಬನೇ ಹಾಡುವುದಕ್ಕಿಂತ ಜೊತೆಯಾಗಿ ಹಾಡುಗಾರರಿದ್ದರೆ ಎತ್ತರ ದಾಟಿ ಮತ್ತೊಬ್ಬರಿಗೂ ಕೇಳಲು ಹಿತವೆನಿಸುವುದು. ಈ ನೇಪದಿಂದಾದರೂ ದೇವರನ್ನು ಸ್ಮರಿಸುವ ಅವಕಾಶ ಸಿಗುತ್ತದೆಂಬುದಾಗಿರಬೇಕು.

ಭಜನೆ ಎಂದರೆ ಸ್ವೀಕರಿಸು ಎನ್ನುವ ಅರ್ಥವಿದೆ. ಇಲ್ಲಿ ನಿಜವಾದ ಭಜನೆ ಎಂದರೆ ತನ್ನ ಜೀವಾತ್ಮನನ್ನು ತನ್ನ ಅಂತರಂಗದ ಪರಮಾತ್ಮನಲ್ಲಿ ಸಂಯೋಜಿಸುವುದು. ಇದು ಆಗುವುದು ಮೌನ ಮುದ್ರೆಯಲ್ಲಿ ಹಾಗೂ ತಮ್ಮ ತಮ್ಮ ಅಂತಮುರ್ಖಿವಾಗಿ ಹೀಗಲ್ಲದೆ ಬಹಿಮುರ್ಖಿವಾದ ಪ್ರಚೋದನೆಯಿಂದಲ್ಲ.

ಧ್ಯಾನಯೋಗದ ಮೆಟ್ಟಲುಗಳನ್ನೇರುವ ಸಾಧಕನಿಗೆ ಭಜನೆ ತುಂಬ ಸಹಕಾರಿಯಾಗಬಹುದು. ಯಮ ನಿಯಮಗಳಿಂದ ಪ್ರಾರಂಭಿಸಿ ಪ್ರತ್ಯಾಹಾರ ಧಾರ್ರಣಗಳ ತನಕದ ಒಂದೊಂದು ಮೆಟ್ಟಲನ್ನು ಏರುವಲ್ಲಿ ಭಜನೆ ವಿಶೇಷವಾದ ಶಕ್ತಿಯನ್ನು ನೀಡಬಲ್ಲದು. ಮನಸ್ಸು ಹದಮಾಡಬಲ್ಲದು. ಮಾನಸಿಕವಾದ ಹದವೇ ಮನಃ ಶಾಂತಿಯ ಮೂಲಸಾಧನ. ಭಜನೆ ಇದಕ್ಕೆ ಒಂದು ಅತ್ಯಂತ ಪ್ರಶಸ್ತವಾದ ಮಾಧ್ಯಮ. ಏಕಾಗ್ರತೆಗೆ ನೆರವಾಗುವ ಭಜನೆ ತನ್ಮೂಲಕ ಮನಃ ಶಾಂತಿಯನ್ನು ಒದಗಿಸಿ ಮನಸ್ಸಿನ ಆರೋಗ್ಯವನ್ನು ಕಾಪಾಡುವುದಕ್ಕೆ ಪ್ರಯೋಜನಕಾರಿ ಎಂಬುದರಲ್ಲಿ ಸಂದೇಹವಿಲ್ಲ.

**೨೭. ಗೊಂದಲ ಹಾಕಿಸುವುದು :**

ಗೊಂದಲು ಕನ್ನಡ ನಾಡಿನಾದ್ಯಂತ ತುಳಜಾಪೂರದ ಅಂಬಾಭವಾನಿ ಹೆಸರಿನಲ್ಲಿ ಹಾಕಿಸುವ ನಂಬಿಕೆಯಿದೆ. ಗೊಂದಲು ತುಳಜಾಪೂರಕ್ಕೆ ಹೋದಾಗ ಸ್ವಲ್ಪ ಸಮಯದಲ್ಲೇ ಅಲ್ಲಿನ ಭೂತೇರು ಎನ್ನುವ ಪೂಜಾರಿಗಳಿಂದ ಹಾಕಿಸುತ್ತಾರೆ. ಇನ್ನು ತುಳಜಾಪೂರಕ್ಕೆ ಹೋಗಿ ಬಂದ ಮನೆಗಳಲ್ಲಿ ಹರಕೆಯಿದ್ದವರು ಗೊಂದಲು ಹಾಕಿಸುತ್ತಾರೆ. ಮರಾಠ, ಸಿಂಪಿಗ, ಸೋನಾರ್ ಹಾಗೂ ಹಿಂದೂ ಧರ್ಮದವರು ಒಳಗೊಂಡಂತೆ ಇತರ ಜಾತಿಯವರು ಶುಭ ಸಂದರ್ಭಗಳಲ್ಲಿ ಗೊಂದಲವನ್ನು ಏರ್ಪಡಿಸುವ ಸಂಪ್ರದಾಯವಿದೆ.

ಅಂಬಾಭವಾನಿ ಎದುರಿಗೆ ಬೆಳಕು ಹರಿಯುವವರೆಗೂ ಕಥೆಯನ್ನು ಹಾಡುತ್ತಾ ಕುಣಿಯುತ್ತಾ ಇರುವುದೇ ಗೊಂದಲದ ಪೂಜಾ ವಿಧಾನ ಇದನ್ನು ಗೊಂದಲಹಾಕುವುದು' ಎಂದು ಕರೆಯುತ್ತಾರೆ. ಹಾಡು ಗುಮ್ಮಟೆಗಳ ಬಡಿತ ದೀವಟಿಕೆದೊಂದಿಗಳ ಬೆಳಕು ಇತರ ವಾದ್ಯಗಳ ಹಿಮ್ಮೇಳ ರಾತ್ರಿಯ ಹಿನ್ನಲೆ ಹೀಗೆ ಒಟ್ಟು ಸೇರಿ ಗೊಂದಲದ ಸನ್ನಿವೇಶ ನಿರ್ಮಾಣವಾಗುತ್ತದೆ. ಇಂತಹ ಸನ್ನಿವೇಶವನ್ನು ಜನಪದರು ಅನ್ವರ್ಥವಾಗಿಯೇ ಪರಿಭಾವಿಸಿ 'ಗೊಂದಲು' ಎಂದು ಕರೆದಿದ್ದಾರೆ.

ಇದನ್ನು ನೆರವೇರಿಸಿಕೊಡುವವರು ಗೊಂದಲಿಗರು. ಇವರು ಮೂಲತಹ ಕನ್ನಡದವರಾಗಿದ್ದರೂ ಹರಕು ಮುರುಕು ಮರಾಠಿ ಭಾಷೆ ಉಪಯೋಗಿಸುತ್ತಾರೆ. ಇವರ ಜೀವನ ವಿಧಾನ ಹಿಂದೂಗಳದ್ದಾಗಿದೆ. ಕಥೆ–ಹಾಡುಗಳನ್ನು ಹೇಳಿ ಜನಪದ ರಂಗಭೂಮಿಯ ರಚನೆಯನ್ನು ರಚನಾಕ್ರಿಯೆಯನ್ನು ಕಾಯ್ದುಕೊಂಡು ಬಂದಿದ್ದಾರೆ. ಅಂಬಾಭವಾನಿ ಹೆಸರಿನಲ್ಲಿ ಹಡಗಿ ತೆಗೆದುಕೊಂಡು ಜೋಗ ಬೇಡುವ ಇನ್ನೊಂದು ಪದ್ಧತಿಯಿದೆ.

**೨೮. ಗೃಹ ಪ್ರವೇಶ ಮಾಡುವುದು :**

ಹೊಸದಾಗಿ ಕಟ್ಟಿದ ಮನೆಯನ್ನು ನೇರವಾಗಿ ಬಳಸಬಾರದೆಂಬ ನಂಬಿಕೆಯಿಂದಾಗಿ ಗೃಹ ಪ್ರವೇಶ ದಿನ ಶುಭದಿನ, ಶುಭ ಮೂಹರ್ತವನ್ನು ನೋಡಿ ರುದ್ರಾಭಿಷೇಕ, ಮುತ್ತೈದಿಯರನ್ನು ಕರೆದುಕೊಳ್ಳುವ ಮೂಲಕ ಹೊಸ ಮನೆ ಪ್ರವೇಶ ಮಾಡುವುದು ರೂಢಿಯಲ್ಲಿದೆ. ಹೊಸದಾಗಿ ಕಟ್ಟಿದ ಮನೆಗೆ ತನ್ನ ಬಂಧು ಬಳಗ ಆಪ್ತದವರಿಗೂ ಹೊಸ ಮನೆ ಇಲ್ಲಿದೆ ಹೀಗಿದೆ ಎಂದು ತಿಳಿಸುವ ಉದ್ದೇಶವಿರಬಹುದು. ಹೊಸದಾಗಿ ವಿವಾಹವಾಗುತ್ತಿರುವ ವಧು-ವರರು ಇತರರಿಗೆ ಪರಿಚಯಿಸಲು ವಿವಾಹಕ್ಕೆ ಆಮಂತ್ರಿಸಿದಂತೆ, ಗೃಹಪ್ರವೇಶ ಸಂದರ್ಭದಲ್ಲೂ ಎಲ್ಲರನ್ನೂ ಆಮಂತ್ರಿಸುವ ರೂಢಿಯಿದೆ. ಮದುವೆಗೆ ಅನುಸರಿಸುವ ಧಾರ್ಮಿಕ ನಿಯಮಗಳು ಇಲ್ಲ ಪಾಲಿಸಬೇಕಾಗುತ್ತದೆ. ಹೊಸ ಮನೆ ಎಲ್ಲರಿಗೂ ಗುರುತಿಸಬೇಕಲ್ಲವೆ. ಇನ್ನೂ ಮನೆ ಚೆನ್ನಾಗಿ ಆಗಿದೆ ಅಥವಾ ಇಲ್ಲ ಇನ್ನೂ ಏನನ್ನಾದರೂ ಮಾಡಿಸಬೇಕಾ ? ಎನ್ನುವ ಸಾಮಾನ್ಯ ಪದ್ಧತಿಗಳು ಒಳಗೊಂಡಿರುತ್ತವೆ.

**೨೮. ವಾಸ್ತು ಪ್ರಕಾರ ಮನೆ ನಿರ್ಮಿಸಬೇಕು :**

ಗೃಹ ನಿರ್ಮಾಣಕ್ಕಾಗಿ ಮತ್ತು ಇತರ ಕಟ್ಟಡಗಳ ರಚನೆಗಾಗಿ ಹೇಳಲ್ಪಟ್ಟು ಶಾಸ್ತ್ರ ವಾಸ್ತುಶಾಸ್ತ್ರ. ಈ ವಾಸ್ತು ಪುರುಷನ ಕುರಿತ ಒಂದು ಕಥೆಯಿದೆ. ವಾಸ್ತು ಪುರುಷ ಮಹಾಭೂತ ಎಂದು ತಿಳಿಯಲಾಗಿದೆ. ಶಿವನು ಅಂಧಕಾಸುರನ್ನು ವಿಧಿಸುವ ಕಾಲದಲ್ಲಿ ಶಿವನ ಬೆವರಿನಿಂದ ಉದಯಿಸಿದ ಭಯಂಕರ ಆಕಾರದಲ್ಲಿ ಹುಟ್ಟಿದ ಭೂತ. ಈ ಭೂತ ಭೋಲೋಕದ ಜೀವಿಗಳನ್ನೆಲ್ಲಾ ತೊಂದರೆ ಕೊಡುವುದನ್ನು ಕಂಡ ಇತರ ದೇವತೆಗಳು ಒಟ್ಟುಗೂಡಿ ತಲೆಕೆಳಗಾಗಿ ಮಲಗಿಸಿ ಅವನ ಮೇಲೆ ಕುಳಿತರು. ಏಳದಂತೆ ಮಾಡಿ ಒಂದು ಸ್ಥಳದಲ್ಲಿ ಬಿದ್ದಿರುವಂತೆ ಮಾಡಿದರು. ಎಲ್ಲ ನಿವೇಶನಗಳಲ್ಲೂ ಬಿದ್ದುಕೊಂಡಿದ್ದು ತಲೆ ಈಶಾನ್ಯ ದಿಕ್ಕಿನಲ್ಲಿ, ಬಲತೋಳು, ಪೂರ್ವದಿಕ್ಕಿಗೂ, ಎಡತೋಳು ಉತ್ತರದಿಕ್ಕಿಗೂ ಅವನ ಬಲ ಮೊಣಕಾಲು ಮೊಣಕೈ ಆಗ್ನೇಯ ದಿಕ್ಕಿಗೂ, ಎಡ ಮೊಣಕೈ ಎಡ ಮೊಣಕಾಲು ವಾಯುವ್ಯ ದಿಕ್ಕಿಗೂ ಬಲ ಮುಂಗಾಲು ದಕ್ಷಿಣ ದಿಕ್ಕಿಗೂ, ಎಡ ಮುಂಗಾಲು ಪಶ್ಚಿಮ ದಿಕ್ಕಿಗೂ ಹಾಗೂ ಎರಡು ಪಾದಗಳೂ ನೈರುತ್ಯ ದಿಕ್ಕಿಗೂ ಚಾಚಿಕೊಂಡಿದೆ. ಎಂದು ಹೇಳಲಾಗಿದೆ. ಯಾರು ವಾಸ್ತು ಪುರುಷನ ತಲೆ ಅಥವಾ ಪಾದದ ಕಡೆ ನಿರ್ಮಾಣ ಕಾರ್ಯ ಮಾಡುತ್ತಾರೋ ಅಂಥವರಿಗೆ ತೊಂದರೆ ಕೊಡಬೇಕೆಂದು ವಾಸ್ತು ಪುರುಷನಿಗೆ ದೇವತೆಗಳು ನಿಯಮಿಸಿದರು. ಆದ್ದರಿಂದ ವಾಸ್ತು ಪುರುಷ ಎಂಬ ಒಂದು ಕಲ್ಪಿತ ಭೂತವು ತೊಂದರೆ ಕೊಡುವುದಕ್ಕಾಗಿಯೇ ಇದೆ ಎಂದು ಕಥೆ ಕಟ್ಟಿ ಹಲವಾರು ವರ್ಷಗಳಿಂದ ಹೇಳುತ್ತಾ ಬಂದಿದ್ದಾರೆ.

ಈಶಾನ್ಯ ದಿಕ್ಕಿಗೆ ಈಶ್ವರ (ದೇವರ ಕೋಣೆ) ಪೂರ್ವದಿಕ್ಕಿಗೆ ಇಂದ್ರ ಆಗ್ನೆಯಕ್ಕೆ ಅಗ್ನಿ (ಅಡುಗೆಮನೆ) ದಕ್ಷಿಣಕ್ಕೆ ಯಮ ನೈರುತ್ಯಕ್ಕೆ (ಮಲಗುವ ಮನೆ) ಪಶ್ಚಿಮಕ್ಕೆ ವರುಣ, ವಾಯುವ್ಯಕ್ಕೆ (ಭಾರ ವಸ್ತುಗಳಿಡುವ ಕೋಣೆ) ಉತ್ತರಕ್ಕೆ ಕುಬೇರನೆಂದು ನಂಬಿರುವರು.

ಒಂದು ನಿವೇಶನಕ್ಕೆ ಅಥವಾ ಮನೆಯ ಯಾವ ಯಾವ ಭಾಗಗಳು, ರಚನೆಗಳು, ಅಂಗಗಳು ಇರಬೇಕು ಹಾಗೂ ಯಾವ ದಿಕ್ಕುಗಳಲ್ಲಿ ಏನೇನು ಇರಬೇಕು ಏನೇನು ಇರಬಾರದೆಂಬುದೇ ವಾಸ್ತುವಿನ ಅತಿ ಮುಖ್ಯ ಅಂಶಗಳಲ್ಲಿ ಒಂದು. ಈ ವಾಸ್ತು ನಂಬಿಕೆ ಕುರುಡು ನಂಬಿಕೆ ಎಂದು ಜ್ಯೋತಿಷ್ಯದ ಬಗ್ಗೆ ದೀರ್ಘಕಾಲದ

ಅಧ್ಯಯನ ನಡೆಸಿ ಬರೆದ 'ಹತ್ತು ಲಕ್ಷ ರೂಪಾಯಿ ಜ್ಯೋತಿಷಕ್ಕೆ ಸವಾಲು' ಎನ್ನುವ ಪುಸ್ತಕದ ಲೇಖಕರಾದ ಎ.ಎಸ್.ನಟರಾಜ್ ಗುರುತಿಸುತ್ತಾರೆ.

ಹಾಗೆಯೇ ಇದು ಹಲವಾರು ವರ್ಷಗಳಿಂದ ಜಾರಿಗೆ ಬಂದ ಶಾಸ್ತ್ರವಾದರೂ ಅಷ್ಟು ಪ್ರಾಮುಖ್ಯತೆ ಕೊಡುತ್ತಿರಲಿಲ್ಲ. ಆದರೆ ಇತ್ತೀಚೀನ ವಿಚಾರವಂತ ಇಂಜನೀಯರುಗಳು ಹೆಚ್ಚಾದಂತೆ ಜನರನ್ನು ಈ ಧಾರ್ಮಿಕ ನಂಬಿಕೆಗೊಳಪಡಿಸಿದ್ದು ಸ್ಥಿತಿಯಲ್ಲಿ ಸಿಲುಕಿಸುತ್ತಿದ್ದಾರೆ. ಬೆಂಗಳೂರಿನ ಸುತ್ತಮುತ್ತಲಿನ ಹಾಗೂ ಆಂಧ್ರಪ್ರದೇಶದ ಗಡಿಗುಂಟ ಈ ಹಗಲು ದರೋಡೆಯ ಹಾವಳಿ ಹೆಚ್ಚು ಈ ಪ್ರದೇಶದಲ್ಲಿ ಆಂಧ್ರ ಪ್ರದೇಶದಿಂದ ಬಂದಂತಹ 'ಕಾಂಟ್ರಾಕ್ಟರ್; ಇಂಜನೀಯರರು ಹೆಚ್ಚಾಗಿ ಕಟ್ಟಡ ನಿರ್ಮಾಣ ಕೆಲಸದಲ್ಲಿ ತೊಡಗಿದ್ದರಿಂದ ನಮ್ಮ ಕರ್ನಾಟಕ್ಕೂ ವಾಸ್ತುವಿನ ಅಂಟುರೋಗ ಹರಡಿಸುತ್ತಿದ್ದಾರೆಂಬುದನ್ನು ಸ್ಪಷ್ಟಪಡಿಸಿದ್ದಾರೆ.[೨೬] ಕಟ್ಟಡಗಳ ಕಾರ್ಯವು ಪರಿಸರಕ್ಕೆ ತಕ್ಕಂತೆ ಗಾಳಿ, ಮಳೆ, ಬೆಳಕು, ತಂಪು, ಬಿಸಿಲು ಇತ್ಯಾದಿಗಳು ಹಿತವಾಗುವ ರೀತಿಯಲ್ಲಿ ಗರಿಷ್ಠ ಉಪಯೋಗ ಪಡೆಯುವ ಕ್ರಮಬದ್ಧ ಯೋಜನಾ ಬದ್ಧ ನಿರ್ಮಾಣವೇ (ವಾಸ್ತವವೇ) ವಾಸ್ತು.

ಹಲವು ಗ್ರಂಥಗಳು ಒಂದೇ ವಿಷಯದ ಬಗ್ಗೆ ವಿಭಿನ್ನ ನಿಲುವುಗಳನ್ನು ಹೊಂದಿರುತ್ತವಾದುದರಿಂದ ಜನರಲ್ಲಿ ಭ್ರಮೆ ಉಂಟಾಗುವುದು. ಸಹಜ ಅದಕ್ಕೆ ಕಾರಣ ಅವು ಆಯಾ ಪರಿಸರಕ್ಕೆ ಸಂಬಂಧಿಸಿದ ರಚಿತವಾದವುಗಳು ಬಯಲು ಸೀಮೆ, ಮಲೆನಾಡು ಕರಾವಳಿಗಳಲ್ಲಿನ ಭೂದೃಶ್ಯಗಳು, ಪರಿಸರ ಇತ್ಯಾದಿ ವ್ಯತ್ಯಾಸ ಹೊಂದಿವೆ. ಹಾಗಾಗಿ ಎಲ್ಲೆಡೆ ಸಾಮಾನ್ಯ ನಿಯಮಗಳನ್ನು ಹೊರತುಪಡಿಸಿ ಉಳಿದವುಗಳನ್ನು ಹೊಂದಿಸಿಕೊಳ್ಳಬೇಕಾದಿತು.

**೨೯. ಪಂಚಾಂಗ ನೋಡುವುದು :**

ಜೀವನದ ಪ್ರತಿಯೊಂದು ಶುಭ-ಅಶುಭಕಾರ್ಯಗಳಲ್ಲೂ ಪಂಚಾಂಗ ನೋಡುವ ಪದ್ಧತಿ ಕಂಡು ಬರುತ್ತದೆ. ಇದು ಜನರಿಗೆ ಒಂದು ಸಂವಿಧಾನವಿದ್ದಂತೆ ಇದರಲ್ಲಿ ಹೇಳಿದ ನಿಯಮಗಳಾವು ತಪ್ಪುವಂತಿಲ್ಲ. ತಪ್ಪಿದರೆ ಏನಾಗುವದೊ ಎನ್ನುವ ಭಯ, ಬಡವ ಬಲ್ಲದ ವಿದ್ಯಾವಂತ ಅವಿದ್ಯಾವಂತ. ಪ್ರಜೆ – ಪ್ರತಿನಿಧಿ, ಆಡಳಿತಾಧಿಕಾರಿಗಳು ಮೊದಲುಗೊಂಡು ಪಂಚಾಂಗದ ಮೊರೆ ಹೋಗುವುದುಂಟು. ವಿಜ್ಞಾನ ಮತ್ತು ಮೂಢನಂಬಿಕೆಗಳ ಕಾಕತಾಳಿಯ ಈ ದಿನಗಳಲ್ಲಿಯೂ ಎರಡು ಅಷ್ಟೇ ಘಟಾನುಘಟಿಗಳೇ ಆಗಿವೆ.

ಪಂಚ + ಅಂಗ + ಪಂಚಾಂಗ ಎನ್ನುವುದು ತಿಥಿ, ವಾರ, ನಕ್ಷತ್ರ, ಯೋಗ ಮತ್ತು ಕಾರಣ ಇವು ಒಟ್ಟು ಪಂಚಾಂಗಗಳು ಎನಿಸಿದವು. ಮೂಹರ್ತ, ಗ್ರಹಗತಿ, ಗ್ರಹಣ ಇತ್ಯಾದಿಗಳ ಜ್ಞಾನಕ್ಕೆ ಪಂಚಾಂಗವಿದೆ. ಪಂಚಾಂಗವನ್ನು ಮೊದಲಿಗೆ ಈಜಿಪ್ಟ್ ನಾಗರಿಕತೆ ಜನರು (ಸೌರಮಾನ ಪಂಚಾಂಗ) ರಚಿಸಿದರು. ಸುಮೇರಿಯನ್ನರು ಚಂದ್ರಮಾನ (ಅಮವಾಸ್ಯೆಯಿಂದ ಅಮವಾಸ್ಯೆಗೆ ಒಂದು ತಿಂಗಳ ಲೆಕ್ಕದಂತೆ) ಪಂಚಾಂಗ ಸರಿಪಡಿಸಲು ಆಗಾಗ್ಗೆ ಒಂದು ಹೆಚ್ಚಿನ ತಿಂಗಳನ್ನು ಅಧಿಕ ಮಾಸವಾಗಿ ವರ್ಷದಲ್ಲಿ ಸೇರಿಸುತ್ತಿದ್ದರು.

ನಮ್ಮ ರಾಷ್ಟ್ರೀಯ ಪಂಚಾಂಗವು ಜಾರಿಗೊಳಿಸಿದ್ದು. ಅದರ ಪ್ರಕಾರ ಮಾರ್ಚ ೨೨ ವರ್ಷದ ಆರಂಭ ದಿನ. ಅಧಿಕವರ್ಷದಲ್ಲಿ. ಅದು ಮಾರ್ಚ ೨೧ ವರ್ಷದ ಆರಂಭ ದಿನ. ಇದು ಶಕವರ್ಷವನ್ನು

೨೬. (ಅಡಿಟಿಪ್ಪಣಿ:೨೬: ಹತ್ತು ಲಕ್ಷ ರೂಪಾಯಿ ಜ್ಯೋತಿಷಕ್ಕೆ ಸವಾಲುಗಳು ಎ.ಎಸ್.ನಟರಾಜ್ ಪುಟ ಸಂಖ್ಯೆ-೨೭೬)

ಒಳಗೊಂಡಿದೆ. ಇದನ್ನು ರಚಿಸುವಲ್ಲಿ ಖ್ಯಾತ ವಿಜ್ಞಾನಿ ದಿವಗಂತ ಮೇಘನಾದ ಸಹಾ ಅವರು ಪ್ರಮುಖ ಪಾತ್ರವಹಿಸಿದರು. ಇವುಗಳಲ್ಲದೆ ಅನೇಕ ಪಂಚಾಂಗಗಳು ಪ್ರಚಲಿತದಲ್ಲಿವೆ.

ಸೂರ್ಯನ ನಡೆಯನ್ನಾಧರಿಸಿ ಸೌರಮಾನ ಪಂಚಾಂಗ ಹಾಗೂ ಚಂದ್ರನ ಚಲನೆಯನ್ನುಸರಿಸಿ ಚಂದ್ರಮಾನ ಪಂಚಾಂಗ ಉಂಟು. ಸೌರಮಾನ ಕ್ರಮದಲ್ಲಿ ಸಂಕ್ರಮಣದಿಂದ ವರ್ಷಾರಂಭ ಸೂರ್ಯನು ಮೇಷರಾಶಿಯಲ್ಲಿ ಉದಯಿಸಿ ತಿಂಗಳಿಗೊಂದು ರಾಶಿಯಲ್ಲಿ ಉದಯಿಸುತ್ತಾನೆ. ಸೂರ್ಯದಯ ಕಾಲ ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸ ಇದೆ. ಚಂದ್ರಮಾನ ಪದ್ಧತಿಯ ಪಂಚಾಂಗವು ಚಂದ್ರನ ಚಲನೆಯಾಧರಿಸಿದ್ದು ಅಮವಾಸ್ಯೆ ಮರುದಿನದಿಂದ ಹುಣ್ಣಿಮೆಯ ಶುಕ್ಲಪಕ್ಷದ ಹದಿನೈದು ದಿನ ಹಾಗೂ ಆನಂತರ ಕೃಷ್ಣಪಕ್ಷ ಹದಿನೈದು ಒಟ್ಟು ಮೂವತ್ತು ದಿನಗಳು, ತಿಥಿಗಳು, ಪಾಡ್ಯ, ಬಿದಿಗೆ ಇತ್ಯಾದಿ. ಚಂದ್ರನು ಹನ್ನೆರಡು ರಾಶಿ ಸಂಚರಿಸಿದಾಗ ಒಂದು ತಿಂಗಳು ಹನ್ನೆರಡು ಸಂಚಾರಕ್ಕೆ ಒಂದು ವರ್ಷವಾಗುತ್ತದೆ. ಚಂದ್ರಮಾನ ಯುಗಾದಿಯಿಂದ ವರ್ಷಾರಂಭ.

ನಕ್ಷತ್ರಗಳು ೨೭ ಒಂದೊಂದು ನಕ್ಷತ್ರಕ್ಕೂ ನಾಲ್ಕು ಪಾದ. ೯ ಪಾದ ಸೇರಿ ಒಂದು ರಾಶಿ. ಮೇಷ ಮತ್ತು ಕೃತಿಕಾ ನಕ್ಷತ್ರದ ಮೂರು ಪಾದ. ರೋಹಿಣಿಯು ನಾಲ್ಕು ಪಾದಗಳು ಮತ್ತು ಮೃಗಶಿರಾದ ಎರಡು ಪಾದ ಒಟ್ಟು ಒಂಭತ್ತು ಪಾದಗಳು ಸೇರಿ ವೃಷಭ ರಾಶಿಯಾಗುತ್ತದೆ.

ಇವುಗಳ ಆಧಾರದಿಂದ ಮೇಲೆ ಒಳ್ಳೆದಿನ, ಮೂಹರ್ತ, ಭವಿಷ್ಯ ತಿಳಿಯಲು ಪಂಚಾಂಗ ನೋಡುತ್ತಾರೆ. ಆದರೆ ಆಕಾಶ ಕಾಯಗಳಾದ ಸೂರ್ಯ, ಚಂದ್ರ, ನಕ್ಷತ್ರ ಗ್ರಹಗಳು ಇವೆಲ್ಲಾ ನಿರಂತರ ಚಲನೆಯಲ್ಲಿ ಇರುತ್ತವೆ. ಇಂತಹ ಘಟಿಕಾ, ಸ್ಥಾನ, ರಾಶಿ, ಪ್ರವೇಶಿಸಿ ಜನರಿಗೆ ಕಷ್ಟ ಕೊಡಬೇಕೆಂಬ ಉದ್ದೇಶವೂ ಇರುವುದಿಲ್ಲ. ಈ ಹಿಂದಿನ ಜನರು ಪ್ರಕೃತಿಯಲ್ಲಿನ ಆಗು ಹೋಗುಗಳಿಗೆ ಹೆಸರಿಸಿ ತಮ್ಮದೆ ನಿಯಮಗಳನ್ನು ರೂಪಿಸಿಕೊಂಡಂತೆ ಪಂಚಾಂಗಗಳನ್ನು ಮೊರೆ ಹೋಗಿದ್ದುಂಟು. ಮಾನವನ ಕ್ರಿಯಾ ಚಟುವಟಿಕೆಗಳಿಗೆ ಪಂಚಾಂಗ ಯಾವುದೇ ರೀತಿಯಲ್ಲಿ ಹೊಣೆಗಾರಿಕೆಯಾಗದೆಂದೇ ಹೇಳಬಹುದು. ಅದು ಕೇವಲ ಅವನ ಮನಸ್ಸಿನ ಸಮಧಾನಗೋಸ್ಕರ ನೋಡಬಹುದಷ್ಟೇ. ಇತ್ತೀಚೀಗಂತು ಅನೇಕ ಗ್ರಂಥಗಳ ಆಧಾರದ ಮೇಲೆ ತಮ್ಮ ಊಹೆಗಳ ಮೂಲಕ ಅನೇಕ ಪಂಚಾಂಗಗಳನ್ನು ರಚಿಸುತ್ತಿದ್ದಾರೆ. ಒಬ್ಬರ ಪಂಚಾಂಗದಲ್ಲಿ ಹೇಳಿದ ವಿಷಯಕ್ಕೂ ಇನ್ನೊಬ್ಬರ ಪಂಚಾಂಗ ವಿಷಯಕ್ಕೂ ವ್ಯತ್ಯಾಸವುಂಟಾಗಿ ಜನರ ಗೊಂದಲಕ್ಕೆ ಎಡೆ ಮಾಡಿಕೊಡುತ್ತಿವೆ. ತನ್ನ ಆಗು ಹೋಗುಗಳ ಬಗ್ಗೆ ತಾನೆ ಪ್ರಜ್ಞಾಪೂರ್ವಕವಾಗಿ ಕಾರ್ಯಕೈಗೊಳ್ಳುವುದು ಸೂಕ್ತವೆನಿಸುತ್ತದೆ.

**ಜ್ಯೋತಿಷ ಕೇಳಿಸಿಕೊಳ್ಳವುದು:**

ಮಾನವನ ಜೀವನದಲ್ಲಿ ಮುಂದಾಗುವ ಸಂಗತಿಗಳ ರೂಪ ರೇಖೆಯನ್ನು ಕೊಡುವುದು. ಎಂಬ ನಂಬಿಕೆಯೇ ಜ್ಯೋತಿಷ ಶಾಸ್ತ್ರ ದಿನ ನಿತ್ಯದ ಅನೇಕ ವಿಷಯಗಳಿಗೆ ಸಂಬಂಧಿಸಿದಂತೆ ಜ್ಯೋತಿಷ ಕೇಳಿಸಿಕೊಳ್ಳುವುದರ ಜನಪದರ ನಂಬಿಕೆಯಾಗಿದೆ.

ಜ್ಯೋತಿಷ ಖಗೋಳ ಶಾಸ್ತ್ರದ ಆಧಾರದ ಮೇಲೆ ರಚನೆಯಾಗಿದೆ ಎಂದು ನಂಬಿಕೆಯಿಟ್ಟುಕೊಂಡು ಬಂದಿದ್ದಾರೆ. ಖಗೋಳ ವಿಜ್ಞಾನವು ಆಕಾಶ ವ್ಯಾಪ್ತಿಯಾಗಿರುವ ಸೂರ್ಯ, ಚಂದ್ರನ, ನಕ್ಷತ್ರ, ಗ್ರಹ, ಉಪಗ್ರಹ

ಬ್ರಹ್ಮಾಂಡಗಳ ಕುರಿತು ಹೇಳುತ್ತದೆ. ಆಕಾಶ ಕಾಯಗಳ ದೂರ ಅವುಗಳು ತನ್ನ ಅಕ್ಷಗಳಲ್ಲಿ ಬೇರೊಂದು ಆಕಾಶ ಕಾಯಗಳನ್ನು ಸುತ್ತು ಹಾಕುವ ಕಾಲ. ಆಕಾಶ ಕಾಯಗಳ ಗುಣ, ಲಕ್ಷಣ, ಗಾತ್ರ, ಆಕಾರ, ಸಾಂದ್ರತೆ, ಅನಿಲ ಘನ, ಬೆಳಕು, ಗುರುತ್ವಾಕರ್ಷಣಶಕ್ತಿ, ಗ್ರಹಣಕಾಲ, ಗ್ರಹಗಳ ಭ್ರಮಣ, ನಿರ್ಧಿಷ್ಟ ಸಮಯಕ್ಕೆ ಗ್ರಹಕುಂಡಲಿ (ಗೃಹಗಳ ಸ್ಥಾನ) ಇತ್ಯಾದಿಗಳನ್ನು ಸತ್ಯವೆಂದು ಹೇಳುತ್ತದೆ. ಆದರೆ ಗ್ರಹಗಳ ಚಲನೆಯಿಂದಾಗುವ ಫಲದೋಷ ಏನೆಂದು ಭವಿಷ್ಯ ಸೂಚಿಸುವುದಿಲ್ಲ. ಆದ್ದರಿಂದ ಖಗೋಳಶಾಸ್ತ್ರ ವಿಜ್ಞಾನವಾಗಿದೆ. ಈ ರೀತಿಯ ಸತ್ಯಗೊತ್ತಾದರು ಖಗೋಳ ವಿಜ್ಞಾನ ತಳದಲ್ಲಿಯೇ ಜ್ಯೋತಿಷ ನಿರ್ಮಾಣವಾಗಿದೆಂಬುದೇ ಜನಪದರ ಗೊಂದಲ ವಿಚಾರವಾಗಿದೆ.

**೩.೧. ಬ್ರಾಹ್ಮೀ ಮೂಹರ್ತದಲ್ಲಿ ಏಳಬೇಕು : ಒಳ್ಳೆಯದಾಗುತ್ತದೆ :**

ರಾತ್ರಿಯ ಕೊನೆ ಯಾಮ ಮತ್ತು ಅರುಣೋದಯಕ್ಕೆ ಮುನ್ನ ಇರುವ ಒಂದು ಮೂಹರ್ತ ಕಾಲವನ್ನು (ಒಂದು ಮೂಹರ್ತ ಅಂದರೆ ೪೮ ನಿಮಿಷ) ಬ್ರಾಹ್ಮೀ ಮೂಹರ್ತ ಎನ್ನುತ್ತಾರೆ. ಈ ಸಮಯದಲ್ಲಿ ಪ್ರಕೃತಿ ಸೂಕ್ಷ್ಮ ತರಂಗಗಳನ್ನು ಚೆಲ್ಲುತ್ತದೆ. ಬ್ರಹ್ಮ ಶಬ್ದಕ್ಕೆ ಜ್ಞಾನ ಎಂಬರ್ಥವೂ ಇರುವುದರಿಂದ ಈ ಸಮಯಜ್ಞಾನ ಪ್ರಚೋದಕ ಮುಂಜಾವಿನ ಪ್ರಶಾಂತ ವಾತಾವರಣ ತಂಪಾದ ಸುಳಿಗಾಳಿ ಜೀವನವನ್ನು ಪುನರ್ನವೀಕರಿಸುತ್ತವೆ. ತನು ಮನುಗಳ ಓಜೋ ವೃದ್ಧಿಯಾಗುತ್ತದೆ. ಹಾಗಾಗಿ ಈ ಸಮಯದಲ್ಲಿ ಎದು ದಿನದ ಚಟುವಟಿಕೆ ಆರಂಭಿಸಬೇಕೆಂದು ನಿಯಮ ಮಾಡಿಕೊಂಡಿರಬೇಕು. ಈ ಸಮಯದಲ್ಲಿ ಸಂಪೂರ್ಣ ಬೆಳಕು ಆಗದೆ ಇರುವ ಕಾರಣದಿಂದಾಗಿ ಜನರೆಲ್ಲಾ ನಿದ್ರಾವಸ್ಥೆಯಲ್ಲಿರುತ್ತಾರೆ. ಪ್ರಶಾಂತವಾತಾವರಣ ಓದಿಗೆ ಉತ್ತಮ ಪರಿಸರ ಗದ್ದಲದಲ್ಲಿ ಹಲವು ಬಾರಿ ಓದಿದರೂ ಪೂರ್ಣ ಗಮನಿಸಲಾಗುವುದಿಲ್ಲ. ಇನ್ನಿತರ ನಮ್ಮ ಸುತ್ತಲಿನ ಚಟುವಟಿಕೆಗಳ ಮೇಲೆ ಮನಸ್ಸು ಹರಿದು ಹೋಗುತ್ತದೆ. ಆದ್ದರಿಂದ ಓದಿದ್ದು ನೆನಪಿನಲ್ಲಿಟ್ಟುಕೊಳ್ಳುವ ಮನನ ಮಾಡಿಕೊಳ್ಳುವ ಸೂಕ್ತ ಸಮಯವಾಗಿರುತ್ತದೆ. ಓದು ಅಷ್ಟೇ ಏಕೆ ಹಿಂದಿನ ಜನಪದರು ಈ ಸಮಯದಲ್ಲಿಯೇ ಎದ್ದು ಬೀಸುವುದು ಕುಟ್ಟುವುದು ಮಾಡುತ್ತಿದ್ದರೆನ್ನುವುದು ತಿಳಿದುಬರುತ್ತದೆ. ಒಟ್ಟಾರೆ ಪ್ರಶಾಂತವಾದ ಈ ಸಮಯ ಓದು ಮತ್ತು ಕೆಲಸ ಕಾರ್ಯನ್ಮೋಖಗೊಳಿಸಲು ಯೋಗ್ಯ ಸಮಯ ಇದಾಗಿರುತ್ತದೆ. ಅಲ್ಲದೆ ಋಷಿ ಮುನಿಗಳು ಯೋಗಿವರ್ಯರು ಧ್ಯಾನ ಮಗ್ನರಾಗಲು ಇಂತಹ ಪ್ರಶಾಂತವಾದ ವಾತಾವರಣದ ಸಮಯವನ್ನೇ ಅವಲಂಬಿಸಿದ್ದರು.

**೩.೪. ಅಕ್ಷತೆ–ಮಂತ್ರಾಕ್ಷತೆ ಬಳಸುವುದು:**

ಅಕ್ಷತಾ ಎನ್ನುವುದರ ಅರ್ಥ ಶಾಶ್ವತವಾದದ್ದು. ಹೊಸ ಜೀವನಕ್ಕೆ ಕಾಲಿಡುವ ವಧು ವರರ ಬದುಕು ದೀರ್ಘಕಾಲ ಬದುಕಲಿ ಎಂದು ಹಾರೈಸುವ ವಿಧಾನ ಇದಾಗಿದೆ. ದಿನನಿತ್ಯ ಸೇವಿಸುವ ಆಹಾರಗಳಲ್ಲಿ ದಿನ ಬಳಕೆಯಲ್ಲಿ ಬಳಸುವ ಅಕ್ಕಿ ಸೊಂಪಾಗಿ ಬೆಳೆದು ಎಲ್ಲಾ ಕಾಲಕ್ಕೂ ಪೂರೈಕೆಯಾಗುವ ಆಹಾರ ಧಾನ್ಯವಾಗಿದೆ. ಅಲ್ಪ ಕಾಳಿನಲ್ಲಿ ಸಾಕಷ್ಟು ಇಳುವರಿ ಕೊಡುವ ಈ ಧಾನ್ಯದಂತೆ ದಾಂಪತ್ಯ ಜೀವನಕ್ಕೆ ಹೊಸದಾಗಿ ಕಾಲಿಡುವ ದಂಪತಿಗಳ ಜೀವನದಲ್ಲಿ ಸರ್ವ ಐಶ್ವರ್ಯ ವೃದ್ಧಿಸಲಿ ಎನ್ನುವ ಭಾವನೆಯಿಂದಾಗಿ ಅಕ್ಕಿಯ ಕಾಳು ಅಕ್ಷತೆಯಾಗಿ ಹಾಕುವ ನಂಬಿಕೆ ಬೆಳೆದುಕೊಂಡು ಬಂದಿದೆ. ಇಲ್ಲಿ ಆಶೀರ್ವಾದಿಸುವ ಒಂದು ವಿಧಾನ ಮಾತ್ರ ಕಾಣಬಹುದು.

ಮಂತ್ರಗಳು ವಿಶಿಷ್ಟವಾಗಿ ಶಕ್ತಿಯ ಆವಹಾನೆಯನ್ನು ಮಾಡಬಲ್ಲ ಮಾಧ್ಯಮಗಳು. ಈ ಮಂತ್ರಗಳನ್ನು ಪಠಿಸುತ್ತಾ ಅಕ್ಷತೆ ಹಾಕುವುದೇ ಮಂತ್ರಾಕ್ಷತೆ ಇದನ್ನು ದೇವರ ಪೂಜೆಗಳಲ್ಲಿ ಬಳಕೆ ಮಾಡಲಾಗುತ್ತದೆ.

**೩.೫. ಪೂಜೆ ಸಂದರ್ಭಗಳಲ್ಲಿ ಮಡಿ ಮಾಡುವುದು :**

ವಿಶೇಷ ಪೂಜಾ ಸಂದರ್ಭಗಳಲ್ಲಿ ಮನೆಯಲ್ಲಾ ಸ್ವಚ್ಛಗೊಳಿಸಿ ಬಟ್ಟೆ ತೊಳೆದು ತಾವು ಸ್ನಾನ ಮಾಡಿ ಮಡಿ ಮಾಡುವರು. ಈ ಆಚರಣೆಯಿಂದ ಆರೋಗ್ಯ ಶುಚಿಯಾಗಿಟ್ಟುಕೊಳ್ಳುವ ಉಪಯುಕ್ತವಾದ ಅಂಶಗಳನ್ನು ಗುರುತಿಸಬಹುದು. ಆದರೆ ಅತಿಯಾದ ಮಡಿ ಮಾಡುವುದು ಒಳ್ಳೆಯದಲ್ಲಾ ಕಾಯಾ, ವಾಚಾ, ಮನಸ್ಸು, ಶುದ್ಧಿಗೊಳಿಸುವುದು ವ್ಯಕ್ತಿಯ ವ್ಯಕ್ತಿತ್ವ ವಿಕಾಸಕ್ಕೆ ಅವಶ್ಯಕವಾಗಿವೆ. ಶರೀರ ಶುದ್ಧಿ ಹಾಗೂ ಬಾಹ್ಯವಾಗಿ ಧರಿಸುವ ಶುದ್ಧ ಬಟ್ಟೆ ಆರೋಗ್ಯಕ್ಕೆ ಒಳ್ಳೆಯದು. ಕೆಲವು ಸಮಯದಲ್ಲಿ ಆರೊಗ್ಯ ಶುಚಿಯಾಗಿ ಮಾಡಿಕೊಳ್ಳಲು ಮುಂದಾಗದೆ ಇರುವ ಸೋಮಾರಿಗಳು ಈ ಧಾರ್ಮಿಕ ನಂಬಿಕೆಯಿಂದಲಾದರೂ ಸ್ವಚ್ಛವಾಗಿರಲಿ ಎನ್ನುವ ಉದ್ದೇಶ ಈ ನಂಬಿಕೆಯದ್ದಾಗಿರಬೇಕು. ಧಾರ್ಮಿಕ ನಿಯಮವಾದರೆ ಕಡ್ಡಾಯವಾಗಿ ಪಾಲಿಸುತ್ತಾರೆ. ನಿಜವಾಗಿಯೂ ಮಡಿ ಎಂದರೆ ಶುಚಿತ್ವವೇ, ಆರೋಗ್ಯದಂತೆ ಮಾನಸಿಕ ಶುದ್ಧಿ ಅಷ್ಟೇ ಮಹತ್ವ ಪೂರ್ಣ ಈ ಮಡಿಯಾಗಿರುವಾಗ ಶುಚಿಯಾಗದೇ ಇರುವವರ ಸ್ಪರ್ಶ ಮಾನಸಿಕ ಶುದ್ಧತೆಗೆ ಭಂಗ ಬರಬಹುದೆಂಬ ಎಚ್ಚರಿಕೆಯಿಂದ ಮಡಿಯ ಕಲ್ಪನೆ ಜಾರಿಗೆ ಬಂದಿರಬೇಕು.

**೩.೬. ಹನುಮಂತ ದೇವರ ನಂಬಿಕೆ :**

ಹನಮಂತ ದೇವರ ನಂಬಿಕೆ ಕುರಿತು ಯಾವುದೇ ವೈಜ್ಞಾನಿಕ ಅಂಶಗಳಲ್ಲದಿದ್ದರೂ ಈ ದೇವರ ಹಿಂದೆ ಅಡಗಿಕೊಂಡಿರುವ ಇತರ ನಂಬಿಕೆ ಹಾಗೂ ಇನ್ನಿತರ ಉಪಯೋಗಗಳನ್ನು ಕುರಿತು ತಿಳಿಯಬಹುದು.

ಪ್ರತಿಯೊಂದು ಊರಿಗೂ ಹನುಮಂತನ ದೇವಾಲಯವಿರುವಂತೆ ಭಕ್ತರ ಬಳಗವೂ ಅಪಾರ ಇನ್ನುಳಿದ ಆರಾಧ್ಯ ದೇವರು ಒಂದೊಂದು ಊರಿನಲ್ಲೂ ಬೇರೆ ಬೇರೆ ದೇವತೆಗಳಿರಬಹುದು. ಆದರೆ ಹನುಮಂತ ದೇವರ ಗುಡಿ ಇರದೇ ಊರುಗಳೇ ಇಲ್ಲ ಎನ್ನಬಹುದು.

ಹನುಮಂತ, ಅಶ್ವತ್ಥಾಮ, ಬಲಿ, ವ್ಯಾಸ ವಿಭೀಷಣ, ಕೃಪ, ಪರಶುರಾಮ ಈ ಏಳು ಜನರು ಚಿರುಜೀವಿಗಳು ಎಂದು ಪುರಾಣಗಳು ನಮಗೆ ತಿಳಿಸಿಕೊಡುತ್ತವೆ. ಇವರಲ್ಲಿ ಹನುಮಂತ ಮತ್ತು ವಿಭೀಷಣರು ಮಾತ್ರ ಜಗತ್ತು ಲಯವಾಗುವರೆಗೆ ಇರುವವರು. ಉಳಿದವರು ದೀರ್ಘಾಯುಷಿಗಳು ಎಂಬ ಪ್ರತೀತಿಯಿದೆ. ಮಾನವನ ವಿಕಾಸಕ್ಕೆ ಮೂಲನಾದವನು ಮಂಗ, ಚಂಚಲ ಪ್ರವೃತ್ತಿಯುಳ್ಳ ಕಿತಾಪತಿ ಕೆಲಸಗಳನ್ನು ಮಾಡುವರನ್ನು ಕಂಡಾಗ ಮಂಗ ಎಂದೆ ಕರೆಯುತ್ತಾರೆ. ಹನುಮಂತನ ಪೂಜೆ ಮಾಡುವವರ ವಿಶೇಷತೆಯೆಂದರೆ ಮಾನವನು ತನ್ನ ಹಳೆಯ ರೂಪವನ್ನು ಪೂಜೆ ಮಾಡಿದಂತೆ ಮತ್ತು ಎಂದೂ ಮರೆಯದಂತೆ ಇರಲಿ ಎನ್ನುವ ಉದ್ದೇಶವಿರಬಹುದು. ಅದಕ್ಕಾಗಿಯೇ ಚೈತನ್ಯ ಶಕ್ತಿಯನ್ನು ದೇವರೆಂದು ಕರೆದ ಆದಿಮಾನವ ದೇವರನ್ನು ನಿರ್ಮಿಸಲು ಮೊಟ್ಟು ಮೊದಲು ಮಾನವನ ರೂಪವನ್ನೇ ಅಚ್ಚುಹಾಕಿದ. ಆರೂಪವೇ ಹನುಮಂತನಾಗಿರಬೇಕು. ಮೊದಲು ಗುರುತಿಸಿಕೊಂಡ ಈ ದೇವರೆ ಎಲ್ಲರಿಗೂ ಚಿರಪರಿಚಿತನಾಗಿ ಪ್ರತಿ ಊರಲ್ಲೂ ನೆಲೆಯೂರಲು ಕಾರಣವಾಗಿರಬೇಕು. ಆದಿಮಾನವ ಕಾಡಿನಲ್ಲಿ ವಾಸವಾಗಿದ್ದು ಕ್ರೂರಪ್ರಾಣಿ. ಭಯ

ಮುಂತಾದವುಗಳಿಂದ ರಕ್ಷಿಸಿಕೊಂಡು ತನ್ನ ಬದುಕನ್ನು ಸಾಗಿಸುತ್ತಿದ್ದ. ಇವನು ಎಂತಹ ಸಮಯದಲ್ಲೂ ಎಲ್ಲಾ ಸಮಸ್ಯೆಗಳನ್ನು ದೂರಮಾಡಿಕೊಂಡ ಹಾಗೆಯೇ ಎಲ್ಲಾ ಆಪತ್ತಿನಿಂದ ರಕ್ಷಿಸಲಿ ಎಂದು ಊರ ಅಗಸೆ (ಪ್ರವೇಶದ್ವಾರ) ದಲ್ಲಿಯೇ ರಕ್ಷನಾಗಿ ನಿಲ್ಲಿಸಿರಬೇಕು. ಗುಡಿಯಿರದಿದ್ದರೂ ಕಟ್ಟೆಗಳ ಮೇಲೆ ಹನುಮಂತ ನಿಂತಿರುವ ವಿಗ್ರಹಗಳು ಸಹಜವಾಗಿ ಕಂಡುಬರುತ್ತವೆ.

ಈ ದೇವಾಲಯವೇ ಶುಭ ಕಾರ್ಯಗಳಿಗೆ ಹೊಸದಾಗಿ ಬರುವ ಬೀಗರನ್ನು ಸ್ವಾಗತಿಸುವ ಅತಿಥಿ ಗೃಹಗಳಾಗಿವೆ. ವಿಶೇಷ ಶುಭ ಕಾರ್ಯಗಳಿರುವವರ ಮನೆಯಲ್ಲಿ ಜಾಗದ ಅಡಚಣೆಯಿದ್ದರೆ ವಿಶ್ರಾಂತಿ ಗೃಹವು ಆಗಿರುತ್ತದೆ. ಹನುಮಂತನ ಪೂಜೆ ಭಾರತದಲ್ಲಷ್ಟೇ ಅಲ್ಲದೆ ಜಗತ್ತಿನ ಹಲವೆಡೆಗಳಲ್ಲಿ ಕಾಣಸಿಗುತ್ತವೆ.

"ಟಾಗೋ ಮತ್ತು ಆಫ್ರಿಕಾಗಳ ಕೆಲವು ಹಳ್ಳಿಗಳ ಜನರು ಹನುಮಂತ ದೇವರಿಗೆ ನೈವೇದ್ಯ ಅರ್ಪಿಸುತ್ತಾರೆ ಇದರಿಂದ ತಮ್ಮ ಬಯಕೆ ಈಡೇರುತ್ತದೆಂದು ಅವರು ನಂಬುತ್ತಾರೆ.[೨೭]

ಮಂಗನಿಂದ ಮಾನವ, ಮಾನವನ ಆತ್ಮ ಮಂಗನಿಂದಲೇ ಬಂದಿರುಬಹುದು ಅಥವಾ ಮಾನವನ ಆತ್ಮ ಮಂಗನಲ್ಲಿರಬಹುದು ಆದರೆ ಮಂಗನಿಗೂ ಮಾನವನಿಗೂ ವಿಶೇಷ ಅವಿನಾಭಾವ ಸಂಬಂಧವಿರುವುದು. ಇತರ ಪ್ರಾಣಿಗಳನ್ನು ಬೇಟೆಯಾಡಲು ಮುಂದಾಗುವ ಮನುಷ್ಯ ಮಂಗನನ್ನು ಕೊಲ್ಲಬಾರದೆಂಬ ನಂಬುಗೆ ನಮ್ಮಲ್ಲಿ ಪ್ರಚಲಿತವಿದೆ. ಇದರಿಂದ ಈಗಲೂ ಮಂಗ ಸತ್ತರೆ ಮನಷ್ಯರಿಗೆ ಶವಸಂಸ್ಕಾರ ಮಾಡಿದಂತೆ ಮಾಡಲಾಗುವುದು

ಹನುಮಂತನಿಗೆ ಅನೇಕ ಹೆಸರುಗಳಿಂದ ಕರೆಯುತ್ತಾರೆ. ರಾಮನ ಮನಸನ್ನು ಗೆದ್ದಿರುವ ಧೂತ, ಭಕ್ತ ಎಲ್ಲಾ ದೇವತೆಗಳಿಗೂ ಬಿಡದೆ ಕಾಡಿದ ಶನಿಯ ಕಾಟ ಇವನ ಮುಂದೆ ನಡೆಯಲಿಲ್ಲ. ಶನಿಯನ್ನು ತನ್ನ ಪಾದದಲ್ಲಿಡಗಿಸಿಕೊಂಡನೆಂದು ಹನುಮಂತನ ಪಾದ ಮುಟ್ಟಿ ನಮಸ್ಕರಿಸಬಾರದೆಂಬ ನಂಬಿಕೆಯಿದೆ. ಈ ಶನಿಯ ಕಾಟದಿಂದ ಬಿಡುಗಡೆಯಾಗಲೆಂದು ಜನರು ಪ್ರತಿ ಶನಿವಾರ ಹನುಮಂತನ ಗುಡಿಗೆ ಹೋಗುವ ಪದ್ಧತಿಯಿದೆ.

ರಾಮನಸಹೋದರ ಲಕ್ಷ್ಮಣನನ್ನು ಬದುಕಿಸಲು ಸಂಜೀವಿನ ಕಡ್ಡಿ ತರಲು 'ಹನುಮಂತನಿಗೆ ಕಳುಹಿಸಿದಾಗ ಆತನು ಸಾಗರ ದಾಟಿ ಸಂಜೀವಿನಿ ಗುಡ್ಡವೇ ಹೊತ್ತು ತಂದ ಎನ್ನುವ ಐತಿಹಾಸಿಕ ಹಿನ್ನೆಲೆಗಳು ಇವೆ. ಇದಕ್ಕೆ ಸಂಬಂಧಿಸಿದಂತೆ ಸ್ಥಳಗಳಲ್ಲಿ ಬೀದರ ಜಿಲ್ಲೆಯ ಚಳಕಾಪೂರ ಒಂದಾಗಿದೆ. (ಭಾಲ್ಕೀ ತಾಲೂಕು) ಇಲ್ಲಿನ ಹಣಮಂತನ ದೇವಸ್ಥಾನ ಬಹಳ ಪ್ರಸಿದ್ಧವಾಗಿದೆ.

ಹನುಮಂತನ ಸಹಾಯ ತಮಗೆ ಎಂದಿಂದಿಗೂ ಇರುವಂತೆ ಆತನ ಹೆಸರಲ್ಲಿ ಕರಿದಾರ ಯಂತ್ರಗಳು ಹಾಕಿಕೊಳ್ಳುವ ನಂಬಿಕೆಯಿದೆ. ಮಗುವಿಗೆ ಮೇಲಿನ ಹಲ್ಲು ಬಂದಾಗ ಸೋದರ ಮಾವ ಈ ಗುಡಿಯಲ್ಲಿ ಬಂದುಬಂಗಾರದ ಕಡ್ಡಿಯಿಂದ ಮಗುವಿನ ಹಲ್ಲಿಗೆ ಚುಚ್ಚಿ ಬಂದ ರಕ್ತ ತನ್ನ ಹಣೆಗೆತಿಲಕವಾಗಿ ಇಟ್ಟಿಕೊಳ್ಳಬೇಕೆಂಬ ನಂಬಿಕೆ ಮೊದಲು ಹೆರಿಗೆ ಮುಗಿಸಿಕೊಂಡು ಗಂಡನ ಮನೆಗೆ ಬರುವಾಗ ತವರಿಂದ ತಂದ ತೊಟ್ಟಿಲು ಈ ಗುಡಿಯಲ್ಲಿಯೇ ಇಳಿಸುವುದು. ಹೀಗೆ ಇತನು ಸುತ್ತಲೂ ಬಾಲ ಉದ್ದವಿರುಷ್ಟು ನಂಬಿಕೆಗಳು ಇವೆ.

ಎಫ್.ಇ. ಪರಾಗೀಟರ್ ಅವರ ವಿಶೇಷ ಸಂಶೋಧನೆಯಿಂದ ಹನುಮಂತನ ಬಗೆಗೆ ಇರುವ ಅಭಿಪ್ರಾಯ ಹೀಗಿದೆ "ಅವನೊಬ್ಬ ಕಪಿ ದೇವನಾಗಿದ್ದು, ಆರ್ಯರಿಗಿಂತ ಮೊದಲೇ ದ್ರಾವಿಡ ಜನಾಂಗದಿಂದ

೨೭ (ಅಡಿಟಿಪ್ಪಣಿ:೨೭: ಜಾನಪದ ಸಾಹಿತ್ಯ ದರ್ಶನ ಡಾ.ವೃಷಭೇಂದ್ರ ಮತ್ತು ದೇವೇಂದ್ರ ಹಕಾರಿ ಪುಟ ಸಂಖ್ಯೆ-೯೬)

ಪೂಜೆಗೊಳ್ಳುತ್ತಲಿರುವ ದೇವತೆಯಾಗಿದ್ದಾನೆ. ದ್ರಾವಿಡರು ಅವನಿಗೆ ಜನಾಂಗದಿಂದ ಪೂಜೆಗೊಳ್ಳುತ್ತಲಿರುವ ದೇವತೆಯಾಗಿದ್ದಾನೆ. ದ್ರಾವಿಡರು ಅವನಿಗೆ ಆಣಮಂತಿ ಎನ್ನುತ್ತಾರೆ. ಇದನ್ನು ಆರ್ಯರು ತಮ್ಮ ಭಾಷೆಗೆ ವೃಷಾಕಪಿ ಅಂದರೆ ಗಂಡುಕಪಿ ಎಂದು ಭಾಷಾಂತರಿಸಿಕೊಂಡರು ಮುಂದೆ ಸಾವಕಾಶವಾಗಿ ದ್ರಾವಿಡರ ಈ ಪ್ರಬಲ ದೇವರನ್ನು ಆರ್ಯರೂ ಪೂಜಿಸಿ ತೊಡಗಿದರು ನಂತರ ಆಣಮಂತಿ ಎಂಬುದನ್ನೇ ಭಾಷಂತರಿಸಿ ಸಂಸ್ಕೃತದಲ್ಲಿ ಹನುಮಂತ ಎಂದು ಕರೆಯಲಾಯಿತು.[೨೮] ಈಗಲೂ ಅದೇ ಹೆಸರಿನಿಂದಲೇ ಪ್ರಸಿದ್ಧನಾಗಿದ್ದಾನೆ.

ಗಂಗಾ (ಹೊಸನೀರು) ಪೂಜೆ ಮಾಡುವುದು.

ಸೂರ್ಯ – ಚಂದ್ರರನ್ನು ಪೂಜಿಸುವುದು.

ತುಳುಸಿಯನ್ನು ಪೂಜಿಸುವುದು

ಗ್ರಹಣ ಕುರಿತು ಇರುವ ನಂಬಿಕೆಗಳು

ಎಲ್ಲಾ ಪೂಜೆಗಳಲ್ಲಿ ವೀಳ್ಯದೆಲೆ ಬಳಸುವುದು.

(ಈ ನಂಬಿಕೆಗಳು ಉದ್ದೇಶವನ್ನು ಅಧ್ಯಾಯ ೫ ರಲ್ಲಿ ವಿವರಿಸಲಾಗಿದೆ)

**೩.೭. ಭೂತದ ನಂಬಿಕೆ:**

"ಭೂತ ಎಂದರೆ ಒಳ್ಳೆಯದು ಮತ್ತು ಕೆಟ್ಟದ್ದು ಎರಡನ್ನು ಮಾಡುವ ಒಂದು ದೈವಿಶಕ್ತಿ[೨೯] ಒಳ್ಳೆಯವರಿಗೆ ಒಳ್ಳೆಯದು ಕೆಟ್ಟವರಿಗೆ ಕೆಟ್ಟದ್ದು ಮಾಡುತ್ತದೆಂಬ ನಂಬಿಕೆ.

ಭೂತ ವ್ಯಕ್ತಿಗಳಲ್ಲಿ ನಂಬಿಕೆಯ ರೂಪದಲ್ಲಿ ಕಾಣಿಸಿಕೊಳ್ಳುತ್ತವೆ. ಅದು ಆತ್ಮ ಬರಮಾಡಿಕೊಂಡು ಆರಾಧಿಸುವುದು ಒಂದಾಗಿರುವುದು. ಮಾನವ ದೌರ್ಬಲ್ಯದ ಆರೋಪದಿಂದಾಗಿ ರೂಪಗೊಂಡು ಬಂದಿರುವ ಈ ನಂಬಿಕೆ ಮಾನಸಿಕ ಒತ್ತಡಗಳಿಂದ ಉಂಟಾಗಿರುವುದು.

ಈ ಭೂತವನ್ನು ಹೊರ ದೂಡಿಸುವರು ದೈವಿ ಶಕ್ತಿಗಳ ಆರಾಧಕರು,ಅವರನ್ನು ಮಂತ್ರವಾದಿಗಳೆನ್ನುವರು. ಇವರು ಅಮಾಯಕರಿಂದ ಹಣಗಳಿಸುವ ಉದ್ದೇಶದಿಂದ ಪೂರ್ವ ಯೋಚಿತವಾಗಿ ಭೂತ ಸೇರಿಕೊಂಡಿರುವವರ ಚಲನವಲನ ಗಮನಿಸಿ ಅವರನ್ನು ಮರುಳುಗೊಳಿಸಿ ನೂರಾರು ಸಾಮಗ್ರಿ ಸಾಧನ ತರಲು ಹೇಳಿ ಅವುಗಳ ಉಪಯೋಗದಿಂದ ಭೂತ ಬಿಟ್ಟು ಹೋಗುವುದಾಗಿ ಇವರು ಹೇಳಿದ್ದೇ ಸಾಕು. ತಕ್ಷಣ ಹೊರಟೆ ಹೋಗಿದೆಂದು ನಂಬುತ್ತಾರೆ.

"ಈಚಿನ ದಿನಗಳಲ್ಲಾದ ಘಟನೆಯೆಂದರೆ ದಿನಾಂಕ: ೩೧–೧೨–೨೦೦೯ ರಂದು ವಿಷ್ಣುವರ್ಧನರ ಸಾವಿಗೆ ತಮಿಳು ಮತ್ತು ಕೇರಳ ರಾಜ್ಯಗಳಿಗೆ ಸಂಬಂಧಿಸಿದ ರಾಜನ ತರ್ಕ (ನಾಗವಲ್ಲಿ)ಯೇ ಕಾರಣವೆಂಬ ಕೋಲಾಹಲದ ಘಟನೆ. ಈ ಸಂದರ್ಭದಲ್ಲಿ ಗರುಡ ಪುರಾಣದಲ್ಲಿ ಹೇಳಿದಂತೆ ದುರ್ಮರಣಕ್ಕೆ ಒಳಗಾದೆಲ್ಲವು ಪ್ರೇತ ಎಂದು ಪಂಡಿತ ಶ್ರೀಧರ ಭಟ್ಟ ಎನ್ನುವರು ಹೇಳಿದರೆ, ಆತ್ಮಕ್ಕೆ ಹುಟ್ಟು ಇದೆ. ಆದರೆ ಸಾವಿಲ್ಲ. ರೂಪಿಲ್ಲ. ನೆನಪಿದೆ ಎಂದು ಚಂದಾಪಾಂಡೆ ಎನ್ನುವ ಆಧ್ಯಾತ್ಮಿಕ ಚಿಂತಕಿ ಹೇಳಿದರು. ಆದ್ದರಿಂದ ಅಗೋಚರಿತ ಶಕ್ತಿಗಳನ್ನು ಉಚ್ಚಾಟನೆ ಮಾಡಲು ಪ್ರತ್ಯೀಂಗ ಹೋಮಗಳನ್ನು ಮಾಡಬೇಕು.[೩೦]

---

೨೮ (ಅಡಿಟಿಪ್ಪಣಿ:೨೮: ಜಾನಪದ ಸಾಹಿತ್ಯ ದರ್ಶನ ಡಾ.ವೃಷಭೇಂದ್ರ ಮತ್ತು ದೇವೇಂದ್ರ ಹಕಾರಿ ಪುಟ ಸಂಖ್ಯೆ-೯೬)

೨೯ (ಅಡಿಟಿಪ್ಪಣಿ:೨೯: ಪುರಾಣ ಜಾನಪದ ಮತ್ತು ದೇಶಿವಾದ ಡಾ.ಅರವಿಂದ ಮಾಲಗತ್ತಿ ಪುಟ ಸಂಖ್ಯೆ-೧೮೮)

೩೦ (ಅಡಿಟಿಪ್ಪಣಿ: ೩೦: ಟಿ.ವಿ.-೯ ದಿನಾಂಕ ೦೯.೦೧.೨೦೧೦)

ತೊಂದರೆಗೊಳಗಾದ ವ್ಯಕ್ತಿಯ ಬದಲಾವಣೆಗೆ ಒಂದಿಲ್ಲಾ ಒಂದು ಕಾರಣದಿಂದಾಗಿ ಅವರ ಮಾನಸಿಕ ಒತ್ತಡವೇ ಕಾರಣ, ಹೊರತಾಗಿ ಮಂತ್ರವಾದಿಗಳಲ್ಲ ಎನ್ನುವುದನ್ನು ಅರಿಯಬೇಕು. ಬಂಗಾರ ಹೌದು ಅಲ್ಲವೋ ಎನ್ನುವುದನ್ನು ನೈಟ್ರಿಕ್ ಆಸಿಡನಲ್ಲಿ ಅದ್ದಿದಾಗಲೇ ಗೊತ್ತಾಗುವುದು ನಿಜವಾದ ಬಂಗಾರ ಎಂದು ಹಾಗೆಯೇ ಮೋಸಗಾರ ಮಂತ್ರವಾದಿಗಳ ನಿಜಸ್ಥಿತಿ ಅರಿಯಬೇಕು.

**೩೯. ಹರಕೆಗಳು :**

ದೇವರಲ್ಲಿ ತಾವು ಪ್ರಾರ್ಥಿಸಿಕೊಂಡ ಕೆಲಸಗಳಾದರೆ ದೇವರಿಗೆ ಹರಕೆ ಸಲ್ಲಿಸುವ ನಂಬಿಕೆಯೊಂದು ಮುಂದುವರೆದುಕೊಂಡು ಬಂದಿದೆ. ನೆಲ ಅಳೆಯುವದು ಉರುಳು ಸೇವೆ ಉಡಿ ತುಂಬುವುದು ಗೂಳಿ ಬಿಡುವುದು, ತುಪ್ಪಮೀಸಲಿಡುವುದು ಆಹಾರ ಪದಾರ್ಥಗಳು ಬಿಡುವುದು ಇಂತಹ ಸಾಕಷ್ಟು ಹರಕೆಗಳನ್ನು ಸಲ್ಲಿಸುವುದು ಕಂಡುಬರುತ್ತವೆ.

"ವಿಜಾಪೂರ ಜಿಲ್ಲೆಯ ತಾಳಿಕೋಟೆ ಸಮೀಪದ ನಾವದಗಿ ಗ್ರಾಮದ ಪ್ರಭಾವತಿ & ಸಂಗನಗೌಡ ದಂಪತಿಗಳಿಗೆ ಮಗು ಆದರೆ ಪುರೋಹಿತರು ಹೇಳಿದಂತೆ ಹರಕೆಯನ್ನು ಹನುಮಂತನ ಹೆಸರಿನಲ್ಲಿ ಒಪ್ಪಿಸಬೇಕೆಂದು ಹೇಳಿದರಂತೆ ಅವರು ಹೇಳಿದ ಹೇಳಿಕೆಯಂತೆ ಹೆಣ್ಣು ಮಗು ಹುಟ್ಟಿತು. ಹರಕೆ ಒಪ್ಪಿಸಲು ಕುದಿಯುತ್ತಿರುವ ಅನ್ನದ ನೀರಿನಲ್ಲಿ ಮಗುವನ್ನು ಮೂರತ್ತುಬಾರಿ ಅದ್ದಿ ಹರಕೆ ತೀರಿಸಿದ ಘನಟಯೊಂದು ಪತ್ರಿಕೆಯೊಂದರಲ್ಲಿ ಪ್ರಕಟವಾಗಿತು.[೩೧]

ಹಾಗೆಯೇ ದಕ್ಷಿಣ ಕನ್ನಡ ಜಿಲ್ಲೆಯ ಕುಕ್ಕೆ ಸುಬ್ರಹ್ಮಣ್ಯ ದೇವಾಲಯ ನಾಗರಾಧನೆಗೆ ಹೆಸರುವಾಸಿ. ಈ ದೇವಸ್ಥಾನದಲ್ಲಿ ಅಮಾನವೀಯ ಆಚರಣೆಯೊಂದು ಷಷಿ ಉತ್ಸವ ಸಂದರ್ಭದಲ್ಲಿ ನಡೆಯುತ್ತದೆ. ಹರಕೆ ಹೊತ್ತ ಭಕ್ತರು ಷಷ್ಠಿಯ ಜಾತ್ರೆಯ ದಿನ ಕುಕ್ಕೆ ಸಮೀಪದ ಕುಮಾರಧಾರ ನದಿಯಲ್ಲಿ ಸ್ನಾನ ಮಾಡಿ ಮಡಿಯುಟ್ಟು ಬಂದು ಮಧ್ಯಾಹ್ನ ದೇವಸ್ಥಾನದ ಒಳಾಂಗಣದಲ್ಲಿ ಬ್ರಾಹ್ಮಣ ಸಮುದಾಯದ ವರ ಭೋಜನ ಆದ ಕೂಡಲೇ ಅವರು ಬಿಟ್ಟಿದ್ದ ಎಂಜಲು ಎಲೆಗಳ ಮೇಲೆ ಉರುಳು ಸೇವೆ ನಡೆಸುತ್ತಾರೆ ವಿವಿಧ ಸಮುದಾಯಗಳ ಹೆಂಗಸರು, ಗಂಡಸರು, ಮಕ್ಕಳು ಕೆಲವೊಮ್ಮೆ ಅನ್ಯಧರ್ಮಿಯರು ಈ ಸೇವೆಯಲ್ಲಿ ಭಾಗವಹಿಸುತ್ತಾರೆ ಇದಕ್ಕೆ ಮಡೆಸ್ನಾನ ಎಂಬ ಹೆಸರಿದೆ. ಎಂಜಲು ಎಲೆಯ ಮೇಲೆ ಉರುಳು ಸೇವೆ ಸಲ್ಲಿಸಿದರೆ ಪಾಪಗಳು ನಿವಾರಣೆ ಆಗುತ್ತವೆ ಎಂದು ಜನರನ್ನು ನಂಬಿಸಲಾಗಿದೆ. ಎಂಜಲು ಪದಾರ್ಥಗಳು ಮೈಕೈಲ್ಲಾ ಮೆತ್ತಿಕೊಳ್ಳುತ್ತದೆ"[೩೨] ಎಂಜಲು ಮುಸರೆಯಿಂದ ಇನ್ನಿತರ ರೋಗಗಳಿಗೆ ತುತ್ತಾಗಬಹುದೆಂಬ ಪರಿಜ್ಞಾನವು ಬೇಡವೆ ಜನರಲ್ಲಿ.

ಇಂತಹ ಬೇರೆ ಬೇರೆ ಹರಕೆ ಸಲ್ಲಿಸುವಂತಹ ಪದ್ಧತಿ ಬೀದರ ವ್ಯಾಪ್ತಿಯಲ್ಲೂ ಕಂಡುಬರುತ್ತವೆ. ಇವುಗಳಿಂದ ಯಾವುದೇ ಉಪಯೋಗವಿಲ್ಲ ಎನ್ನುವುದು ಜನತೆ ತಿಳಿಯುವುದು ಅವಶ್ಯಕವಾಗಿದೆ.

**೪೦. ಭಾನಾಮತಿ:**

ಬಹಾನಾಮತಿ ಎನ್ನುವುದು ಬಹಾನಾ ಎಂದರೆ ನೆಪ. ಮತಿ ಎಂದರೆ ಆಲೋಚನೆ ಎಂದರ್ಥ ಬಹಾನಾ ಎನ್ನುವ ಉರ್ದುಭಾಷೆಯ ಪ್ರಭಾವದಿಂದ ಕನ್ನಡದಲ್ಲಿ ಭಾನಮತಿ ಎಂದಾಗಿದೆ. ಧಾರ್ಮಿಕ ಪುರಾಣ ಕಥೆಗಳಲ್ಲಿ

೩೧ (ಅಡಿಟಿಪ್ಪಣಿ: ೩೧: ವಿಜಯ ಕರ್ನಾಟಕ ದಿನಪತ್ರಿಕೆ ದಿ: ೦೪.೦೧.೨೦೧೦)
೩೨ (ಅಡಿಟಿಪ್ಪಣಿ: ೩೨: ಪ್ರಜಾವಾಣಿ ದಿನಪತ್ರಿಕೆ).

ಜಾನಪದ ಪ್ರಸಂಗಗಳಲ್ಲಿ ಬರುವ ಮಾಟಗಾರರು ಮತ್ತು ಮಂತ್ರವಾದಿಗಳು ಎಂಬ ಹೆಸರು ಎಲ್ಲರಿಗೂ ಪರಿಚಿತವಾದವುಗಳೇ ಆಗಿವೆ. ಗುರುವಿನ ಮಾರ್ಗದರ್ಶನದಲ್ಲಿ ವಾಮಚಾರದಿಂದ ದುಷ್ಟ ಶಕ್ತಿಗಳನ್ನು ಅತೀಂದ್ರೀಯ ವಿದ್ಯೆಯಿಂದ ವಶಪಡಿಸಿಕೊಂಡು ಕುಳಿತಲ್ಲಿಯೇ ಮಾಟ ಮಂತ್ರಮಾಡಿ ಕ್ರೂರಿಗಳು ಹಣಕ್ಕಾಗಿ ಹೊನ್ನಿಗಾಗಿ ಎಂತಹ ದುರಾಚಾರ ಮಾಡಲು ಹಿಂದಾಗಲಾರರು. ತಮ್ಮ ಮಂತ್ರವಿದ್ಯೆಗೆ ಒಳಗಾದವರನ್ನು ನಾನಾ ರೀತಿಯಲ್ಲಿ ಹಿಂಸಿಸಿ ನರಳುವಂತೆ ಮಾಡಿ ಪ್ರಾಣ ಬಿಡುಗಡೆ ಮಾಡುತ್ತಾರೆಂಬ ನಂಬಿಕೆ.

ಅಮಾವಾಸ್ಯೆ ರಾತ್ರಿಗಳಲ್ಲಿ ಸ್ಮಶಾನಗಳಿಂದ, ತಲೆಬುರುಡೆ, ಎಲುಬು, ಮೂಳೆಗಳು ತಂದು ರಂಗೋಲಿ ಬರೆದು ಅದರ ಮೇಲಿಟ್ಟು ಅರಿಶಿಣ ಕುಂಕುಮಗಳಿಂದ ಪೂಜಿಸಿ ಪ್ರಾಣಿಗಳ ರಕ್ತ ನೈವೇದ್ಯ ಅರ್ಪಿಸಿ ಚಿತ್ರ ವಿಚಿತ್ರ ಮಂತ್ರಗಳು ಪಠಿಸುತ್ತಾರೆ.

ವಿಶಿಷ್ಟ ವಿದ್ಯೆ ಸಾಧನೆಯಿಂದ ನಿರ್ಜೀವ ವಸ್ತುಗಳನ್ನು ಇವರು ಚಲಿಸಬಲ್ಲರು ಮಸಿ ಹಚ್ಚಿದ ಗಾಜಿನ ಮೂಲಕ ಅಥವಾ ವಿಶೇಷ ಮೂಲಾಮನ್ನು ಅಂಗೈಗೆ ಸವರಿಕೊಂಡು ಅದರಲ್ಲಿ ನೋಡಿದರೆ ಬಲಿಗೆ ಒಳಗಾಗುವ ಪಶು ಮನುಷ್ಯನ ಚಿತ್ರ ಕಾಣುವುದು ಎಲ್ಲಿದ್ದಾನೆಂದು ತಿಳಿದುಕೊಂಡು ಅವನ ನಾಶ ಮಾಡುವರು ಎನ್ನುವ ನಂಬಿಕೆ.

ಇಂತಹ ವಿಧಾನದಿಂದ ಇದರ ಪ್ರಭಾವಕ್ಕೊಳಗಾದ ವ್ಯಕ್ತಿ ಸಾಮಾನ್ಯವಾಗಿ ಹಸಿವು, ನಿದ್ರೆ, ವಾಂತಿ, ವಾಕರಿಕೆ, ನೋವು, ಸಂಕಟ, ಜಡತ್ವ, ನರದೌರ್ಬಲ್ಯ, ಷಂಡತನ, ಬಂಜೆತನ, ಬುದ್ಧಿಭ್ರಮಣೆ ಮುಂತಾದ ದೈಹಿಕ ಹಾಗೂ ಮಾನಸಿಕ ರೋಗಗಳಿಗೆ ಬಲಿಯಾಗುತ್ತಾನೆ ವೈದ್ಯರ ಚಿಕಿತ್ಸೆಯಿಂದ ಪರಿಹಾರ ಸಿಗದು ಎನ್ನುವ ಅಲಕ್ಷ ಮನೋಭಾವನೆ ತಾಳಿ ಮಾಟ ಮಂತ್ರಗಾರರಲ್ಲಿ ಮೊರೆ ಹೋದಾಗ ಅವರು ಆದಷ್ಟು ಹಣ ಖರ್ಚು ಮಾಡುವಂತೆ ಅದನ್ನು ತೆಗೆದು ಹಾಕುವುದಾಗಿ ಹೇಳುತ್ತಾರೆ.

ಭಾನಮತಿಗೊಳಗಾದವರು ಕಿರುಚುವುದು, ಓಡುವುದು, ಅರೆಬೆತ್ತಲೆಯಾಗುವುದು, ಅನೇಕ ರೀತಿಯಲ್ಲಿ ಪ್ರಜ್ಞಾಹೀನರಾಗಿ ಇತರ ಕಾರ್ಯಗಳಲ್ಲಿ ತೊಡಗುವುದು. ಇಷ್ಟ ವಸ್ತು ಮಾಯವಾಗುತ್ತವೆ. ಮನೆ ಮೇಲೆ ಕಲ್ಲು ಮಣ್ಣು ಸುರಿಯುತ್ತದೆ ಬಟ್ಟೆ ಇಟ್ಟಲ್ಲೆ ಸುಡುತ್ತವೆ. ಕ್ಯಾರಳ ರಸದ ಚುಕ್ಕೆ ಮೈ ಮೇಲೆ ಬೀಳುತ್ತವೆ. ನಾನಾ ವಿಧಗಳಲ್ಲಿ ವಿನಾಶ ಪಡಿಸುವ ಲಕ್ಷಣಗಳೇ ಕಂಡುಬರುತ್ತವೆ ಎನ್ನುವ ಹಲವಾರು ವಿಚಾರಗಳು ಕೇಳಿಬರುತ್ತವೆ.

ಬೀದರ, ಗುಲ್ಬರ್ಗಾ ಜಿಲ್ಲೆಗಳಲ್ಲಿ ನೆರೆಯ ಆಂಧ್ರಪ್ರದೇಶದ ಮೇದಕ ಜಿಲ್ಲೆಯಲ್ಲಿ ಭಾನಮತಿ ವಿದ್ಯೆ ಪ್ರಚಲಿತವಿದೆ. ಈ ಪದ ಕೇಳಿದಾಕ್ಷಣ ಈ ಭಾಗದ ಅಮಾಯಕ ಜನರ ಮುಖಗಳು ಭಯದಿಂದ ಬಿಳಿಚಿಕೊಳ್ಳುತ್ತವೆ. ಮಾತು ಹೊರಡದೆ ಮೂಕರಾಗುತ್ತಾರೆ. ಅವರ ನೊಂದ ಹೃದಯದಿಂದ ಅಸಾಹಯಕರಾಗಿರುತ್ತಾರೆ ಇದನ್ನು ಕುರಿತು ಪುಸ್ತಕಗಳಲಿ ಉರ್ದು ಮಿಶ್ರಿತ ಭಾಷೆಯಲ್ಲಿ ಅಶ್ಲೀಲ ಪದಗಳೊಡನೆ ವಿವರಣೆ ಕಂಡುಬರುತ್ತದೆ. ಈ ಭಾನಾಮತಿ ಎರಡು ನೂರು ವರ್ಷಗಳಿಂದೂ ಜಾರಿಯಲಿರುವುದು ಹೈದ್ರಾಬಾದ ನಿಜಾಮ ಇದರ ಹಾವಳಿ ಹೆಚ್ಚಾಗಿದ್ದರಿಂದ ಇದನ್ನು ತಡೆಗಟ್ಟಲು ಪ್ರತ್ಯೇಕದಳ ಇಟ್ಟಿದನೆಂದು ತಿಳಿದುಬರುತ್ತದೆ.

ಜನರು ತಮ್ಮ ವೈಯಕ್ತಿಕ ದ್ವೇಷ ಬದ್ಧಗಳಿಗೂ ಇದನ್ನು ಉಪಯೋಗಿಸಿಕೊಂಡು ಇಡಿ ಸಮಾಜವೇ ತಲ್ಲಣಗೊಳಿಸುವಂತೆ ಮಾಡಲಾಯಿತು. ಇಂದಿಗೂ ಭಾನಮತಿ ಪ್ರಕರಣಗಳು ಸಂಪೂರ್ಣವಾಗಿ ಸ್ಥಗಿತಗೊಂಡಿಲ್ಲ.

ಇತ್ತೀಚಿಗೆ ಭಾನಮತಿ ಪ್ರಕರಣ ಬೀದರ ಜಿಲ್ಲೆಯ ಕೋಳಾರ ಬಿ ಗ್ರಾಮದ ಜಗದೇವಿ ಎನ್ನುವಳು ಅದೇ ಊರಿನ ಮುಸ್ಲಿಂ ವ್ಯಕ್ತಿ ಮತ್ತು ಮಹಾನಂದ ಎನ್ನುವ ಸ್ತ್ರೀ ಇಬ್ಬರು ಜೊತೆಗೂಡಿ ಊರಿನ ಜನತೆಗಳಿಗೆ ಭಾನಮತಿ ಮಾಡುತ್ತಿದ್ದಾರೆ ಎಂದು ಜನರಲ್ಲಿ ಭಯಮೂಡಿಸಿದ ಘಟನೆ[೩೩] ಜರುಗಿತು. ಕಳೆದ ಇಪ್ಪತ್ತು ವರ್ಷಗಳ ಹಿಂದೆ ಬೀದರ ಜಿಲ್ಲೆಯು ರಾಜ್ಯದಲ್ಲಿ ಭಾನಮತಿಗೆ ಹೆಸರು ಪಡೆದ ಜಿಲ್ಲೆಯಾಗಿತ್ತು. ಈಗ ಮತ್ತೆ ಕೋಳಾರ ಬಿ ಗ್ರಾಮದಂತಹ ಘಟನೆಗಳು ಅಲ್ಲಲ್ಲಿ ಮತ್ತೆ ಪ್ರಚಾರಕ್ಕೆ ಕಾಣಿಸಿಕೊಳ್ಳುತ್ತಲೇ ಇರುತ್ತವೆ.

ಭಾನಮತಿ ಅತಿಶಯವಾದ, ಅತಿಮಾನುಷವಾದ, ವಿದ್ಯೆ ಅಥವಾ ಶಕ್ತಿ ಎಂದು ಜನ ಹೇಳುವುದನ್ನು ನಂಬಲು ಬಲವಾದ ಆಧಾರಗಳಿಲ್ಲ. ಕೆಲವು ಸಮಾಜ ಕಂಟಕ ವ್ಯಕ್ತಿಗಳ ಕೈವಾಡದಿಂದ ದುಷ್ಟಶಕ್ತಿ ತಮ್ಮ ವಶದಲ್ಲಿರುವುದರಿಂದ ಇತರನ್ನು ಭಯಕ್ಕೊಳಪಡಿಸಿ ಅಸಹಾಯಕತೆಯ ದುರುಪಯೋಗ ಪಡೆದುಕೊಳ್ಳುತ್ತಿರುವುದು. ಕಾನೂನಿನ ಪ್ರಕಾರ ಸರಿಯಾದ ಸಾಕ್ಷ್ಯಾಧಾರಗಳಿಲ್ಲದೆ ಈ ದುರುಳರನ್ನು ಶಿಕ್ಷಿಸಲಾಗದೆ ಪೋಲಿಸರು ನಿಷ್ಕ್ರೀಯರಾಗಿದ್ದಾರೆ. ತರಬೇತಿ ಪಡೆದ ಯಾವುದೇ ವೈದ್ಯರು ಗುರುತಿಸುವ ಭಾನಮತಿಯಾದ ವ್ಯಕ್ತಿಯಲ್ಲಿ ಮಾನಸಿಕ ಅಥವಾ ಶಾರೀರಕ ಕಾಯಿಲೆಯ ಲಕ್ಷಣಗಳಿದ್ದವು[೩೪] ಎಂದು ಗುರುತಿಸಿದ್ದಾರೆ.

ಅಲ್ಲದೆ ಬಡತನ, ನಿರುದ್ಯೋಗ, ಅನಕ್ಷರತೆ, ನೀರು, ನೆರಳು, ಆಹಾರ, ಪ್ರಾಥಮಿಕ ಸೌಲಭ್ಯಗಳ ಕೊರತೆ ಜೊತೆಗೆ ಸ್ವಾರ್ಥ ಶೋಷಕರ ಉಪಟಳಗಳೇ ಈ ಭಾನಮತಿಗೆ ಕಾರಣ. ಬಹಾನಾ ಎನ್ನುವ ಉರ್ದು ಪದದ ಅರ್ಥ ನೆಪ ಮತಿ ಎನ್ನುವುದು ಕೇಡು ಯಾವುದೋ ಒಂದು ಕೇಡಿನ ನೆಪವೆ ಇದಕ್ಕೆ ಕಾರಣವಾಯಿತು.

ಕಷ್ಟಕ್ಕೆ ತುತ್ತಾದ ಜನರು ಎಲ್ಲಿ ಹೋಗಬೇಕು. ಏನು ಮಾಡಬೇಕೆಂದು ಮಾರ್ಗತೋಚದೆ ಇವರು ಮಂತ್ರವಾದಿಗಳ ಮೊರೆ ಹೋಗುವುದು ಅನಿವಾರ್ಯವೇ ಆಗಿತ್ತು. ಆದರೆ ಮಂತ್ರವಾದಿಗಳಿಗೆ ಹಣ ವಸೂಲಿ ಮಾಡುವ ಒಳ್ಳೆಯ ಅವಕಾಶ ಅವರದ್ದಾಗಿತ್ತು.

ಈ ಭಾಗದ ಜನರಲ್ಲಿ ಅರಿವು ಮೂಡಿಸುವ ಪ್ರಯತ್ನ ಸರಕಾರ ಮಾಡುತ್ತಿದೆ. ದುಷ್ಟ ವ್ಯಕ್ತಿಗಳಿಗೆ ಶಿಕ್ಷೆಯ ಹೆದರಿಕೆ. ಎಲ್ಲರಿಗೂ ಬಹಿರಂಗವಾಗಿ ತಿಳುವಳಿಕೆ ಕಾರ್ಯಕ್ರಮಗಳು ವರದಿಯ ಅನೇಕ ಅನುಮೋದನೆಗಳನ್ನು ಸರ್ಕಾರ ಜಾರಿಗೆ ತಂದಿದೆ.

ಅಧ್ಯಯನದಿಂದ ಕಂಡು ಬಂದ ಸತ್ಯಗಳು ಈ ಕೆಳಗಿನಂತೆ ಕ್ರೂಢೀಕರಿಸಿದ್ದರು.

ಇನ್ನೂರಕ್ಕೆ ಮೇಲ್ಪಟ್ಟು ಭಾನಮತಿ ಪೀಡಿತರನ್ನು ವೈಯಕ್ತಿಕವಾಗಿ ಪರೀಕ್ಷಿಸಿದಾಗ ಅವರಲ್ಲಿ ಶೇಕಡಾ ತೊಂಬತ್ತು ಮಂದಿ ವಿವಿಧ ರೀತಿಯ ಮಾನಸಿಕ ಕಾಯಿಲೆಗಳಿಂದ ನರಳುತ್ತಿದ್ದವರಾಗಿದ್ದರು ಅವರಲ್ಲಿ ಮಹಿಳೆಯರೇ ಹೆಚ್ಚಿನ ಸಂಖ್ಯೆಯಲ್ಲಿದ್ದರು. ಈ ಪೀಡಿತರ ಹೆಂಗಸರ ಪ್ರತಿಯೊಬ್ಬರ ಕುಟುಂಬದಲ್ಲಿ ಅವರ ವೈಯಕ್ತಿಕ ಜೀವನದಲ್ಲಿ ಭರಿಸಲಾಗದ ಕಷ್ಟ, ನೋವು, ಅನ್ಯಾಯ ಭಾನಮತಿ ಲಕ್ಷಣಗಳ ಮೂಲಕ ಎಲ್ಲರ ಗಮನ ಸೆಳೆದು ಆಸರೆ ಸಹಾಯ ಪಡೆಯುತ್ತಿದ್ದದ್ದು ಸ್ಪಷ್ಟವಾಗಿತ್ತು. ಉಳಿದವರು ಖಿನ್ನತೆ, ಮನೋಭಾವನೆ, ವಿಕಲತೆ, ಆತಂಕಗಳಿಂದ ನರಳುತ್ತಿದ್ದರು ಲೈಂಗಿಕ ದುರ್ಬಲತೆ ದಾಂಪತ್ಯವಿರಸ ಪಾಪಪ್ರಜ್ಞೆ ಇತ್ಯಾದಿಗಳು ಕಾರಣಗಳಾಗಿದ್ದವು.

---

೩೩ (ಅಡಿಟಿಪ್ಪಣಿ: ೩೩: ಕಸ್ತೂರಿ ಚಾನಲ್ ಕರ್ನಾಟಕ ಇಂದು ಕಾರ್ಯಕ್ರಮದಲ್ಲಿ ದಿ:೧೨.೦೨.೨೦೧೦)
೩೪ (ಅಡಿಟಿಪ್ಪಣಿ: ೩೪: ಸಾಮಾಜಿಕ ಮತ್ತು ಮಾನಸಿಕ ನಂಬಿಕೆಗಳು ಡಾ.ಸಿ.ಆರ್.ಚಂದ್ರಶೇಖರ ಪುಟ ಸಂಖ್ಯೆ-೧೩೧))

ಇದಕ್ಕೆ ಮುಖ್ಯ ಕಾರಣವಾಗಿ ಅನಕ್ಷರತೆ ಅಥವಾ ಜ್ಞಾನದ ಕೊರತೆಯೇ ಕಾರಣ. ಸೂಕ್ತ ತಿಳುವಳಿಕೆ ಆಲೋಚನೆ ಪ್ರವೃತ್ತಿಯಿಂದ ಕಾಯಿಲೆ ಕಷ್ಟಗಳಿಗೆ ಪರಿಹಾರ ಒದಗಿಸಿ ಕೊಳ್ಳುವ ಪ್ರಯತ್ನದ ದಾರಿಯಲ್ಲಿ ನಡೆದರೆ ಪರಿಹಾರ ಸಿಗುವುದರಲ್ಲಿ ಸಂಶಯವೇ ಇಲ್ಲ.

**ಭಾಗ –೨ ಹಬ್ಬಗಳು :**

ಹೋಳಿಗೆ, ಹಾಲು ತುಪ್ಪ, ಸೆಂಡಿಗೆ, ಹಪ್ಪಳ, ಉಪ್ಪಿನಕಾಯಿ, ಉಂಡಿ, ಕರ್ಚಿಕಾಯಿ, ಚಕ್ಲಿ, ಚೂಡಾ, ಲಡ್ಡು ಈ ಮುಂತಾದ ತಿಂಡಿಗಳನ್ನು ನೆನೆಸಿಕೊಂಡರೆ ನೆನಪಾಗುವುದು ಹಬ್ಬ. ಈ ಹಬ್ಬ ಯಾವಾಗ ಬರುತ್ತದೆ ಎನ್ನುವ ಮಕ್ಕಳ ಕುತೂಹಲ, ಸಂತೋಷಕ್ಕೆ ಪಾರವೇ ಇರುವುದಿಲ್ಲ. ಕಾರಹುಣ್ಣಿಮೆ ಬಂತೆಂದರೆ ಕುಣಿಯುತ್ತಾ ಹಬ್ಬಗಳನ್ನು ಕರೆದು ತರುತ್ತದೆ. ಎನ್ನುವ ಮಾತು ಹಳ್ಳಿಯ ಜನಪದರ ಬಾಯಿಂದ ಉತ್ಸಾಹಕವಾಗಿ ಪುಟಿದೇಳುತ್ತಿದೆ. ಹೀಗೆ ಮಕ್ಕಳಿಂದ ಹಿರಿಯರವರೆಗೆ ಎಲ್ಲರನ್ನು ಸಂತೋಷಪಡಿಸುವ ಸಡಗರ ಸಂಭ್ರಮದ ಹಬ್ಬಗಳ ಆಚರಣೆಯ ಹಿನ್ನೆಲೆ, ಉದ್ದೇಶ, ಉಪಯೋಗ ಮತ್ತು ಕಾರ್ಯಕಾರಣೀಯ ಸಂಬಂಧಗಳ ಕುರಿತು ತಿಳಿದುಕೊಳ್ಳುವುದು ಅಗತ್ಯವಾಗಿದೆ.

ಪ್ರಾಚೀನ ಕಾಲದ ಆದಿಮಾನವರು ಅಲೆಮಾರಿ ಜೀವನಕ್ಕೆ ವಿದಾಯ ಹೇಳಿ, ಕೃಷಿ ಕೆಲಸ ಆರಂಭಿಸಿದ ನಂತರ ಒಂದೆಡೆ ನೆಲೆಯೂರಿ ಜೀವನ ಸಾಗಿಸಿದರು ತಮ್ಮ ಜೀವನದಲ್ಲಿ ಹೊಸ ಹೊಸದಾಗಿ ಕಂಡ ಘಟನೆಗಳೊಂದಿಗೆ ತಮ್ಮ ಅಭಿಪ್ರಾಯ ವಿಚಾರಗಳನ್ನು ಅಭಿವ್ಯಕ್ತಗೊಳಿಸಿದರು. ತಮ್ಮ ಸುತ್ತಲು ಇರುವ ಪ್ರಕೃತಿಯ ಶಕ್ತಿಗಳನು ದೇವರೆಂದು ತಿಳಿದೂ ಪೂಜಿಸುತ್ತಾ ಬಂದರು ಕೃಷಿಯಲ್ಲಿ ಆಹಾರ ಧಾನ್ಯಗಳ ಉತ್ಪಾದನೆಯ ಪ್ರಮಾಣ ಹೆಚ್ಚಾದಂತೆ ಹಾಗೂ ಅದು ತನ್ನ ಕೈಗೆ ಸಿಕ್ಕ ಮೇಲೆ ಅವರಿಗಾಗುವ ಸಂತೋಷ, ಉಲ್ಲಾಸ ತಾವೊಬ್ಬರೆ ಅನುಭವಿಸದೆ, ಎಲ್ಲರಲ್ಲೂ ತುಂಬಿರುವ ಈ ಭಾವನೆಗಳನ್ನು ಸಾಮೂಹಿಕವಾಗಿ ಪಾಲ್ಗೊಂಡು ಹರ್ಷವನ್ನು ವ್ಯಕ್ತಪಡಿಸುವ ಸಂದರ್ಭಗಳೆ ಪರ್ವಗಳನ್ನಾಗಿ ಆಚರಣೆಗೆ ತಂದಿರಬೇಕು.

ಹಬ್ಬ ಎನ್ನುವ ಶಬ್ದವು ಸಂಸ್ಕೃತದ ಪರ್ವ ಪದದ ತದ್ಭವ; ಪರ್ವ ಎಂದರೆ ಒಂದು ಇನ್ನೊಂದರ ಜೊತೆ ಕೂಡಿಕೊಳ್ಳುವುದು ಅಥವಾ ಸಂಧಿಸುವುದು ಎಂದರ್ಥ ಪ್ರಾಚೀನರ ಎಲ್ಲಾ ಅನಿಸಿಕೆಗಳು ಫಲೋತ್ಪತ್ತಿ ಸಂಬಂಧಿಯಾಗಿದ್ದವು. ಅವು ಋತುಗಳನ್ನು ಸೂರ್ಯ ಚಂದ್ರರನ್ನು ಪ್ರಕೃತಿಯ ಇತರ ಗಾಳಿ, ಮಳೆ, ಬಿಸಿಲು ಮುಂತಾದವುಗಳ ಚಟುವಟಿಕೆಗಳನ್ನು ಅವಲಂಬಿಸಿದ್ದವು. ಅವರ ಅನಿಸಿಕೆಗಳು ಕೈಗೂಡಿದಾಗ ಸಂತೋಷದಿಂದ ಹಬ್ಬಗಳನ್ನು ಆಚರಿಸಿದರು.

ಈ ಎಲ್ಲಾ ಹಬ್ಬಗಳಲ್ಲಿ ಹೆಚ್ಚಿನವು ವಿಶೇಷವಾಗಿ ಕೃಷಿಗೆ ಮಹತ್ವಕೊಟ್ಟಿರುವುದು ಮತ್ತು ಕೃಷಿಯ ಉತ್ಪಾದನೆಯಾದ ಆಹಾರ ಬೆಳೆಗಳಿಗೆ ಮಹತ್ವಕೊಟ್ಟಿರುವುದು ಕಂಡುಬರುತ್ತದೆ. ಇನ್ನಿತರ ಹಬ್ಬಗಳಲ್ಲಿ ಸಾಂಸ್ಕೃತಿಕ ಐತಿಹಾಸಿಕ, ಪೌರಾಣಿಕ, ಸಾಮಾಜಿಕ ಹಾಗೂ ಧಾರ್ಮಿಕಾಂಶಗಳನ್ನೊಳಗೊಂಡಿರುವವು, ಅದರಲ್ಲೂ ಧರ್ಮ ಎನ್ನುವ ಸಾರೋಟಿಗೆ ಕೃಷಿ ಮತ್ತು ಆಹಾರ ಚಕ್ರಗಳಾಗಿರುವ ಸಾರೋಟಿನಲ್ಲಿ ಹಬ್ಬಗಳು ಚಲಿಸುತ್ತವೆ. ಪ್ರಾಚೀನರ ಜೀವನಕ್ಕೆ ಮೂಲ ಆಧಾರ ಕೃಷಿ ಇಲ್ಲಿ ಬೆಳೆಯುವ ಆಹಾರದ ಬೆಳೆಗಳೆಲ್ಲ ದೇವರ ಅನುಗ್ರಹದಿಂದ ಬೆಳೆದವು ಎನ್ನುವ ನಂಬಿಕೆ ಹೊಂದಿದ್ದರು. ಹಬ್ಬದಾಚರಣೆಗಳ ಹಿಂದೆ ಆಯಾ ಋತುಗಳಲ್ಲಿ ಸಿಗುವ ವಸ್ತುಗಳನ್ನು

ಆಹಾರಗಳನ್ನು ಮತ್ತು ಇನ್ನಿತರ ಮೂಲಗಳನ್ನು ಬಳಸಿಕೊಂಡು ತನ್ನ ಇಚ್ಛೆಗೆ ಅನುಕೂಲವಾಗುವಂತೆ ಮಾಡಿಕೊಂಡರು. ಈ ಅನುಕೂಲತೆಗಳನ್ನು ಗುರುತಿಸಲು ಅವನು ಮಾಡಿದ ಪ್ರಯತ್ನ ಅಗಾದವೆಂದೇ ಹೇಳಬಹುದು. ಆದರೆ ಇಂದಿನ ಹಬ್ಬಗಳಲ್ಲಿ ಅಲಂಕಾರ, ಭೋಜನ, ಮನರಂಜನೆ ಆಡಂಬರಕ್ಕೆ ಮಹತ್ವ ಕೊಡಲಾಗುತ್ತದಷ್ಟೆ.

ಆಹಾರ, ಆರೋಗ್ಯ, ರಕ್ಷಣೆಗೆ ದೈವಗಳ ಪ್ರೀತಿ ಸಹಕರಿಸಬೇಕು. ಮಳೆ ಬೆಳೆಗಳು ಸಕಾಲಕ್ಕೆ ಆಗಬೇಕು. ಮಕ್ಕಳು ಹೆಚ್ಚಬೇಕು. ರೋಗಗಳು ಬರಬಾರದು.

ಗುಡುಗು, ಸಿಡಿಲು, ಮಿಂಚು, ಮಳೆ, ಗಾಳಿ, ಹಗಲು ರಾತ್ರಿಗಳಿಂದ ರಕ್ಷಣೆ ದೊರೆಯಬೇಕು. ಅದಕ್ಕಾಗಿ ಸಾಮೂಹಿಕ ಆಚರಣೆ, ಆಚರಣೆಯೊಂದಿಗೆ ಸಾಮೂಹಿಕ ಭೋಜನ ಹಾಡು ಕುಣಿತಗಳು ಇಂದಿಗೂ ಹಬ್ಬಗಳಿಗೆ ಮತ್ತು ಕ್ರೀಡೆಗಳಿಗೆ ಮೂಲವಾಗಿವೆ ಎಂದು ಹೇಳಬಹುದು.

ನಮ್ಮ ದೇಶ ಶ್ರೀಮಂತ ರಾಷ್ಟ್ರವಾದರೂ ಬಡಜನರಿಂದ ತುಂಬಿಕೊಂಡಿದೆ. ಶ್ರೀಮಂತರು ಅತಿಯಾದ ಕೊಬ್ಬಿನಾಂಶದ ಆಹಾರ ಸೇವಿಸಿ ರೋಗಪೀಡಿತರಾದರೆ ಬಡವರು ಪೌಷ್ಟಿಕ ಆಹಾರ ಸಿಗದೆ ರೋಗಗಳಿಗೆ ತುತ್ತಾಗಿ ನರಳುತ್ತಿರುವುದುಂಟು ಸಾಮಾನ್ಯವಾಗಿ ಎರಡು ವರ್ಗದ ಜನತೆಯಲಿ ಜಿಪುಣತೆ ಕಾಣಬಹುದು. ಈ ಜಿಪುಣತನದಿಂದ ಕೂಡಿದ ಹಣ ಮುಂದಿನ ಪೀಳಿಗೆಯ ಹಿತರಕ್ಷಣೆಯ ಉದ್ದೇಶವಾಗಿರುವುದು. ಬಡತನ ಜಿಪುಣತನ ಹಾಗೂ ಅಜ್ಞಾನದ ನಿಮಿತ್ತ ಜನರು, ದೇಹಾರೋಗ್ಯ ರಕ್ಷಣೆ ಬಗ್ಗೆ ಹೆಚ್ಚು ಆಸಕ್ತಿ ವಹಿಸುವುದಿಲ್ಲ. ಹೊಲದಲ್ಲಿ ದುಡಿಯುವ ಬಡ ರೈತರು ಕೂಲಿ ಕಾರ್ಮಿಕರು ಪೌಷ್ಟಿಕ ಆಹಾರ ಬಯಸದೇ ಎರಡೊತ್ತು ಯಾವುದನ್ನಾದರೂ ತಿಂದು ಹೊಟ್ಟೆ ತುಂಬಿದರೆ ಸಾಕು ಎನ್ನುವ ನಿರಾಶದಾಯಕ ಭಾವನೆ ಕಾಣಬಹುದು. ಇಂತಹ ವಿಚಾರಗಳನ್ನು ದೂರಸರಿಸಿ ಆಗಾಗ್ಗೆ ವಿಶೇಷ ಆಹಾರ ಬಳಸಲಿ ಎನ್ನುವ ವಿಚಾರದಿಂದ ಪೂರ್ವಿಕರು ಹಬ್ಬಗಳನ್ನು ಜಾರಿಗೆ ತಂದಿರಬೇಕು.

ಆಹಾರವಷ್ಟಲ್ಲದೆ ಆರೋಗ್ಯದಾಯಕವಾಗಿ ಬದುಕಲು ನಮ್ಮ ಸುತ್ತಲಿನ ಪರಿಸರ ನಾವಿರುವ ಸ್ಥಳ ಆರೋಗ್ಯದ ಶುಚಿತ್ವವೂ ಅಷ್ಟೇ ಅಗತ್ಯವಾಗಿದೆ. ಆದ್ದರಿಂದ ಹಬ್ಬದಾಚರಣೆಯಲ್ಲಿ ಸ್ವಚ್ಛತೆಯ ಕಡೆ ಇಂತಹ ಸಮಯದಲ್ಲಿ ಗಮನಿಸಿರುವುದು ಕಂಡು ಬರುತ್ತದೆ. ದಿನದ ದುಡಿಮೆಯ ಬದುಕಿನಲ್ಲಿ ಮನೆ ಸ್ವಚ್ಛತೆಯ ಕಡೆಗೂ ಗಮನಿಸುವುದಿಲ್ಲ. ಹೊಲದ ಕೆಲಸದಲ್ಲಿ ತೊಡಗಿದರೆ ಹಣ ಸಿಗುತ್ತದೆ ಮತ್ತು ಕೆಲಸಗಳಾಗುತ್ತವೆ. ಮನೆಯ ಸ್ವಚ್ಛತೆಯ ಕಡೆಗೆ ಇಂತಹ ಸಮಯದಲ್ಲಿ ಗಮನಿಸುವುದಿಲ್ಲ. ಆದ್ದರಿಂದ ಮನೆಗಳೆಲ್ಲಾ ಧೂಳು. ದುಮ್ಮಿನಿಂದ ಕೂಡಿರುತ್ತವೆ. ನಿರಂತರ ದುಡಿಮೆಯಿಂದ ವಿಶ್ರಾಂತಿ ಮತ್ತು ಮನೆ, ಮೈ ಸ್ವಚ್ಛ ಮಾಡಿ ಕೊಳ್ಳಲು ಹಬ್ಬಗಳು ನೆಪವಾಗಿ ಬಳಸಿಕೊಂಡಿರಬೇಕು. ಹಾಗೂ ಹಬ್ಬದ ದಿನಗಳಲ್ಲಿ ದೇವರಿಗೆ ವಿವಿಧ ಹೂಗಳಿಂದ ಅಲಂಕರಿಸಿ, ವಿವಿಧ ಪಕ್ವಾನ್ನಗಳನ್ನು ಶುಚಿರುಚಿಯಾಗಿ ತಯಾರಿಸಿ ಮಿತ್ರರು ಬಂದು-ಬಾಧವರೊಂದಿಗೆ ಕಾಲಕಳೆದು ಸಂತೋಷ ಹಂಚಿಕೊಳ್ಳುವುದು. ಹೊಸ ಹೊಸ ಬಟ್ಟೆಗಳನ್ನು ಧರಿಸಿ ದೇವಾಲಯಕ್ಕೆ ಹೋಗುವುದು. ಹೀಗೆ ಸಂಭ್ರಮದ ಆಚರಣೆಯಲ್ಲಿ ಕಾಲ ಕಳೆಯುವುದು.

ಸರ್ಕಾರಿ ನೌಕರರಿಗೆ ವಾರಕ್ಕೊಮ್ಮೆಯಾದರೂ ರಜೆ ಸಿಗುವುದರಿಂದ ವಿಶ್ರಾಂತಿ ತೆಗೆದುಕೊಳ್ಳಲು ಅವಕಾಶವಿರುತ್ತದೆ. ರೈತರಿಗೆ ಯಾರು ರಜೆ ಕೊಡಬೇಕು? ಆದ್ದರಿಂದ ಈ ಹಬ್ಬಗಳ ನೆಪದಲ್ಲಾದರೂ ಸತತ ದುಡಿಯುವ ರೈತರಿಗೆ ಹಾಗೂ ರೈತರ ಸಂಗಾತಿಗಳಾದ ಎತ್ತುಗಳಿಗೂ ಬಿಡುವು ಸಿಗುತ್ತದೆ. ಹಿಗೆ ಹಬ್ಬಗಳ ಆಚರಣೆಯಿಂದ ಆರೋಗ್ಯ, ವೈಜ್ಞಾನಿಕ, ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ ಕಾಳಜಿಯನ್ನು ಒಳಗೊಂಡಿವೆ. ಹಬ್ಬಗಳು ಐಕ್ಯಮತಕ್ಕೆ ನಾಂದಿಯಾಗಿವೆಂಬುದನ್ನು ಹೋಳಿ, ನವರಾತ್ರಿ, ಗಣೇಶ ಚತುರ್ಥಿಗಳಂತಹವುಗಳಿಂದ ಅರಿಯಬಹುದು.

ಸಮಕಾಲೀನವಾಗಿ ನೋಡಿದರೆ ಹಬ್ಬಗಳು ಒಂದು ಜಾತಿಯ ಅಥವಾ ಮತದ ಭಾವನೆಗಳನ್ನು ಗಟ್ಟುಗೊಳಿಸಿ ಒಂದು ಚೌಕಟ್ಟಿನಲ್ಲಿ ಆ ಗುಂಪಿನ ಜನರನ್ನು ಬೆಸೆಯುತ್ತದೆ. ಒಂದೇ ಬಗೆಯ ನಡುವಳಿಕೆಗಳ ಮೂಲಕ ತಾವು ಒಂದು ಎಂಬುದನ್ನು ಗುರುತಿಸಿಕೊಳ್ಳುತ್ತಾರೆ. ಇದರಿಂದ ವ್ಯಕ್ತಿಯ ಸಾಮಾಜಿಕ ಸಂಬಂಧಗಳು ಸಂಸಾರದ ಆಚೆಗೂ ವಿಸ್ತರಿಸುತ್ತವೆ. ಸಾಂಸ್ಕೃತಿಕ ನಿರಂತರತೆಯನ್ನು ಅನುಭವಿಸುವಂತೆ ಮಾಡುತ್ತವೆ. ಅಂದಿನ ದಿನ ಧಾರ್ಮಿಕ ಭಾವನೆಗಳು ತೀವ್ರವಾಗಿ ವ್ಯಕ್ತಗೊಂಡು ಮನಸ್ಸು ಹೆಚ್ಚು ಉದಾರವಾಗಿರಿಸುತ್ತದೆ. ಗ್ರಾಮ ದೇವತೆಗಳ ಹಬ್ಬದಲ್ಲಿ ಜಾತಿ ಮತಗಳೆನ್ನದೆ ಎಲ್ಲರೂ ಪಾಲ್ಗೊಳ್ಳುವರು ಗ್ರಾಮದೇವತೆಗಳ ಹಬ್ಬದಲ್ಲಿ ಜಾತಿ ಮತಗಳೆನ್ನದೆ ಎಲ್ಲರೂ ಪಾಲ್ಗೊಳ್ಳುವರು. ಎಲ್ಲಾ ವರ್ಗದ ಜನತೆಗೂ ಒಂದೊಂದು ಕಾರ್ಯ ಒಪ್ಪಿಸಿದ್ದಾಗಿರುತ್ತದೆ. ಕೆಳವರ್ಗದವರೆನಿಸಿದವರು ಎಲ್ಲಾ ವರ್ಗದ ಜನರು ಭಾಜ ಭಜಂತ್ರಿ ಭಾರಿಸಿದರೆ, ಹೂಗಾರರು ದೇವರಿಗೆ ಹೂವ ತರುವರು. ಇತರರು ಒಂದೊಂದು ಕೆಲಸ ಮಾಡುತ್ತಾರೆ.

ಎಲ್ಲಾ ಹಬ್ಬಕ್ಕೂ ಒಂದು ಬಹುಮುಖ್ಯವಾದ ಮೂಲ ಭಾಗವಿರುತ್ತದೆ. ನಾಗರಪಂಚಮಿ ಸಹೋದರ ಸಹೋದರಿಯರ ಸಂಬಂಧಗಳನ್ನು ಪ್ರೀತಿ ವಾತ್ಸಲ್ಯಗಳನ್ನು ವ್ಯಕ್ತಪಡಿಸಿದರೆ, ದಸರಾ ವ್ಯವಸಾಯದೊಂದಿಗೆ ರಾಜಕೀಯ ಪ್ರಧಾನ ಅಂಶಗಳು ಕಂಡುಬರುತ್ತವೆ. ನಾಗರಿಕತೆಯ ಆರಂಭದ ಆಹಾರ, ವಸತಿ, ಕುಟುಂಬ, ಸಂತಾನ, ಆರೋಗ್ಯ ಸ್ವರಕ್ಷಣೆ, ದೈವ, ಸಂಪ್ರೀತಿ ಇತ್ಯಾದಿಗಳ ಸಂಪಾದನೆಗಾಗಿ ಅವರು ಕೈಗೊಳ್ಳುತ್ತಿದ್ದ ಬಗೆ ಬಗೆಯ ಆರಾಧನೆ ಆಚರಣಗಳೇ ಇಂದಿನ ಹಬ್ಬಗಳ ಆಚರಣೆಯ ಹಿನ್ನೆಲೆಗಳಾಗಿವೆ. ಆ ಹಿನ್ನೆಲೆಗಳು ಸೂಕ್ಷ್ಮವಾಗಿ ತಲೆಮಾರುಗಳ ಪರದೆಯಿಂದ ಮರೆಯಾಗುತ್ತವೆ. ಹಿನ್ನೆಲೆಯ ಸುತ್ತಮುತ್ತ ಕಾಲದಿಂದ ಕಾಲಕ್ಕೆ ಬೇರೆ ಬೇರೆ ಸಂಚಿಕೆ ಆಚರಣೆಗಳು ಬೆಳೆದುಬಂದಿರುತ್ತವೆ. ಉದಾಹರಣೆಗೆ ಎತ್ತು ಮತ್ತು ಗಣೇಶ ಮಣ್ಣಿನಿಂದ ಮನೆಯಲ್ಲಿ ಮಾಡುತ್ತಿದ್ದರು. ಆದರೆ ಇಂದಿನ ದಿನಗಳಲ್ಲಿ ಅವುಗಳನ್ನು ಬಣ್ಣ ಬಣ್ಣದಿಂದ ತಯಾರಿಸಿರುವ ಎತ್ತು ಮತ್ತು ಗಣೇಶನನ್ನು ಅಂಗಡಿಗಳಿಂದ ಖರೀದಿ ಮಾಡಿ ತರಲಾಗುತ್ತದೆ. ಇವುಗಳನ್ನು ಹಬ್ಬದ ಮೂಲ ತತ್ವಗಳು ಎಂದು ಗುರುತಿಸಬಹುದು. ಇದರಲ್ಲಿ ಹಿಂದಿನಿಂದಲೂ ಮತ್ತು ಈಗಲೂ ಆಗುತ್ತಿರುವ ಬದಲಾವಣೆಗಳನ್ನು ಒಳಗೊಳ್ಳುತ್ತವೆ. ಹಬ್ಬದ ಮೂಲ ಉದ್ದೇಶ ಶಾಶ್ವತವಾಗಿರುತ್ತವೆ, ಆದರೆ ಆಚರಣೆಯ ಕವಚ ಸದಾ ಪರಿವರ್ತನ ಶೀಲ, ಆಯಾ ಕಾಲದಲ್ಲಿ ಆಚರಣೆಯ ಉಡುಗೆಗಳು ಈ ಕವಚದಲ್ಲಿ ಪ್ರತಿಫಲನಗೊಳ್ಳುತ್ತವೆ. ಪ್ರಮುಖ ಅಂಗವಾಗಿ ಆಚರಿಸಲ್ಪಡುವ ಹಬ್ಬಗಳು ಜೀವನಕ್ಕೆ ಪ್ರೇರಕ ಶಕ್ತಿಗಳಾಗಿವೆ. ನೋವನ್ನು ಮರೆಸುವ ಸಂತೋಷದ ಆಗರಗಳಾಗಿವೆ.

ಇಂದಿನ ಆಧುನಿಕ ಜೀವನದ ವ್ಯವಸ್ಥೆಗಳಿಂದಾಗಿಯೂ ಹಬ್ಬಗಳ ಆಚರಣೆ ಪೂರ್ಣವಾಗುತ್ತಿಲ್ಲ. ಹಬ್ಬಗಳು ಪ್ರತಿ ವರ್ಷ ಬರುತ್ತವೆ ಹೋಗುತ್ತವೆ. ಆದರೆ ಓದಿನಲ್ಲಿ ತೊಡಗಿದ ಮಕ್ಕಳ ಆಯಾ ತರಗತಿಗಳ ಶೈಕ್ಷಣಿಕ ವರ್ಷ ಮತ್ತೆ ಹಿಂದಿರುಗಿ ಬರುವುದಿಲ್ಲ ಎನ್ನುವ ಕಾರಣಗಳಿಂದಾಗಿ ಮಕ್ಕಳಿಗೆ ಹಬ್ಬಗಳಲ್ಲಿ ನಿಶ್ಚಿಂತರಾಗಿ ಸಂಭ್ರಮಿಸಲು ಬಿಡುವುದಿಲ್ಲ. ಈ ಸಂಭ್ರಮದಿಂದ ವಂಚಿತರಾದ ಮಕ್ಕಳು ಆ ಸಂದರ್ಭದಲ್ಲಿ ಕಳವಳಪಡುತ್ತಾರೆ ಮಾನಸಿಕ ನೆಮ್ಮದಿ ಕಳೆದುಕೊಳ್ಳಬಹುದು ಹಾಗೂ ಟಿ.ವಿ. ಚಾನಲಗಳಲ್ಲಿ ಹಬ್ಬದ ವಿಶೇಷ ಕುರಿತು ಚಲನಚಿತ್ರ ಪ್ರಸಾರವಾಗುತ್ತಿದ್ದರೆ ಅದನ್ನು ನೋಡುವುದರಲ್ಲಿ ಕಾಲ ಕಳೆಯುತ್ತಾರೆ ಹೊರತಾಗಿ ಅಂದಿನ ದಿನದ ಆಚರಣೆಗಳಲ್ಲಿ ಪಾಲ್ಗೊಳ್ಳದೇ ಇರುವುದು. ಇಂತಹ ಅನೇಕ ಕಾರಣಗಳು ಹಬ್ಬಗಳ ಆಚರಣೆಗೆ ತಡೆಗಳಾಗುತ್ತವೆ.

ಆದರೆ ವಿಶೇಷ ಸಂಭ್ರಮ ಹಳ್ಳಿ–ನಗರ ಪ್ರದೇಶಗಳಲ್ಲೂ ಕಂಡುಬರುತ್ತವೆ. ನಗರದ ಮಾರುಕಟ್ಟೆಯಲ್ಲಿ ಹಬ್ಬದ ಮುನ್ನಾ ದಿನ ತರತರಹದ ಹೂವು ಹಣ್ಣು ಬಾಳಿದಿಂಡು ಕಬ್ಬು ಮಾವಿನ ತಳಿರು ಹಾಗೂ ಆಯಾ ಹಬ್ಬದ ವಿಶೇಷತೆಯ ಸಾಮಗ್ರಿಗಳು ಬೇರೆ ಬೇರೆ ಹಳ್ಳಿಗಳಿಂದ ಬಂದು ಸಂಗ್ರಹವಾಗಿರುವವು.

ಹಳ್ಳಿಯಲ್ಲಿ ಸ್ಥಳೀಯವಾಗಿ ಸಿಗುವ ವಸ್ತುಗಳನ್ನು ಬಳಸಿ ಒಂದನ್ನು ಕಡಿಮೆಯಾದರೂ ಹಾಗೆಯೇ ಅನುಸರಿಸಿಕೊಂಡು ಹೋಗಬಹುದು. ಆದರೆ ನಗರದ ಮಾರುಕಟ್ಟೆಯಲ್ಲಿ ಎಲ್ಲವು ಸಿಗುವವು. ಇಷ್ಟೇ ಹಣ ಕೊಟ್ಟುಕೊಂಡುಕೊಳ್ಳಬೇಕು. ಹಬ್ಬಕ್ಕೆ ಆಧುನಿಕ ಮೆರಗು ಸೇರುತ್ತಿವೆ. ಉದಾಹರಣೆಗೆ: ಗಣೇಶ ಚತುರ್ಥಿಯಲ್ಲಿ ಗಣೇಶನ ಅಲಂಕಾರ, ದೀಪಾವಳಿಯ ಪಟಾಕಿಗಳ ಸಂಭ್ರಮ ಇತ್ಯಾದಿಗಳ ಹಣದ ವೆಚ್ಚದ ಮೇಲೆ ಆಧರಿಸಿರುವುದರಿಂದ ನಗರಗಳಲ್ಲಿ ವೈಭವಯುತವಾಗಿ ನಡೆಯುತ್ತವೆ. ಹಳ್ಳಿಯ ಹೆಚ್ಚಿನ ಜನತೆ ಆರ್ಥಿಕವಾಗಿ ಹಿಂದುಳಿದವರಾಗಿದ್ದರಿಂದ ಹಬ್ಬದ ಮೂಲ ವಿಶೇಷತೆ ಬಿಟ್ಟು ವೈಭವಕ್ಕೆ ಗಮನಿಸುವುದಿಲ್ಲ. ಆಚರಣೆಯಲ್ಲಿ ಏನೆ ವ್ಯತ್ಯಾಸಗಳಿದ್ದರೂ ಮೂಲ ಉದ್ದೇಶ ಮಾತ್ರ ಒಂದೇಯಾಗಿರುವುದು.

ಇಂತಹ ಹಬ್ಬಗಳು ವರ್ಷದಲ್ಲಿ ಋತುಮಾನಗಳಿಗೆ ಅನುಸಾರವಾಗಿ ಬಂದಿದ್ದುಟು. ಪ್ರತಿ ಅಮವಾಸ್ಯೆಯ ಸುತ್ತಲು ಒಂದೊಂದು ಹಬ್ಬಗಳಿರುವವು. ಹುಣ್ಣಿಮೆ ಮತ್ತು ಅಮವಾಸ್ಯೆಗಳು ಸುತ್ತಲು ನಡುವೆ ಬರುವ ಸಣ್ಣ ಪ್ರಮಾಣದಲ್ಲಿ ಆಚರಿಸುವ ಧಾರ್ಮಿಕ ಆಚರಣೆಗಳಾಗಿವೆ. ರಾಷ್ಟ್ರೀಯ ಪಂಚಾಂಗದಂತೆ ಚೈತ್ರಮಾಸವು ವರ್ಷಾರಂಭದ ಮೊದಲ ಮಾಸವಾಗಿದೆ. ಚೈತ್ರಮಾಸದಲ್ಲಿ ಬರುವ ಯುಗಾದಿ, ವರ್ಷಾರಂಭದ ಮೊದಲ ಹಬ್ಬವಾಗಿರುವುದರಿಂದ ಹೊಸ ದಿನ ಎನಿಸಿಕೊಂಡಿದೆ.

ವರ್ಷದಲ್ಲಿ ಬರುವ ಹಬ್ಬಗಳಲ್ಲಿ ಬಸವ ಜಯಂತಿ, ಕಾರಹುಣ್ಣಿಮೆ, ಮಣ್ಣೆತ್ತಿನ ಅಮವಾಸೆ, ಎಳ್ಳೆ ಅಮಾವಾಸ್ಯೆ, ತೆನೆಕಟ್ಟುವ ಹುಣ್ಣಿಮೆ ಭಣಮಿಹಬ್ಬ ಇವು ಕೃಷಿ ಮೂಲದ ಹಬ್ಬಗಳಾಗಿವೆ. ಇವುಗಳ ನಂಬಿಕೆ ಮತ್ತು ಆಚರಣೆಗಳು ಅಧ್ಯಾಯ ೪ ಕೃಷಿ ನಂಬಿಕೆ ಮತ್ತು ಆಚರಣೆಗಳು ಎನ್ನುವುದರಲ್ಲಿ ಪೂರ್ಣವಾಗಿ ವಿವರಿಸಲಾಗಿದೆ. ಮತ್ತು ಯುಗಾದಿ, ದಸರಾ ದೀಪಾವಳಿ ಇತ್ಯಾದಿಗಳಲ್ಲೂ ಬರುವ ಕೃಷಿಗೆ ಸಂಬಂಧಿಸಿದ ನಂಬಿಕೆಗಳು ಅಧ್ಯಾಯ ೪ ರಲ್ಲಿ ವಿವರಿಸಲಾಗಿದೆ.

ಇನ್ನುಳಿದ ಸಾಂಸ್ಕೃತಿಕ ಐತಿಹಾಸಿಕ ಹಾಗೂ ಇತರ ಅಂಶಗಳ ಆಧಾರಿತ ಹಬ್ಬಗಳ ವಿವರ ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

**ಯುಗಾದಿ :**

ಯುಗದ ಆದಿಯಾದ ಯುಗಾದಿಯು ವಸಂತ ಋತುವಿನ ಚೈತ್ರಮಾಸದ ಶುದ್ಧಪಾಡ್ಯಮಿ (ಪ್ರತಿಪದೆ)ಯ ಹೊಸ ವರ್ಷದ ಮೊದಲು ಆಚರಿಸುವ ಹಬ್ಬವಾಗಿದೆ. ಪ್ರಸಿದ್ಧ ಖಗೋಳ ವೈಜ್ಞಾನಿಕ ವರಾಹಮೀಹರನು ಈ ದಿನವೇ ಹೊಸ ವರ್ಷವೆಂದು ಧೃಢೀಕರಿಸಿದ್ದಾನೆ. ಈ ದಿನವೇ ಬ್ರಹ್ಮನು ಈ ಜಗತ್ತನ್ನು ಸೂರ್ಯೋದಯದ ಹೊಂಗಿರಣಗಳೊಂದಿಗೆ ಸೃಷ್ಟಿಸಿದ ಸೂರ್ಯನಿಗೆ ಎಚ್ಚರವಾದಗಲೇ ಗ್ರಹ, ನಕ್ಷತ್ರ, ಮಾಸ, ಋತು, ವರ್ಷ, ವರ್ಷಾಧಿಪತಿಗಳನ್ನೂ ಸೃಷ್ಠಿಸಿ ಕಾಲದ ಎಣಿಕೆ ಆರಂಭಿಸಿದನೆಂಬ ನಂಬಿಕೆ ನಾಲ್ಕು ನೂರು ಅರವತ್ತು ಕೋಟಿ ವರ್ಷಗಳ ಹಿಂದೆ ಭೂಮಿ, ಆಕಾಶ ಮತ್ತು ಆಕಾಶ ಕಾಯಗಳ ರಚನೆಗೊಂಡ ಬಗೆಯನ್ನು ವಿಜ್ಞಾನ ಖಚಿತವಾಗಿ ತೋರಿಸಿಕೊಟ್ಟಿದೆ. ಆದರೂ ಜನರಲ್ಲಿ ಬ್ರಹ್ಮನೇ ಈ ಜಗತ್ತಿನ ಸೃಷ್ಠಿಕರ್ತ ಎನ್ನುವ ತಪ್ಪುಕಲ್ಪನೆ ಇನ್ನೂ ಉಳಿದಿದೆ. ಈ ಶುಭದಿನದಂದು ದೈವಿಶಕ್ತಿ ಅಸುರಿ ಶಕ್ತಿಯನ್ನು ದಮನ ಮಾಡಿ ಜೀವನದಲ್ಲಿ ಹೊಸ ಅಧ್ಯಾಯ ಆರಂಭಿಸುತ್ತದೆ.

ರೋಮನ್ನರಿಗೆ ಜನವರಿ ಒಂದನೇ ತಾರೀಖು ಮೊದಲನೆ ದಿನವಿದ್ದಂತೆ ಹಿಂದೂಗಳಿಗೆ ಯುಗಾದಿ ಹೊಸ ವರ್ಷದ ಮೊದಲನೆ ದಿನವಾಗಿದೆ ಆದರೆ ಇದಕ್ಕಿಂತಲೂ ಭಾರತೀಯರಲ್ಲು ಕೂಡಾ ಪಾಶ್ಚಾತ್ಯ ಪದ್ಧತಿಯ ವರ್ಷದ ಏಣಿಕೆ ರೂಢೀಯಲ್ಲಿದೆ.

ಚೈತ್ರ ಶುದ್ಧಪ್ರತಿಯಿಂದ ವಸಂತ ನವರಾತ್ರಿ ಆರಂಭ ವರ್ಷಾದಿಯ ವಸಂತ ಋತುವಿನ ಆರಂಭಕಾಲ, ಅನಿಷ್ಟ ನಿವಾರಣೆಗೆ ದೇವತಾನುಗ್ರಹ ಪ್ರಾಪ್ತಿಗೆ ಶ್ರೇಷ್ಠವೆಂದು ನಂಬಿಕೆ, ಯುಗಾದಿಯ ದಿನ ಉಷಃ ಕಾಲಕ್ಕೆ ಎದ್ದು ಅಭ್ಯಂಗ ಸ್ನಾನಮಾಡಿ, ನವವಸ್ತ್ರಧರಿಸಿ ಹಿರಿಯರ ಆಶೀರ್ವಾದ ಪಡೆದು ಬೇವು ಬೆಲ್ಲ ಸೇವಿಸುವ ನಂಬಿಕೆ ರೂಢಿಯಲ್ಲಿದೆ. ಧರ್ಮ ಸಿಂಧುವಿನಲ್ಲಿ ಈ ವಿಚಾರವಾಗಿ ಹೀಗೆ ಹೇಳಿದ ಪ್ರತಿಗೃಹಂ ಧ್ವಜಾರೋಹಣಂ ನಿಂಬ ಪ್ರತಾಶನಂ. ವತ್ಸರಾಧಿ ಫಲಶ್ರವಣಂ ನವರಾತ್ರಾರಂಭಃ ತೈಲ ಅಭ್ಯಂಗಾದಿಶ್ಚ ಶುದ್ಧಮಾಸ ಪ್ರತಿಪದಿ ಕಾರ್ಯಃ"[೩೫] ಅಂದರೆ ಮನೆಯನ್ನೆಲ್ಲಾ ಮಾವು ಬೇವಿನ ತಳಿರು ತೋರಣಗಳಿಂದ ಅಲಂಕರಿಸಿ ಬಾವುಟ ಹಾರಿಸುವುದು ಬೇವು ತಿನ್ನುವುದು ಪಂಚಾಂಗ ಶ್ರವಣ ನವರಾತ್ರಿ ಆರಂಭ ಇಷ್ಟಾದೇವತಾ ಪೂಜೆಯ ಜತೆಗೆ ಸೃಷ್ಟಿಕರ್ತನಾದ ಬ್ರಹ್ಮದೇವನ ಕಾಲಪುರುಷನ ಹಾಗೂ ವರ್ಷಾಧಿಪತಿಯ ಆರಾಧನೆ ಚಂದ್ರದರ್ಶನ ಇವು ಯುಗಾದಿಯ ವೈಶಿಷ್ಟ್ಯಗಳು.

ನಮ್ಮ ಸಂಸ್ಕೃತಿಯಲ್ಲಿ ಆಚರಿಸುವ ಧರ್ಮದ ಹಿನ್ನೆಲೆ ಹಬ್ಬಗಳಲ್ಲಿ ಕೆಲವೊಂದಕ್ಕಂತೂ ಬಹಳಷ್ಟು ಮಹತ್ವ ಕೊಡಲಾಗಿದೆ. ಅವುಗಳೆಂದರೆ ಯುಗಾದಿ ವಿಜಯದಶಮಿ ದೀಪಾವಳಿ ಪಾಡ್ಯ ಮತ್ತು ಬಸವಜಯಂತಿ ಇವುಗಳನ್ನು ಸಾಡೇತೀನ ಮೂಹರ್ತಗಳು ಎಂದು ಕರೆಯುತ್ತಾರೆ. ಈ ದಿನಗಳಲ್ಲಿ ರಾಹುಕಾಲ ಯಮಗಂಡಕಾಲದ ಆಗಮನವಿರದೆ ದಿನವಿಡಿ ಬ್ರಾಹ್ಮಿ ಮೂಹರ್ತವೇ ಇರುತ್ತದೆ. ಆದ್ದರಿಂದ ಎಲ್ಲಾ ಹೊಸ ಕೆಲಸಗಳ ಆರಂಭಕ್ಕೂ ಶುಭ ದಿನ ಎಂಬ ನಂಬಿಕೆಯಿದೆ.

---

೩೫ (ಅಡಿಟಿಪ್ಪಣಿ: ೩೫: ವಿಜಯ ಕರ್ನಾಟಕ ದಿನಪತ್ರಿಕೆ ದಿ:೧೬.೦೩.೨೦೧೦ ಚಂದ್ರಮಾನ ಯುಗಾದಿ ದೈವಜ್ಞ ಕೆ.ಎನ್.ಸೋಮಯಾಜಿ.

ಚಂದ್ರನ ಚಲನೆಯನ್ನನುಸರಿಸಿ ಅಮವಾಸ್ಯೆ ಹುಣ್ಣಿಮೆಗಳ ಆಧಾರದ ಮೇಲೆ ಮಾಸಗಣನೆ ಮಾಡುವ ಪದ್ಧತಿಗೆ ಚಾಂದ್ರಮಾನ ಎಂದು ಹೆಸರು. ಹುಣ್ಣಿಮೆಯ ದಿನ ಚಂದ್ರ ಯಾವ ನಕ್ಷತ್ರದಲ್ಲಿರುವನೋ ಆ ಹೆಸರಿನಿಂದಲೇ ಆಯಾ ತಿಂಗಳನ್ನು ಕರೆಯುವರು ಚಂದ್ರಮಾನ ಯುಗಾದಿಯ ಆಚರಣೆ ಕರ್ನಾಟಕ, ಆಂಧ್ರಪ್ರದೇಶ, ಕೇರಳ, ಮಹಾರಾಷ್ಟ್ರ. ಗುಜರಾತ್ ರಾಜ್ಯಗಳಲ್ಲಿ ಬಳಕೆಯಲ್ಲಿದೆ ತಮಿಳುನಾಡು ಹಾಗೂ ಉತ್ತರಭಾರತದ ಹಲವು ರಾಜ್ಯಗಳಲ್ಲಿ ಸೌರಮಾನ ಯುಗಾದಿ ಬಳಕೆಯಲ್ಲಿದೆ. ಸೌರಮಾನ ಪದ್ದತಿ ಸೂರ್ಯನ ಚಲನೆಯನ್ನು ಆಧರಿಸಿದ್ದು ಈ ಪದ್ಧತಿಯಲ್ಲಿ ಸೂರ್ಯನು ಮೇಷರಾಶಿ ಪ್ರವೇಶಿಸುವ (ಮಾರ್ಚ ೨೧) ದಿನದಂದು ಯುಗಾದಿ ಆಚರಿಸುತ್ತಾರೆ. ಭಾರತೀಯ ರಾಷ್ಟ್ರೀಯ ಪಂಚಾಂಗ ಆಧಾರಿತವಾಗಿರಬೇಕು.

ಯುಗಾದಿಯ ರಾತ್ರಿ ತಾಮ್ರದ ತಟ್ಟೆಯಲ್ಲಿ ಅಕ್ಕಿಯಿಂದ ಚಂದ್ರದ ಚಿತ್ರ ಬಿಡಿಸಿ ಬಾಲ ಚಂದ್ರಸೇ ನಮಃ ಎಂದು ಪೂಜಿಸಿದರೆ ವರ್ಷ ಪೂರ್ತಿ ಚಂದ್ರದರ್ಶನ ಮಾಡಿದ ಫಲ ಸಿಗುತ್ತದೆ. ಎಂದು ನಂಬಿಕೆಯಿದೆ ರೈತರನ್ನು ಒಳಗೊಂಡಂತೆ ಹಿರಿಯ ಕಿರಿಯರಿಗೆಲ್ಲಾ ಅತಿ ಸಂತೋಷದ ಸಂಭ್ರಮದ ದಿನ ಯುಗಾದಿ ಹಬ್ಬ ಅದಕ್ಕಾಗಿ ವರಕವಿ ದ.ರಾ.ಬೇಂದ್ರಯವರು ಯುಗಾದಿ ಕಳೆದರೂ ಯುಗಾದಿ ಮರಳಿ ಬರುತ್ತಿದೆ. ಹೊಸ ವರ್ಷಕ್ಕೆ ಹೊಸ ಹರ್ಷವ ತರುತಲಿದೆ ಎನ್ನುವ ಸಾಲುಗಳು ನೆನಪಿಗೆ ಬರುತ್ತವೆ.

ಈ ಹಬ್ಬದ ಆಚರಣೆಯ ಹಿಂದೆ ಸಂತೋಷ, ಆರೋಗ್ಯ ಕೃಷಿ ಉಪಯುಕ್ತ ಅಂಶಗಳನ್ನು ಗುರುತಿಸುವ ನಂಬಿಕೆಗಳು ಆಚರಣೆಯಲ್ಲಿವೆ. ಕೆಲವೊಂದು ಈ ಕೆಳಗಿನಂತೆ ತಿಳಿಸಲಾಗಿದೆ.

**೧. ಬುಸ್ಕಿ ಇಟ್ಕೊಂಡು ಸ್ನಾನ ಮಾಡುವುದು :**

ಬುಸ್ಕಿ ಎನ್ನುವುದು ಅಡವಿಯಲ್ಲಿ ಸಿಗುವ ಸಸ್ಯವಾಗಿದೆ. ಇದರಲ್ಲಿ ಔಷಧಿ ಉಪಯುಕ್ತ ಗುಣವಿದೆ. ವಾತ ಪಿಕ್ಕಿರೋಗದ ನಿವಾರಣೆಯೊಂದಿಗೆ ಹಲವಾರು ರೋಗಗಳ ನಿವಾರಕ ಔಷಧಿ ಆಗಿದೆ. ಅನೇಕ ಕ್ರಿಮಿನಾಶಕವೂ ಆಗಿದೆ. ಎಳೆ ಚಿಗುರಿನಿಂದ ಕೂಡಿದ್ದ ಈ ದಿನಗಳಲ್ಲಿ ಉಪಯೋಗಿಸುವುದರಿಂದ ಆರೊಗ್ಯದ ಮೇಲೆ ಪರಿಣಾಮ ಪ್ರಭಾವ ಬೀರುತ್ತದೆನ್ನುವ ಉದ್ದೇಶದಿಂದ ಇದನ್ನು ಹಬ್ಬದ ನಿಮಿತ್ಯವಾಗಿ ಎಲ್ಲರೂ ಉಪಯೋಗಿಸಲಿ ಎಂದು ಈ ನಂಬಿಕೆ ಬೆಳೆದು ಬಂದಿರಬೇಕು. ಆದರೆ ಇಂದಿನ ದಿನಗಳಲ್ಲಿ ಪಾರ್ಥೆನಿಯಂ ಅಂತಹ ಕಳಿಯಿಂದಾಗಿ ಮತ್ತು ರಸಾಯನಿಕ ಕ್ರಿಮಿನಾಶಕ ವಸ್ತುಗಳ ಬಳಕೆಯಿಂದಾಗಿ ಬುಸ್ಕಿ ಬೆಳೆಯುವಂತಹ ಪ್ರಮಾಣ ಕಡಿಮೆಯಾಗುತ್ತಿರುವುದು.

**೨. ಬೇವು-ಬೆಲ್ಲ ಸೇವಿಸುವುದು :**

ಅದರಕ್ಕೆ ಕಹಿ ಉದರಕ್ಕೆ ಸಹಿ ಎನ್ನುವ ಮಾತು ಚಿರ ಪರಿಚಿತ ಬೇವು-ಬೆಲ್ಲ ಸೇವಿಸುವುದು ಹಾಗೂ ವಿನಿಮಯ ಮಾಡಿಕೊಳ್ಳುವುದು ಈ ಹಬ್ಬದ ಸಂಪ್ರದಾಯ. ಬೇವು-ಬೆಲ್ಲ ಸೇವನೆ ಜೀವನದಲ್ಲಿ ಬರುವ ನೋವು (ಕಹಿ) ನಲಿವು (ಸಿಹಿ) ಗಳ ಸಂಕೇತವಾಗಿ ಸೇವಿಸಲಾಗುತ್ತದೆ. ಸುಖ ದುಃಖಗಳೆರಡು ಸಮನಾಗಿ ಸ್ವೀಕರಿಸಬೇಕು. ನೋವಿಗೆ ಎದೆ ಗುಂದದೆ ಅದನ್ನು ಎದುರಿಸಬೇಕು. ಮತ್ತು ನಲಿವಿನಲ್ಲೂ ಇತರರನ್ನು ಕಡೆಗಾಣದೆ ಅವರೊಂದಿಗೆ ನಲಿವನ್ನು ಹಂಚಿಕೊಳ್ಳಬೇಕು. ಇನ್ನೊಬ್ಬರ ನೋವಿನಲ್ಲಿ ಸಹಾಯಕರಾಗಿರಬೇಕು. ಎಂಬುದನ್ನು ಸಮರ್ಥಿಸುತ್ತದೆ. ಬೇವು ಸೇವನೆ ಕಹಿಯಾಗಿದ್ದಷ್ಟು ಆರೋಗ್ಯಕ್ಕೆ ಅಷ್ಟೆ ಉತ್ತಮಗುಣವುಳ್ಳದ್ದಾಗಿದೆ. ಉಷ್ಣದಿಂದ

ಕೂಡಿದ ಇದು ಕಫದ ಬಾಧೆಗಳನ್ನು ತಡೆಗಟ್ಟುತ್ತದೆ. ದಿನಾಲೂ ಬೇವಿನ ತಪ್ಪಲು ತಿನ್ನುವುದರಿಂದ ಕಜ್ಜಿ ಹತ್ತಿದಾಗ ಮತ್ತು ಇತರ ನಂಜಿನಾಂಶಗಳ ಪ್ರಭಾವ ದೇಹದ ಮೇಲಾಗುವುದನ್ನು ತಡೆಯುತ್ತವೆ ಹಾಗೂ ಆರೋಗ್ಯವನ್ನು ಕಾಪಾಡುತ್ತದೆ. ಬೇವು ಆರೋಗ್ಯಕ್ಕೆ ತಂಪು ಪಾನೀಯವಾಗಿದೆ. ಬೇವಿನ ಎಲೆಯ ರಸವನ್ನು ಬಿದ್ದಗಾಯಕ್ಕೆ ಹುಣ್ಣಿಗೆ ಹಚ್ಚುವುದುಂಟು ಅದರ ತೊಗಟೆ ಮೂಗು, ಕಿವಿ ಚುಚ್ಚಿದಾಗ ಹುಣ್ಣಾದರೆ ಸೋಸಿ ಹಚ್ಚುವುದರಿಂದ ನೋವು ಕಡಿಮೆಯಾಗುವುದು.

**೩. ಜೋಕಾಲಿ ಆಡುವುದು :**

ಯುಗಾದಿ ಹಬ್ಬ ದಿನದಂದು ಬೀದರ ಜಿಲ್ಲೆಯ ಔರಾದ ತಾಲ್ಲೂಕಿನ ಹಳ್ಳಿಗಳು ಸೇರಿದಂತೆ ಜೋಕಾಲಿ ಆಡುವ ನಂಬಿಕೆಯಿದೆ ಇನ್ನು ಕೆಲವು ಕಡೆ ಪಂಚಮಿ ಹಬ್ಬದಲ್ಲಿ ಜೋಕಾಲಿ ಆಡುವ ನಂಬಿಕೆ ಕಂಡುಬರುತ್ತದೆ. ಜೀವನವೇ ಒಂದು ರೀತಿಯಲ್ಲಿ ಜೋಕಾಲಿಯಾಗಿದೆ. ಹಿನ್ನಡೆ ಮುನ್ನಡೆ ವ್ಯಕ್ತಿಯ ಜೀವನದಲ್ಲಿ ಬಂದು ಹೋಗುವ ಕಾಲಚಕ್ರಗಳಾಗಿವೆ. ಅಂದರೆ ಸಾಧನೆಯಲ್ಲಿದ್ದ ವ್ಯಕ್ತಿ ಯಾವತ್ತು ಸಾಧನೆ ಮಾರ್ಗದಲ್ಲಿ, ಮುನ್ನಡೆ ಯುತ್ತನೆಂದೂ ಅಲ್ಲ ಹಿಂದೆ ಇರುವ ವ್ಯಕ್ತಿ ಅವನ ಜೀವನ ಪೂರ್ತಿ ಏನು ಸಾಧಿಸಿದೆ ಹಿಂದೆ ಇರುತ್ತಾನೆಂತೂ ಅಲ್ಲ. ಚಲನೆಯಲ್ಲಿ ಜೋಕಾಲಿ ಗಾಳಿಯ ಒತ್ತಡಕ್ಕೆ ಹಿಂದೆ ಮುಂದೆ ತಾನಾಗಿಯೇ ಹೋದಂತೆ ಜೀವನದ ಏರುಪೇರು ನೋವು ನಲಿವುಗಳ ಒತ್ತಡಕ್ಕೆ ಹಿನ್ನಡೆ–ಮುನ್ನಡೆ ಸಹಜವಾಗಿ ಬರುತ್ತವೆ.

ಜೋಕಾಲಿ ಜೀವನಕ್ಕೆ ಸಂಬಂಧಿಸಿದಂತೆ ಈ ನಂಬಿಕೆಗಳನ್ನು ಹೊಂದಿದ್ದು ಒಂದಾದರೆ ಅದರಿಂದ ಆರೋಗ್ಯಕ್ಕೆ ಒಳ್ಳೆಯ ಉಪಯುಕ್ತತೆ ಕೊಡುವ ಒಂದು ಕ್ರೀಡಾ ಚಟುವಟಿಕೆಯಾಗಿದೆ. ಹೆಚ್ಚಾಗಿ ಮರಗಳಿಗೆ ಕಟ್ಟುವುದರಿಂದ ಆಟದ ಜೊತೆ ಶುದ್ಧ ಆಮ್ಲಜನಕ ಸೇವನೆಯು ಆರೋಗ್ಯಕ್ಕೆ ಸಿಗುತ್ತದೆ. ಜೋಕಾಲಿ ಆಡುವುದರಿಂದ ಸ್ನಾಯುಗಳು ಮತ್ತು ಹೃದಯ ಗಟ್ಟಿಗೊಳ್ಳುತ್ತವೆ ಹಾಗೂ ಭಯ ದೂರಿಕರಿಸುತ್ತದೆ. ಆದುದರಿಂದಲೇ ಎಳೆ ಮಕ್ಕಳನ್ನು ತೊಟ್ಟಿಲಲ್ಲಿ ಹಾಕಿ ತೂಗುವರು. ಇದರಿಂದ ಮಕ್ಕಳು ಹಾಯಾಗಿ ನಿದ್ರಿಸುತ್ತವೆ. ಇದರಿಂದ ಮಕ್ಕಳ ಬೆಳವಣಿಗೆ ಚೆನ್ನಾಗಿ ಆಗುತ್ತದೆ. ಜೋಕಾಲಿ ಆಟದಲ್ಲಿ ಎಷ್ಟೇಷ್ಟು ಮೇಲೇರುತ್ತೇವೆ ಎನ್ನುವ ಕ್ರಿಡಾಪಟುಗಳಲ್ಲಿ ಸ್ಪರ್ಧಾ ಮನೋಭಾವನೆ ಮೂಢಿಸುತ್ತದೆ.

ಎರಡು ಸುತ್ತಾದರು ಹೊಲ ಊಳುವುದು. ಹೊಸ ಪಂಚಾಂಗ ನೋಡುವುದು, ಯುಗಾದಿ ನಂತರ ಮಳೆ ಬರುವುದು ಈ ನಂಬಿಕೆಗಳನ್ನು (ಅಧ್ಯಾಯ ೪ ರಲ್ಲಿ) ವಿವರಿಸಲಾಗಿದೆ.

**೪. ಯುಗಾದಿ ಹಬ್ಬವಾಗುವ ತನಕ ಮಾವಿನಕಾಯಿ ತಿನ್ನಬಾರದು :**

ಯುಗಾದಿ ಹಬ್ಬದಂದು ಮಾಡುವ ಬೇವಿನಲ್ಲಿ ಮಾವಿನಕಾಯಿ ಕಲಿಸುವುದು. ಎಲ್ಲದರಲ್ಲೂ ಮೊದಲು ದೇವರಿಗೆ ಅರ್ಪಿತವಾಗಬೇಕೆಂಬ ನಂಬಿಕೆಯಿರುವುದರಿಂದ ನೈಸರ್ಗಿಕವಾಗಿ ಬೆಳೆದ ಈ ಹಣ್ಣು ಮೊದಲು ಬೇವು ಮೂಲಕ ದೇವರಿಗೆ ಅರ್ಪಿತವಾಗಲೆನ್ನುವ ಒಂದು ನಂಬಿಕೆ ಜನಪದರದ್ದಾಗಿರಬೇಕು.

ಈ ಎಳೆ ಮಾವಿನಲ್ಲೀ ಚೀಕು (ಅದರ ಜಗಟರಸ) ಹೆಚ್ಚಾಗಿರುವುದರಿಂದ ಬಾಯಿ ಅಥವಾ ಚರ್ಮದ ಮೇಲೆ ಬಿದ್ದರೆ ಹುಣ್ಣಾಗುವ ಸಾಧ್ಯತೆಗಳುಂಟು ಎಳೆ ಮಾವು ತಿನ್ನಲು ಎಲ್ಲರು ಆಸೆ ಪಡುತ್ತಾರೆ. ಆದ್ದರಿಂದ ಆರೋಗ್ಯಕ್ಕೆ ಆಗುವ ಚಿಕ್ಕ ಹಾನಿ ತಪ್ಪಿಸಲು ಈ ನಂಬಿಕೆ ಉಪಯೋಗಿಸಿರಬೇಕು. ಯುಗಾದಿಯ ನಂತರ

ದಿನಗಳಲ್ಲಿ ಕಾಯಿ ಗಟ್ಟಿಯಾಗಿರುತ್ತವೆ. ಹೋಳಿ ಹುಣ್ಣಿಮೆಗೆ ಹೋಳ್ಗಾಯಿ ಯುಗಾದಿಗೆ ಗಟ್ಟಿಗಾಯಿ ಎನ್ನುವ ಮಾತಿನಂತೆ ಚೀಕು ಕಡಿಮೆಯಾಗಿ ಮಾವಿನ ಹಣ್ಣು ತಿನ್ನುವಂತೆ ರುಚಿ ತುಂಬಿಕೊಂಡಿರುತ್ತವೆ.

**ರಾಮನವಮಿ ಆಚರಣೆ :**

ಯುಗಾದಿ ನಂತರ ಒಂಭತ್ತನೆ ದಿನಕ್ಕೆ ಆಚರಿಸುವ ಹಬ್ಬ ಆದರೆ ಬಹು ಪ್ರಚಾರದಲ್ಲೇನು ಇಲ್ಲ. ಬೀದರ ಜಿಲ್ಲೆಯಲ್ಲಿ ಅಪರೂಪವಾಗಿ ಇದರ ಆಚರಣೆ ಕಂಡುಬರುತ್ತದೆ. ಈ ಹಬ್ಬದಲ್ಲೂ ಪಾನೀಯಗಳ ಸೇವನೆ ವಿಶೇಷವಾಗಿದೆ. "ನೀರು, ಮಜ್ಜಿಗೆ, ಬೇಲದ ಹಣ್ಣಿನ ಪಾನಕ, ದಾಹವನ್ನು ಓಂಗಿಸುವುದರೊಂದಿಗೆ ಬಾಯಿಯ ದುರ್ಗಂಧವನ್ನು ನೀಗಿ, ಒಸಡುಗಳಿಂದಾಗುವ ರಕ್ತಸ್ರಾವವನ್ನು ನಿಲ್ಲಿಸುತ್ತದೆ. ಮತ್ತು ದೇಹಕ್ಕೆ ಸಿ ಜೀವಸತ್ವ ಅವಶ್ಯಕತೆಯನ್ನು ಪೂರೈಸುತ್ತದೆ. ಅಲ್ಲದೆ ದೇಹದ ರೋಗ ನಿರೋಧಕ ಶಕ್ತಿಯನ್ನು ಹೆಚ್ಚಿಸುತ್ತದೆ. ಕರಿಬೇವು. ಶುಂಠಿ ಬೆರೆಸಿ ತಯಾರಿಸಿದ ಮಜ್ಜಿಗೆ ಬಾಯಾರಿಕೆಯನ್ನು ದೂರ ಮಾಡಿ ಹಸಿವೆಯನ್ನು ಹೆಚ್ಚಿಸುತ್ತದೆ.[೩೬] ಮಹಾಕಾವ್ಯವಾದ ರಾಮಾಯಣದ ರಾಮನ ಹುಟ್ಟಿದ ದಿನದಂದೆ ಆಚರಿಸಲಾಗುತ್ತದೆ. ಇದು ರಾಮನ ಇತಿಹಾಸವನ್ನು ನೆನಪಿಸುವ ದಿನವಾಗಿದೆ.

**ಬಾರ್ಷಿ :**

ಬಾರಾ ದಿನದ ಬಾರ್ಷಿ ಶಿವನ ದಿನಗಳು ಎನ್ನುವ ವಾಕ್ಯ ಬೀದರ ಭಾಷೆಯಲ್ಲಿ ಬಳಕೆಯಲ್ಲಿರುವುದು. ಯುಗಾದಿ ಹಬ್ಬದ ಮರುದಿನವೆ ಆರಂಭವಾಗಿ ಹನ್ನೆರಡನೆ ದಿನಕ್ಕೆ ಮುಗಿಯುತ್ತದೆ. ಹನ್ನೆರಡು ದಿನಗಳ ಕಾಲಾವಧಿಯಲ್ಲಿ ಮನೆಯಲ್ಲಿ ಶುಭಕಾರ್ಯಗಳು ಮಾಡುವುದಿಲ್ಲ. ಏಕೆಂದರೆ ಶಿವನು ವಿವಾಹವಾಗುವ ದಿನಗಳಾಗಿರುವುದರಿಂದ ಶಿವನ ಹೆಸರಲ್ಲಿ ಏನು ಮಾಡುವುದಿಲ್ಲ. ಇದರ ಆಚರಣೆ ಅದ್ದೂರಿಯಾಗಿ ಮಹಾರಾಷ್ಟ್ರದಲ್ಲಿ ಆಗುವುದರಿಂದ ಗಡಿ ಭಾಗಕ್ಕೆ ಹೊಂದಿರುವ ಔರಾದ ತಾಲ್ಲೂಕಿನ ಮಾಳೆಗಾಂವ, ಚಿಮೆಗಾಂವ, ಮುರ್ಕಿ, ತೇಗಂಪೂರ, ಬೇಡಕುಂದಾ ಮುಂತಾದವು, ಭಾಲ್ಕಿ ತಾಲೂಕಿನ ಏಣಕೂರು ಕುರಬಖೇಳಗಿ ಕುಮಾರ ಚಿಂಚೋಳಿ ಬಸವಕಲ್ಯಾಣ ತಾಲೂಕಿನ ಮಂಠಾಳ ಬೇಲೂರು ಬಾಲಕುಂದಿ ಇತ್ಯಾದಿ ಕಡೆಗಳಲ್ಲಿಯೂ ಈ ಆಚರಣೆ ಕಂಡುಬರುತ್ತದೆ ಇನ್ನುಳಿದ ಭಾಗಗಳಲ್ಲಿ ತೀರಾ ಕಡಿಮೆಯಿದೆ. ಮಹಾದೇವ ಎಲ್ಲರಿಗಿಂತ ಶ್ರೇಷ್ಠವಾದವನು.

ಆದ್ದರಿಂದ ಮಹಾರಾಷ್ಟ್ರದಲ್ಲಿ ಬರುವ ದೊಡ್ಡ ಮಹಾದೇವನ ದರ್ಶನ ಪಡೆಯಲು ಔರಾದ ತಾಲ್ಲೂಕಿನ ಜನ ಹೆಚ್ಚಾಗಿ ಹೋಗುತ್ತಾರೆ. ಆತನ ಮದುವೆಯ ದಿನಗಳು ಎಂದು ಜನರ ನಂಬಿಕೆ ನಂತರ ವೈಶಾಖದಲ್ಲಿ ಜನರ ಮದುವೆಗಳು ಆರಂಭವಾಗುವವು. ಆಹಾರ ಅರ್ಪಣೆಯಲ್ಲಿ ದೇವರಿಗೆ ಮೊದಲ ಆದ್ಯತೆ ಕೊಟ್ಟಂತೆ ವಿವಾಹದ ಆಚರಣೆಯಲ್ಲೂ ದೇವರಿಗೆ ಮೊದಲ ಪ್ರಾಶಸ್ತ್ಯ ಕೊಟ್ಟಿದ್ದಾರೆ. ಬಾರ್ಷಿಯ ಹನ್ನೊಂದನೆ ದಿನಕ್ಕೆ ಮನೆ ಸಾರಣೆ ಮಾಡಿ, ತಲೆಸ್ನಾನ ಮಾಡಿ ಮಹಾದೇವನ ಹೆಸರಿನಲ್ಲಿ ಉಪವಾಸ ಮಾಡುವರು ತುಂಬಿದ ತಂಬಿಗೆ ಇಟ್ಟು ಪೂಜಿಸುವರು. ಹನ್ನೆರಡನೆಯ ದಿನ ಬಾರ್ಷಿ ದಿವಸ ಹೋಳಿಗೆ ಮಾಡಿ ನೈವೇದ್ಯ ಅರ್ಪಿಸಿ ತಾವು ಉಪವಾಸ ಬಿಟ್ಟು ಊಟ ಮಾಡುವರು. ತಮಗೆ ಬೇಕಾದ ಜನರಿಗೆ ಊಟಕ್ಕೆ ಕರೆಯುವರು.

---

೩೬ (ಅಡಿಟಿಪ್ಪಣಿ: ೩೬: ಆಹಾರ ಮತ್ತು ಆರೋಗ್ಯ ಡಾ.ವಸುಂಧರಾ ಭೂಪತಿ ಪುಟ ಸಂಖ್ಯೆ-೪)

**ದವನದ ಹುಣ್ಣಿಮೆ :**

ದವನದ ಹುಣ್ಣಿಮೆ ಎಲ್ಲಾ ಹುಣ್ಣಿಮೆಗಳಲ್ಲಿ ಶ್ರೇಷ್ಠ ಎನ್ನುವ ನಂಬಿಕೆ, ಇಂದು ಹನುಮಂತನ ಹುಟ್ಟಿದ ದಿನವೆಂದು ಆಚರಿಸುವುದುಂಟು ಹನುಮಂತನ ಗುಡಿಯಲ್ಲಿ ಮುತ್ತೈದಿಯರೆಲ್ಲಾ ತೊಟ್ಟಿಲನ್ನಿಡುವುದರ ಮೂಲಕ ಆ ದಿನದ ಆಚರಣೆ ಮಾಡುವರು.

ಹುಣ್ಣಿಮೆ ಮಾತೃದೇವತೆಗಳ ಆರಾಧನೆ ದಿನ, ಮಾತೃದೇವತೆಗಳಲ್ಲಿಯೇ ಎಲ್ಲರಿಗಿಂತ ಶಕ್ತಿವಂತಳು, ತಾಯಿ ಎನಿಸಿದವಳು ಆದಿಶಕ್ತಿ ಜಗನ್ಮಾತೆ ಪಾರ್ವತಿ ದೇವಿ ಎಂಬ ನಂಬಿಕೆ ಜನರಲ್ಲಿದೆ ಈಕೆಯ ಇನ್ನೊಂದು ಅವತಾರವೆ ಮಹಾರಾಷ್ಟ್ರದ ತುಳಜಾಪುರದ ಅಂಬಾಬಾಯಿ (ಅಂಬಾಭವಾನಿ) ಬೀದರ ಭಾಗದ ಹೆಚ್ಚಿನ ಜನರು ಈಕೆಯ ಆರಾಧಕರಾಗಿದ್ದು ಅಲ್ಲಿಗೆ ಹೋಗಿ ಬರುತ್ತಾರೆ. ಈಕೆಯ ದೇವಸ್ಥಾನಗಳಿದ್ದ ಹಳ್ಳಿಗಳಲ್ಲಿ ಶೀಗಿ ಹುಣ್ಣಿಮೆಗೆ ಮೆರವಣಿಗೆಯಾದರೆ ಕೆಲವೊಂದು ಹಳ್ಳಿಗಳಲ್ಲಿ ದವನದ ಹುಣ್ಣಿಮೆಗೆ ಭವಾನಿ ಮೆರವಣಿಗೆ ಮಾಡುತ್ತಾರೆ. ಹುಮನಾಬಾದ ತಾಲ್ಲೂಕಿನ ಹುಡಗಿ ಗ್ರಾಮದಲ್ಲಿ ಭವಾನಿ ಗುಡಿಯಿದ್ದರೂ ಮೆರವಣಿಗೆ ಮಾಡುತ್ತಿರಲಿಲ್ಲ. ಆದರೆ ಕಳೆದ ಎರಡು-ಮೂರು (೨೦೦೮) ವರ್ಷಗಳಿಂದ ಮೆರವಣಿಗೆ ಜಾರಿಗೆ ತರಲಾಗಿದೆ. ಹೀಗೆ ಕಾಲದಿಂದ ಕಾಲಕ್ಕೆ ಎಷ್ಟು ನಂಬಿಕೆ ಆಚರಣೆಗಳು ಜನಪದರಿಂದ ಬಂದಿರಬೇಕು.

**ಅಕ್ಷತ್ತದಿಗೆ ಅಮವಾಸ್ಯೆ :**

ಅಕ್ಷತ್ತದಿಗೆ ಅಮವಾಸ್ಯೆಯಾದ ಮೂರನೆ ದಿನ ಶುಭದಿನ ಎಂಬ ನಂಬಿಕೆಯಿದೆ. ಇಂದು ಬಂಗಾರ ಖರೀದಿಸಿದರೆ ಒಳ್ಳೆಯದು ಎನ್ನುವ ನಂಬಿಕೆ ಆಧುನಿಕರಲ್ಲಿ ಬೇರೂರುತ್ತಿರುವುದೆಂದೇ ಹೇಳಬಹುದು. ಈ ಹಿಂದಿನ ಜನರಲ್ಲಿ ಇಂದು ಬಂಗಾರ ಖರೀದಿಸಬೇಕೆಂಬ ನಂಬಿಕೆ ಹೊಂದಿರುವುದೇನು ಕಂಡುಬರುವುದಿಲ್ಲ. ಬಂಗಾರ ಅಂಗಡಿಯ ಮಾಲೀಕರು ಜನರನ್ನು ಈ ಧಾರ್ಮಿಕ ನಂಬಿಕೆಗೆ ಒಳಪಡಿಸಿ ತಮ್ಮ ವ್ಯಾಪಾರ ಅಭಿವೃದ್ಧಿಸಿಕೊಳ್ಳುವ ಯೋಜನೆಯೇ ಆಗಿರಬೇಕೆನಿಸುತ್ತದೆ. ಅಮವಾಸ್ಯೆಯ ಮೂರನೆಯ ದಿನಕ್ಕೆ ಬಸವ ಜಯಂತಿ ಆಚರಿಸಲಾಗುವುದು (ನಾಲ್ಕನೆ ಅಧ್ಯಾಯದಲ್ಲಿ ವಿವರಿಸಲಾಗಿದೆ)

**ಬಾದ್ಮಿ ಅಮವಾಸ್ಯೆ :**

ಬಾದ್ಮಿ ಅಮಾವಾಸ್ಯೆ ವೈಶಾಖ ಮಾಸದಲ್ಲಿ ಬರುತ್ತದೆ. ಜನರೆಲ್ಲಾ ಬೇಸಿಗೆಯ ಕಾಲಾವಧಿಯಾಗಿದ್ದರಿಂದ ಕೃಷಿ ಕಾರ್ಯದಿಂದ ವಿಶ್ರಾಂತಿಯಲ್ಲಿರುತ್ತಾರೆ. ಇದು ಮದುವೆಗಳ ಸಂಭ್ರಮದ ಕಾಲಾವಧಿಯಾಗಿರುತ್ತದೆ. ಪ್ರಖರವಾದ ಬಿಸಿಲಿನ ಬೇಗೆಯಿಂದ ಜನರು ಪರಿತಪಿಸುವ ದಿನಗಳಾಗಿರುತ್ತವೆ. ಇಂತಹ ಸಮಯದಲ್ಲಿ ಬಾದ್ಮಿ ಅಮಾವಾಸ್ಯೆಂದು ಜನಸಿದವನು ಶನಿ ದೇವರು. ಆದ್ದರಿಂದಲೇ ಅವನು ಯಾವಾಗಲೂ ಉದ್ವಿಗ್ನ ಸ್ಥಿತಿಯಲ್ಲಿರುತ್ತಾನೆಂದು ನಂಬಿರಬೇಕು. ಇವರ ಹಬ್ಬಗಳ ಆಚರಣೆಯಂತೆ ವಿಶೇಷ ಆಚರಣೆಯಲ್ಲಿರುವುದು ಕಂಡುಬರುವುದಿಲ್ಲ. ಶನಿಯು ನವಗ್ರಹಗಳಲ್ಲಿ ಒಬ್ಬನಾಗಿದ್ದು ಸೂರ್ಯದೇವ ಮತ್ತು ಛಾಯಾದೇವಿಯ ಮಗನಾಗಿರುವನು, ಯಮನು ಶನಿಯ ತಮ್ಮನೆಂದು ಹೇಳುವರು. ತಪತಿಯು ಸೋದರಿ. ಸೌರಾಷ್ಟ್ರ ಪ್ರದೇಶದಲ್ಲಿ ಜನಿಸಿದ.

ಇವನಿಗೆ ನಾಲ್ಕು ಭುಜಗಳಿವೆ. ಕಾಶ್ಯಪ ಗೋತ್ರದಲ್ಲಿ ಹುಟ್ಟಿದ ಶನಿಯ ದೇಹದ ಬಣ್ಣ ಕಪ್ಪಾಗಿರುವುದು ಕೈಯಲ್ಲಿ ಬಾಣ. ಧನುಷ, ತ್ರಿಶೂಲ ಮತ್ತು ಗದೆಯನ್ನು ಧರಿಸಿರುವನು. ಇವನಿಗೆ ಕಾಕವಾಹನವೆಂದು ಹೇಳುತ್ತಾರೆ. ಸೂರ್ಯ ಪುತ್ರ, ಮಂದ, ಸೌರಿ ಶನೈಶ್ವರ ಹೀಗೆ ಅನೇಕ ಹೆಸರುಗಳಿವೆ.

ಮಕರ, ಕುಂಭ ರಾಶಿಗಳಿಗೆ ಶನಿಯು ಅಧಿಪತಿಯಾಗಿರುವನು. ತುಲಾ ಉಚ್ಚರಾಶಿಯು ಮೇಷವು ಶನಿಗೆ ನಿಚರಾಶಿಯಾಗಿದೆ. ಕುಂಭವು ಮೂಲಕ ತ್ರಿಕೋಣವಾಗಿದೆ. ಮೂರು ಏಳು ಹತ್ತು ಸ್ಥಾನಗಳನ್ನು ಪೂರ್ಣ ದೃಷ್ಟಿಯಿಂದ ಶನಿಯು ನೋಡುವನು. ಶನಿಗೆ ಬುಧ, ಶುಕ್ರ, ರಾಹು ಇವರು ಮಿತ್ರ ಗೃಹಗಳಾಗಿದ್ದು ರವಿ, ಚಂದ್ರ, ಮಂಗಳ ಇವರು ಶತ್ರುಗ್ರಹಗಳಾಗಿರುವರು.

ಶನಿಯು ಒಂದು ಕಾಲು ದೊಡ್ಡದು ಇನ್ನೊಂದು ಕಾಲು ಚಿಕ್ಕದು ಇದರಿಂದ ಸಾವಕಾಶವಾಗಿ ಕುಟುಂತಾ ಸಾಗುವನು. ಗ್ರಹದ ರೂಪದಲ್ಲಿ ಇವನ ಗತಿಯು ಮಂದವಾಗಿರುತ್ತದೆ. ಇದರಿಂದ ಶನೈಶ್ಚರ ಎಂಬ ಹೆಸರು ಬಂದಿದೆ. ಗರ್ವದಿಂದ ಮೆರೆದಾಡುತ್ತಿರುವವರಿಗೆ ಸರಿಯಾಗಿ ಶಿಕ್ಷಿಸಿ ಅವರನ್ನು ಯೋಗ್ಯದಾರಿಗೆ ತರುವನು. ಅನವರತವಾಗಿ ಶನಿದೇವರನ್ನು ಭಕ್ತಿಯಿಂದ ಆರಾಧಿಸಿದವರಿಗೆ ಕರುಣಾಳುವಾಗಿ ಶಿವನಂತೆ ರಕ್ಷಿಸುವನು. ಶಿವನಿಗೆ ಶನಿಯ ಕಾಟ ತಪ್ಪಿದ್ದಲ್ಲ. ತಂದೆಯಾದ ಸೂರ್ಯ ದೇವರು ಇವನ ಕಾಟಕ್ಕೆ ಒಳಗಾಗಿದ್ದನು. ಆದ್ದರಿಂದಲೇ ಶನಿಕಾಟದಿಂದಲೇ ಸೂರ್ಯ ಗ್ರಹಣವಾಗುತ್ತದೆಂಬ ನಂಬಿಕೆ ಜನರಲ್ಲಿದೆ. ರೋಹಿಣಿ ನಕ್ಷತ್ರದಲ್ಲಿ ಶನಿಯ ಪ್ರವೇಶವಾದ ಹನ್ನೆರಡು ವರ್ಷಕಾಲ ಬರಗಾಲ ಬರುತ್ತದೆ. ಎನ್ನುವುದಕ್ಕೆ ದಶರಥ ರಾಜನ ಕಾಲದಲ್ಲಿ ನಡೆದ ಘಟನೆಯೊಂದು ಹೀಗಿದೆ. ಈ ನಕ್ಷತ್ರದಲ್ಲಿ ಪ್ರವೇಶಿಸಿದ ಶನಿಕಾಟದಿಂದ ತಪ್ಪಿಸಿಕೊಳ್ಳಲು ದಶರಥನು ಅವನೊಂದಿಗೆ ಹೋರಾಡಿದನು. ಅವನ ಶೌರ್ಯ ಕಂಡ ಶನಿ ಅವನಿಗೆ ಹರಿಸಿ ರಾಜ್ಯದ ತುಂಬಾ ಮಳೆ ಬೆಳೆ ಚೆನ್ನಾಗಿ ಅಗುವಂತೆ ಹರಿಸಿದನು. ಶನಿಯನ್ನು ಕಡೆಗಣಿಸಿದರೆ ಆಪತ್ತು ತಪ್ಪಿದಲ್ಲವೆಂಬುದನ್ನು ರಾಜವಿಕ್ರಮ[೩೭] ಮೊದಲಾದ ಕಥೆಗಳು ಇವೆ.

ಬೀದರ ಜಿಲ್ಲೆಯ ಭಾಲ್ಕಿ ತಾಲೂಕಿನ ಮೈಲಾರ ಸಮೀಪವಿರುವ ಶನಿ ಮಾಹಾತ್ಮನ ದೇವಾಲಯ ಬಹಳ ಪ್ರಸಿದ್ಧವಾಗಿದೆ. ಶನಿವಾರ ಅಮವಾಸ್ಯೆ ಬಂದಾಗ ಜಾತ್ರೆಯೂ ಆಗುತ್ತದೆ.

ಹೊರಗಿನಿಂದ ಮನೆಗೆ ಬಂದು ಕಾಲು ತೊಳೆಯುವಾಗ ಹಿಮ್ಮಡಿ ತೊಳೆಯದೇ ಇದ್ದರೆ ಶನಿಕಾಟ ಹಿಡಿಯುತ್ತದೆನ್ನುವ ನಂಬಿಕೆಯು ಆರೋಗ್ಯವನ್ನು ಶುಚಿಯಾಗಿಟ್ಟುಕೊಳ್ಳುವ ಗುಣ ಹೊಂದಿದೆ. ಅದರಂತೆ ಶನಿವಾರ ಶನಿಕಾಟವಿರುತ್ತದೆ ಹನುಮಂತನ ಕಾಲಿನಲ್ಲಿ ಶನಿಕುಳಿತಿರುತ್ತಾನೆ. ಮುಂತಾದ ನಂಬಿಕೆಗಳು ಇವೆ.

**೬. ವಟ ಸಾವಿತ್ರಿ ಪೂಜೆ :**

ವಟ ಸಾವಿತ್ರಿ ಪೂಜೆಯು ದೇಶದ ಎಲ್ಲಾ ಕಡೆ ಕಂಡುಬರುತ್ತದೆ. ಆದರೆ ಬೀದರ ಜಿಲ್ಲೆಯಲ್ಲಿ ಅಪರೂಪವಾಗಿ ವಿರಳ ಪ್ರಮಾಣದಲ್ಲಿ ಈ ಆಚರಣೆ ಕಂಡುಬರುತ್ತದೆ. ಮಹಾರಾಷ್ಟ್ರದ ಗಡಿ ಸಮೀಪವಿರುವ ಔರಾದ ತಾಲೂಕಿನ ಹಳ್ಳಿಗಳಲ್ಲಿ ಕಾರ ಹುಣ್ಣಿಮೆಯಿಂದ ಆಚರಿಸುವ ವ್ರತವಾಗಿದೆ. ಆದ್ದರಿಂದ ವಟಸಾವಿತ್ರಿ ಪೂರ್ಣಿಮಾ ಎಂದು ಕರೆಯುತ್ತಾರೆ. ಸಾಧ್ವಿಮಣಿ ಸಾವಿತ್ರಿಯ ಸ್ಮರಣೆಯದಿಸೆ ಹೀಗೆ ತ್ರಿಭುವನ ದೈವಿಕತೆ

೩೭ (ಅಡಿಟಿಪ್ಪಣಿ: ೩೭: ಸಂಯುಕ್ತ ಕರ್ನಾಟಕ ದಿ.೨೪.೦೫.೨೦೦೯

ವಟಸಾವಿತ್ರಿ ಪೂಜೆಯ ಹಿಂದಿನ ದಿವಸ ಮನೆಯೆಲ್ಲಾ ರುಚಿಗೊಳಿಸಿ, ತಲೆಸ್ನಾನ ಮಾಡಿ ಉಪವಾಸವಿರುವರು. ಮರುದಿವಸ ಅಂದರೆ ಹುಣ್ಣಿಮೆ ದಿನ ಮಡಿಯುಟ್ಟು ವಟವೃಕ್ಷವನ್ನು ಪೂಜಿಸುತ್ತಾರೆ. ಪ್ರಕೃತಿದತ್ತ ಫಲಪುಷ್ಪಗಳೆಲ್ಲಾ ಈ ಪೂಜೆಯಲ್ಲಿ ಬಳಸುತ್ತಾರೆ. ಆಲದ ಮರಕ್ಕೆ ನೂರೆಂಟು ಪ್ರದಕ್ಷಿಣೆ ಸಲ್ಲಿಸುತ್ತಾ ಬಿಳಿಯ ದಾರವನ್ನು ಮರದ ಕಾಂಡಕ್ಕೆ ನೂರೆಂಟು ಸುತ್ತು ಸುತ್ತಿಕಟ್ಟುವ ಸಾಂಕೇತಿಕ ಕ್ರಮವು ಕೆಲವೆಡೆ ಇದೆ. ಆ ನೂಲು ಯಮನ ಪಾಶಕ್ಕಿಂತ ನೂರೆಂಟುಪಟ್ಟು ಉದ್ದ ಆಲದ ಮರ ಪ್ರತಿನಿಧಿಸುವುದು ಪತಿಯ ದೀರ್ಘಾಯುಷ್ಯ ಅದಕ್ಕೆ ಸತಿ ಶಿರೋಮಣಿಯಿಂದ ರಕ್ಷಣೆ ಹಾರೈಕೆಗಳ ಭದ್ರವಾದ ಬಂಧ.

ವಟಸಾವಿತ್ರಿ ಪೂಜೆಯ ಹಿನ್ನೆಲೆ ಕುರಿತ ಪೌರಾಣಿಕ ಮಹತ್ವವಿದೆ. ಸಾವಿತ್ರಿ ಪುರಾಣದಲ್ಲಿ ಕಂಡು ಬರುವ ಒಬ್ಬ ಪತಿವ್ರತೆಯಾದ ಮಹಿಳೆ. ಮದ್ರದೇಶದ ರಾಜ ಕನ್ಯೆಯಾದ ಸಾವಿತ್ರಿಯು ಅಲ್ಪಾಯು ದೇಶಭ್ರಷ್ಟ ರಾಜಪುತ್ರನೂ ಎಂದು ಮೊದಲೇ ಗೊತ್ತಾದರೂ ಮನಸಾರೆ ಮೆಚ್ಚಿ ತಾನು ವರಿಸಿದ ಸತ್ಯವಾನನ್ನು ಮದುವೆ ಮಾಡಿಕೊಳ್ಳುತ್ತಾಳೆ. ತಾಯಿ ತಂದೆಗಳು ಬೇಡವೆಂದು ಎಷ್ಟೊಂದು ಅಂಗಲಾಚಿದರೂ ಆಕೆ ಧೃಢ ನಿಶ್ಚಯದಿಂದ ಚ್ಯುತಳಾಗುವುದಿಲ್ಲ. ಮದುವೆಯಾದ ಮೇಲೆ ವನವಾಸಿಯಾಗಿ ಸತಿ ಧರ್ಮ ತಪ್ಪದೆ ಪಾಲಿಸುತ್ತಾಳೆ. ಕೊನೆಗೆ ಸಾವಿತ್ರಿ ತನ್ನ ಪರಿನಿಷ್ಟೆಯನ್ನು ಪರೀಕ್ಷೆಗೆ ಹಚ್ಚಿ, ಗಂಡನ ಜೀವವನ್ನು ಕೊಂಡೊಯ್ದ ಯಮನನ್ನು ಬೆಂಬತ್ತಿ ಹೋಗಿ ಪತಿಯ ಪ್ರಾಣವನ್ನು ಮರಳಿ ಪಡೆಯುತ್ತಾಳೆ. ಹುಟ್ಟಿದ ಮನೆಗೂ ಕೊಟ್ಟ ಮನೆಗಳೆರಡರ ಉದ್ಧಾರಕ್ಕೂ ಕಾರಣಳಾಗುತ್ತಾಳೆ[೩೮] ಈ ಪುರಾಣದ ಕಾಲದ ಮಾನವಿ ಎಂತಲೆ ಜೇಷ್ಠ ಮಾಸದ ಪೌರ್ಣಿಮೆಯು ವಟಸಾವಿತ್ರಿ ಪೌರ್ಣಿಮೆಯಾಗಿ ನಿಂತಿದೆ. ಭಾರತದ ನಾರೀ ವೃಂದವೆಲ್ಲವೂ ಸಾವಿತ್ರಿಯನ್ನು ಭಕ್ತಿಯಿಂದ ಪೂಜಿಸಿ ತನ್ನ ಗೌರವವನ್ನು ಮೊದಲಿನಿಂದ ಸಲ್ಲಿಸುತ್ತ ಬಂದಿರುವರು.

ಮಹಾಭಾರತದ ಅರಣ್ಯ ಪರ್ವದಲ್ಲಿ ಯುಧಿಷ್ಠರನು, ಮಾರ್ಕಂಡೇಯ ಮಹಾಮುನಿಗೆ ದ್ರೌಪದಿಗೆ ಮಿಗಿಲಾದ ಪತಿವೃತೆ ಇನ್ನೊಬ್ಬಳಿದ್ದಾಳೆಯೇ? ಎನ್ನುವ ಪ್ರಶ್ನೆಗೂ ಇದೆ ಕಥೆಯನ್ನು ಮುನಿಗಳು ಹೇಳುತ್ತಾರಂತೆ.

ಈ ಪೂಜಾ ವೃತದಲ್ಲಿ ಉಪವಾಸವಿದ್ದು ಆಲದ ಮರಕ್ಕೆ ದೀರ್ಘ ಕಾಲ ಸುತ್ತ ಹಾಕುವುದರಿಂದ ದೇಹಕ್ಕೆ ಆಮ್ಲಜನಕ ಸಿಗುತ್ತದೆ. ನಡಿಗೆಯಿಂದ ದೇಹದ ಅಂಗಾಂಗಗಳಿಗೆ ವ್ಯಾಯಾಮವಾಗುತ್ತದೆ. ಜೀರ್ಣಶಕ್ತಿ ಹೆಚ್ಚುತ್ತದೆ. ವ್ಯಾಯಾಮ ಮಾಡದ ಸೋಮಾರಿಗಳಿಗೆ ಇಂತಹ ಪೂಜಾ ಆಚರಣೆಯಿಂದಲಾದರೂ ಅವುಗಳನ್ನು ಮಾಡುವ ಅವಕಾಶ ದೊರಕಿಸಿಕೊಳ್ಳುತ್ತಾರೆ.

ಮಣ್ಣೇತ್ತಿನ ಅಮಾವಾಸ್ಯೆಗೆ ಸಂಬಂಧಿಸಿದ ನಂಜಿಕೆ ಮತ್ತು ಆಚರಣೆಗಳು (ಅಧ್ಯಾಯ ೪ ರಲ್ಲಿ ವಿವರಿಸಲಾಗಿದೆ)

ಮಣ್ಣೆತ್ತಿನ ಅಮಾವಾಸ್ಯೆ ಜೇಷ್ಠಮಾಸದ ಕೊನೆ ದಿನ ಹಾಗೂ ಆಷಾಢ ಮಾಸಕ್ಕೆ ಆಹ್ವಾನಿಸುವ ಸಲುವಾಗಿ ದ್ವಾರದಲ್ಲಿರುವ ದಿನ. ಮರುದಿವಸ ಆಷಾಢ ಮಾಸ ಆರಂಭದ ದಿನವಾಗಿರುತ್ತದೆ ಈ ಮಾಸದ ಕುರಿತು ಅನೇಕ ನಂಜಿಕೆಗಳು ಆಚರಣೆಯಲ್ಲಿದೆ. ಅವುಗಳಲ್ಲಿ ಕೆಲವೊಂದು ಕೆಳಗಿನಂತೆ ವಿವರಿಸಲಾಗಿದೆ.

---

೩೮ (ಅಡಿಟಿಪ್ಪಣಿ: ೩೮: ದಿನಪತ್ರಿಕೆ ಸಂಯುಕ್ತ ಕರ್ನಾಟಕ ದಿ:೦೭.೦೬.೨೦೦೯)

**೧. ನವ ವಿವಾಹಿತರು ಜೊತೆಯಾಗಿರಬಾರದು :**

ನವ ವಿವಾಹಿತರು ಆಷಾಢದಲ್ಲಿ ಒಂದು ತಿಂಗಳು ಜೊತೆಗೆಯಾಗಿರುಬಾರದೆಂದು ನಂಬಿಕೆ ಜಾರಿಗೆ ತಂದಿರುವರು. ಆದರೆ ಇಂದಿನ ದಿನಗಳಲ್ಲಿ ಇದರ ಆಚರಣೆ ಒಂದು ತಿಂಗಳ ಬದಲಾಗಿ ಒಂದು ದಿನಕ್ಕೆ ಮಾತ್ರ ಸೀಮಿತವಾಗಿದೆ ಆದರೆ ಈ ಒಂದು ದಿನದ ಆಚರಣೆಯೂ ಯಾವುದೇ ರೀತಿಯ ಉಪಯುಕ್ತತೆ ಕಾಣುವುದಿಲ್ಲ. ಹಿಂದಿನವರು ಜಾರಿಗೆ ತಂದ ನಂಬಿಕೆಯ ಉದ್ದೇಶ ಇದು ಆಗಿರಬೇಕು. ಹವಮಾನ ವೈಪರೀತ್ಯದಿಂದಾಗಿ ಆರೋಗ್ಯದ ಮೇಲೆ ಪ್ರಭಾವ ಬೀರುವುದು. ಆದ್ದರಿಂದ ನವ ವಿವಾಹಿತರು ಬೇರೆಯಾಗಿರಬೇಕೆಂಬ ಪರಿಕಲ್ಪನೆಯನ್ನು ಆಷಾಢದ ಬಗ್ಗೆ ತೌಲನಿಕ ಅಧ್ಯಯನ ನಡೆಸಿದ ಶ್ರೀ ಸುಂದರ ಕೇನಾಜೆಯವ ಅಭಿಪ್ರಾಯ ಹೀಗಿದೆ. "ಆರ್ಯುವೇದ ಶಾಸ್ತ್ರವು ಆಷಾಢದ ಪ್ರಾಕೃತಿಕ ಪ್ರಭಾವಗಳಿಂದಾಗಿ ದೈಹಿಕವಾಗಿ ಅಧಿಕ ಉದ್ರಿಕ್ತಗೊಳ್ಳುವ ಗಂಡಿನಿಂದ ಹೆಣ್ಣನ್ನು ಪ್ರತ್ಯೇಕಿಸುವ ದೃಷ್ಟಿಯಿಂದ ಗಂಡು ಹೆಣ್ಣಿನ ಸಂಬಂಧ ನಿಷೇಧಿಸಿದೆ. ಹಾಗೂ ಈ ಪ್ರತಿಪಾದನೆ ಮುಂದುವರೆದು ಆಷಾಡದಲ್ಲಿ ಗಂಡು ಹೆಣ್ಣು ಸೇರಿದರೆ ಸುಗ್ಗಿ ತಿಂಗಳದಲ್ಲಿ ಮಕ್ಕಳು ಹುಟ್ಟುತ್ತವೆ. ಪ್ರಖರ ಬಿಸಿಲು ಶಾಖವಿರುವ ವಾತಾವರಣದ ಸುಗ್ಗಿಯದು. ಇದರಿಂದ ಆರೋಗ್ಯ ಹದಗೆಡುವ ಅವಕಾಶಗಳೇ ಹೆಚ್ಚು ಈ ದೃಷ್ಟಿಯಿಂದ ಆಷಾಢದಲ್ಲಿ ಕುಳಿತು ಕೊಳ್ಳುವ ಮೂಲಕ ಸೃಷ್ಟಿಕ್ರಿಯೆ ಅಥವಾ ಹುಟ್ಟಿನ ಮೂಲ ಪ್ರಕ್ರಿಯೆಯನ್ನು ತಡೆ ಹಿಡಿದಿವೆ ಎಂದು ವಿಶ್ಲೇಷಿಸುತ್ತದೆ" [೩೯]

**೨. ಆಷಾಢದಲ್ಲಿ ನೈವೇದ್ಯ ಕೊಡುವುದು :**

ಆಷಾಡದಲ್ಲಿ ಜೋರಾಗಿ ಬೀಳುವ ಮಳೆ, ಸ್ದಾ ಕಾಲ ಬೀಸುವ ಗಾಳಿ ಇದರಿಂದಾಗಿ ಹವಾಮಾನದಲ್ಲಾಗುವ ಬದಲಾವಣೆ ಮತ್ತು ಹೊಸ ನೀರು ಬಂದಿರುವುದರಿಂದ ಈ ಸಮಯದಲ್ಲಿ ಅನಾರೋಗ್ಯದಿಂದ ಬಳಲುವವರ ಸಂಖ್ಯೆ ಹೆಚ್ಚಾಗಿರುತ್ತದೆ. ಜನಪದರು ಹವಮಾನದ ಬದಲಾವಣೆಯ ನಿಜಸ್ಥಿತಿಯ ಬಗ್ಗೆ ತಿಳಿಯಲಾರದೆ, ಹೊಸ ನೀರಿನ ಪ್ರಭಾವದಿಂದಾಗುವ ವಾಂತಿ ಭೇದಿ, ಜ್ವರ ಇತ್ಯಾದಿಗಳ ರೋಗಕ್ಕೆ ಅವರು ನಂಬಿದ್ದ ಏಳು ಮಾತೃ ದೇವತಗಳನ್ನು (ಆ ಮಾತೃದೇವತೆಗಳು ಯಾರು ಯಾರು ಎಂದು ಈ ಅಧ್ಯಾಯದ ಒಂದನೇ ಭಾಗದಲ್ಲಿ ವಿವರಿಸಲಾಗಿದೆ) ತಮ್ಮನ್ನು ರಕ್ಷಿಸುವಂತೆ ಊರಿನ ಎಲ್ಲಾ ಜಾತಿಯ ಜನರು ತಮಗೆ ಅನುಕೂಲವಾದಂತೆ ಈ ತಿಂಗಳಲ್ಲಿ ಬರುವ ಮಂಗಳವಾರ ಇಲ್ಲವೆ ಶುಕ್ರವಾರ ನೈವೇದ್ಯ ಕೊಡುವುದನ್ನು ಆರಂಭಿಸಿದರು. ಮೊಸರು ಮಿಶ್ರಿತ ಅನ್ನ ತಂಪಿನ ಆಹಾರ ಆದ್ದರಿಂದ ಯಾವುದೇ ರೋಗಕ್ಕೆ ತುತ್ತು ಮಾಡದೆ ಆರೋಗ್ಯ ತಂಪಾಗಿಡಲಿ ಎನ್ನುವ ಉದ್ದೇಶ ಕಂಡುಬರುತ್ತದೆ.

"ಇಂದಿನ ದಿನಗಳಲ್ಲಿ ವೈದ್ಯಕೀಯ ಸೌಲಭ್ಯಗಳಿಂದ ಮಳೆಗಾಲ ಆರಂಭದ ಕಾಲರಗಳಂತಹ ಕಾಯಿಲೆ ತಡೆಗಟ್ಟು ಚಿಕಿತ್ಸಾ ಕ್ರಮ ತೆಗೆದುಕೊಳ್ಳುತ್ತಿದ್ದರೂ ಜನರು ಆ ದೇವತೆಗಳಿಗೆ ನೈವೇದ್ಯ ಕೊಡುವ ನಂಬಿಕೆ ಬಿಡದೆ ಹಾಗೆಯೇ ಮುಂದುವರೆದಿದೆ." ಕದ್ಲಿ ಕಡಬ ಹುಣ್ಣಿಮೆ (ಅಧ್ಯಾಯ ೪ ರಲ್ಲಿ ವಿವರಿಸಲಾಗಿದೆ)

**ಅಧಿಕ ಅಮಾವಾಸ್ಯೆ:**

ಒಂದು ವರ್ಷದಲ್ಲಿ ೩೬೫ ದಿನಗಳಿರುತ್ತದೆ. ಭೂಮಿಗೆ ಸೂರ್ಯನ ಸುತ್ತ ಒಂದು ಪ್ರದಕ್ಷಿಣೆಯನ್ನು ಪೂರ್ತಿಗೊಳಿಸಲು ೩೬೫ ¼ ದಿನಗಳು ಬೇಕು. ¼ ದಿನವನ್ನು ಕೂಡಿಸಿ ಪ್ರತಿ ನಾಲ್ಕು ವರ್ಷಗಳಿಗೊಮ್ಮೆ

೩೯ (ಅಡಿಟಿಪ್ಪಣಿ: ೩೯: ಪೋಕರಿ ಮತ್ತು ಜಾನಪದಿಯ ಲೇಖನಗಳು, ಲೇಖಕರು ಮೂವಪ್ಪ ಕಣಿಯೂರು ಪುಟ ಸಂಖ್ಯೆ-೭೦)

ವರ್ಷದಲ್ಲಿ ೩೬೬ ದಿನಗಳು ಬರುತ್ತದೆ. ಆ ವರ್ಷ ಫೆಬ್ರುವರಿ ೨೯ ದಿನಗಳಿರುತ್ತದೆ. ಅಂತಹ ವರ್ಷವನ್ನು ಅಧಿಕ ವರ್ಷ ಎನ್ನುವರು ಇದು ಆಧುನಿಕ ವಿಜ್ಞಾನ ಖಚಿತಪಡಿಸಿದ ನಿಲುವು.

ಪಂಚಾಂಗ ಆಧಾರಿತವಾಗಿ ಅಧಿಕ ವರ್ಷದಲ್ಲಿ ಒಂದು ಹುಣ್ಣಿಮೆ ಮತ್ತು ಒಂದು ಅಮಾವಾಸ್ಯೆ ಹೆಚ್ಚಾಗಿರುವುದು. ಈ ಅಧಿಕ ಮಾಸ ಬಂದಂತಹ ಸಂದರ್ಭದಲ್ಲಿ ವಿಶೇಷವಾಗಿ ಆಚರಿಸುವ ಆಚರಣೆಗಳೆಂದರೆ, ಮದುವೆಯಾದ ಹೆಣ್ಣು ಮಕ್ಕಳು ತವರಿಗೆ ಬಂದು ಹೋಳಿಗೆ ಊಟ ಸಹೋದರರಿಗೆ ಮಾಡಿಸಿ ಖೊಬ್ರಿ ಕೊಡುವರು. ಪ್ರತಿಯಾಗಿ ಸಹೋದರ ಸಹೋದರಿಗೆ ಸೀರೆ ಊಡುಗೊರೆಯಾಗಿ ಕೊಡುವರು. ಮಹಾರಾಷ್ಟ್ರದ ಗಡಿಭಾಗದ ಊರುಗಳಲ್ಲಿ ಇದರ ಆಚರಣೆ ಇನ್ನೂ ವಿಶೇಷವಾಗಿ ಕಾಣಿಸುತ್ತದೆ. ಈ ಭಾಗಗಳಲ್ಲಿ ಹೊಸದಾಗಿ ಮದುವೆ ಮಾಡಿಕೊಟ್ಟ ಹೆಣ್ಣಿಗೆ ತಾಯಿ ಮನೆಯವರು ಇದರ ನಿಮಿತ್ಯ "ಧೊಂಡೆ ಮಾಸದ ಕಡುಬ ಹೊಸ ಪಾತ್ರೆಯೊಂದರಲ್ಲಿ ತುಂಬಿ ಅದರ ಜೊತೆಗೆ ೯ ಇಲ್ಲವೆ ೧೧ ಸಾಮಾನು ಜೊತೆ ಮಾಡುವುದು ಇಲ್ಲವೆ ಬಂಗಾರ ಕೊಡುವ ಪದ್ಧತಿಯು ಕಂಡುಬರುತ್ತದೆ.

ಸಹೋದರ ಸಹೋದರಿಯರ ಪ್ರೀತಿಯನ್ನು ಗಟ್ಟಿಗೊಳಿಸುವ ಪಂಚಮಿ, ರಕ್ಷಾಬಂಧನ, ನರಕ ಚತುದರ್ಶಿಗಳಂತೆ ಇದು ಕೂಡಾ ಒಂದಾಗಿದೆ. ಗಟ್ಟಿ ಖೊಬ್ರಿಯಂತೆ ಸಂಬಂಧಗಳು ಗಟ್ಟಿಯಾಗಿ ಬೆಲ್ಲದಂತೆ ಪ್ರೀತಿ ಸವಿನಯವಾಗಿರಲಿ ಎಂದು ಅನುಸರಿಸಿಕೊಳ್ಳುವ ಪದ್ಧತಿಯಾಗಿದೆ ಮತ್ತು ಸಹೋದರ ಸಹೋದರಿಯರ ಪರಸ್ಪರ ಭೇಟಿಯಾಗುವ ಉದ್ದೇಶವೂ ಒಳಗೊಂಡಿದೆ.

**ಪಂಚಮಿ :**

ಪ್ರಾಚೀನ ಕಾಲದ ನಾಗರಿಕತೆಗಳ ಜನರು ಸಸ್ಯ ಪ್ರಾಣಿಗಳನ್ನು ಪೂಜಿಸುತ್ತಿದ್ದರು ಎಂಬುದು ಇತಿಹಾಸದಿಂದ ತಿಳಿದು ಬರುತ್ತದೆ. ಹಾಗೆ ಪೂಜಿಸಿಕೊಳ್ಳುವ ಜೀವಿಗಳಲ್ಲಿ ನಾಗಪ್ಪ ಕೂಡ ಒಬ್ಬನು. ಆದಿಶೇಷನೆಂಬ ನಾಮಾಂಕಿತದಲ್ಲಿ ಭೂಮಿಯನ್ನು ಹೊತ್ತಿದ್ದಾನೆ. ವಿಷ್ಣುವಿನ ಹಾಸಿಗೆಯಾಗಿದ್ದಾನೆ. ಈಶ್ವರನ ಕೊರಳನ್ನು ಸುತ್ತಿದ್ದಾನೆ. ಗಣಪತಿಯ ಹೊಟ್ಟೆಯನ್ನು ಸುತ್ತಿದ್ದಾನೆ. ಅಂಥ ನಾಗಪ್ಪನು ಪೂಜೆಯೇ ನಾಗರಪಂಚಮಿ ಇಂದಿಗೂ ಸರ್ವ ದೋಷಗಳ ನಿವಾರಣೆಗೆ ಮತ್ತು ನಾಗದೋಷದ ನಿವಾರಣೆಗೆ ನಾಗಪ್ಪನಿಗೆ ಪೂಜಿಸುವ ನಂಬಿಕೆ ಜನರಲ್ಲಿದೆ.

ನಾಗರ ಪಂಚಮಿ ನಾಡಿಗೆ ದೊಡ್ಡದು ಎನ್ನುವ ಎನ್ನುವ ಜನಪದರ ಹೇಳಿಕೆಯಿದೆ. ಆಷಾಡ ಕಳೆದು ಶ್ರಾವಣ ಕಾಲಿಡುತ್ತಿದ್ದಂತೆ ಎಲ್ಲಾ ಹೆಣ್ಮಕ್ಕಳಿಗೂ ನೆನಪಾಗುವುದು ತವರು ಮನೆ. ತಾನು ಹುಟ್ಟಿ ಬೆಳೆದು ಆಡಿದ ಪಾಡಿದ ನೋವು ನಲಿವುಗಳ ಮಧ್ಯದಲ್ಲಿ ಜೀವಿತದ ಅಮೂಲ್ಯ ಗುಣಗಳನ್ನು ಕಲಿಯುವುದು ತವರಲ್ಲಿ ಇಲ್ಲಿಯ ಕರಳು ಬಳ್ಳಿಯ ಸಂಬಂಧಿಕರನ್ನು ಬಿಟ್ಟು ಗಂಡನ ಮನೆಗೆ ಸೇರಿದ ಹೆಣ್ಣಿಗೆ ತನ್ನ ತವರಿನ ನೆನಪು ಅಂತರಾಳದಲ್ಲಿ ಸದಾ ಹಸಿರಾಗಿರುತ್ತದೆ. ಬಹಳ ದಿನಗಳಾದರೆ ತವರಿಗೆ ಹೋಗುವ ಆಸೆಯಾಗುತ್ತದೆ. ಅದ್ದರಿಂದ ಇಂತಹ ಹಬ್ಬಗಳ ಸಂದರ್ಭಗಳಲ್ಲಾದರೂ ತವರಿಗೆ ಹೋಗುವ ಅವಕಾಶ ಹೆಣ್ಣಿಗೆ ಸಿಗಲಿ ಎನ್ನುವ ಉದ್ದೇಶದಿಂದ ಹಬ್ಬಗಳಲ್ಲಿ ತವರಿಗೆ ಕರೆಯುವ ಪದ್ಧತಿ ಬೆಳೆದು ಬಂದಿರುವುದು. ತವರವರು ಕರೆಯಲು ಬಾರದ ಇದ್ದ ಸಂದರ್ಭದಲ್ಲಿ ಹೆಣ್ಣು ಪಡುವ ತವಕ ಈ ರೀತಿಯಲ್ಲಿರುತ್ತದೆ.

"ನಾಗರ ಪಂಚಮಿ ಬಂತು ನೋಡ ತಂಗಿ
ಅಣ್ಣಯಾಕ ಬರಲಿಲ್ಲ ಕರಿಲಾಕ"

ತವರಿಗೆ ಬಂದ ಹೆಣ್ಮಕ್ಕಳ ಸಡಗರ ಸಂಭ್ರಮದೊಂದಿಗೆ ಹಬ್ಬವನ್ನು ಆಚರಿಸುವರು ಹೆಣ್ಣು ಮಕ್ಕಳೆಲ್ಲಾ ನಾಗಪ್ಪನಿಗೆ ಹಾಲೆರೆಯುವುದೆ ಈ ಹಬ್ಬದ ವಿಶೇಷ ನಂಬಿಕೆಯಿದೆ.

ನಾಗನು ಶಿವನ ಕೊರಳಿಗೆ ಹಾರ ಆದ ಬಗ್ಗೆ ಕಥೆ ಹೀಗದೆ "ಹಿಂದೆ ಕಶ್ಯಪನು ಆದಿತಿಯನ್ನು ಮತ್ತು ದಕ್ಷ ಬ್ರಹ್ಮನ ಮಕ್ಕಳಾದ ವಿನತೆ, ಕದ್ರು ಮೋದಲಾದ ಹನ್ನೆರಡು ಜನಪುತ್ರಿಯರನ್ನು ಮದುವೆ ಆಗಿದ್ದ. ಅದಿತಿಗೆ ಹನ್ನೆರಡರು ಮಕ್ಕಳಾದರೂ ಕದ್ರುವು ಗರ್ಭಾವತಿ ಆಗಿದ್ದಾಗ ವಿನಿತೆಯ ಸವತಿಯ ಮಾತ್ಸರ್ಯದಿಂದ ತಾನು ಗರ್ಭವತಿಯಾಗುವುದಕ್ಕಿಂತ ಮುಂಚಿತಯೇ ಆತುರದಲ್ಲಿ ಮೊಟ್ಟೆ ಇಟ್ಟಳು. ಅದರಿಂದ ಹೆಳವನಾದ ಅರುಣ ಹುಟ್ಟಿದ. ಆಮೇಲೆ ಗರುಡ ಹುಟ್ಟಿದ ಕದ್ರುವಿಗೆ ತಕ್ಷಕ ವಾಸುಕಿ ಮುಂತಾದವರು ಜನಿಸಿದರು. ಗರುಡ ತನ್ನ ಮಲತಾಯಿ ಕದ್ರುವಿನ ಮಕ್ಕಳಾದ ನಾಗರಿಗೆ ಶತ್ರುವಾದನು. ನಾಗರು ಕಶ್ಯಪನ ಉಪದೇಶದಿಂದ ತಪವನ್ನಾಚರಿಸಿ ಲಿಂಗಾಕಾರತ್ವನ್ನು ಧರಿಸಿ ಪಾತಾಳ ಸೇರಿದರು. ತಕ್ಷಕನು ಇಂದ್ರನಿಗೆ ಮಿತ್ರ ನಾಗಿ ಆಸ್ತಿಕ ಮಹರ್ಷಿಯ ಸಹಾಯದಿಂದ ಜನಮೇಜನ ನಡೆಸುತ್ತಿದ್ದ ಸರ್ಪಯಾಗದಲ್ಲಿ ನಾಗ ಕುಲವನ್ನು ರಕ್ಷಿಸಿದನು. ವಾಸ ಮೊದಲಾದವರು ಗರುಡನ ಹಾವಳಿ ತಾಳಲಾರದೆ ಶಿವನ ಮೊರೆ ಹೊಕ್ಕರು. ಆಗ ಶಿವ ಹಾವನ್ನು ತನ್ನ ಕಂಠಾಭರಣ ಮಾಡಿಕೊಂಡು ಈ ವಾಸುಕಿಯೇ ತ್ರಿಪುರ ಸಂಹಾರ ಕಾಲದಲ್ಲಿ ಮೇರುವೆಂಬ ಬಿಲಿಗೆ ಹೆದೆಯಾಗಿ ಸಮುದ್ರ ಮಥನ ಕಾಲದಲಿ ಮಂದಾರ ಪರ್ವತವೆಂಬ ಕಡಿಗೋಲಿಗೆ ಹಗ್ಗವಾಗಿಯೂ ಇದ್ದನು. ಸರ್ಪ, ಗರುಡ, ಜಾತಿ ವೈಷ್ಯಮವಿದ್ದರು ವಿಷ್ಣುವಿನ ಬಳಿ ಅನ್ಯೋನ್ಯ ಅಣ್ಣ ತಮ್ಮಂದಿರು ಇಬ್ಬರು ವಿಷ್ಣುವಿನ ವಾಹನಗಳು.[೪೦]

ಪಂಚಮಿಯು ಮೂರು ದಿನಗಳಲ್ಲಿ ಆಚರಿಸುವ ಹಬ್ಬವಾಗಿದ್ದು ಮೊದಲನೆಯ ದಿನ ನಾಗಚತುರ್ಥಿ ಇದರ ಆಚರಣೆ ಕುರಿತ ಕಥೆಯೊಂದು ಹೀಗಿದೆ.

ತನ್ನ ತಂಗಿ ಬೇಡಿಕೆಯಂತೆ ಖ್ಯಾದಿಗೆ ತರಲು ಹೋದ ಅಣ್ಣ ಬರಲೇ ಇಲ್ಲ. ಹುತ್ತಿಗೆ ಹಾಲು ಎರೆಯಲು ಹೋಗುವುದಕ್ಕಾಗಿ ಸಿದ್ಧತೆಗಳನ್ನು ಮಾಡಿಕೊಮಡು ಕುಳತಿ ತಂಗಿ ಅಣ್ಣ ದಾರಿ ಕಾಯುತ್ತ ಇದ್ದಳು. ಅಣ್ಣನ ಬರುವನ್ನು ಕಾಯುವ ತಂಗಿ ಹುತ್ತಿಗೆ ಹಾಲು ಎರೆಯಲು ಹೋಗಲಿಲ್ಲ ಮತ್ತು ಊಟ ಮಾಡದೆ ಉಪವಾಸ ಕುಳಿತಳು. ಕೊನೆಗೆ ಅಣ್ಣನನ್ನು ಹುಡುಕುತ್ತಾ ಕಾಡಿಗೆ ಹೋದಳು. ಹುತ್ತಿನ ಸಮೀಪಕ್ಕೆ ಹಾವು ಕಚ್ಚಿ ಜ್ಞಾನ ತಪ್ಪಿ ಬಿದ್ದಿದ್ದ ಅಣ್ಣನ ಸ್ಥಿತಿ ಕಂಡು ದುಃಖಿಸುತ್ತಾ ನಾಗಪ್ಪನಿಗೆ ನೆನೆದು ನಿನ್ನ ಪೂಜೆ ಮಾಡುತ್ತೇನೆ. ಅಣ್ಣನನ್ನು ಗುಣಪಡಿಸೆಂದು ಪ್ರಾರ್ಥಿಸಲು ನಾಗಪ್ಪ ಬಂದು ಕಚ್ಚಿದ ಜಾಗದಿಂದ ವಿಷವನ್ನು ಮರಳಿ ಪಡೆಯಿತು. ಉಪವಾಸ ಉಳಿದು ಅಣ್ಣನನ್ನು ವಿಪತ್ತಿನಿಂದ ಪಾರು ಮಾಡಿದ ಸಹೋದರಿ ಸಂಜೆ ಹೊತ್ತಿಗೆ ನಾಗಪ್ಪನಿಗೆ ಹಾಲೆರೆದಳು[೪೧] ಅಂದಿನ ದಿನವೆ ಪ್ರತಿ ವರ್ಷ ಪಂಚಮಿಯ ಮುನ್ನಾ ದಿನ ನಾಗಚತುರ್ಥಿಯೆಂದು ಹೆಣ್ಣು ಮಕ್ಕಳೆಲ್ಲಾ ಉಪವಾಸವಿರುವ ಪದ್ಧತಿ ಬೆಳೆದು ಕೊಂಡುಬಂದಿದೆ.

---

೪೦ (ಅಡಿಟಿಪ್ಪಣಿ: ೪೦: ಜಾನಪದ ಐಸಿರಿ. ಲೇಖಕರು ಡಾ. ಬಿ.ಎಸ್.ಸ್ವಾಮಿ ಪುಟ ಸಂಖ್ಯೆ ೧೯೧-೧೯೨)
೪೧ (ಅಡಿಟಿಪ್ಪಣಿ: ೪೧: ರೇಡಿಯೋ ಪ್ರಸಾರ ದಿನಾಂಕ ೨೩.೦೭.೨೦೦೯)

ನಾಗಪಂಚಮಿ ಕುರಿತ ಇನ್ನೊಂದು ಕಥೆಯಿಂತಿದೆ "ನಾಗಪ್ಪನ ತಾಯಿ ಮತ್ತು ಗರುಡನ ತಾಯಿ ಅಕ್ಕ ತಂಗಿಯರು. ಅಕ್ಕನ ಮಗ ನಾಗಪ್ಪ, ತಂಗಿಯ ಮಗ ಗರುಡ ಒಂದು ಬಿಳಿ ಕುದರೆಯ ಬಾಲಕ್ಕೆ ಕಪ್ಪು ಮಚ್ಚೆ ಇರುವುದಾಗಿ ಅಕ್ಕನ ವಾದ, ತಂಗಿ ಕುದುರೆ ಬಾಲಕ್ಕೆ ಕಪ್ಪು ಮಚ್ಚೆ ಇಲ್ಲವೆಂಬುದು ತಂಗಿಯವಾದ. ತಂಗಿಯನ್ನು ಹೇಗಾದರೂ ಮಾಡಿ ಮೋಸದಿಂದ ಈ ವಾದದಲ್ಲಿ ಸೋಲಿಸಬೇಕೆಂದು ಚತುರತೆಯಿಂದ ಕುದುರೆ ಬಾಲಕ್ಕೆ ಕೃತಕವಾದ ಕಪ್ಪು ಮಚ್ಚೆ ಕಾಣುವಂತೆ ಮಾಡುತ್ತಾಳೆ. ಈ ವಾದದಲ್ಲಿ ತನ್ನ ತಾಯಿಯನ್ನು ಸತಾಯಿಸುತ್ತಿದ್ದರುವುದನ್ನು ಕಂಡು ಗರುಡನು, ಹಾವನ್ನು ತಿನ್ನಲಿಕ್ಕ ಆರಂಭಿಸಿದನು. ಅಕ್ಕ ತನ್ನ ಮರಿಗಳನ್ನು ತಿನ್ನುವುದನ್ನು ಬಿಡು ಎಂದು ಅಂಗಲಾಚಿ ಬೇಡಿಕೊಂಡಾಗ ಗರುಡ ವಿಚಾರಿಸಿ ತನ್ನ ದೊಡ್ಡಮ್ಮನ ಮಕ್ಕಳನ್ನೇ ತಿನ್ನುವುದು ಸರಿಯೆಲ್ಲ ಎಂದು ತಿಳಿದು ತಿನ್ನುವುದು ಬಿಡುವನು. ಅಕ್ಕ ತಂಗಿಯರು ಮತ್ತು ಮಕ್ಕಳೆಲ್ಲರು ಒಂದಾಗಿ ಸಂತೋಷದಿಂದ ಇರುವರು. ಹೀಗೆ ನಾಗಪ್ಪನು ಗರುಡನಿಂದ ರಕ್ಷಣೆ ಹೊಂದಿದ ದಿನವನ್ನು ಎಲ್ಲರೂ ಸೇರಿ ಈ ಪಂಚಮಿ ಹಬ್ಬ ಆಚರಿಸುತ್ತಾರೆ[೪೨] ಆ ನೆನಪಿಗೊಸ್ಕರ ಪಂಚಮಿ ಇಂದಿಗೂ ಆಚರಿಸಲಾಗುತ್ತದೆ.

ಈ ಹಬ್ಬದ ಸಮಯ ಮಳೆಗಾಲವಾದರೂ ಹೊಲದಲ್ಲಿ ಬೆಳೆಯೆಲ್ಲಾ ಸಮೃದ್ಧವಾದ ಬೆಳವಣಿಗೆ ಹಂತದಲ್ಲಿರುತ್ತದೆ. ಆದ್ದರಿಂದ ರೈತರ ಮುಖದಲ್ಲಿ ಸಂತೋಷವಾದ ಕಳೆ ತುಂಬಿರುತ್ತದೆ. ಇಂದು ನಾಗಪ್ಪನಿಗೆ ಪೂಜಿಸುವುದು ಮತ್ತು ಹೊಸದಾಗಿ ಮದುವೆಯಾದ ನವವಧುವನ್ನು ಹಾಗೂ ಗಂಡ ಮನೆಯಿಂದ ಹೆಣ್ಣನ್ನು ತವರಿಗೆ ಕರೆದು ತರುವ ಸಂಪ್ರದಾಯ ಈ ಹಬ್ಬದ ವಿಶೇಷಗಳಾಗಿವೆ.

ಈ ಹಬ್ಬ ಕುರಿತು ಅನೇಕ ನಂಬಿಕೆ ಜಾರಿಯಲ್ಲಿ ಅದರಲ್ಲಿ ಕೆಲವೊಂದು ಈ ಕೆಳಗಿನಂತಿವೆ.

**೧. ನಾಗಚತುರ್ಥಿ ದಿವಸ ಬಾಗೀಲಿಗೆ ಗಂಧ ಹಚ್ಚುವುದು :**

ಮನೆಯಲ್ಲಿ ಹಬ್ಬದ ವಾತಾವರಣ ನಿರ್ಮಿಸುವಂತೆ ನಾಗಚತುರ್ಥಿಯ ಮುಂಜಾನೆ ಮನೆಯಲ್ಲಾ ತೊಳೆದು ಸಾರಣೆ ಮಾಡಿರುತ್ತಾರೆ. ಸಂಜೆ ಸುಮಾರಿಗೆ ಗಂಧ ತೆಗೆದು ಅದರಲ್ಲಿ ಅರಿಶಿಣ ಮಿಶ್ರ ಮಾಡಿ ಔಡಲ ಎಲೆಯ ಒಳ ಭಾಗದ ಕಡ್ಡಿಯನ್ನು ಹೂವಿನ ಆಕಾರದಲ್ಲಿ ಕತ್ತರಿಸಿಕೊಂಡು ಗಂಧದಲ್ಲಿ ಅದ್ದಿ ಬಾಗಲಿಗೆ ಹಚ್ಚುವರು. ಬಾಗೀಲ ಮೇಲೆ ಅಂದವಾದ ಚಿತ್ರ ಮೂಢಿ ಬಾಗೀಲು ನೋಡಲು ಚೆನ್ನಾಗಿ ಕಾಣುತ್ತವೆ. ಅದರಂತೆ ಮೂರು ಬೆರಳಿನಿಂದ ಚುಕ್ಕಿಗಳನ್ನು ಅರಿಶಿಣ, ಕುಂಕುಮ ಹಿಟ್ಟಿನಿಂದ ಮಿಶ್ರಣವಾಗಿ ಬಾಗಿಲು ಮತ್ತು ಗೋಡೆಗಳ ಮೇಲಿಟ್ಟರೆ ಜನಪದರ ಕಲೆಯ ಪ್ರಜ್ಞೆ ಗುರುತಿಸಬಹುದು.

**೨. ಅಳ್ಳು ತಂಬಿಟ್ಟು ಉಂಡೆ ಮಾಡುವುದು :**

ಅಳ್ಳು ತಂಬಿಟ್ಟು ಉಂಡೆ ಮಾಡುವುದು ಈ ಹಬ್ಬದ ಪದ್ಧತಿಯಾಗಿದೆ. ಅಳ್ಳು ಕಾಗೆ ಜೋಳ ಎನ್ನುವ ಧಾನ್ಯದಿಂದ ತಯಾರಿಸಲಾಗುವುದು. ಬಿಳಿ ಜೋಳದ ಅಳ್ಳಿಗಿಂತಲೂ ಇವು ಮೃದುವಾಗಿರುತ್ತವೆ ಮತ್ತು ತಿನ್ನಲು ರುಚಿಯಾಗಿರುತ್ತವೆ. ಈ ಜೋಳ ಈ ಸಮಯದಲ್ಲಿ ಮಾತ್ರ ಬಳಸುವುದು ಕಂಡುಬರುತ್ತದೆ. ಇದು ಹೆಚ್ಚಾಗಿ ಸಿಗುವುದಿಲ್ಲ ಹೀಗೆ ಋತುಮಾನಕ್ಕನುಸಾರವಾಗಿ ಬೆಳೆಯುವ ಎಲ್ಲಾ ಆಹಾರ ಕಾಳು ಒಂದಲ್ಲಾ ಒಂದು ಸಂದರ್ಭದ ಬಳಕೆಯಿಂದ ತಿಂಡಿ ತಿನಿಸುಗಳಲ್ಲಿ ಮತ್ತು ಊಟದ ಆಹಾರವಾಗಿ ಸೇವಿಸುವುದುಂಟು ಈ

---

೪೨ (ಅಡಿಟಿಪ್ಪಣಿ: ೪೨: ರೇಡಿಯೋ ಪ್ರಸಾರ ದಿನಾಂಕ ೨೩.೦೭.೨೦೦೯)

ಭಾಗದಲ್ಲಿ ಅಕ್ಕಿಗಿಂತ ಜೋಳ ಹೆಚ್ಚಾಗಿ ಬಳಸುವುದರಿಂದ ಹುರಿದ ಜೋಳ ಮತ್ತು ಅಕ್ಕಿ ಮಿಶ್ರಣ ಮಾಡಿ ಪುಡಿ ಮಾಡಿದ ಹಿಟ್ಟಿಗೆ ಖೊಬ್ರಿ, ಏಲಕ್ಕಿ, ಬೆಲ್ಲ ಬೆರಸಿ ಹದವಾಗಿ 'ಕುಟ್ಟುತ್ತಾರೆ ಇದನ್ನು ಪುಡಿಯಾಗಿ ತಿನ್ನಬಹುದು. ಅಥವಾ ನೀರು, ಹಾಲು, ತುಪ್ಪ ಮಿಶ್ರಣ ಮಾಡಿಕೊಂಡು ತಿನ್ನುತ್ತಾರೆ. ಇನ್ನು ಎಣ್ಣೆ ಕಾಳುಗಳಾದ ಶೇಂಗಾ ಬೆಲ್ಲ ಮತ್ತು ಎಳ್ಳು ಮಿಶ್ರಿತ ಮಾಡಿದ ಉಂಡೆಯು ಆರೋಗ್ಯಕ್ಕೆ ಪೌಷ್ಠಿಕತೆ ಒದಗಿಸುವುದಾಗಿದೆ.

**೩. ನಾಗಪ್ಪನಿಗೆ ಹಾಲು ಎರೆಯುವುದು :**

ನಾಗರ ಹಾವೊಂದನ್ನು ಪೂಜಿಸುವ ಧರ್ಮಾಚರಣೆ ಬೆಳೆದು ಬಂದಿರುವುದಕ್ಕೆ ಪ್ರಮುಖ ಕಾರಣ ಅದರ ವಿಷದ ತೀವ್ರತೆ ನಾಗರ ಹಾವಿನ ಕಡಿತ ಮತ್ತು ವಿಷದ ತೀವ್ರತೆಯಿಂದ ಭಯಭೀತರಾಗಿದ್ದ ಹಾಗೂ ಔಷಧೋಪಚಾರದ ಸೌಲಭ್ಯಗಳ ಕೊರತೆಯಿದ್ದ ಪ್ರಾಚೀನರು ನಾಗರ ಹಾವನ್ನು ಪೂಜಿಸುವುದರ ಮೂಲಕ ಅದರ ಒಲುಮೆಗಳಿಸಿ ಕೆಡುಕಿನಿಂದ ಪಾರಾಗಲು ಪ್ರಯತ್ನಿಸಿದ್ದು; ಜೀವಂತ ಹಾವುಗಳನ್ನು ಪೂಜಿಸಿ ಹಾಲೆರೆಯುವ ಸಂದರ್ಭದಲ್ಲಿ ಕಡಿದು ತೊಂದರೆಯಾಗಬಹುದೆನ್ನುವ ಭಯದಿಂದ ಹುತ್ತಕ್ಕೆ ಇಲ್ಲವೆ ಕಲ್ಲುನಾಗರ ವಿಗ್ರಹಗಳಿಗೆ ಪೂಜಿಸಲು ಪ್ರಾರಂಭಿಸಿದರು.

ಆದರೆ ಹುತ್ತಕ್ಕಾಗಲಿ ಅಥವಾ ನಾಗಪ್ಪನಿಗೆ ಹಾಲೆರೆಯುವುದು ಮೂಢನಂಬಿಕೆಯೇ ಯಾಗಿದೆ. ವಾಸ್ತವಿಕವಾಗಿ ನಾಗ ಹಾಲು ಸೇವಿಸುವುದಿಲ್ಲ ಅದು ಅದರ ಸಹಜ ಆಹಾರವಲ್ಲ. ಒಂದು ಉರಗವಾಗಿ ಅದಕ್ಕೆ ಹಾಲಿನ ಅವಶ್ಯಕತೆಯಾಗಲಿ, ಎಳೆನೀರಿನ ಅಭಿಷೇಕವನ್ನು ಮಾಡುವುದಾಗಲಿ ಅವಶ್ಯಕತೆಯಿಲ್ಲ. ಇವೆಲ್ಲಾ ಮಾಡುವುದು ಸಾಂಕೇತಿಕ ಮಾತ್ರ, ಕಲ್ಲನಾಗರಕ್ಕೆ ಹಾಲೆರೆದು ನಿಜದ ನಾಗರವನ್ನು ಕೊಲ್ಲುವುದು, ಪರಿಸರವನ್ನು ಭೂಮಿಯನ್ನು ವಿಷ ರಾಸಾಯನಿಕಗಳಿಂದ ತುಂಬಿಸಿ ನಾಗ ಬದುಕದ ಪರಿಸರ ಸೃಷ್ಟಿಸುವುದು, ನೈಸರ್ಗಿಕ ಸಮೃದ್ಧಿಯ ಸಂಕೇತವಾದ ನಾಗನಿಗೆ ವೃಕ್ಷ ಸಮೃದ್ಧಿಯ ಬನಗಳನ್ನು ಕಡಿದು ಕಟ್ಟೆ, ಗುಡಿಗಳನ್ನು ನಿರ್ಮಿಸುವುದು ಇಂತಹವುಗಳನ್ನು ತ್ಯಜಿಸಿದರೆ ಮಾತ್ರ ನಾಗಪ್ಪನ ಆರಾಧನೆಗೆ ಅರ್ಥ ಬಂದಿತು.

**೪. ಜೋಕಾಲಿ ಆಡುವುದು :**

ಯುಗಾದಿ ಹಬ್ಬದಂತೆ ಈ ಹಬ್ಬಕ್ಕೂ ಜೋಕಾಲಿ ಆಡುವ ನಂಬಿಕೆಯಿದೆ. ಇದರಿಂದ ಆರೋಗ್ಯಕ್ಕೆ ಬೇಕಾದ ವೈಜ್ಞಾನಿಕ ಉಪಯುಕ್ತಗಳಿವೆ. (ಜೋಕಾಲಿ ಕುರಿತು ಯುಗಾದಿ ಹಬ್ಬದ ಆಚರಣೆಯಲ್ಲಿ ವಿವರಿಸಲಾಗಿದೆ)

**೫. ಬುಲಾಯಿ ಹಾಕುವುದು :**

ಪಂಚಮಿ ಹಬ್ಬದ ಸಂಜೆ ಹೊತ್ತಿಗೆ ಓಣಿಯ ಮಹಿಳೆಯರೆಲ್ಲಾ ಒಂದೆಡೆ ಸೇರಿ ಒಬ್ಬರ ಕೈಯಿ ಇನ್ನೊಬ್ಬರು ಹಿಡಿದು ಗೋಲಾಕಾರವಾಗಿ ನಿಂತು ಕುಣಿಯುತ್ತಾ ನಲಿಯುತ್ತಾ ಹಾಡುವರು ಇದನ್ನು ಬುಲಾಯಿ ಹಾಕುವುದು ಎನ್ನುವರು. ಈ ಹಾಡುಗಳು ಸಹೋದರ ಸಹೋದರಿಯರ ಸಂಬಂಧ, ಐತಿಹಾಸಿಕ ಮತ್ತು ಸಾಮಾಜಿಕ ಚರಿತ್ರೆಯನ್ನು ಒಳಗೊಂಡಿರುತ್ತವೆ. ಆದರೆ ಇಂತಹ ಆಚರಣೆ ಕಣ್ಮರೆ ಹೋಗುತ್ತಿರುವುದು. ಜನಪದ ಗೀತೆಗಳಿಗೆ ನಿರ್ಲಕ್ಷ ಒಂದೆಡೆಯಾದರೆ, ಆಧುನಿಕ ಸಂಪರ್ಕ ಮಾಧ್ಯಮಗಳ ಹಾವಳಿ ಇನ್ನೊಂದಡೆ ಹಬ್ಬದ ದಿನ ಅಡುಗೆ, ಪೂಜೆ, ಅಷ್ಟೇ ಸೀಮಿತವಾಗಿದೆ. ಎಲ್ಲೋ ಅಪರೂಪಕ್ಕೆ ಒಬ್ಬಿಬ್ಬರು ಮಹಿಳೆಯರು ಹಾಡುವವರು ಇದ್ದರೂ ಅವರಿಗೆ ಪ್ರೋತ್ಸಾಹಿಸಿ ಹಾಡಿಸುವ, ಅದನ್ನು ಕಲಿತುಕೊಳ್ಳಬೇಕೆಂಬ ಮಹಿಳೆಯರು ವಿರಳವೆ.

**ನೂಲ ಹುಣ್ಣಿಮೆ :**

ನೂಲ ಹುಣ್ಣಿಮೆಯನ್ನು ರಕ್ಷಾ ಬಂಧನವೆಂತಲೂ ಕರೆಯುತ್ತಾರೆ. ಈ ಆಚರಣೆಗೆ ಪೌರಾಣಿಕ ಹಿನ್ನೆಲೆಯ ಕಥೆಯೊಂದು ಹೀಗಿದೆ. ದೇವತೆಗಳಿಗೂ ಮತ್ತು ರಾಕ್ಷಸರಿಗೂ ಯುದ್ಧ ನಡೆದಾಗಿ ಗೆಲ್ಲುವ ಲಕ್ಷಣ ರಾಕ್ಷಸರದ್ದಾಗಿತ್ತು. ಇಂದ್ರ ತನ್ನ ಗುರು ಆದ ಬ್ರಹ್ಮಸ್ಪತಿಗೆ ಕರೆಯಿಸಿ ಯುದ್ಧದಲ್ಲಿ ಗೆಲ್ಲುವ ವಿಧಾನ ಹೀಗೆ ಎಂದು ಕೇಳುತ್ತಿರಲು ಇಂದ್ರನ ಮಡದಿ ಶಚಿದೇವಿ ಇದನ್ನು ಕೇಳಿ ಅವಳು ಯುದ್ಧದಲ್ಲಿ ಗೆಲ್ಲುವ ತಂತ್ರ ತನಗೆ ಗೊತ್ತು ಎಂದು ಇಂದ್ರನ ಬಲಗೈಯಿಗೆ ರಕ್ಷಾಕವಚವಾಗಿ ರಾಖಿ ಕಟ್ಟಿ ಕಳುಹಿಸಿದಳು. ಆಗ ದೇವತೆಗಳಿಗೆ ಜಯವಾಗುವುದು. ಅಂದಿನಿಂದ ಗಂಡಸರಿಗೆ ವಿಜಯದ ಪ್ರತೀಕವಾಗಿ ರಾಖಿ ಕಟ್ಟುವುದು ಆರಂಭವಾಗಿದೆ.[೪೩]

ಇನ್ನು ಇತಿಹಾಸದ ದಾಖಲೆಗಳ ಪ್ರಕಾರ ಅಲೆಗ್ಸಾಂಡರನ ಪತ್ನಿ ಭಾರತದ ಪೌರವ ಅರಸರನಿಗೆ ಸಹೋದರ ಭಾವನೆಯಿಂದ ರಾಖಿ ಕಟ್ಟಿದಳು.

ಮೊಘಲ್ ರಾಣಿಯರು ಹಿಂದೂ ಅರಸರನ್ನು ಸಹೋದರರಾಗಿ ಕಂಡು ರಾಖಿ ಕಟ್ಟಿ ತಮ್ಮ ಪತಿಯರನ್ನು ರಕ್ಷಿಸಿ ಎಂದು ಕೇಳಿಕೊಳ್ಳುತ್ತಿದ್ದರು. ಇನ್ನು ರಜಪೂತ ಸ್ತ್ರೀಯರು ತಮ್ಮ ಪತಿಯರಿಗೆ ರಣರಂಗಕ್ಕೆ ಬೀಳ್ಕೊಡುವಾಗ ಅವರ ಪ್ರಾಣಪಾಯದಿಂದ ರಕ್ಷಿಸಿಕೊಂಡು ಬರಲಿ ಮತ್ತು ಯುದ್ಧದಲ್ಲಿ ವಿಜಯಶಾಲಿಗಳಾಗಲೆಂದು ಬಲಗೈಯಿಗೆ ರಾಖಿಕಟ್ಟಿ, ಹಣೆಗೆ ಉದ್ದವಾದ ಕುಂಕುಮ ತಿಲಕವಿಟ್ಟು ಆರತಿ ಬೆಳಗುತ್ತಿದ್ದರು.

ಪ್ರಸ್ತುತ ಸಮಯದ ನಮ್ಮ ದೇಶದ ಸಂವಿಧಾನವು ತಿಳಿಸಿಕೊಟ್ಟಂತೆ ಸಹೋದರ ಸಹೋದರಿ ಭಾವನೆ ಬೆಳೆಸಿಕೊಳ್ಳುವುದು ಮೂಲಭೂತ ಕರ್ತವ್ಯಗಳಲ್ಲಿ ಒಂದಾಗಿದೆ.

ಆದ್ದರಿಂದ ರಾಖಿ ಆಚರಣೆ ಸಹೋದರ ಸಹೋದರಿಯ ಸಂಬಂಧಕ್ಕೆ ಪ್ರೀತಿಯ ಬೆಸುಗೆಯಾಗಿದೆ. ಇಂದಿನ ಕಾಲದಲ್ಲಿ ನೂಲ ಹುಣ್ಣಿಮೆಗೆ ಅಷ್ಟೆ ಅಲ್ಲ ಕಾಲೇಜು ವಿದ್ಯಾರ್ಥಿಗಳು ಅಥವಾ ಹೊರಗಡೆಯು ಉಳಿದ ದಿನಗಳಲ್ಲಿಯೂ ರಾಖಿ ಕಟ್ಟಿಕೊಳ್ಳುವುದು ರೂಢಿಯಲ್ಲಿದೆ. ಹಾಗೆಯೇ ರಾಖಿ ಆರಂಭವಾಗಿರುವುದು ವಿಜಯದ ಸಂಕೇತವಾಗಿ, ಪುರುಷರು ಯುದ್ಧಕ್ಕೆ ಹೋಗುತ್ತಿರುವಾಗಲೇ ರಕ್ಷಾಬಂಧನ ಕಟ್ಟಿರುವ ನಿದರ್ಶನಗಳಿವೆ. ಅಂದಾಗ ಹುಣ್ಣಿಮೆ ದಿನ ಮಾತ್ರ ಕಟ್ಟುವುದೆಂದು ಅಲ್ಲ ಎಂದು ತಿಳಿಯಬಹುದು. ಆದರೆ ಈ ಹುಣ್ಣಮೆಗೆ ನಿಗದಿಪಡಿಸಲು ಕಾರಣ ಸರ್ವರು ಈ ಒಂದು ದಿನದ ನಿಮಿತ್ಯವಾಗಿಯಾದರೂ ಇದನ್ನು ಆಚರಿಸಲು ಎಂಬುದಾಗಿರಬೇಕು.

**ಕೃಷ್ಣಾಷ್ಟಮಿ :**

ದ್ವಾಪರ ಯುಗದಲ್ಲಿ ಮಥುರೆಯಲ್ಲಿ ಶ್ರೀ ಕೃಷ್ಣ ಜನಿಸಿದ ದಿನ ಕೃಷ್ಣಾಷ್ಟಮಿ. ಶ್ರೀ ಕೃಷ್ಣ ಲೋಕದಲ್ಲಿ ನೆಲೆಸಿದ ಅಧರ್ಮಿಗಳನ್ನು ಕಟ್ಟಿ ಹಾಕಿ, ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ಪಾಲಿಸಿದ. ಇವನು ವಸುದೇವ ಮತ್ತು ದೇವಕಿಯ ಪುತ್ರನಾಗಿ ಜನಿಸಿದ.

---

೪೩ (ಅನುಬಂಧ: ೪೩: ರೇಡಿಯೋ ಪ್ರಸಾರ ದಿನಾಂಕ ೦೫.೦೮.೨೦೦೯)

"ಕೃಷ್ಣ ವಿಷ್ಣುವಿನ ಎಂಟನೇ ಅವತಾರ, ಕಲಿಯುಗ ಆರಂಭವಾಗುವುದಕ್ಕಿಂತ ೭೦ ವರ್ಷ ಪೂರ್ವದಲ್ಲಿ ಸುಮಾರು ೫೦೦೦ ವರ್ಷಗಳ ಹಿಂದೆ ಸಿಂಹಮಾಸದ ಶ್ರಾವಣ ಅಥವಾ ಭಾದ್ರಪದ ಮಾಸದ ಕೃಷ್ಣಪಕ್ಷದ ಅಷ್ಟಮಿಯ ದಿನ ರೋಹಿಣಿ ನಕ್ಷತ್ರದ ಜಯಂತಿ ಯೋಗವಿದ್ದ ದಿನ ಮಧ್ಯರಾತ್ರಿಯಲ್ಲಿ ಚಂದ್ರೋದಯದೊಂದಿಗೆ ಶ್ರೀ ಕೃಷ್ಣನ ಅವತಾರವಾಯಿತು. ಅದೇ ಕೃಷ್ಣ ಜಯಂತಿ"[೪೪]

ಶ್ರೀ ಕೃಷ್ಣನು ಸೆರೆ ಮನೆಯಲ್ಲಿ ಜನಿಸಿದನಾದರೂ ಈ ಭವದ ಬಂಧನ ಬಿಡಿಸಿದನು. ಕತ್ತಲಲ್ಲಿ ಜನಿಸಿದ ನಾದರೂ ಜನರನ್ನು ಕತ್ತಲೆಯಿಂದ ಬೆಳಕಿನೆಡೆಗೆ ಹೋಗುವ ಜ್ಞಾನ ಮಾರ್ಗ ತೋರಿಸಿಕೊಟ್ಟ ತನ್ನ ಹೆತ್ತವರಿಗೆ ತಾನು ಯಾರೆಂದು ಹಾಗೂ ಅವರ ಬಿಡುಗಡೆ ಸಮಯ ಯಾವಾಗ ಮತ್ತು ತನ್ನನ್ನು ನಂದಗೋಕುಲಕ್ಕೆ ಬಿಡುವದನ್ನು ತನ್ನ ದಿವ್ಯದರ್ಶನ ರೂಪದಿಂದ ತೊರಿಸಿಕೊಟ್ಟಿದ್ದನು. ನಂದಗೋಕುಲದಲ್ಲಿ ಬೆಣ್ಣೆ ತಿನ್ನುತ್ತಾ ಹೆಂಗಳೆಯರೊಂದಿಗೆ ಕಾಲ ಕಳೆಯುವ ಇತನಿಗೆ ಕಳ್ಳ ಕೃಷ್ಣ ಎಂದು ಕರೆಯಲಾಯಿತು. ಇತನ ಬಾಲ್ಯ ಸ್ನೇಹಿತನಾದ ಬಲರಾಮನನ್ನು ತನ್ನ ಜೀವಕ್ಕಿಂತ ಹೆಚ್ಚಾಗಿ ನೊಡಿಕೊಂಡ ಬಡತನದ ಬಲರಾಮನ ಜೀವನವೆ ಬದಲಾಯಿಸಿದ ಕತೆ ಜನಪದರಲ್ಲಿದೆ "ಒಮ್ಮೆ ಬಲರಾಮನ ಪತ್ನಿ ಗಂಡನನ್ನು ಕುರಿತು ನಿಮ್ಮ ಸ್ನೇಹಿತ ಕೃಷ್ಣನನ್ನು ಆಗಾಗ್ಗೆ ನೆನಪಿಸುವಿರಿ. ಶ್ರೀಮಂತನೆಂದೂ ಹೇಳುವಿರಿ ನಮ್ಮ ಬಡತನಕ್ಕೆ ಸಹಾಯ ಕೇಳಬಾರದೆ ಎಂದು ಒತ್ತಾಯ ಪಡಿಸುತ್ತಾಳೆ ಹಾಗೂ ಅವನಿಗೂ ಸ್ನೇಹಿತನನ್ನು ನೋಡಿ ಬಹಳ ದಿವಸಗಳಾಗಿರುತ್ತವೆ. ಅವನಲ್ಲಿ ಸಹಾಯ ಕೇಳದಿದ್ದರೂ ನೋಡ ಬರಬೇಕೆಂಬ ಆಸೆಯುಂಟಾಗುತ್ತದೆ. ಆದ್ದರಿಂದ ಕೃಷ್ಣನಿಗೆ ಪ್ರಿಯವಾದ ಅವಲಕ್ಕಿ ಮತ್ತು ಮೊಸರು ಮಿಶ್ರಣ ಮಾಡಿದ್ದನ್ನು ಸ್ನೇಹಿತನಿಗಾಗಿ ಒಯ್ಯುತ್ತಾನೆ. ಬಲರಾಮ ಬಂದುದ್ದನ್ನು ಕಂಡ ಕೃಷ್ಣ ಅತಿಸಂತುಷ್ಟನಾಗಿ ತನ್ನ ಹೆಂಡತಿಗೆ ಹೇಳುತ್ತಾನೆ ಹಾಗೂ ಅವನಿಗೆ ಪಕ್ವಾನನ್ನ ಭೋಜನ ಸಿದ್ಧಪಡಿಸಿ ಹೊಟ್ಟೆ ತುಂಬ ಊಟ ಬಡಿಸುತ್ತಾನೆ. ತನ್ನ ಸ್ನೇಹಿತ ಪ್ರೀತಿಯಿಂದ ತಂದ ಅವಲಕ್ಕಿ ಮೊಸರು ತಾನು ತಿಂದು ಎಷ್ಟು ರುಚಿಯಾಗಿದೆ ಎಂದು ಸ್ನೇಹಿತನನ್ನು ಮತ್ತಷ್ಟು ಸಂತೋಷಗೊಳಿಸುತ್ತಾನೆ. ಆತನ ಯೋಗಕ್ಷೇಮ ವಿಚಾರಿಸಿದ ನಂತರ ಬಲರಾಮನು ಮುಖ ಹಾಕಿಕೊಂಡ ಬಟ್ಟೆಯಿಂದ ಅವನ ಬಡತನ ಸ್ಥಿತಿಯನ್ನು ಅರಿತ ಕೃಷ್ಣ ಕ್ಷಣದಲ್ಲಿ ಆತನ ಜೀವನ ಮಾರ್ಗವನ್ನೇ ಬದಲಾಯಿಸಿ ಅಷ್ಟೈಶ್ವರ್ಯಗಳನ್ನು ಕೊಟ್ಟು ಕಾಪಾಡುತ್ತಾನೆ"[೪೫] ಹಾಗೆಯೇ ಅರ್ಜುನನಿಗೂ ಸ್ನೇಹಿತನಾಗಿ, ಭಾವನಾಗಿ, ಸಾರಥಿಯಾಗಿದ್ದು ಗೆಲುವಿಗೆ ಕಾರಣನಾದ ಇತನ ಬಗ್ಗೆ ವಿಷ್ಣು ಪುರಾಣ, ಹರಿವಂಶ, ಮಹಾಭಾರತ, ಭಾಗವತಗಳಲ್ಲಿ ಅನೇಕ ಉಲ್ಲೇಖಗಳಿವೆ.

ಸೋದರಮಾವ ಕಂಸನನ್ನು ಕೊಂದು ತಾಯಿ ತಂದೆಯವರನ್ನು ಆತನ ಸೆರೆಯಿಂದ ಬಿಡಿಸಿದ, ಅರ್ಜುನನಿಗೆ ಭಗವದ್ಗೀತೆ ತಿಳಿಸಿ ಧರ್ಮವನ್ನು ಜಾರಿಗೊಳಿಸಿದನು. ಕೃಷ್ಣಾಷ್ಟಮಿ ಮರುದಿವಸ ಆತ ಬಾಲ ಲೀಲೆಗಳನ್ನು ಸ್ಮರಿಸುವ ದಿನವಾಗಿದೆ. ಬೆಣ್ಣೆ ಕದಿಯುವ, ನೀರು ತರುವ ಸ್ತ್ರೀಯರ ಕೊಡಕ್ಕೆ ಕಲ್ಲು ಹೊಡೆಯುವ ಇತರ ತುಂಟಾಟಗಳೇ ಆತನ ಬಾಲ್ಯದ ಚಟುವಟಿಕೆಗಳಾಗಿದ್ದವು. ಸ್ನೇಹ, ಪ್ರೀತಿ, ಮಮತೆ, ಕರುಣೆಗಳನ್ನು ಬೆಳೆಸಿಕೊಂಡ ಕೃಷ್ಣ ತುಂಟನಾಗಿದ್ದು ಧರ್ಮದ ರಕ್ಷಣೆಯ ಸಾರಥಿಯಾಗಿ ಕೃಷ್ಣ ಪರಮಾತ್ಮನಾದನು.

ಕೃಷ್ಣಾಷ್ಟಮಿಯ ಆಚರಣೆ ಈ ಭಾಗದಲ್ಲಿ ತೀರಾ ಕಡಿಮೆಯಂದೇ ಹೇಳಬಹುದು ಆದರೆ ಶಾಲೆಗಳಲ್ಲಿ ಇತ್ತೀಚೆಗೆ ಮಕ್ಕಳನ್ನು ಕೃಷ್ಣಾವತಾರದಲ್ಲಿ ಪ್ರದರ್ಶನ ನಡೆಸುತ್ತಿರುವುದರ ಮೂಲಕ ಕೃಷ್ಣಾಷ್ಟಮಿಯ ಆಚರಣೆ ನೆನಪಿಗೆ ತಂದುಕೊಡುತ್ತಿದೆ.

---

೪೪ (ಅಡಿಟಿಪ್ಪಣಿ: ೪೪: ಜಾನಪದ ಐಸಿರಿ ಡಾ.ಬಿ.ಎಸ್.ಸ್ವಾಮಿ ಪುಟ ಸಂಖ್ಯೆ:೧೭೯)
೪೫ (ಅಡಿಟಿಪ್ಪಣಿ: ೪೫: ಜನಪದರ ಹೇಳಿಕೆ)

## ಗೌರಿ – ವೃತ

ಗೌರಿ ಎಂದು ಪಾರ್ವತಿಯನ್ನೇ ಸಂಭೋಧಿಸಲಾಗುವುದು ಆಕೆಯ ಬಗೆಗೆಯ ಗೌರಿ ರೂಪ ತಾಳಿದ ಹಿನ್ನೆಲೆಯಿದೆ. ಆಕೆಯ ಒಟ್ಟು ಹದಿನಾರು ಬಗೆಯಲ್ಲಿ ಗೌರಿ ವೃತ ಆಚರಿಸುವರು. ೧) ಗಡಿಗೆ ಗೌರಿ ೨) ಜೇಷ್ಠಗೌರಿ ೩) ಮಂಗಳ ಗೌರಿ ೪) ದಿವಸಿ ಗೌರಿ ೫) ಸ್ವರ್ಣ ಗೌರಿ ೬) ಹರತಾಳ ಗೌರಿ ೭) ಮೌನಗೌರಿ ೮) ವಸಂತ ಗೌರಿ ೯) ಶೀತಲಾಗೌರಿ ೧೦) ಶೀಗಿಗೌರಿ ೧೧) ಗೌರಿ ಹುಣ್ಣಿಮೆ ೧೨) ಸಂಪದ್ಗೌರಿ ೧೩) ಫಲಗೌರಿ ೧೪) ತ್ರಿಲೋಚನ ಗೌರಿ ೧೫) ಲಾವಣ್ಯ ಗೌರಿ ೧೬) ಫಣಿ ಗೌರಿ.

ಬೀದರ ಜಿಲ್ಲೆಯಾದ್ಯಂತ ಬಹು ಪ್ರಚಾರಕವಾಗಿ ಆಚರಿಸಲ್ಪಡುವ ಶೀಗಿ ಮತ್ತು ಗೌರಿ ಹುಣ್ಣಿಮೆಗಳಾಗಿವೆ. ಸ್ವರ್ಣಗೌರಿ, ಮಂಗಳಗೌರಿ ಮತ್ತು ಹರತಾಳ ಗೌರಿ ವೃತಗಳು ಕಡಿ ಪ್ರಮಾಣದಲ್ಲಿ ಆಚರಿಸುವುದು ಕಂಡುಬರುತ್ತದೆ.

ಶ್ರೀ ಗೌರಿಯು ಪಾರ್ವತಿಯ ರೂಪಾಂತರ ಶುಂಭ ನಿಶುಂಭರೆಂಬ ರಾಕ್ಷಸರು ದೇವತೆಗಳನ್ನು ಪದಚ್ಯುತರನ್ನಾಗಿ ಮಾಡಿದಾಗ ದೇವತೆಗಳೆಲ್ಲರೂ ಭಯ ಭಕ್ತಿಯಿಂದ ಪಾರ್ವತಿಯನ್ನು ಸ್ಮರಿಸಿದರು. ಆಗ ಪಾರ್ವತಿಯ ದೇಹ ಕೋಶದಿಂದ ದಿವ್ಯ ಸೌಂದರ್ಯವತಿಯಾದ ಒಬ್ಬ ಯುವತಿ ಹೊರಬಂದಳು. ಆಕೆ ಕಪ್ಪಾಗಿ ಇರುವುದರಿಂದ ಪರಶಿವ ಕಾಳಿ ಎಂದು ಕರೆದ ಆಗ ಕಾಳಿಯು ಹಿಮಪರ್ವತದ ಒಂದು ಶೀಖರದಲ್ಲಿ ಘೋರವಾದ ತಪಸ್ಸುಮಾಡಿ ಗೌರವರ್ಣದ ದೇಹವನ್ನು ಹೊಂದಿ, ಗೌರಿ ಎನಿಸಿಕೊಂಡು ಶಿವನನ್ನು ಪಡೆದಳು. ಗೌರಿ ತಪಸ್ಸು ಮಾಡಿದ ಆ ಶಿಖರಕ್ಕೆ ಗೌರಿ ಶಿಖರವೆಂದು ಕರೆಯಲಾಯಿತು.

ಪಂಚಾಂಗ ಮೂಲಾಧಾರಿತ ಈ ವೃತಗಳ ಆಚರಣೆ ಜನಪದರಿಂದ ದೂರವೇ ಎಂದು ಹೇಳಬಹುದು. ಏನಿದ್ದರೂ ಅವರು ತಮ್ಮ ಕೃಷಿಗೆ ಸಂಬಂಧಿಸಿದ ಹಾಗೂ ತಮಗೆ ಬಹುಪ್ರಚಾರತೆ ಪಡೆದ ಹಬ್ಬಗಳನ್ನೂ ಆಚರಿಸುತ್ತಾ ಬಂದಿದ್ದುಂಟು. ಏಕೆಂದರೆ ಒಂದು ಕಾಲದಲ್ಲಿ ವಿದ್ಯೆ ಕೇವಲ ಪಂಡಿತ ಪಾಮರ ಸ್ವೋತ್ತಾಗಿತ್ತು ಹೀಗಾಗಿ ತಿಳಿಯದೇ ಇರುವ ಕಾರಣದಿಂದಲೋ ಅಥವಾ ತಿಳಿದಿದ್ರೂ ತಮ್ಮ ಜೀವನೋದ್ಯೋಗಕ್ಕೆ ಅಡಚಣೆಯಾಗುವುದರಿಂದಲೋ ಕೇವಲ ಪ್ರಮುಖ ಹಬ್ಬಗಳು ಬಹುವ್ಯಾಪಕವಾಗಿ ಆಚರಿಸುವುದುಂಟು. ಆದರೆ ಇಂದಿನ ದಿನಮಾನಗಳಲ್ಲಿ ಓದುಬರಹ ಬಲ್ಲ ಮಹಿಳೆಯರು ಕ್ಯಾಲೆಂಡರ ಪಂಚಾಂಗ, ದಿನಪತ್ರಿಕೆ ಅಥವಾ ಧಾರ್ಮಿಕ ಆಚರಣೆಯಿಂದ ಪುಸ್ತಕಗಳಿಂದ ಹೆಚ್ಚಿನ ವಿಷಯ ತಿಳಿದು ತಮಗೆ ಇಷ್ಟವೆನಿಸಿದ ವೃತ ಕೈಗೊಳ್ಳುತ್ತಿರುವುದಾಗಿ ಕಾಣುತ್ತೇವೆ. ಅಂತಹವುಗಳಲ್ಲಿ ಸ್ವರ್ಣ, ಮಂಗಳ, ಹರತಾಳಗೌರಿ ವೃತದ ಆಚರಣೆಯು ಪಂಚಮಿ, ದಸರಾ, ದೀಪಾವಳಿಗಳಂತಹ ದೊಡ್ಡ ಹಬ್ಬಗಳಂತೆ ಜನಪ್ರಿಯತೆ ಪಡೆಯದಿದ್ರೂ ಅಲ್ಲಲ್ಲಿ ಈ ಭಾಗದಲ್ಲೂ ಗೌರಿ ವೃತಗಳ ಆಚರಣೆ ಕಂಡುಬರುವುದು ಈ ವೃತಗಳ ಪೂಜಾ ವಿಧಾನ ಮತ್ತು ಉದ್ದೇಶವೇನು ಎನ್ನುವುದು ಹೀಗೆ ಹೇಳಬಹುದು.

### ಸ್ವರ್ಣಗೌರಿ:

ಸ್ವರ್ಣಗೌರಿ ಎಂದು ಕರೆಯುವ ಈ ವೃತದ ಅಧಿದೇವತೆ ಸರ್ವ ಮಂಗಳೇಯಾದ ತಾಯಿ ಪಾರ್ವತಿ ದೇವಿ. ರಾಜನೊಬ್ಬ ಅಪ್ಸರೆಯಿಂದ ಪ್ರೇರಿತನಾಗಿ ಈ ವೃತ ಆಚರಿಸಿ ತನ್ನಿಬ್ಬರು ಪತ್ನಿಯರಿಗೆ ಈ ವೃತ ವಿಧಾನ

ಹೇಳಿದನಂತೆ ಹಿರಿಯ ಪತ್ನಿಯು ಪತಿಯ ಉಪದೇಶವನ್ನು ಕಡೆಗಣಿಸಿದ್ದರಿಂದ ನಾನಾ ಕಷ್ಟ ದುಃಖಗಳನ್ನು ಅನುಭವಿಸಿ ಕೊನೆಗೆ ಪಶ್ಚಾತ್ತಾಪ ಹೊಂದಿ ಈ ಸ್ವರ್ಣಗೌರಿ ವ್ರತವನ್ನಾಚರಿಸಿ, ಆಕೆಯ ಪ್ರಸಾದ, ಮಹಿಮೆಯಿಂದ ವೈಭವ ಪದವಿಗಳನ್ನು ಪಡೆದಳೆಂದು ಈ ವ್ರತದಲ್ಲಿ ತಿಳಿಯುತ್ತದೆ. ಭಾದ್ರಪದ ಶುದ್ಧ ತದಿಗೆಯೆಂದು ಆಚರಿಸುವ ಹಬ್ಬ, ಅಂದು ವ್ರತ ಕೈಗೊಂಡವರಿಗೆ ಸಮಸ್ತ ಇಷ್ಟಾರ್ಥಸಿದ್ಧಿ, ಪುತ್ರ ಪೌತ್ರಭಿವೃದ್ಧಿಯು, ದೀರ್ಘ ಸೌಮಾಂಗಲ್ಯವನ್ನು, ಕುಟುಂಬದಲ್ಲಿ ಶಾಂತಿ ನೆಮ್ಮದಿ ಶ್ರೀ ಪಾರ್ವತಿ ಕೊಟ್ಟು ಕಾಪಾಡುತ್ತಾಳೆ ಎಂದು ಪರಮೇಶ್ವರನು ಷಣ್ಮೂಖನನ್ನು ಕುರಿತು ಸ್ಕಂದ ಪುರಾಣದಲ್ಲಿ ಈ ವ್ರತದ ಮಹಿಮೆ ಹೇಳಿದ್ದಾನೆ. ಸ್ವರ್ಣಗೌರಿ ವ್ರತ ಕರ್ನಾಟಕ ಆಂಧ್ರ ಪ್ರದೇಶದ ಕೆಲವು ಭಾಗಗಳಲ್ಲಿ ಕಂಡುಬರುತ್ತದೆ. ತಳಿರು ತೋರಣದಿಂದ ಮನೆ ಅಲಂಕರಿಸಿ ತಾಮ್ರ ಇಲ್ಲವೆ ಬೆಳ್ಳಿ ತಟ್ಟೆಯಲ್ಲಿ ಅಕ್ಕಿ ಹಾಕಿ ಮಣ್ಣಿನಿಂದ ಮಾಡಿದ ಗೌರಿಯನ್ನಿಟ್ಟು ಪೂಜಿಸಿ ಹದಿನಾರು ಗಂಟು ಹಾಕಿದ ದಾರವನ್ನು ಅರಿಶಿಣದಲ್ಲಿ ಅದ್ದಿ ಒಂದು ಹೂ ಸೇರಿಸಿ ಮುಂಗೈಗೆ ಕಟ್ಟಿಕೊಳ್ಳುತ್ತಾರೆ. ಪೂಜೆ ನಂತರ ಮರದಲ್ಲಿ ಕುಂಕುಮ. ಅರಿಶಿಣ, ಬೆಲ್ಲ ಬಳೆ ಮುಂತಾದವು ಹಾಕಿ ಮುತ್ತೈದಿಯರಿಗೆ ಕೊಡುತ್ತಾರೆ.

**ಮಂಗಳಗೌರಿ :**

ಮಂಗಳಗೌರಿ ವ್ರತ ಸುಮಂಗಲೆಯರು ಕೈಕೊಳ್ಳುವರು ಅದರಲ್ಲಿ ಹೊಸದಾಗಿ ಮದುವೆಯಾದ ಹೆಣ್ಣು ಮಕ್ಕಳ ಐದು ವರ್ಷಗಳವರೆಗೆ ಮಾಡುವ ವ್ರತವಿದ್ದು. ಇದಕ್ಕೆ ಗಂಡಂದಿರನ್ನು ಪ್ರಾಣಾಪಾಯದಿಂದ ಕಾಪಾಡಿದ ಕಥೆಗಳಿವೆ. ಆದ್ದರಿಂದ ಮುತ್ತೈದಿಯರು ತಮ್ಮ ಮಾಂಗಲ್ಯ ಭಾಗ್ಯ ತಮ್ಮ ಸಾವಿನವರೆಗೂ ಇರಲೆಂದು ಈ ವ್ರತ ಮಾಡುವ ಉದ್ದೇಶ ಹೊಂದಲಾಗಿದೆ.

**ಹರತಾಳ ಗೌರಿ :**

ಹರತಾಳ ಗೌರಿ ವ್ರತವು ಹೆಣ್ಣು ಮಕ್ಕಳು ತಮ್ಮ ಅರಿಶಿಣ ಕುಂಕುಮ ಮುತ್ತೈದಿನ ಶಾಶ್ವತವಾಗಿರಲೆಂದು ಕೈಗೊಳ್ಳುತ್ತಾರೆ. ಇದು ಕೂಡಾ ಭಾದ್ರಪದ ಶುದ್ಧತದಿಗೆಯಂದೆ ಅಂದರೆ ಗಣೇಶ ಚತುರ್ಥಿಯ ಮುನ್ನಾ ದಿನ ಬರವುದು. ಈ ವ್ರತದ ಕಥೆಯಲ್ಲಿ ಪಾರ್ವತಿ ಪರಮೇಶ್ವರನಿಗೆ ಮದುವೆಯಾಗಬೇಕೆಂದು ಕಠಿಣ ತಪನ್ನಾಚರಿಸಿ ಬೆಟ್ಟ, ಕಾಡು, ಅಲೆದು ಶಿವನಿಗೆ ಇಷ್ಟವಾದ ಪುಷ್ಪಗಳನ್ನು ತಂದು ಪೂಜಿಸಿ ಶಿವನನ್ನು ಒಲಿಸಿಕೊಂಡಳು ಎಂಬ ನಂಬಿಕೆ ಆದ್ದರಿಂದ ಈ ವ್ರತ ಕೈಗೊಳ್ಳುವವರು ಅಡವಿಯಲ್ಲಿ ಸಿಗುವ ಎಲ್ಲಾ ನಮೂನೆಯ ಪುಷ್ಪಗಳನ್ನು ಹರತಾಳ ಗೌರಿಗೆ ಅರ್ಪಿಸುವರು. ಶಿವನ ಮಡದಿಯಾಗುವ ಅವಕಾಶ ಪಡೆದ ಗೌರಿ ಪರಮೇಶ್ವರ ನೊಂದಿಗೆ ತಮ್ಮ ದಾಂಪತ್ಯದ ಜೀವನಕ್ಕೆ ಸಕಲ ಐಶ್ವರ್ಯಕೊಟ್ಟು ಹರಿಸಲಿ ಎನ್ನುವ ಉದ್ದೇಶವಾಗಿದೆ.

ಈ ಗೌರಿ ವ್ರತಗಳು ಕೇವಲ ಸಮಂಗಲೆಯರ ಸೌಭಾಗ್ಯ ಸೂಚಕ ಎಂದು ಗುರುತಿಸುವವರೆ ಹೊರತಾಗಿ ಇನ್ನಾವುದೇ ಸಾಮಾಜಿಕ ಉಪಯುಕ್ತವಾದ ಅಂಶಗಳೇನೂ ಕಂಡುಬರುವುದಿಲ್ಲ.

**ಗಣೇಶ ಚತುರ್ಥಿ :**

ಗಣೇಶ ಚತುರ್ಥಿಯು ಚೆನಕನ ಅಮವಾಸ್ಯೆಯ ಅಥವಾ ಭಾದ್ರಪದ ಮಾಸದ ಶುಕ್ಲಪಕ್ಷದ ನಾಲ್ಕನೆ ದಿನಕ್ಕೆ ಬರುವುದು. "ವೇದಗಳಲ್ಲಿ ಗಣಪತಿಯ ಪ್ರಸ್ತಾಪವಿಲ್ಲ. ಗಣಪತಿ ನಂತರವೇ ಶುಭಕಾರ್ಯ

ಕೈಗೊಳ್ಳಬೇಕೆಂಬ ಸಂಪ್ರದಾಯದ ಉಲ್ಲೇಖವಿಲ್ಲ. ಕ್ರಿಸ್ತಶಕ ಆರನೇ ಶತಮಾನದವರೆಗಿನ ಯಾವುದೇ ಬಗೆಯ ದಾಖಲೆಗಳಲ್ಲಿ ಗಣಪತಿಯ ಬಗ್ಗೆ ಪ್ರಸ್ತಾಪವಿಲ್ಲ[೪೬] ಎಂದು ಡಾ.ಬಿ.ಎಸ್.ಸ್ವಾಮಿಯವರು "ಪೌರಾಣಿಕ ಗಣಪತಿ ಕ್ರಿ.ಶ. ೧ನೇ ಶತಮಾನದಲ್ಲಿ ತಿಳಿಸಿದ್ದಾರೆ. ರಚಿತವಾದ ಗೋಭಿಲ, ಸ್ಮೃತಿ, ಬೋಧಾಯನ, ಧರ್ಮಸೂತ್ರ ಮುಂತಾದ ಗ್ರಂಥಗಳಲ್ಲಿ ಗಣಪತಿಗೆ ಆನೆಯ ಮುಖದ ಉಲ್ಲೇಖ ಬರುತ್ತದೆ[೪೭] ಎಂದು ತಿಳಿಸುತ್ತಾರೆ.

ಕಾಲದ ಬಗ್ಗೆ ನಿಖರತೆಯಿರದಿದ್ದರೂ ಗಣೇಶನನ್ನೂ ಪೂಜಿಸುವುದು ಮಾತ್ರ ಬಹಳ ಹಿಂದಿನಿಂದಲೂ ಎಂಬುದನ್ನು ಮರೆಯುವಂತಿಲ್ಲ. ಗಣೇಶನನ್ನು ವಿನಾಯಕ ವಿಘ್ನೇಶ್ವರ ಎನ್ನುವುದಲ್ಲದೆ ಸುಮಾರು ೬೨ ನಮೂನೆಯ ಗಣಪತಿಗಳನ್ನು ಸಂಶೋಧಕರು ವಿಶ್ವದಾದ್ಯಂತ ಗುರುತಿಸಿದ್ದಾರೆ ಇತನ ಕುರಿತು ಅನೇಕ ದಂತ ಹಾಗೂ ಪೌರಾಣಿಕ ಕಥೆಗಳಿವೆ.

ಪಾರ್ವತಿದೇವಿಯ ಮಣ್ಣಿನಿಂದ ಅವತರಿಸಿದವನೇ ಗಣೇಶ ಎಂಬುವುದೊಂದು ಲೋಕಕಥೆ. ಪಾರ್ವತಿ ದೇವಿಯ ಅವತಾರಗಳಲ್ಲಿ ಭೂದೇವಿಯೆಂದು ಗುರುತಿಸುವುದರಿಂದ ಭೂಮಿಯ ಮಣ್ಣಿನಿಂದ ತಯಾರಿಸಿದ ಪಾರ್ವತಿ ಪುತ್ರ ಅಂದರೆ ಮಣ್ಣಿನ ಮಗ ತಾಯಿಸ್ನಾನ ಮಾಡುವಾಗ ಯಾರಿಗೆ ಬಿಡದೆ ಬಾಗಿಲು ಕಾಯುತ್ತಿರಲು ಶಿವನು ಬರುವುದನ್ನು ತಡೆದಾಗ ಶಿವನು, ಮಗನೆಂದು ಅರಿಯದೆ ಅವನ ತಲೆ ಕತ್ತರಿಸಿದ ನಂತರ ಉತ್ತರ ದಿಕ್ಕಿಗೆ ತಲೆ ಮಾಡಿ ಮಲಗಿದ ಆನೆ ಮುಖ ತಂದು ಕೂರಿಸಿದಾಗ ಗಜಮುಖನಾದ. ಗಣಪತಿ ಯಾವುದೇ ಮತ, ಪಂಥ ಅಥವಾ ಸಂಪ್ರದಾಯಗಳ ದೇವರಲ್ಲ; ಚತುರ್ಥಿಯೆಂದು ತಳಿರು ತೋರಣಗಳಿಂದ ಅಲಂಕರಿಸಿ ಗಣಪತಿಯನ್ನು ಕೂರಿಸಲು ವಿಶೇಷ ಮಂಟಪ ಹೂ, ತಳಿರು, ತೋರಣ, ಕಬ್ಬು ಬಾಳಿದಿಂಡು ಮತ್ತು ದೀಪಗಳ ಮೂಲಕ ಅಲಂಕರಿಸುವರು.

**ಗಣೇಶ ಚತುರ್ಥಿ ಕುರಿತು ನಂಬಿಕೆಗಳು ಹೀಗಿವೆ.**

**೧) ಗಣೇಶ ಚತುರ್ಥಿ ದಿವಸ ರಾತ್ರಿ ಚಂದ್ರನನ್ನು ನೋಡಬಾರದು:**

ಭರ್ಜರಿ ಊಟ ಮಾಡಿ ಇಲಿಯ ಸವಾರಿ ಮೇಲೆ ಹೊರಟಿರುವ ಗಣಪತಿ ಹಾವು ಕಂಡು ಹೆದರಿದ ಇಲಿಯಿಂದಾಗಿ ಗಣೇಶ ಬಿದ್ದುದನ್ನು ಕಂಡು ನಕ್ಕ ಚಂದ್ರ ಗಣಪತಿಯಿಂದ ಶಾಪಕ್ಕೊಳಗಾದನು. ಈ ದಿನ ಚಂದ್ರನನ್ನು ನೋಡಿದವರಿಗೂ ಶಾಪ ತಟ್ಟುತ್ತದೆ. ಆದ್ದರಿಂದ ಚಂದ್ರದರ್ಶನ ನಿಷೇಧ ಎಂಬ ನಂಬಿಕೆಯಿದೆ.

ಇಂದಿನ ಸಂಜೆ ಮಕ್ಕಳು ಗಣಪತಿಯನ್ನು ನೋಡುವ ಸಂಬಂಧದಿಂದ ಮನೆಬಿಟ್ಟು ಹೋಗದಿರಲೆಂದು ನಂಬಿಕೆಯಿರಬೇಕು. ಆಕಸ್ಮಿಕವಾಗಿ ಚಂದ್ರನನ್ನು ನೋಡಿದರೆ ಸ್ಯಮಂತೋಪಕ್ಯಾನ ಕಥೆಯನ್ನು ಓದಿ ಗಣಪತಿಗೆ ನಮಸ್ಕಾರವನ್ನು ಮಾಡಿದರೆ ಇದು ಪರಿಹಾರವಾಗುತ್ತದೆಯೆಂದು ಪುರಾಣಗಳಲ್ಲಿ ಹೇಳಿದೆ.

**೨) ಗಣೇಶನಿಗೆ ಕರಿಕಿ ಶ್ರೇಷ್ಠ :**

ಮಳೆಗಾಲವಾದ್ದರಿಂದ ಸೊಂಪಾಗಿ ಬೆಳೆದ ಕರಿಕೆ ಗಣೇಶನಿಗೆ ಪ್ರಿಯವಾದದ್ದು ಎಂಬ ನಂಬಿಕೆಯಿದೆ. ಕೊಬ್ಬರಿ ಬೆಲ್ಲ, ಕಡುಬು, ಮೋದಕ, ಲಡ್ಡು ಹೀಗೆ ಸಿಹಿ ತಿಂಡಿಗಳನ್ನು ತಿಂದು ಡೊಳ್ಳು ಹೊಟ್ಟೆ ಗಣಪ

೪೬ (ಅಡಿಟಿಪ್ಪಣಿ: ೪೬: ಮೂಢನಂಬಿಕೆಗಳನ್ನು ಕೈಬಿಡಬೇಡಿ ಲೇಖಕರು ಕೆ.ಆರ್.ಕೃಷ್ಣಮೂರ್ತಿ ಪುಟ ಸಂಖ್ಯೆ-೬೨)
೪೭ (ಅಡಿಟಿಪ್ಪಣಿ: ೪೭: ಜಾನಪದ ಐಸಿರಿ ಲೇಖಕರು ಡಾ.ಬಿಎಸ್.ಸ್ವಾಮಿ ಪುಟ ಸಂಖ್ಯೆ: ೧೮೦)

ಎನಿಸಿದ್ದಾನೆ. ಭರ್ಜರಿ ಊಟದಿಂದ ಹೊಟ್ಟೆ ಭಾರವಾಗಿರುವುದು ಅದನ್ನು ಜೀರ್ಣಿಸಿ ಕೊಳ್ಳಲು ಕರಿಕಿ ಉಪಯೋಗಿಸಿರಬೇಕು. ಹೆಚ್ಚಿನ ಆಹಾರಕ್ಕೆ ಹೆಚ್ಚಿನ ಕರಿಕಿ ಬೇಕಾದ್ದರಿಂದ ೨೧ ಕರಿಕಿ ಸೂಡುಗಳು ಆತನಿಗೆ ಪ್ರಿಯ ಎಂದು ಹೇಳಲಾಗುವುದು. ಏಕೆಂದರೆ ಕರಿಕಿಯಲ್ಲಿ ಜೀರ್ಣಶಕ್ತಿಯಿದೆ. ನಾಯಿ ತನ್ನಲ್ಲಿ ಹೊಟ್ಟೆ ನೋವಾದಾಗ ಕರಿಕಿ ತಿಂದು ಜೀರ್ಣಿಸಿಕೊಳ್ಳುತ್ತದೆ. ಹಾಗೂ ಕೊಬ್ರಿ ಎಣ್ಣೆಯಲ್ಲಿ ಕರಿಕಿಯ ರಸ ಮಿಶ್ರಣ ಮಾಡಿ ತಲೆಗೆ ಹಚ್ಚಿ ಎಳೆಬಿಸಿಲಿನಿಂದ ಸ್ವಲ್ಪ ಹೊತ್ತು ಕಾಯಿಸಿ ತಲೆಸ್ನಾನ ಮಾಡಿದರೆ ನೇತ್ರರೋಗ ನಿವಾರಣೆಯಾಗುತ್ತದೆ. ಕಣ್ಣಿಗೆ ಐರಿ (ಒಂದೆ ಕಣ್ಣು ಉಬ್ಬಿ ಕೆಂಪಾಗುವುದು) ಆದಾಗ ಕರಿಕಿಯಿಂದ ಸೂರ್ಯೋದಯ ಮತ್ತು ಸೂರ್ಯಾಸ್ತದ ಎಳೆಬಿಸಿಲನಲ್ಲಿ ಕಣ್ಣಿಗೆ ಸ್ಪರ್ಶಿಸಿ ಮೂರು ಬಾರಿ ಇಳಿಸಿ ಕರಿಕೆ ಬಾವಿಯಲ್ಲಿ ಬಿಸಾಡುವುದು. ಗ್ರಹಣ ಹಿಡಿದಾಗ ಬಣ್ಣ ಆಹಾರ ತಿನಿಸು, ಪದಾರ್ಥಗಳಲ್ಲಿ ಕರಿಕೆ ಹಾಕುವರು. ಗ್ರಹಣ ಸಂದರ್ಭದಲ್ಲಿ ಕರಿಕಿ ಹಾಕಿಟ್ಟು ನೀರು ಆಮೇಲೆ ಹಾಗೆ ಉಪಯೋಗಿಸಲು ಬರುತ್ತವೆಂದು ನೀರಿನಲ್ಲಿ ಕಿರಿಕಿ ಹಾಕುವುದುಂಟು ಹೀಗೆ ಕರಿಕೆಯು ಒಂದು ಉಪಯುಕ್ತವಾದ ಸಸ್ಯವಾಗಿದೆ. ಹಾಲು ಕೊಡುವ ಹಸು, ಎಮ್ಮೆ ಕರಿಕೆ ಹೆಚ್ಚಾಗಿ ತಿಂದಷ್ಟು ಹಾಲು ಹೆಚ್ಚಿಗೆ ಕೊಡುತ್ತದೆ. ಇದರಿಂದ ಅನೇಕ ಉಪಯೋಗಗಳಿರುವುದು.

**೩) ನೈವೇದ್ಯ ಸೇರಿದಂತೆ ಇತರೆಲ್ಲವು ೨೧ ರಂತೆ ಅರ್ಪಿಸುವುದು :**

ದೇಹದಲ್ಲಿ ೨೧ ಜ್ಞಾನೇಂದ್ರಿಯಗಳು ಸದಾ ಕೆಲಸ ಮಾಡುತ್ತಿರುತ್ತವೆ. ಗಣಪತಿ ಅರ್ಪಿಸುವ ಪ್ರತಿಯೊಂದರಲ್ಲಿ ಸಂಪೂರ್ಣ ಜ್ಞಾನೇಂದ್ರಿಯಗಳು ಪಾಲ್ಗೊಂಡಿರಬೇಕೆಂಬುದು ಆಗಿದೆ. ಅದರೊಂದಿಗೆ ಅವನಿಗೆ ಅರ್ಪಿಸುವ ಕಡುಬು, ಗರಿಕೆ ಸೂಡು, ಹಾಗೂ ಎರಡು ಕೈಯಿ ಕಿವಿ ಹಿಡಿದು ಏಳು ಕೂಡು ೨೧ ಸಲ ಮಾಡುವ ನಂಬಿಕೆಯಿದೆ. ಏಳು ಕೂಡು ಮಾಡುವುದರಿಂದ ಆರೋಗ್ಯಕ್ಕೆ ಒಳ್ಳೆಯ ವ್ಯಾಯಾಮ ಸಿಗುತ್ತದೆ.

**೪) ಎಲ್ಲಾ ಪೂಜೆಗಳಲ್ಲೂ ಗಣೇಶನಿಗೆ ಮೊದಲ ಆದ್ಯತೆ :**

ಶಿವ ಪಾರ್ವತಿಯರು ಗಣಪತಿ ಮತ್ತು ಷಣ್ಮುಖನನ್ನು ಪರೀಕ್ಷಿಸಲು ಯಾರು ಮೊದಲು ಈ ಲೋಕವನ್ನು ಸುತ್ತಿ ಬರುವುದಾಗಿ ತಿಳಿಸಿದಾಗ ಷಣ್ಮುಖ ನವಿಲೇರಿ ಸುತ್ತು ಹಾಕಲು ಹೊರಟರೆ, ಗಣೇಶ ತನ್ನ ತಂದೆ ತಾಯಿಗಳೆ ಲೋಕದ ನಾಯಕರು ಇವರಿಗೆ ಸುತ್ತು ಹಾಕಿದರೆ ಲೋಕವನ್ನು ಸುತ್ತಿದಂತೆ ಎನ್ನುವನು. ಅವನ ಸೂಕ್ಷ್ಮ ಬುದ್ಧಿಮತ್ತೆಯಿಂದಾಗಿ ಶಿವನು ಅಂದಿನಿಂದ ಎಲ್ಲಾ ಪೂಜೆಗೆ ಮೊದಲು ಗಣೇಶನ ಪೂಜೆಗೆ ಆದ್ಯತೆ ನೀಡಬೇಕೆಂದು ಆದೇಶ ಕೊಟ್ಟನೆಂಬ ನಂಬಿಕೆಯಿಂದ ಗಣೇಶನ ಪೂಜೆಯೇ ಮೊದಲು ಮಾಡುವರು. ಮತ್ತು ವಿದ್ಯೆಗೆ ಒಡೆಯನಾದನು ಅದಕ್ಕಾಗಿ ವಿದ್ಯೆ ಆರಂಭಿಸುವ ಮುಂಚೆ ಗಣೇಶ ಶ್ಲೋಕ ಹೇಳುವ ನಂಬಿಕೆಯಿದೆ.

**ಸಂಕುಷ್ಟ ಚತುರ್ಥಿ :**

ಸಂಕಷ್ಟ ಚತುರ್ಥಿ ತಿಂಗಳಿಗೊಮ್ಮೆ ಹುಣ್ಣಿಮೆಯ ನಂತರ ೩ ಅಥವಾ ೪ ನೇ ದಿವಸದಲ್ಲಿ ಬರುವುದು. ಹಗಲೆಲ್ಲಾ ಉಪವಾಸ ಮಾಡಿ ಚಂದ್ರದರ್ಶನ ಮಾಡಿಯೇ ಗಣೇಶನನ್ನು ಪೂಜಿಸಬೇಕೆಂಬ ಪ್ರತೀತಿಯಿದೆ. ಶುಕ್ಲ ಪಕ್ಷದ ಚಂದ್ರ ದರ್ಶನ ನಿಷೇಧವಿದ್ದರೆ ಕೃಷ್ಣ ಪಕ್ಷದ ಚಂದ್ರದರ್ಶನ ಮಾಡಬೇಕೆಂಬುದಾಗಿದೆ.

ಅದರಲ್ಲೂ ಶ್ರಾವಣದ ಮಂಗಳವಾರ ಸಂಕಷ್ಟ ಚತುರ್ಥಿಯ ಗಣೇಶನ ಪೂಜೆ ಮತ್ತು ಚಂದ್ರದರ್ಶನ ಮಾಡಿದರೆ, ಪುಣ್ಯಕ್ಕೆ ಎಣೆಯೇಯಿಲ್ಲ ಎಂಬ ನಂಬಿಕೆಯಿಂದ ಇಂದು ಕೂಡಾ ಕರಿಕಿ, ಮೋದಕ ಅರ್ಪಿಸುತ್ತಾರೆ. ತಿಂಗಳಿಗೊಮ್ಮೆ ಉಪವಾಸ ಆರೋಗ್ಯಕ್ಕೆ ಒಳ್ಳೆಯದು.

**ಅಷ್ಟಮಿ :**

ಭಾದ್ರಪದ ಮಾಸದ ಎಂಟನೆ ದಿನ ಅಷ್ಟಮಿಯಂದು ಲಕ್ಷ್ಮೀ ಪೂಜೆ ಮತ್ತು ದಾರ ಕಟ್ಟಿಕೊಳ್ಳುವುದನ್ನು ಆಚರಿಸಲಾಗುವುದು. ಅಷ್ಟಮಿಯ ದಿನ ಮನೆಯೆಲ್ಲಾ ಸಾರಣೆ ಮಾಡಿ ತಳೀರು ತೋರಣಗಳಿಂದ ಅಲಂಕರಿಸಿ ಅಭ್ಯಂಜನ ಸ್ನಾನ ಮಾಡಿ ಸಂಜೆ ವೇಳೆಗೆ ಲಕ್ಷ್ಮೀಯನ್ನು ಅಲಂಕಾರಗೊಳಿಸಿ ಪೂಜಿಸುವರು. ಈ ಆಚರಣೆ ಎಲ್ಲರಲ್ಲಿಯೂ ಇರದೆ ಈ ಹಿಂದೆ ಅನುಸರಿಸಿದ ಮನೆತನಗಳಲ್ಲಿ ಮಾತ್ರ ಕಂಡುಬರುವುದು. ಆದ್ದರಿಂದ ಈ ಆಚರಣೆ ಮಾಡುವವರು ನಾಲ್ಕಾರು ಜನಕ್ಕೆ ಊಟಕ್ಕೆ ಕರೆಯುವರು. ಇದು ನಾಲ್ಕಾರು ಜನಕ್ಕೆ ಅನ್ನದಾನ ಮಾಡಿದಂತೆ ಎನ್ನುವ ನಂಬಿಕೆ ಒಂದಾದರೆ. ಊಟಕ್ಕೆ ಬಂದವರಿಂದ ಏನನ್ನಾದರೂ ವಸ್ತು ಇಡಲು ಹೇಳುತ್ತಾರೆ ಕೊನೆ ಪಕ್ಷ ಉಟ್ಟ ಬಟ್ಟೆಯ ದಾರದ ಎಳೆಯಾದರೂ ಇಟ್ಟು ಹೋಗಲು ಹೇಳುವರು. ಒಬ್ಬಳೆ ಮನೆ ಲಕ್ಷ್ಮೀ ಎಲ್ಲರ ಮನೆಗೂ ಹೋಗಲು ಸಾಧ್ಯವೆ ಅಥವಾ ಬಂದವರಲ್ಲಿ ಯಾರೊಬ್ಬರ ಮೂಲಕ ಹೋಗಬಹುದೆಂಬ ಭಯ, ಆದ್ದರಿಂದ ಇಂದಿನ ದಿವಸ ಪ್ರತಿ ವಸ್ತುವಿನಲ್ಲಿ ಲಕ್ಷ್ಮೀ ಇರುತ್ತಾಳೆಂಬ ನಂಬಿಕೆಯಿಂದ ಮತ್ತು ರಾತ್ರಿ ಲಕ್ಷ್ಮೀ ಮನೆಗೆ ಬರುವಳೆಂಬ ನಂಬಿಕೆಯಿಂದ ಭಜನೆ ಹಾಕುತ್ತಾ, ಹಾಡು ಹೇಳುತ್ತಾ ಜಾಗರಣೆ ಮಾಡುವರು, ಆದರೆ ಇದರ ಬದಲಾಗಿ ಇತ್ತೀಚಿನ ದಿನಗಳಲ್ಲಿ ಇಸ್ಪೇಟ್ ಆಡುವುದು, ಸಿನೆಮಾ ನೋಡುವುದರ ಮೂಲಕ ಜಾಗರಣೆ ಮಾಡುವುದು ಕಂಡುಬರುತ್ತದೆ.

ಮರುದಿವಸ ೧೬ ಬಗೆಯ ವಿವಿಧ ತರಕಾರಿಯಿಂದ ಪಲ್ಯ, ಹೋಳಿಗೆ, ಹುಗ್ಗಿ ಮುಂತಾದ ಬಗೆಯ ಅಡುಗೆ ಸಿದ್ದಪಡಿಸಿ, ಹೊಸ ಹೊಸ ಬಟ್ಟೆಗಳ ಉದ್ದನೆಯ ತುಂಡುಗಳನ್ನು ದಾರದ ರೀತಿಯಲ್ಲಿ ಹೊಸೆದು ೧೬ ಗಂಟು ಹಾಕಿ ಅರಿಶಿಣದಲ್ಲಿ ಅದ್ದಿ ಅದನ್ನು ಲಕ್ಷ್ಮಿ ಮುಂದಿಟ್ಟು ಪೂಜಿಸಿ ಕೊರಳಿನಲ್ಲಿ ಮನೆಯಲ್ಲಿರುವ ಹಿರಿಯರೊಬ್ಬರು ಹಾಕಿಕೊಳ್ಳುವರು. ಹಾಕಿಕೊಂಡವರು ತಮ್ಮ ಹೊಲಗಳಿಗೆ ಯಾರ ಜೊತೆ ಮಾತಾಡದೆ ಮೌನವಾಗಿ ಹೋಗಿ ಹೊಲದಲ್ಲಿರುವ ಬೆಳೆಗಳ ಮಧ್ಯ ಓಡಾಡಿ ಬರುವ ಉದ್ದೇಶವೆಂದರೆ ಲಕ್ಷ್ಮೀ ಪ್ರತಿ ರೂಪವಾಗಿ ದಾರ ಹಾಕಿಕೊಳ್ಳುವುದರಿಂದ ಅಂದು ಮನೆ ಮತ್ತು ಹೊಲದ ತುಂಬಾ ಲಕ್ಷ್ಮೀ ಓಡಾಡಿದರೆ ಶಾಂತಿ, ಸಿರಿ ಸಂಪತ್ತು, ಸುಖ ಸಂತೋಷ ಸಕಲೈಶ್ವರ ದೊರಕುವುದೆಂಬ ನಂಬಿಕೆ ಇದನ್ನು ದಾರಕಟ್ಟಿ ಕೊಳ್ಳುವ ದಿನ ಎಂದು ಕರೆಯುತ್ತಾರೆ. ಒಂದು ವೇಳೆ ತಾವು ಧರಿಸಿದ ದಾರ ಆಕಸ್ಮಿಕವಾಗಿ ಕಳಚಿ ಬಿದ್ದರೆ ಇವರು ಅನುಸರಿಸುವ ಪದ್ಧತಿ ನಿಲ್ಲುತ್ತದೆ ಮತ್ತು ಅದು ಯಾರಿಗೆ ಸಿಕ್ಕಿರುತ್ತದೆಯೋ ಅವರ ಮನೆಯಲ್ಲಿ ದಾರಕಟ್ಟಿಕೊಳ್ಳುವ ಹೊಸ ಪದ್ಧತಿ ಆರಂಭವಾಗುವುದು. ದಾರ ಬಿಡುವುದು ಅವರವರ ಅನುಕೂಲತೆ ನೋಡಿಕೊಂಡು ಇನ್ನೊಂದು ದಿನ ಬಿಡುವರು.

**ಅನಂತ ಹುಣ್ಣಿಮೆ:**

ಗ್ರಾಮೀಣರ ಬದುಕಿನಲ್ಲಿ ತಮ್ಮ ಭಯದಿಂದಾಗಿ ಮತ್ತು ಪ್ರದೇಶಕ್ಕನುಗುಣವಾಗಿ ಹಲವಾರು ದೇವತೆಗಳು ಪೂಜೆಗೊಳ್ಳುವುದುಂಟು ಹುಣ್ಣಿಮೆ, ಅಮವಾಸ್ಯೆಗಳಿಗೊಮ್ಮೆ ಪೂಜೆಗೊಳ್ಳುವ ಇಂತಹ ಅನೇಕ ದೇವತೆಗಳಿಗೆ

ತಮ್ಮದೆ ಗುಡಿಗಳಿಲ್ಲ. ಇವರ ಆಚರಣೆ ಏನಿದ್ದರೂ ವರ್ಷದ ಆ ದಿನಗಳಲ್ಲಿ ಆಚರಣೆಗೊಂದು ಮಾಯವಾಗುವವು. ಗ್ರಾಮೀಣ ಬದುಕಿನ ಕೆಳವರ್ಗದ ದೇಸಿ ದೈವಿಗಳಾಗಿ ಶೀಗಿ, ಗೌರಿ, ಗುಳ್ಳವ್ವ, ಕೊಂತೆವ್ವ, ಪಾಂಡವರು, ಕಾಮಣ್ಣ, ಜೋಕುಮಾರ ಹೀಗೆ ಅನೇಕರಿದ್ದಾರೆ. ಇವರಿಗೆ ಕಲ್ಲಿನ ವಿಗ್ರಹದಲ್ಲೂ ರೂಪಿಸದೆ ಹೆಂಡಿ, ಮಣ್ಣಿನ, ರೂಪದಲ್ಲಿ ಸೃಷ್ಟಿಸಲಾಗುತ್ತದೆ. ಮೇಲ್ವರ್ಗದ ಜನ ಇಂತಹ ದೇವತೆಗಳನ್ನು ಆರಾಧಿಸುವುದಕ್ಕಾಗಲಿ ಪಡಿ ಪದಾರ್ಥಗಳನ್ನು ಕೊಟ್ಟು ಗೌರವಿಸುವುದಕ್ಕಾಗಲಿ ಕಾರಣಗಳೆಂದರೆ, ಆ ದೇವತೆಗಳು ಕ್ಷುದ್ರವೆಂಬ ಕಲ್ಪನೆಯಿದ್ದುದರಿಂದ ತಮಗೆ ಏನಾದರೂ ತೊಂದರೆಕೊಡಬಹುದೆಂದು ಪೂಜಿಸಿ ಆರಾಧಿಸುವದು. ಹಾಗೂ ಕೆಳವರ್ಗದ ಜನರನ್ನು ತಮ್ಮ ಅಂಕಿತದಲ್ಲಿಟ್ಟುಕೊಳ್ಳಬೇಕಾದರೆ ಅವರ ದೇವತೆಗಳನ್ನು ಆರಾಧಿಸಿ. ಪಡಿಪದಾರ್ಥಗಳು ಕೊಟ್ಟು ತಮ್ಮಲ್ಲಿ ಅವರಿಗೆ ವಿಶ್ವಾಸ ಹುಟ್ಟಿಸುವಂತೆ ಮಾಡುವುದು.

ಜೋಕುಮಾರ ಉತ್ತರ ಕರ್ನಾಟಕ ಮತ್ತು ಮಧ್ಯ ಕರ್ನಾಟಕಗಳಲ್ಲಿ ಇಂದಿಗೂ ಪೂಜೆಗೊಳ್ಳುತ್ತಾನೆ. ಇತನ ತಂದೆ ತಾಯಿಗಳು ಯಾರೆಂದು ಖಚಿತವಾಗಿ ಗೊತ್ತಿರದ ಕಾರಣ ವಿವಿಧ ಹೆಸರುಗಳನ್ನು ಗುರುತಿಸುತ್ತಾರೆ. ಲಕ್ಷ್ಮೀ, ಏಳೆಗೌರಿ ಮತ್ತು ದಿಟ್ಟಾದೇವಿ ಮಾರಿ ಎಂದು ಇತನ ತಾಯಿಯ ಹೆಸರುಗಳು ಗುರುತಿಸುತ್ತಾರೆ. ಜೋಕುಮಾರ ನಾರಾಯಣ ಮತ್ತು ಲಕ್ಷ್ಮಿಯರ ಮಗ ಎಂಬುದಕ್ಕೆ ಕಾರಣ ಭಾದ್ರಪದ ಅಷ್ಟಮಿಯ ದಿನ ಲಕ್ಷ್ಮೀ ಪೂಜೆ, ಲಕ್ಷ್ಮೀಗೆ ಗರ್ಭಿಣಿಯ ಬಯಕೆಗಳುಂಟಾಗಿ ಆ ದಿನ ಅಡಿಗೆ ಮಾಡಿ ಅವಳಿಗೆ ಬೇಕು ಬೇಕಾದದ್ದು ತಿನ್ನಿಸುತ್ತಾರೆ. (ಬಳ್ಳೊಳ್ಳಿಯನ್ನು ತಿನ್ನಿಸುತ್ತಾರೆ ಈ ಕಾರಣಕ್ಕಾಗಿ ಅವಳ ಮಗ ಅತಿಕಾಮಿ) ಅದರ ಮಾರನೆ ದಿನ ಜೋಕುಮಾರ ಹುಟ್ಟಿದನೆಂಬ ನಂಬಿಕೆ.

ಇವನು ಜನಿಸಿದ ಬಗ್ಗೆ ಕಥೆಯೊಂದು ಲೇಖಕರು ಹೀಗೆ ತಿಳಿಸುತ್ತಾರೆ. ನರಸಿಂಹ ಕವಿಯ ಅನುಭವ ಶಿಖಾಮಣಿಯ ೧೬ನೇ ಸಂಧಿಯಲ್ಲಿ ಬರುವ ಕಥೆಗೆ ಡಾ. ಚಿದಾನಂದ ಮೂರ್ತಿಯವರು ಸಂಗ್ರಹಿಸಿದ ವಿಷಯಗಳೊಂದಿಗೆ ಸೇರಿಸಿ ಹೇಳಿದ ಕಥೆ ಹೀಗಿದೆ "ಜೋಕ ಎಂಬುವನು ಸಪ್ತರ್ಷಿಗಳಿಗೆ ಮೆಚ್ಚಿನ ಆಳು ಒಂದು ದಿನ ಆ ಪರಮ ಋಷಿಗಳು ಮರ್ತ್ಯಲೋಕದ ನರರ ವೈಭವವನ್ನು ಕುರಿತು ಸುರರು ಅಮೃತವನ್ನು ಮಾತ್ರ ಉಣ್ಣುತ್ತಾರೆಯೇ ಹೊರತು ಎರಡನೆಯದನ್ನು ಅರಿಯರು ಮರ್ತ್ಸರೋ ಪರಮಾನ್ನ ಪಂಚಭಕ್ಷಗಳನ್ನು ಸವಿಯುತ್ತಾರೆ ಅವರು ಜಿಹ್ವಾಲಂಪಟರು, ಅವರು ಪಾಪಿಗಳು ಇತ್ಯಾದಿ ಮಾತಾನಾಡಿಕೊಳ್ಳುತ್ತಿರುವುದು ಜೋಕನು ಕೇಳಿಸಿಕೊಂಡು ಹಿಂದು ಮುಂದು ಯೋಚಿಸಿದೆ ಮರ್ತ್ಯಲೋಕದ ಚಂದದಾಟ ನೋಡುವುದಾಗಿ ಕೇಳಿಕೊಂಡನು. ಅದಕ್ಕೆ ಅವರು ನೀನು ಯಾವಾಗಲೂ ಎಚ್ಚರದಿಂದಿರಬೇಕು. ಷಡ್ರಸೋಪೇತವಾದ ಕೂಳನ್ನು ಮುಂದಿಟ್ಟರೂ ಉಣ್ಣಬಾರದೆಂದೂ, ಬಾಲೆಯರಿಗೆ ಸೋಲಬಾರದೆಂದು ಜೇಗ ಬರುವುದಾಗಿ ಹೇಳಿ ಕಳುಹಿಸಿದರು. ಭೂಲೋಕಕ್ಕೆ ಬಂದ ಜೋಕುಮಾರ ಮಾರಿಗುಡಿಯಲ್ಲಿ ಇಳಿದನು. ಅವನು ರಾಗಬದ್ಧವಾಗಿ ಹಾಡುವುದನ್ನು ಮೆಚ್ಚಿ ಮಾರಿ ರುಚಿಯಾದ ಅಡುಗೆ ಮಾಡಿ ತಂದು ಒತ್ತಾಯದಿಂದ ಬಡಿಸುತ್ತಾಳೆ. ಈ ಸಮಯದಲ್ಲಿ ಮನ್ಮಥನ ಬಾಣಪ್ರಯೋಗದಿಂದ ಅವನು ಅವಳಿಗೆ ಸೋತು ಹೋದ. ಸ್ವಲ್ಪ ಕಾಲದ ನಂತರ ಅವನಿಗೆ ಎಚ್ಚರಿಕವಾಗಿ ತನ್ನ ತಪ್ಪಿನ ಅರಿವಾಯಿತು. ಋಷಿಗಳ ಮಾತನ್ನು ಮೀರಿದ್ದರಿಂದ ನರಕ ಪ್ರಾಪ್ತಿಯಾಯಿತು ಎಂದು ಋಷಿಗಳ ಬಳಿ ಹೋದಾಗ ಒದ್ದು ಬಿಟ್ಟರು. ನಿಮ್ಮ ಪಾದಗಳು ಸೋಕಿದರೆ ನನ್ನ ಕುಲಕೋಟಿಗಳಲ್ಲಿ ಮಾಡಿದ ಪಾಪ ಪರಿಹಾರವಾಗುತ್ತವೆ ಧನ್ಯನಾದೆನು ಎಂದು ವಿನಯದಿಂದ ನುಡಿಯಲು

ಏಳು ದಿನ ಸುಮ್ಮನಿರು. ನಮ್ಮಲ್ಲಿ ಬಂದು ಸೇರುತ್ತೀಯ ಎಂದರು ಇತ್ತಮಾರಿ ಘನ ತರಹದ ಮಗನನ್ನು ಹೆತ್ತಳು. ಅವನು ಹುಟ್ಟಿದ ಕೂಡಲೇ ತನ್ನ ತಂದೆ ಯಾರೆಂದು ಕೇಳಲು ತಾಯಿ ಅವನು ಸತ್ಯ ಸ್ವರ್ಗದ ಪುರುಷ ಅವನು ಎತ್ತ ಹೋದನೋ ತಿಳಿಯದು ಎಂದಾಗ ಮಗ ತಂದೆಯನ್ನು ಹುಡುಕುತ್ತಾ ಹೊರಟಾಗ ಏಳನೇ ದಿನಕ್ಕೆ ಅನಂತರ ಹುಣ್ಣಿಮೆಯು ಬಂದಿತು. ಎಲ್ಲರೂ ಸಡಗರದಿಂದ ಹಬ್ಬ ಮಾಡುತ್ತಿದ್ದರು. ಆ ದಿನ ಅಗಸರೆಲ್ಲರೂ ಕೂಡಿಕೊಂಡು ಮನೆ ಮನೆಗೆ ಬೇಡಿ ತಿಂದುಕೊಂಡು ಅಷ್ಟನ್ನು ಹೆಡಿಗೆಗೆ ತುಂಬಿಕೊಂಡು ಬಂದು ಗಂಗೆಯ ಕಲ್ಲನ್ನು ಪೂಜೆ ಮಾಡಿ ಊಟ ಮಾಡುತ್ತಿರಲು ತಮ್ಮ ಕತ್ತೆಯನ್ನು ಕಾಯಲು ಸುಕರ್ಣಿಕೆ ಎಂಬ ಹುಡಗಿಯನ್ನು ಕಾಯಲು ಕಳುಹಿಸಿದರು. ಹುಡಗಿ ನಿಂತಿರುವಾಗ ಆತ ಬಂದು ಆಕೆಯನ್ನು ಪೀಡಿಸಲು ಅವಳು ಕೂಗಿದ ತಕ್ಷಣ ಅಗಸರೆಲ್ಲರು ಬಂದು ಹೊಡೆಯುತ್ತಾ ಕೊಲ್ಲು ಕೊಲ್ಲು ಎಂದು ಕೂಗುತ್ತ ಕಲ್ಲಿನ ಬಂಡೆ ಕೆಳಗೆ ಹಾಕಿದರು. ಕ್ಷಣದಲ್ಲಿ ಸಪ್ತರ್ಷಿಗಳು ಜೋಕನನ್ನು ಕೂಡಿಕೊಂಡರು. ಅದಕ್ಕೆ ಕಾರಣವಷ್ಟೆ; ಜೋಕನ ಇಂದ್ರಿಯವು ಮಾರಿಯನ್ನು ಪ್ರವೇಶಿಸಿದ್ದರಿಂದ ಜೋಕುಮಾರನು ಜನಿಸಿದನು. ಇವನು ತನ್ನ ಇಂದ್ರಿಯವನ್ನು ಸುಕರ್ಣಿಕೆಯಲ್ಲಿ ಬಿಟ್ಟನು. ಇವನನ್ನು ಬಡಿದಾಗ ಇಂದ್ರೀಯವು ಹೋಯಿತು. ಜೋಕನನ್ನು ಅಲ್ಲಿಯ ಋಷಿಗಳು ಕೂಡಿಕೊಂಡನು. ಅವನಿಗೆ ತಾಯ್ತಂದೆಗಳು ಹೆಸರಿಡಲಿಲ್ಲ. ಜೋಕನ ಮಗ ಜೋಕುಮಾರ ಎಂದು ಭೂಮಿಯಲ್ಲಿ ಹೆಸರಾದನು.[೪೮]

ಇವನು ಹುಟ್ಟಿದ್ದು ಕೋಳಿ ಸಮಾಜದ ಸುಣ್ಣ ಸುಡುವ ವೃತ್ತಿಗಾರರಾದ ಸುಣಗಾರರ ಮನೆತನದಲ್ಲಿ ಹುಟ್ಟಿದನು. ಸುಣಗಾರರನ್ನು ಕಬ್ಬಲೀಗರು ಎಂದು ಕರೆಯುವರು.

ಜೋಕುಮಾರನ ಮಣ್ಣಿನ ಮೂರ್ತಿಮಾಡಿ ಒಂದು ದೊಡ್ಡ ಬುಟ್ಟಿಯಲ್ಲಿ ಬೇವಿನ ಸೊಪ್ಪನ್ನು ತುಂಬಿದ ಬುಟ್ಟಿಯಲ್ಲಿ ಜೋಕುಮಾರನನ್ನು ಕೂಡಿಸುತ್ತಾರೆ. ಆ ಬುಟ್ಟಿಯನ್ನು ಹೊತ್ತು ಇಬ್ಬರು ಸುಣಗಾರರ ಹೆಣ್ಮಕ್ಕಳು ಹಾಡುಗಳನ್ನು ಹಾಡುತ್ತಾ ಮನೆಮನೆಗೂ ಏಳು ದಿವಸ ತಲೆ ಮೇಲೆ ಕಿರೀಟದಂತಹ ತೊಡಿಗೆ, ಹಣೆ ಮೇಲೆ ವಿಭೂತಿ ಪಟ್ಟಿ, ಅರಿಶಿಣ ಕುಂಕುಮ, ದೊಡ್ಡ ಮೀಸೆ ದೊಡ್ಡ ಬಾಯಿ, ಬಾಯಿ ತುಂಬಾ ಬೆಣ್ಣೆ, ಅವನ ಕಾಮುಕತನ ಜೋಕುಮಾರ ಕುರಿತು ಈ ನಂಬಿಕಗಳು ಆಚರಣೆಯಲ್ಲಿವೆ.

**೧) ಜೋಕುಮಾರ ಏಳು ದಿನ ಮಾತ್ರ ಬದುಕಿದ್ದ :**

ಜೋಕುಮಾರ ಹುಟ್ಟಿದ ಕೂಡಲೇ ತನ್ನ ತಂದೆ ಯಾರೆಂದು ತಾಯಿಗೆ ಕೇಳಿದ ಎನ್ನುವ ಮಾತು ನಿಜವೆಂದು ಒಪ್ಪಲು ಸಾಧ್ಯವೆ ಇಲ್ಲ ಹುಟ್ಟಿದ ತಕ್ಷಣ ಮಗು ಮಾತನಾಡಲು ಸಾಧ್ಯವೆ? ಅಲ್ಲದೆ ತಂದೆಯನ್ನು ಹುಡಕಲು ಹೊರಟಿದ್ದು, ಹುಡುಗಿಯನ್ನು ಪೀಡುಸುವಂತಹ ಬುದ್ಧಿಯಾಗಲಿ, ವಯಸ್ಸಾಗಲಿ, ಬೆಳದಿರಲಿಲ್ಲ. ಏಳು ದಿನ ಮಾತ್ರ ಬದುಕಿದ್ದ ಎನ್ನುವ ಜನರ ಕಲ್ಪನೆ ನಿಜವೆಂದು ಹೇಳಲಾಗುವುದಿಲ್ಲ.

**೨) ಜೋಕುಮಾರ ಹೋದ ನಂತರ ಮಳೆ ಬರುತ್ತದೆ :**

ಜೋಕುಮಾರ ಶಿವನಿಗೆ ಭೂಲೋಕದ ಸ್ಥಿತಿ ಕುರಿತು ಹೇಳಲು ಮಳೆಕೊಡುತ್ತಾನೆ. ಆದ್ದರಿಂದ ಜೋಕುಮಾರ ಸತ್ತ ಮೂರು ದಿನಕ್ಕೆ ತಪ್ಪದೆ ಮಳೆಯಾಗುತ್ತದೆಂಬ ನಂಬುಗೆ ಇಂದೂ ಜನರಲ್ಲಿದೆ. ಈ ಮಾತು ನಿಜವೆಂದು ತೋರಿಸಲು ಈ ಅವಧಿಯ ಉತ್ತರಿ ಮತ್ತು ಹಸ್ತ ಮಳೆಗಳು ಬರುವ ಸಾಧ್ಯತೆ ಹೆಚ್ಚಾಗಿರುತ್ತದೆ.

---

೪೮ (ಅಡಿಟಿಪ್ಪಣಿ: ೪೮: ಜನ-ಜನಪದ-ಜಾನಪದ, ಡಾ.ಚಿದಾನಂದ ಮೂರ್ತಿ ಪುಟ ಸಂಖ್ಯೆ ೩೫ ಮತ್ತು ೩೬)

ರೈತರ ಭರವಸೆ ಮಳೆಗಳಾಗಿವೆ. ಈ ಸಮಯದಲ್ಲಿ ಮಳೆಯು ಅವಶ್ಯಕವಾಗಿರುತ್ತದೆ. ಆಗದಿದ್ದರೆ ರೈತರು ಮುಂದೆ ಉಳುಮೆ ಮಾಡುವುದು ಕಷ್ಟವಾಗುತ್ತದೆ.

**೩) ಜೋಕುಮಾರನ ಬಾಯಿ ಬೆಣ್ಣೆ ಕಣ್ಣುಗಳಿಗೆ ಹಚ್ಚಿಕೊಳ್ಳುವುದು :**

ಜೋಕುಮಾರನನ್ನು ಮನೆ ಮನೆಗೆ ಹೊತ್ತು ತಂದಾಗ ಅನುಕೂಲವುಳ್ಳವರು ಬೆಣ್ಣೆಯನ್ನು ಜೋಕುಮಾರನ ಬಾಯಿಗೆ ಹಚ್ಚುತ್ತಾರೆ. ಅವನ ಬಾಯಿಯ ಬೆಣ್ಣೆಯನ್ನು ಕಣ್ಣಿಗೆ ಹಚ್ಚಿಕೊಳ್ಳುತ್ತಾರೆ. ಹಾಗೆ ಮಾಡಿದರೆ ಕಣ್ಣಿಗೆ ರೋಗ ನಿವಾರಣೆಯಾಗುವುದಲ್ಲದೆ, ಕಣ್ಣಿನ ಬೇನೆಯು ಬರುವುದಿಲ್ಲವೆಂಬ ನಂಬಿಕೆಯಿದೆ, ಬೆಣ್ಣೆ ಇತ್ತೀಚಿಗೆ ಬೆಣ್ಣೆ ಸಿಗುವುದೇ ಅಪರೂಪದ ಕಾಲವಾದ್ದರಿಂದ ಕಾಡಿಗೆ ಬುಟ್ಟಿಯಲಿಟ್ಟುಕೊಂಡು ಬರುವರು ಅವರ ಕಣ್ಣಿಗೆ ಹಚ್ಚಿದ್ದ ಕಾಡಿಗೆಯ ಹಚ್ಚಿಕೊಳ್ಳಲು ಕೊಡುವರು.

**೪) ಜೋಕುಮಾರನ ಬುಟ್ಟಿಗೆ ಕಾಳು ಹಾಕಿದ ತಟ್ಟೆ ಖಾಲಿ ಕೊಡುವುದಿಲ್ಲ :**

ಕಾಳು ಹಾಕಿದ ತಟ್ಟೆಯಲ್ಲಿ ನುಚ್ಚು ಅಥವಾ ಬುಟ್ಟಿಯಲ್ಲಿ ಬೇವಿನ ತಪ್ಪಲೊಂದಿಗೆ ಜೋಳದ ಕಾಳು ಹಾಕುವರು. ನುಚ್ಚು ಹುಣ್ಣಿಮೆ ಮರುದಿವಸ ಆ ವರ್ಷ ಬಿತ್ತದ ಬೆಳೆಗೆ ಸಿಂಪಡಿಸುತ್ತಾರೆ. ಆದರಿಂದ ಬೆಳೆ ಚೆನ್ನಾಗಿ ಬರುತ್ತದೆಂಬ ನಂಬಿಕೆ ಹಾಗೂ ಜೋಕುಮಾರ ಲಕ್ಷ್ಮೀಯ ಪುತ್ರರನೆಂಬ ನಂಬಿಕೆಯಿರುವುದರಿಂದ ಆ ಚೆಲ್ಲಿದ ನುಚ್ಚಿನಲ್ಲಿ ತನ್ನ ಸತ್ತ ಮಗನನ್ನು ಹುಡುಕಲು ಬರುವ ನೆಪದಿಂದ ಲಕ್ಷ್ಮೀ ಪದ ಸ್ಪರ್ಶದಿಂದ ಬೆಳೆಗಳು ಸಮೃದ್ಧವಾಗಿ ಬೆಳೆಯುತ್ತವೆಂಬ ನಂಬಿಕೆಯಿದೆ. ಹಾಗೂ ಬೇವಿನ ತಪ್ಪಲು ಮಿಶ್ರಣದ ಜೋಳದ ಕಾಳು ಬಿತ್ತುವ ಬೀಜದಲ್ಲಿ ಹಾಕುತ್ತಾರೆ. ಇದರಲ್ಲಿ ಬೇವಿನ ತಪ್ಪಲು ಇರುವುದರಿಂದ ಬೀಜಕ್ಕೆ ತಗಲುವ ಕ್ರಿಮಿಗಳನ್ನು ನಾಶಪಡಿಸುತ್ತದೆ.

**೫) ಜೋಕುಮಾರನು ಗಣಪತಿಯ ಮುಖ ನೋಡಬಾರದು :**

ಭಾದ್ರಪದ ಅಷ್ಟಮಿಯಂದು ಜೋಕುಮಾರನ ಜನ್ಮವಾದುದರಿಂದ ಗಣಪತಿಗೂ ಇವನಿಗೂ ಕೊಡುವುದು ಸಹಜ. ಆದರೆ ಪರಸ್ಪರವನ್ನು ದರ್ಶನ ಮಾಡಿಸುವುದಿಲ್ಲ. ಇವರಿಬ್ಬರ ಸ್ವಭಾವ ತೀರ ಭಿನ್ನವಾದುದು, ಗಣಪತಿ ರಾಜೈಶ್ವರ್ಯವನ್ನು ಬಯಸುವವನಾದರೆ ಜೋಕುಮಾರ ಸಾಮಾನ್ಯ ಜೀವನವನ್ನೇ ಮೆಚ್ಚುವ ಒಬ್ಬ ಪ್ರತಿಷ್ಠಿತರ ಶ್ರೀಮಂತರ ದೇವರಾದರೆ ಇನ್ನೊಬ್ಬ ಶ್ರೀ ಸಾಮಾನ್ಯರ ಒಕ್ಕಲಿಗರದೇವ. ಆದ್ದರಿಂದ ಇಬ್ಬರಲು ಹೊಂದಿಕೆಯಾಗಲು ಸಾಧ್ಯವಿಲ್ಲ. ವರ್ಗಕಲಹದ ಉದಾಹರಣೆಗಳು ಸಾಕಷ್ಟು ಅದರ ದ್ಯೋತಕವೇ ಇದಾಗಿರಬಹುದು.

**ಅಳ್ಳಬಳ್ಳ :**

ಅನಂತರ ಹುಣ್ಣಿಮೆ ಮರುದಿವಸದಿಂದ ಹನ್ನೆರಡು ದಿವಸದವರೆಗೆ ಪಾಲಿಸುತ್ತಾರೆ. ಈ ದಿನಗಳು ಜೋಕುಮಾರನ ಸೂತಕ ದಿನಗಳಾಗಿರುತ್ತವೆಂಬುವುದು ಜನರ ನಂಬಿಕೆ. ಈ ದಿನಗಳಲ್ಲಿ ಬರುವ ಒಂದು ಶುಕ್ರವಾರ ಸುಳ್ಳು ಶುಕ್ರವಾರ ಮತ್ತು ಒಂದು ಮಂಗಳವಾರ ಮಳ್ಳ ಮಂಗಳವಾರ ಆಗಿರುತ್ತದೆಂಬುದು ನಂಬಿರುವುದಾಗಿದೆ. ಇದಾದ ಬಳಿಕ ಶುಕ್ರವಾರ ಗುಗ್ಗರಿ ಚೀರುವ ಸಂಪ್ರದಾಯವಿದೆ. ಗುಗ್ಗರಿ ಪೂಜೆಯಲ್ಲಿ ತುಂಬಿಟ್ಟ ಬಟ್ಟಲನ್ನು ಮೊದಲು ಸ್ವಾಮಿಗಳಿಗೆ ಕೊಡುವರು.

ಅಂದು ಮನೆಯಲ್ಲಿ ಲಕ್ಷ್ಮೀ ನೆಲೆಸಿರುತ್ತಾಳೆಂಬ ನಂಬಿಕೆಯಿಂದ ಮನೆಯಿಂದ ಯಾವುದೇ ವಸ್ತುಗಳನ್ನು ಕೊಡುವುದಿಲ್ಲ. ಯಾರ ಮನೆಯಲ್ಲಿ ಗುಗ್ಗರಿ ಬೀರುವ ಸಂಪ್ರದಾಯ ಇರುವುದಿಲ್ಲವೋ ಅಂತಹವರ ಮನೆಯಲ್ಲಿ ಹಸು ಕರು ಹಾಕಿದರೆ ಇಲ್ಲವೆ ಮಕ್ಕಳ ಜನನವಾದರೆ ಅಂದಿನಿಂದ ಗುಗ್ಗರಿ ಬೀರಲು ಆರಂಭಿಸುವರು ಮತ್ತು ಅಂದು ಮನೆಯಲ್ಲಿ ಜನಿಸಿದ ಜೀವಿಯನ್ನು ಲಕ್ಷ್ಮಿಯಂದೆ ಭಾವಿಸುವ ನಂಬಿಕೆಯಿದೆ. . ಅಲ್ಲದೆ ಕೃಷಿಗೆ ಸಂಬಂಧಿಸಿದ ಆಚರಣೆ ಈ ದಿನಗಳಲಿ ಅನುಸರಿಸುವರು (ವಿವರಣೆಗೆ ಅಧ್ಯಾಯ-೪ರಲ್ಲಿ ವಿವರಿಸಲಾಗಿದೆ)

**ಮಹಾಲಯ ಅಮಾವಾಸ್ಯೆ : ದಸರಾ**

ಮಹಾಲಯ ಅಮಾವಾಸ್ಯೆ ವೇಳೆಗೆ ವರ್ಷ ಋತು ಅಂತ್ಯಗೊಂಡು ಶರದೃತು ಪ್ರಾರಂಭವಾಗುವುದು. ಇದು ಚಂದ್ರ ಸಂವತ್ಸರದ ದ್ವಿತೀಯಾರ್ಥದ ಪ್ರಾರಂಭವೂ ಹೌದು. ಶರದ ಋತುವಿನ ಆಗಮನವು ಆನಂದಾಯಕವಾಗಿಯೂ ಮನೋಲ್ಲಾಸಕವಾಗಿಯೂ ಇರುವುದು. ಇಂತಹ ಆನಂದದಾಯಕವಾದ ಸಮಯದ ಅಶ್ವೀಜ ಮಾಸದ ಶುದ್ಧ ಪಾಡ್ಯಮಿಯಿಂದ ದಶಮಿಯವರೆಗೆ ಹತ್ತು ದಿನಗಳು ಪ್ರಶಸ್ತವಾದವು. ಮೊದಲ ಒಂಭತ್ತು ದಿನಗಳು ನವರಾತ್ರಿ ಎಂದು ಆಚರಿಸಲಾಗುವುದು. ಹತ್ತನೇ ದಿನ ವಿಜಯದಶಮಿಯಾಗಿರುತ್ತದೆ. ಈ ದಿನಗಳಲ್ಲಿ ಶಕ್ತಿ ದೇವತೆಯನ್ನು ಪೂಜೆ ಮಾಡುವರು. ಈ ಹಬ್ಬ ನಾಡಿನಾದ್ಯಂತ ಆಚರಿಸುತ್ತಾರೆ. ಆದರೆ ನಾಡಿನಾದ್ಯಂತ ಆಚರಿಸುವ ಪದ್ಧತಿಯಲ್ಲಿ ಭಿನ್ನತೆ ಕಂಡುಬರುತ್ತದೆ. ಈ ಶಕ್ತಿದೇವತೆಯನ್ನು ಬೇರೆ ಬೇರೆ ಹೆಸರಿನಿಂದ ಬೇರೆ ಬೇರೆ ಸ್ವರೂಪಗಳಲ್ಲಿ ಕಾಳಿಕಾದೇವಿ ಕರೆದು ಪೂಜಿಸುತ್ತಾರೆ. ನವರಾತ್ರಿಗಳಲ್ಲಿ ದಿನಕ್ಕೊಂದರಂತೆ ರೂಪಗಳನ್ನು ತಾಳಿ ದುಷ್ಟ ಶಕ್ತಿಗಳನ್ನು ಕೊಂದು ಹಾಕಿ ಶಿಷ್ಟರನ್ನು ರಕ್ಷಣೆ ಮಾಡುವಳು ಎಂಬುದನ್ನು ದೇವಿಪುರಾಣ ದಿಂದ ತಿಳಿಯಬಹುದು. ಈ ಒಂಭತ್ತು ಅವತಾರದ ಸಾಧನೆಗಳು ನವರಾತ್ರಿ ದಿನಗಳಲ್ಲಿ ಇಷ್ಟವುಳ್ಳುವರು ದೇವಿಪುರಾಣ ಮೂಲಕ ಓದುವರು.

ಈ ನವರಾತ್ರಿ ಹಬ್ಬಕ್ಕೆ ಪೌರಾಣಿಕ ಕಥೆಯು ಮತ್ತು ವಿಜಯದಶಮಿಯ ಐತಿಹಾಸಿಕ ಹಿನ್ನೆಲೆಗಳುಂಟು. ರಾಜರು ತಮ್ಮ ಸಾಮ್ರಾಜ್ಯ ರಕ್ಷಣೆ ಹಾಗೂ ಜನರ ರಕ್ಷಣೆ ಈ ಶಕ್ತಿದೇವತೆಗಳನ್ನು ಮೊರೆ ಹೋಗಿದ್ದನ್ನು ವಿಜಯನಗರ ಅರಸರಿಂದ ಅರಿಯಬಹುದು. ಅವರೇ ನವರಾತ್ರಿ ಉತ್ಸಾಹ ಆರಂಭಿಸಿದರು. ಮುಂದೆ ಮೈಸೂರಿನ ರಾಜ ಒಡೆಯರು ಮೈಸೂರಿನಲ್ಲಿ ಚಾಮುಂಡೇಶ್ವರಿ ಹೆಸರಿನಲ್ಲಿ ನವರಾತ್ರಿ ಉತ್ಸವ ಆರಂಭಿಸಿದರು. ಈ ಪರಂಪರೆಯ ಆಚರಣೆ ಮೈಸೂರಿನಲ್ಲಿ ಇಂದಿಗೂ ಪ್ರತಿ ವರ್ಷ ವಿಜೃಂಭಣೆಯ ಮೆರವಣಿಗೆಯಾಗುವುದು ಕಂಡುಬರುತ್ತದೆ.

ಬೀದರ ಜಿಲ್ಲೆಯಾದ್ಯಂತ ತುಳಜಾಪುರ ಅಂಭಾಭವಾನಿಯನ್ನು ನಂಬಿದ್ದು ನವರಾತ್ರಿಯಲ್ಲಿ ಈಕೆಯ ಹೆಸರಲ್ಲಿ ಘಟಹಾಕುವುದು ನಂದಾದೀಪ ಬೆಳಗಿಸುವುದು ವಿಶೇಷವಾಗಿದೆ. ದಸರಾ ಹಬ್ಬ ಕುರಿತ ಈ ಭಾಗದ ಜನಪದರ ನಂಬಿಕೆಗಳನ್ನು ಈ ರೀತಿಯಲ್ಲಿ ಆಚರಿಸುವರು.

೧) **ದಸರಾ ಹಬ್ಬಕ್ಕೆ ಮನೆಯೆಲ್ಲಾ ಸ್ವಚ್ಛಗೊಳಿಸಿ ಮಡಿ ಮಾಡುವುದು :**

ಮಳೆಗಾಲದ ಆರಂಭದಿಂದ ಕೃಷಿ ಕೆಲಸದಲ್ಲಿ ತಲ್ಲೀನರಾದ ಕೃಷಿಕ ಕುಟುಂಬಗಳ ಜನರಿಗೆ ಬಿಡುವು ಇಲ್ಲದ ಕೆಲಸ. ಇದರಿಂದಾಗಿ ತಮ್ಮ ಆರೋಗ್ಯಕ್ಕಾಗಲಿ ಅಥವಾ ಮನೆಯ ಸ್ವಚ್ಛತೆ ಕಡೆಗೆಯಾಗಲಿ

ಗಮನಿಸುವುದಿಲ್ಲ. ಆದ್ದರಿಂದ ನವರಾತ್ರಿ ಆಚರಣೆಯ ನೆಪದಿಂದ ಮಳೆಗಾಲಕ್ಕೆ ಸೋರಿರುವ ಕೆಸರಿನ ಗೋಡೆಗಳೆ ಹೆಚ್ಚಾಗಿರುವ ಅಂದಿನ ಮನೆಗಳ ಸ್ಥಿತಿ ಅಧೋಗತಿಯಾಗಿರುತ್ತಿದ್ದವು. ಇವುಗಳಿಗೆ ಕೆಸರು ಮೆತ್ತಿ ಹೆಂಡಿಯಿಂದ ಸಾರಿಸಿ ನಂತರ ಮೇಲೆ ಸುಣ್ಣ ಬಳಿದು ಮನೆ ಸ್ವಚ್ಛಗೊಳಿಸುತ್ತಿದ್ದರು. ತಿಳಿಯಾದ ಮನೆಯ ಜೊತೆ ಪಾತ್ರೆ ಬಟ್ಟೆಯೆಲ್ಲಾ ಸ್ವಚ್ಛಗೊಳಿಸಿಕೊಳ್ಳುತ್ತಿದ್ದರು. ಏಕೆಂದರೆ ಈಗ ಮಳೆ ಕಡಿಮೆಯಾಗಿರುವುದರಿಂದ ಎಲ್ಲವೂ ಇಟ್ಟ ಹಾಗೆ ಸ್ವಚ್ಛವಾಗಿರುತ್ತವೆ ಹಾಗೂ ನವರಾತ್ರಿಯ ಆದಿಶಕ್ತಿ ಬಗ್ಗೆ ಭಕ್ತಿ ಇದ್ದಷ್ಟು ಭಯವು ಹೆಚ್ಚಿರುವುದರಿಂದ ದೇಹ, ಮನೆ, ಮನಸ್ಸುಗಳ ಶುದ್ಧತೆ ಭಾವನೆಯೊಂದಿಗೆ ಮಾಡಿದರೆ ಒಪ್ಪಿಕೊಳ್ಳುವಳು ಇಲ್ಲದಿದ್ದಲ್ಲಿ ನಮ್ಮ ಮೇಲೆ ಯಾವುದೇ ರೂಪದಲ್ಲಿ ಕಿಡಿ ಕಾರುವಳು ಎಂಬ ಭಯದಿಂದಾಗಿ ಈ ಸ್ವಚ್ಛಗೊಳಿಸುವ ನಂಬಿಕೆ ಇದ್ದಿರಬೇಕು. ಒಂಬತ್ತು ದಿವಸ ಘಟ ಹಾಕುವುದು (ಅಧ್ಯಾಯ ೪ ರಲ್ಲಿ ವಿವರಿಸಲಾಗಿದೆ)

**೨) ಒಂಭತ್ತು ದಿನ ದೀಪ ಬೆಳಗುವುದು :**

ಅಂಬಾಬಾಯಿ ಹೆಸರಿನಲ್ಲಿ ಒಂಬತ್ತು ದಿನ ಹಗಲು ರಾತ್ರಿ ನಿರಂತರವಾಗಿ ನಂದಾಜ್ಯೋತಿಯನ್ನು ಬದುಕಿನ ಹಾದಿಯಲಿ ಬರುವ ಕತ್ತಲೆ (ಕಷ್ಟ) ಕಳೆದು ಒಳ್ಳೆ ಮಾರ್ಗ ತೋರಿಸಲಿ ಎಂದು ದೀಪ ಬೆಳಗಿಸುವ ಪದ್ಧತಿ ಬೆಳೆದು ಬಂದಿರುತ್ತದೆ.

ಇನ್ನು ಘಟ ಹಾಕಿರುವುದು ಕೋಣೆಯ ಒಳಭಾಗದಲ್ಲಿರುವ ಜಗುಲಿಯ ಮೇಲೆ ಆದ್ದರಿಂದ ಸಸ್ಯಗಳಿಗೆ ಗಾಳಿ ಬೆಳಕು ಅಗತ್ಯವಾಗಿ ಬೇಕು. ಮತ್ತು ಇಲಿಗಳು ಹಾಕಿರುವ ಕಾಳುಗಳೆಲ್ಲಾ ತಿಂದು ಖಾಲಿ ಮಾಡಿದರೆ ಸಸ್ಯನಾಟುವುದಿಲ್ಲ. ಮುಖ್ಯವಾಗಿ ಇಲಿಗಳು ಸದ್ದುವಿರುವ ಮತ್ತು ಬೆಳಕು ಇರುವ ಕಡೆ ಸುಳಿಯುವುದಿಲ್ಲ. ಈ ಸಣ್ಣ ಪ್ರಮಾಣ ಘಟ ಸ್ಥಾಪನೆಯ ಎಳೆಯ ಸಸ್ಯಗಳಿಗೆ ನಿರಂತರ ದೀಪದ ಉಷ್ಣತೆ ಮತ್ತು ಬೆಳಕು ಸಾಕಾಗುತ್ತದೆ. ಮತ್ತು ಇಲಿಯ ಕಾಟವೂ ತಪ್ಪಿಸಬಹುದು. ಈ ನಂಬಿಕೆಯಿಂದ ಪ್ರಾಯೋಗಿಕವಾದ ಉಪಯುಕ್ತತೆ ಪಡೆದುಕೊಳ್ಳಲಾಗುವುದು.

**೩) ಗೋಡೆಯ ಮೇಲೆ ಒಂಭತ್ತು ಚುಕ್ಕೆಯಿಟ್ಟು ಒಂಭತ್ತು ದಿನ ಪೂಜಿಸುವುದು :**

ಹಿಂದಿನ ಜನರಿಗೆ ಅಕ್ಷರ ಬರೆಯಲು ಬರದಿದ್ದ ಕಾರಣಕ್ಕಾಗಿ ಅವರು ಹಾಲು, ಬೆಣ್ಣೆ ಮಾರಾಟಗಳಂತಹ ವ್ಯವಹಾರಗಳಲ್ಲಿ ಇದ್ದಲಿನಿಂದ ಗೆರೆ ಹಾಕುವುದರಿಂದ ಅಂಕಿ ಸಂಖ್ಯೆಗಳನ್ನು ಲೆಕ್ಕಕ್ಕೆ ಇಡುತ್ತಿದ್ದರು. ಅದೇ ರೀತಿಯಲಿ ಘಟ ಸ್ಥಾಪನೆ ಒಂಭತ್ತು ದಿನ ಕಳೆಯಲು ದಿನ ಒಂದು ಸಾಲಿನಲ್ಲಿ ಒಂಭತ್ತು ಚುಕ್ಕಿಗಳೆಂದು ಪೂಜಿಸುತ್ತಿದ್ದಿರಬೇಕು; ಆದರೆ ಅಕ್ಷರ ಕಲಿತು ಜ್ಞಾನ ಸಂಪಾದಿಸಿದವರು ಅದೇ ಪದ್ಧತಿ ರೂಢಿಸಿಕೊಂಡಿರುವರು, ದಿನಗಳ ಲೆಕ್ಕವಿಡಲು ಮಾಡಿಕೊಂಡ ಒಂದು ಸರಳ ಯೋಜನೆ ಗುರುತಿಸಿಕೊಂಡಿರುವುದಾಗಿದೆ.

**೪) ತರಗಾ ಕಟ್ಟುವುದು :**

ನವರಾತ್ರಿಯಲ್ಲಿ ದೇವಿಗೆ ಒಂದೊಂದು ನಮೂನೆಯ ಅಡುಗೆ ಮಾಡಿ ನೈವೇದ್ಯ ಅರ್ಪಿಸಲಾಗುವುದು. ಅದರಂತೆ ಎಂಟನೆ ದಿನಕ್ಕೆ ತರಗಾ ಕಟ್ಟುವುದು ರೂಢಿಯಲ್ಲಿದೆ. ಇದಕ್ಕೆ ಪೌರಾಣಿಕ ಹಿನ್ನೆಲೆಯೆಂದರೆ ಶುಂಭ ನಿಶುಂಭರೆಂಬ ರಾಕ್ಷಸರು ದೇವಾನುದೇವತೆಗಳಿಗೆ ಉಪಟಳ ಕೊಡುತ್ತಿದ್ದರು. ಆಗ ದೇವತೆಗಳು ಆ ರಾಕ್ಷಸರನ್ನು ಎದುರಿಸಲಾಗದೇ ದೇವಿಯನ್ನು ಮೊರೆ ಹೋದಾಗ, ಚಾಮುಂಡಿಯಾಗಿ ಆ ರಾಕ್ಷಸರನ್ನು ರುಂಡ ಮುಂಡಗಳ

ಸಮೇತವಾಗಿ ಅಂಗಾಂಗಳನ್ನು ಬೇರ್ಪಡಿಸಿದ ಧ್ವಂಸಗೊಳಿಸಿದ ದಿನದ ನೆನಪಿಗಾಗಿ ಗೋಧಿ ಹಿಟ್ಟಿನ ಕಣಕದಿಂದ ಕೈ, ಎಲೆ, ತಾಳಿ, ಬಳಿ, ಸೂರ್ಯ ಚಂದ್ರ, ಕಾಲುಂಗರ ಮುಂತಾದವುಗಳನ್ನು ಮಾಡಿ ಕಟ್ಟುವರು.

೫) **ಹಡಗಿ ತುಂಬುವುದು :**

ಮಹಾನವಮಿ ದಿವಸ ಹಡಗಿ ತುಂಬುವ ಪದ್ಧತಿಯ ಮೂಲಕ ನವರಾತ್ರಿಯ ಕೊನೆ ದಿನದ ಆಚರಣೆಯಾಗಿರುವುದು. ಈ ಋತುವಿನಲ್ಲಿ ಸಿಗುವ ಕಸುಕಿನ ಹುಣಿಸೆಕಾಯಿ, ಮೆಣಸಿನಕಾಯಿ, ಬದನೆಕಾಯಿ, ನವಣೆ, ಹಿಟ್ಟು, ಬೆಲ್ಲ, ಎಣ್ಣೆ ಸಮೇತವಾಗಿ ಇವೆಲ್ಲಾ ಹಡಿಗೆಗೆ ತುಂಬುವರು ಮತ್ತು ಈ ಪಥಾರ್ಥಗಳಿಂದ ಸಿದ್ಧಪಡಿಸಿದ ಕಡುಬು ಹುಳಿಪಲ್ಯ ಹಿಂಡಿಪಲ್ಯ ಬದನೆಕಾಯಿ ಪಲ್ಯ ನವಣೆ ಅಕ್ಕಿಯ ಮುನ್ನ ಮುಂತಾದ ಆಹಾರವು ಅದರಲ್ಲಿ ತುಂಬಲಾಗುವುದು. ಈ ಹಡಲಿಗೆ ತುಂಬಿಕೊಳ್ಳಲು ಬರುವವಳು ಕೆಳಜಾತಿಯ ಮಹಿಳೆಯಾಗಿದ್ದರೂ ಇಲ್ಲಿ ಯಾವುದೇ ಬೇಧ ಭಾವ ಮಾಡುವುದಿಲ್ಲ. ನಂತರ ಆರತಿ ಮಾಡುವಾಗ ಬೇವಿನ ತಪ್ಪಲಿನಿಂದ ಮೈಯಿಗೆ ಬಡಿಯುತ್ತಾ ಉಧೋ ಉಧೋ ಎಂದು ಹೇಳುವಳು.

ಅಂಬಾಬಾಯಿ ಬ್ರಾಹ್ಮಣ ಮನೆತನದವಳು ಬಹಳ ದಿನಗಳವರೆಗೆ ಮದುವೆ ಯಾಗದೆ ಇರುವ ಈಕೆ ಕೆಳವರ್ಗದ ಹುಡುಗನೊಂದಿಗೆ ಮದುವೆಯಾಗಿದ್ದರಿಂದ ಕೊನೆಗೆ ಹಡಗಿಗೆ ತುಂಬುವ ಮೂಲಕ ಅವರಿಗೆ ಒಪ್ಪಿಸಿಕೊಡುವ ಪದ್ಧತಿಯಿದೆ ಎಂದು ನಂಬಿಕೆಯಿರುವುದು.

೬) **ಆಯುಧ ಪೂಜೆ ಮಾಡುವುದು :**

ದೇವಿಯು ದುಷ್ಟ ಶಕ್ತಿಗಳನ್ನು ಸಂಹರಿಸಲು ತನ್ನ ಆಯುಧಗಳನ್ನು ಉಪಯೋಗಿಸಿಕೊಂಡಿದ್ದಳು. ಆದ್ದರಿಂದ ವಿಜಯ ಗಳಿಸಿದ ಖಡ್ಗ, ಬಾಣ, ಇನ್ನಿತರ, ಆಯುಧ ಪೂಜಿಸುವ ನಂಬಿಕೆಯಿಂದ ಇಂದಿಗೂ ತಾವು ಹೊಂದಿರುವ ವ್ಯಕ್ತಿಯಲ್ಲಿ ಸಹಾಯಕವಾಗಿರುವ ಸಾಮಗ್ರಿಗಳನ್ನು ಪೂಜಿಸುವ ಸಂಪ್ರದಾಯವಿದೆ. ರೈತರ ನೇಗಿಲು, ಕೂಡಗೋಲು ಸೇರು ಇನ್ನಿತರ ಅಳೆಯುವ ಸಾಧನಗಳು, ವಿದ್ಯಾರ್ಥಿಗಳ ಪುಸ್ತಕ, ವ್ಯಾಪಾರಿಗಳು ತಕ್ಕಡಿ, ಅಳೆಯುವ ಮಾಪನಗಳು ಹೀಗೆ ಪೂಜಿಸುವ ನಂಬಿಕೆಯಿದೆ.

೭) **ವಿಜಯದಶಮಿ ದಿವಸ ಪಾಂಡವರಿಗೆ ಪೂಜಿಸುವದು : ಬನ್ನಿ ಕೊಡುವುದು**

ಪಾಂಡವರು ವನವಾಸ ಮುಗಿಸಿ ವಿಜಯಶಾಲಿಗಳಾಗಿ ಬಂದ ದಿನವನ್ನೇ ವಿಜಯದಶಮಿ ಎಂದು ಹೇಳಲಾಗುವುದು. ಧೈರ್ಯಶಾಲಿಗಳು, ತ್ಯಾಗ ಮನೋಭಾವದವರು ಅವರ ಒಳ್ಳೆಗುಣ, ಅವರಲ್ಲಿದ್ದ ಸಾಧನೆಯ ಛಲ ತಮ್ಮಲ್ಲು ಬರಲೆಂದು ಹಾಗೂ ಬನ್ನಿಗಿಡದ ಕೆಳಗೆ ಅವರು ಆಯುಧ ಇಟ್ಟಿದ್ದರಿಂದ ಅವರ ನೆನಪು ಉಳಿಯಲೆಂಬ ಕಾರಣಕ್ಕೆ ಮನುಷ್ಯರಾಗಿದ್ದ ಪಾಂಡವರನ್ನು ಕಲ್ಲು ರೂಪಗಳಲ್ಲಿ ಪೂಜಿಸುತ್ತಿರುವುದುಂಟು. ಆದರೆ ಪ್ರಾಚೀನರು ಕಲ್ಲುಗಳಲ್ಲಿ ಮನುಷ್ಯ ರೂಪಕೊಟ್ಟು ದೇವತೆಗಳನ್ನು ಸೃಷ್ಟಿಸಿಕೊಂಡರೆ, ಮುಂದುವರೆದು ಮನುಷ್ಯರಾಗಿದ್ದ ಪಾಂಡವರನ್ನು ಕಲ್ಲು ರೂಪದಲ್ಲಿ ಪೂಜಿಸುವ ಜನರ ಮೌಢ್ಯ ಯಾವ ಹಂತಕ್ಕೆ ತಲುಪಿಸುತ್ತದೆ ಎನ್ನುವುದನ್ನು ಯೋಚಿಸಬೇಕಾಗಿದೆ.

ವಿಜಯದ ಸಂಕೇತವಾಗಿ ಅಂದು ಬನ್ನಿ ಮುಡಿದು ತಮ್ಮ ಬಂಧು ಬಾಂಧವರಲ್ಲಿ ಹಂಚಿಕೊಳ್ಳುತ್ತಾರೆ. ಈ ಬನ್ನಿಯನ್ನು ಬಂಗಾರವೆಂದು ಕರೆಯುವುದುಂಟು. ಇದು ಬ್ರಾಹ್ಮಿ ಮೂಹರ್ತದ ದಿನವಾಗಿದ್ದರಿಂದ ದಿನ

ಪೂರ್ತಿ ಶುಭ ಘಳಿಗೆಯಿರುತ್ತದೆ. ತಮ್ಮ ಬದುಕು ಬಂಗಾರವಾಗಲಿ ಎಂದು ಈ ದಿನ ಬನ್ನಿಕೊಟ್ಟು ಒಬ್ಬರನ್ನೊಬ್ಬರು ಹರ್ಷಿಕೊಳ್ಳುತ್ತಾರೆ.

**ಶೀಗಿ ಹುಣ್ಣಿಮೆ :**

ಜೋಕುಮಾರನ ಏಳು ದಿವಸದ ಆಚರಣೆಯಂತೆ ಶೀಗಿ ಪೂಜೆಯು ಏಳು ದಿನಗಳ ಆಚರಣೆಯಾಗಿದೆ. ಉತ್ತರ ಕರ್ನಾಟಕದಲ್ಲಿ ಆಚರಿಸುವ ಆ ಆಚರಣೆ ನವರಾತ್ರಿಯ ಮಹಾನವಮಿಯೆಂದು ಆರಂಭಗೊಳ್ಳುತ್ತದೆ. ಮುಂದೆ ಬರುವ ಶೀಗಿ ಹುಣ್ಣಿಮೆಯವರೆಗೆ ಆಚರಿಸಲಾಗುವುದು. ಶೀಗಿ ಎಂದರೆ ದೀಪವನ್ನು ಹೊರುವ ಮರದಕಂಬ, ಆರಂಭದ ಆಕಾರದಲ್ಲಿಯೇ ಎರಡು ಮಣ್ಣಿನ ಪ್ರತಿಮೆಗಳು ಈ ಜೋಡು ಪ್ರತಿಮೆಗಳನ್ನು ಜನಪದರು ಶೀಗಿ, ಗೌರಿ ಸಹೋದರಿಯರು ಎಂದು ಹೇಳುತ್ತಾರೆ. ಅವುಗಳ ಜೊತೆ ಕೈಯಿ ಕೈಯಿ ಹಿಡಿದ ಐದು ಚಿಕ್ಕ ಚಿಕ್ಕ ಮಕ್ಕಳೆಂದು ಚಿತ್ರ ತೆಗೆಯುವರು. ಇದಕ್ಕೆ ಪೌರಾಣಿಕ ಹಿನ್ನೆಲೆಯಿರದಿದ್ದರೂ ಜಾನಪದ, ಪರಂಪರೆಯಿಂದ ಆಚರಣೆಗೆ ಬಂದದ್ದಾಗಿದೆ. ಶೀಗಿಯನ್ನು ಎಲ್ಲಾ ಜಾತಿಯವರು ಪೂಜಿಸಿ ಹಾಡುವುದುಂಟು.

**ಶೀಗಿಯ ಆಚರಣೆ ಕುರಿತು ನಂಬಿಕೆಗಳು ಹೀಗೆ ಇವೆ.**

೧) **ಮನೆಯ ಮುಖ್ಯದ್ವಾರ ಬಾಗೀಲು ಮಾಡಗಳಲ್ಲಿ ದೀಪ ಹಚ್ಚಿ ಹಾಡುವುದು: ಚಿತ್ರ ತೆಗೆಯುವುದು:**

ಮನೆಯ ಮುಖ್ಯದ್ವಾರದ ಎರಡು ಬದಿಯಲಿ ಗೋಡೆಯಲ್ಲಿರುವ ಮಾಡಗಳನ್ನು ಶೀಗಿ ಮಾಡಗಳೆಂದೆ ಕರೆಯುವರು. ಹೆಂಡತಿಯಿಂದ ಚಿತ್ರ ಬಿಡಿಸಲಾಗುವುದು. ಏಳು ದಿವಸದ ಅವಧಿಯಲ್ಲಿ ಒಂದೊಂದು ದಿನದ ವಿಶೇಷತೆಯನ್ನು ಪ್ರತಿಬಿಂಬಿಸುವ ಚಿತ್ರಗಳನ್ನು ತೆಗೆಯುತ್ತಾರೆ.

ಮೊದಲನೆಯ ದಿನ ಸೂರ್ಯ, ಚಂದ್ರ ಚುಕ್ಕೆಗಳನ್ನು ರಚಿಸುತ್ತಾರೆ, ಏಕೆಂದರೆ ನಿತ್ಯ ಬದುಕಿನ ಹಗಲು ರಾತ್ರಿ ಕತ್ತಲು ಬೆಳಕು ಸುಖ ದುಃಖ ಆನಂದ ಸೌಂದರ್ಯ ಎರಡನೆ ದಿನ ಗಂಗೆ ಗೌರಿಯರ ಚಿತ್ರ ಬರೆಯಲಾಗುತ್ತದೆ. ಗಂಗೆ ಗೌರಿಯರು ಶಿವನ ಪತ್ನಿಯರು ಗೌರಿಯು ಮಂಗಳವನ್ನುಂಟು ಮಾಡಿ ನಮ್ಮೆಲ್ಲರನ್ನು ಕಾಪಾಡುತ್ತಾಳೆ. ಗಂಗೆ ಎಂದರೆ ನೀರು ಇಲ್ಲವೆ ಜಲದ ಪ್ರತೀಕ. ಈ ಗಂಗೆಯಿಂದಲೇ ಜೀವ ಸ್ವಚ್ಛ ಹಾಗೂ ನಿರ್ಮಲ ಗಂಗೆಯಂತೆ ನಮ್ಮ ಜೀವನ ಸದಾ ನಿರ್ಮಲವಾಗಿರಲಿ ಎನ್ನುವ ನಂಬಿಕೆ.

ಮೂರನೆ ದಿನ ಚೌಕಾಕಾರದ ಬಾರಂಭಾವಿ, ಬಾಳೆಗಿಡ ಮತ್ತು ಕುಂಬಳ ಹೂವಿನ ಚಿತ್ರ ಮತ್ತು ನಾಲ್ಕನೆ ದಿವಸ ಕಬ್ಬಿನ ಜಲ್ಲೆಯನ್ನು ಕಾಯಲು ಒಬ್ಬ ಮನುಷ್ಯನ ಚಿತ್ರ. ಈ ಚಿತ್ರದ ನಂಬಿಕೆಯೆಂದರೆ ಆದಿಮಾನವ ಕ್ರಮೇಣ ಬೇಸಾಯ ಪ್ರಾರಂಭಿಸಿ ಉತ್ತಮ ಜೀವನ ಸಾಗಿಸಲು ತೊಡಗಿದ. ಇವನ ಜೀವನಕ್ಕೆ ಆಧಾರವಾಗಿರುವ ಇವುಗಳನ್ನೇ ದೇವತೆಗಳೆಂದು ನಂಬಿದರು.

ಐದನೆ ದಿವಸ ಹನುಮಂತ ದೇವರು, ಹೂಗಳು, ಅಡಿಕಿಲ ಗಡಿಗೆ ವಸ್ತುಗಳನ್ನಿಡುವ ಚೀಲ ರಚಿಸುತ್ತಾರೆ. ಆರನೆ ದಿನ ಏಳು ಸುತ್ತಿನ ಕೋಟೆ ಚಿತ್ರ ಬರೆಯುವುದು. ಜೀವನ ಎಂಬುವುದು ಏಳು ಸುತ್ತಿನ ಕೋಟೆ! ಇದನ್ನು ದಾಟಿ ಸ್ವರ್ಗ ಪಡೆಯಬೇಕಾದರೆ ದೇವರನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕಾದರೆ ಭವಬಂಧನಗಳನ್ನು ಕಳಚಿಕೊಳ್ಳಬೇಕು ಎನ್ನುವ ಸಂಕೇತವಾಗಿರುವುದು.

ಏಳನೇ ಹಗಲು ಅಂದರೆ ಮುಂಜಾನೆ ವೇಳೆಗೆ ಜಾಜದಿಂದ ಚಿತ್ರಗಳನ್ನು ರಚಿಸುತ್ತಾರೆ. ಈ ಓಂದಿನ ಆರು ದಿನಗಳಲ್ಲಿ ಸೆಗಣಿಯಿಂದ ರೂಪಿಸಿದ ಎಲ್ಲಾ ಚಿತ್ರಗಳನ್ನು ಏಳನೇ ದಿನ ಒಟ್ಟಾರೆ ಎಲ್ಲವೂ ಚಿತ್ರಿಸುತ್ತಾರೆ ಇವುಗಳನ್ನು ಪೂಜಿಸಿ ಅಡವಿಯಲ್ಲಿ ಸಿಗುವ ಕಾರಳು ಮತ್ತು ಕುಕ್ಕೆ ಹೂ ವಿಶೇಷವಾಗಿ ಇಡುತ್ತಾರೆ.

**೨) ಶೀಗಿ ಏಳು ದಿನ ಆಚರಣೆಯಾಗಿರುವುದು.**

ಶೀಗಿ, ಗೌರಿ ಅಕ್ಕ ತಂಗಿಯರು ಇಬ್ಬರು ತವರಿಗೆ ಹಬ್ಬಕ್ಕೆ ಬಂದಿರುವಾಗ ಶೀಗಮ್ಮ ಏಳು ಜನ ಮಕ್ಕಳಿರುವುದರಿಂದ ತವರವರಿಗೆ ಭಾರವಾಗಿರಬಾರದೆಂದು ಸ್ವಲ್ಪ ದಿನಗಳ ಕಾಲ ಉಳಿದು ತನ್ನ ಗಂಡನ ಮನೆಗೆ ಬೇಗನೆ ಹೋಗುತ್ತಾಳೆಂಬ ನಂಬಿಕೆಯಿರುವುದು.

**೩) ಶೀಗಮ್ಮಳಿಗೆ ಅಡವಿಯಲ್ಲಿ ಸಿಗುವ ಹೂಗಳನ್ನೇ ಹೆಚ್ಚಾಗಿ ಮುಡಿಸುವುದು:**

ಜೋಕುಮಾರನ ವಿವರಣೆಯಲ್ಲಿ ತಿಳಿಸಿದಂತೆ ಶೀಗಿ ಗ್ರಾಮೀಣ ಬದುಕಿನ ಕೆಳವರ್ಗದ ದೇವತೆ ಎಂಬ ನಂಬಿಕೆಯಿಂದ ಮೇಲುವರ್ಗದ ಜನತೆ ಕೆಳವರ್ಗ ದೇವತೆ ಎಂದು ಹಿಡಿಯಲು ಆಗಿದೆ, ಕಾಡುವಳೇನೋ ಎಂಬ ಭಯದಿಂದ ಬಿಡಲು ಆಗದೆ ಪೂಜಿಸುವುದುಂಟು, ಇವರು ವರಕೊಡುವ ದೇವತೆಗಳು ಎನಿಸಿಕೊಳ್ಳಲಿಲ್ಲ. ಸೆಗಣಿಯಿಂದ ರೂಪ ಪಡೆದು ಪೂಜಿಸಿಕೊಂಡಿರುತ್ತಾರೆ. ಹಿಗೆ ಎಲ್ಲದರಲ್ಲೂ ಸರಳತೆ ಕಂಡುಬರುವುದರಿಂದ ಅಡವಿಯಲ್ಲಿ ಈ ಅವಧಿಯಲ್ಲಿ ಹೆಚ್ಚಾಗಿ ಸಿಗುವ ಹೂಗಳಾಗಿದ್ದರಿಂದ ಕಾರಳು ಮತ್ತು ಕುಕ್ಕೆ ಹೂಗಳು ಅರ್ಪಿಸುವ ನಂಬಿಕೆಯಿದ್ದರಬೇಕು ಹಾಗೂ ಕುಕ್ಕೆ ಹೂ ಔಷಧಿ ಮೂಲದ ಸಸ್ಯಗಳಲ್ಲಿ ಒಂದಾಗಿದೆ.

**೪) ಓಣಿಯ ಹೆಣ್ಣು ಮಕ್ಕಳೆಲ್ಲಾ ಸೇರಿ ಪೂಜಿಸಿ ಹಾಡುವುದು:**

ಮನೆಯ ಮುಖ್ಯದ್ವಾರದ ಎರಡು ಬದಿಯ ಮಾಡದಲ್ಲಿ ದೀಪವಿಟ್ಟು ಸುತ್ತಲೂ ಹೆಂಡಿಯಿಂದ ಚಿತ್ರಬಿಡಿಸಿ, ರಾತ್ರಿ ಹೊತ್ತು ಓಣಿಯು ಚಿಕ್ಕವರಿಂದ ದೊಡ್ಡವರವರೆಗಿನ ಹೆಣ್ಣು ಮಕ್ಕಳೆಲ್ಲಾ ಸೇರಿ ಪೂಜಿಸುವರು ಎಲ್ಲರು ಕುಳಿತು ಇಬ್ಬರು ಜೊತೆಯಾಗಿ ಹಾಡುವ ಹಾಡಿಗೆ ಹಿಂದಿನವರು ಧ್ವನಿಗೂಡಿಸುವರು. ಎರಡೋ ಅಥವಾ ಐದೋ ಹೀಗೆ ಜೋಡಿಮಾಡಿ ಮಂಗಳಾರತಿಯೊಂದಿಗೆ ಮುಗಿಸಿ ಆ ಗುಂಪಿನ ಇನ್ನೊಬ್ಬರ ಮನೆಗೆ ಹೋಗುವರು. ಮಂಗಳಾರತಿ ನಂತರ ಅರ್ಪಿಸಿದ ಎಳ್ಳು ಬೆಲ್ಲ, ಪುಟಾಣಿ, ಕಲ್ಲುಸಕ್ಕರೆ, ಪ್ರಸಾದ ಕೊಡುವರು.

ಇಲ್ಲಿಯ ಓಣಿಯ ಹೆಣ್ಣು ಮಕ್ಕಳು ಪರಸ್ಪರ ಸಮೂಹದಲ್ಲಿ ಹಾಡುವ ಮೂಲಕ ತಮ್ಮ ಒಗ್ಗಟ್ಟು ಹೆಚ್ಚಿಸಿಕೊಳ್ಳಲು ಅವಕಾಶ ಸಿಗುತ್ತದೆ. ಇಷ್ಟು ಜನರ ಗುಂಪು ಸೇರುವ ಇನ್ನೊಂದು ಉದ್ದೇಶ ಶೀಗಮ್ಮ ಏಳು ಮಕ್ಕಳು ಇರುವುದರಿಂದ ದೊಡ್ಡ ಕುಟುಂಬ ಅವಳದ್ದು ಆದ್ದರಿಂದ ಹೆಚ್ಚಿನ ಸಂಖ್ಯೆಯ ಮಕ್ಕಳೆಲ್ಲಾ ಸೇರಿ ಗುಂಪು ರಚಿಸಿಕೊಂಡು ಆಟವಾಡಿದ್ದರ ಪ್ರತೀಕವಾಗಿ ಇಂದಿಗೂ ಗುಂಪಿನೊಂದಿಗೆ ಹಾಡುವುದನ್ನು ಮುಂದುವರೆದಿರಬೇಕು.

**ದೀಪಾವಳಿ :**

ದೀಪಾವಳಿ ಕಾರ್ತಿಕ ಮಾಸದ ಶುದ್ಧ ಪಾಡ್ಯಮಿಯಂದು ಬರುವ ಹಬ್ಬವಾಗಿದೆ. ದೀಪಗಳ ಸಾಲುಗಳನ್ನು ಹಚ್ಚಿಡುವ ಹಬ್ಬವೇ ದೀಪಾವಳಿ ಇದು ಒಂದು ರೀತಿಯಲ್ಲಿ ವೈಭವಯುತವಾದ ಹಬ್ಬವಾಗಿದೆ.

ನಾಲ್ಕು ದಿನಗಳ ಆಚರಣೆ ಹೊಂದಿದ್ದ ಈ ಹಬ್ಬಕ್ಕೆ ತನ್ನದೇ ಆದ ಪೌರಾಣಿಕ ಹಿನ್ನೆಲೆಯೂ ಇದೆ. ಕೃಷಿಕರಿಗೂ, ವ್ಯಾಪಾರಿಗಳಿಗೂ ಇದು ವಿಶೇಷ ಹಬ್ಬವಾಗಿದೆ. ಜ್ಞಾನ ಅಜ್ಞಾನವನ್ನು ಹೊಡೆದೊಡಿಸುವಂತೆ ಬೆಳಕು ಕತ್ತಲನ್ನು ಹೊಡೆದೊಡಿಸಿ ಬದುಕಿಗೆ ಒಳ್ಳೆ ಮಾರ್ಗವನ್ನು ತೋರಿಸುವುದರ ಸಂಕೇತವಾಗಿ ದೀಪಗಳನ್ನು ಬೆಳಗಿಸುವುದಾಗಿದೆ. ಇನ್ನೊಂದು ಈ ಹಬ್ಬದಲ್ಲಿ ದೀಪ ಹಚ್ಚಿಡುವ ಮುಖ್ಯ ಉದ್ದೇಶವೆಂದರೆ ಹೊಲದಲ್ಲಿ ರಾಶಿ ಮುಗಿದಿರುವುದಿಂದ ಇಲಿಗಳು ಅಲ್ಲಿ ಕಡಿಮೆಯಾಗಿ ಮನೆಗಳಲ್ಲಿ ಸಂಗ್ರಹಿಸಿಟ್ಟ ಕಾಳುಗಳಿಗಾಗಿ ಬಂದು ಮನೆ ಸೇರುತ್ತವೆ. ಆದ್ದರಿಂದ ದೀಪಾವಳಿ ದಿನಗಳಲ್ಲಿ ದೀಪ ಹಚ್ಚಿಡುವ ಪದ್ಧತಿ ಆರಂಭವಾಗಿ ಕಡೆ ಪಂಚಮಿ, ಗೌರಿ ಹುಣ್ಣಿಮೆ ಹಾಗೂ ಹೆಚ್ಚು ಕಡಿಮೆ ಬಹುತೇಕ ಕಾರ್ತಿಕ ಮಾಸ ಮುಗಿಯುವವರೆಗೂ ರೂಢಿಯಲ್ಲಿರುತ್ತದೆ.

ಸಂಭ್ರಮದ ದೀಪಾವಳಿ ಹಬ್ಬದ ಆಚರಣೆಯು ವ್ಯಾಪಾರ ಕೃಷಿ ಬಗ್ಗೆ ಮತ್ತು ವೈಜ್ಞಾನಿಕ ಮನೋಭಾವ ಹೊಂದಿರುವ ನಂಬಿಕೆಗಳನ್ನೊಳಗೊಂಡಿದೆ.

**೧) ದೀಪಾವಳಿಯ ಮೊದಲನೆ ದಿನ ನೀರು ತುಂಬುವ ದಿನ :**

ದಿನನಿತ್ಯದ ಬಳಕೆಗಾಗಿ ನೀರು ತುಂಬುವುದು ಅಗತ್ಯವಾಗಿದೆಯಾದರೂ ದೀಪಾವಳಿಯ ಆರಂಭ ದಿನವನ್ನು ನೀರು ತುಂಬುವ ದಿನ ಎಂದು ಕರೆಯುವುದು ರೂಢಿಯಲ್ಲಿದೆ. ಇಂದಿನ ಮುಂಜಾನೆ ಅಡುಗೆ ಮನೆಯಿಂದ ಹೊರಬಾಗಿಲಿನವರೆಗೆ ತೊಳೆದು ಸಾರಣೆ ಮಾಡಿರುವರು. ತಲೆ ಸ್ನಾನ ಮಾಡಿ ವಿಶೇಷವಾಗಿ ತಾಮ್ರ ಇಲ್ಲವೆ ಹಿತ್ತಾಳೆ ಕೊಡಗಳನ್ನು ತುಂಬಿಟ್ಟು ಪೂಜಿಸುವರು. ಶುಭ ಕಾರ್ಯಗಳಲ್ಲಿ ಪರಿಪೂರ್ಣತೆ ಪ್ರತೀಕವಾಗಿ ಗಂಗೆಯನ್ನು ಪೂಜಿಸಿದಂತೆ ಇಂದು ಪೂಜಿಸುವ ಉದ್ದೇಶವಾಗಿರಬೇಕು. ಇಂದು ಊರಿನ ರಾತ್ರಿ ಯುವಕರು ಸೇರಿದಂತೆ ಗುಡಿಯ ಸ್ವಾಮಿಗಳ ಸಮೇತವಾಗಿ ಮನೆಮನೆಗೂ ಹೋಗಿ ಅಕ್ಕಿ, ಹಿಟ್ಟು, ಬ್ಯಾಳಿ, ಬೆಲ್ಲ ಭಿಕ್ಷಾಂದೇಹಿ ಎಂದು ಕೇಳಿಕೊಳ್ಳುವರು ಮನೆಯವರು ಈ ಕೇಳಿದ ಆಹಾರ ಪದಾರ್ಥಗಳೊಂದಿಗೆ ಸ್ವಾಮಿಗೆ, ಎಣ್ಣೆ ಸಮೇತವಾಗಿ ದಾನ ನೀಡುವರು. ಇದಾದ ನಂತರ ದೀಪಾವಳಿಯ ಮೂರು ದಿನಗಳಲ್ಲಿ ಹಾಗೂ ಹುಣ್ಣಿಮೆಯವರೆಗೂ ಬೇರೆ ಬೇರೆ ಸ್ವಾಮಿಗಳು ಬೇರೆ ಬೇರೆ ಉದ್ಯೋಗದಲ್ಲಿರುವುದರಿಂದ ಮತ್ತು ಈ ಭಿಕ್ಷೆ ಬೇಡುವ ಪ್ರವೃತ್ತಿ ಸರಿಯೆನಿಸದ ಕಾರಣಕ್ಕಾಗಿಯೋ ಮನೆಗೆ ಬರುವವರ ಸಂಖ್ಯೆ ಕಡಿಮೆಯಾಗಿದೆ.

**೨) ನರಕ ಚತುರ್ಥಿಯ ದಿವಸ ಸಹೋದರರಿಗೆ ಆರತಿ ಬೆಳಗುವುದು :**

ದೀಪಾವಳಿ ವಿಶೇಷವಾದ ಮತ್ತು ದೊಡ್ಡ ಹಬ್ಬವೆನಿಸಿದೆ. ಆದ್ದರಿಂದ ಈ ಹಬ್ಬಕ್ಕೆ ಹೆಣ್ಣು ಮಕ್ಕಳನ್ನು ತವರಿಗೆ ಕರೆದು ತರುವ ಸಂಪ್ರದಾಯವಿದೆ. ಅಂದು ಹೆಣ್ಣು ಮಕ್ಕಳು ಹೊಸ ಬಟ್ಟೆ ಧರಿಸಿ ತಮ್ಮ ಸಹೋದರರ ಬಾಳು ಬೆಳಕಾಗಲಿ ಎಂದು ಹರಿಸಿ ಆರತಿಯನ್ನು ಬೆಳಗುವರು. ಅದಕ್ಕೆ ಸಹೋದರರು ತಮ್ಮ ಪ್ರೀತಿಯ ಸಹೋದರಿಯರಿಗೆ ಉಡುಗೋರೆಯನ್ನು ಕೊಡುವರು. ಹೀಗೆ ಆಚರಣೆಗಳ ನಿಮಿತ್ಯವಾಗಿ ಕುಟುಂಬದ ಎಲ್ಲಾ ಸದಸ್ಯರು ಒಟ್ಟಿಗೆ ಸೇರುವುದರೊಂದಿಗೆ ಹಬ್ಬಕ್ಕೆ ಇನ್ನಷ್ಟು ಮೆರಗು ತಂದುಕೊಡುತ್ತದೆ.

**ಈ ನರಕ ಚತುರ್ದಶಿಯ ಆಚರಣೆ ಕುರಿತಂತೆ ಕತೆಯೊಂದು ಹೀಗಿದೆ.**

ಶ್ರೀ ಕೃಷ್ಣನ ದ್ವಾರಕಾ ನಗರ, ಅಂದಿನ ಕಾಲಕ್ಕೆ ವ್ಯವಸಾಯ ಮತ್ತು ಹೈನುಗಾರಿಕೆಗೆ ಬಹು ಪ್ರಸಿದ್ಧ ಹಾಲು, ಮೊಸರು, ಬೆಣ್ಣೆ, ತುಪ್ಪಗಳ ಹೊಳೆ ಪ್ರತಿನಿತ್ಯ ಇರುವುದು. ಇದಿ ವಹಿವಾಟು ಮಹಿಳೆಯರ ಕೈಯಲ್ಲಿ

ಎಲ್ಲಿ ನೋಡಿದರು ಸಮೃದ್ಧಿ ಈಗಿನ ಅಸ್ಸಾಂ ಬಳಿಯ ಪ್ರಾಗ್ ಜ್ಯೋತಿಪುರದ ಅರಸ ನರಕಾಸುರನಿಗೆ ದ್ವಾರಕೆಯ ಸಮೃದ್ಧಿಯ ಸುದ್ಧಿ ತಿಳಿಯುತ್ತದೆ. ತಕ್ಷಣ ದ್ವಾರಕೆಗೆ ಬಂದು ಆತನು ಅಲ್ಲಿನ ನದಿ ತೀರದ ಕಾಡಿನಲ್ಲಿ ಅವಿತು ಕುಳಿತ.

ನದಿಗೆ ನೀರು ಕುಡಿಯಲು ಬಂದ ದನ-ಕರುಗಳನ್ನು ಕದ್ದು ತಂದ ಹಾಗೂ ನಿರೋಯ್ಯಲು ಬಂದ ಗೋಪಿಕೆಯರನ್ನು ಅಪಹರಿಸಿದ ಬಹಳ ದಿನ ಹೀಗೆ ನಡೆಯುತ್ತಿರಲು. ಅಪಾರ ಪ್ರಮಾಣದಲ್ಲಿ ಕಾಣೆಯಾಗಿದ್ದ ಗೋವುಗಳು ಮತ್ತು ಗೋಪಿಕೆಯರ ಬಗ್ಗೆ ದ್ವಾರಕೆಯಲ್ಲಿ ಕೋಲಾಹಲವಾಯಿತು. ಸುದ್ದಿ ಕೃಷ್ಣ ಬಲರಾಮರನ್ನು ಮುಟ್ಟಿತು. ಅವರು ಕಾಡು ಹೊಕ್ಕಿದ ನರಕಾಸುರನ್ನು ಹುಡುಕಿ ಹಿಡಿದರು. ಕಾಡಿನಲ್ಲಿದ್ದ ಹಸಿರು ಬಳ್ಳಿಯೊಂದರಿಂದ ಅವನ ಕುತ್ತಿಗೆ ಬಿಗಿದು ಕೊಂದು ಹಾಕಿದರು. ಅವನನ್ನು ಕೊಲ್ಲಲು ಬಳಸಿದ ಮಾಲಿಂಗನ ಬಳ್ಳಿ ಪೂಜ್ಯನೀಯವಾಯಿತು. ನರಕಾಸುರನನ್ನು ಕೊಂದು ವಿಜಯಶಾಲಿಯಾದ ಕೃಷ್ಣನನ್ನು ಆರತಿ ಬೆಳಗಿದರು. ಆ ನೆನಪಿಗಾಗಿ ದ್ವಾರಕೆಯಲ್ಲಿ ದೊಡ್ಡ ಹಬ್ಬವೇ ಪ್ರಾರಂಭವಾಯಿತು ಅದುವೇ ನರಕ ಚತುದರ್ಶಿ ಎಂದಾಯಿತು.[೪೯]

**೩) ದೀಪಾವಳಿಯ ಮೂರು ದಿವಸ ಕಡೆ ಪಂಚಮಿ ಹುಣ್ಣಿಮೆ ಸೇರಿ ಐದು ದಿನಗಳ ಕಾಲ ವಳ್ಳಕಲ್ಲು, ಬೀಸುವ ಕಲ್ಲು ಅಳೆಯುವ ಸಾಧನಗಳ ಪೂಜೆ:**

ಆಹಾರಕ್ಕಾಗಿ ಬಳಸುವ ಕಾಳುಗಳನ್ನು ಪುಡಿಮಾಡುವ ಬೀಸುವ ಕಲ್ಲು, ವಳ್ಳು, ಒನಕೆ ಮರ ಅಳೆಯುವ ಸಾಧನಗಳು ತಕ್ಕಡೆ ಕ್ಯೋಯಲು ಬಳಸುವ ಕುಡಗೋಲು ಸಮೇತವಾಗಿ ಪೂಜಿಸುವ ನಂಬಿಕೆಯಿದೆ. ಈ ಪೂಜೆಯೊಂದಿಗೆ ವಳಕಲ್ಲು, ಬೀಸುವ ಕಲ್ಲು ಯಾವಾಗಲೂ ಸ್ವಚ್ಛವಾಗಿರುವಂತೆ ನೋಡಿಕೊಳ್ಳುವ ಉದ್ದೇಶದಿಂದಲೇ ಅವುಗಳನ್ನು ಒದೆಯಬಾರದು. ಅದರ ಮೇಲೆ ಕೂರಬಾರದು, ಸೀನಬಾರದು ಎಂಬ ನಿಷೇಧಗಳಿರಬೇಕು. ಒದೆಯುವುದರಿಂದ ಕಾಲಿನ ಧೂಳು, ಸೀನುವುದರಿಂದ ಬಾಯಿ, ಮೂಗಿನಿಂದ ಬರುವ ಸೂಕ್ಷ್ಮ ಕಣಗಳು ಹರಡಿ ಅದರಲ್ಲಿ ಹಾಕುವ ಕಾಳಿನ ಮೂಲಕ ಆಹಾರ ಸೇವನೆಯಲ್ಲಿ ಸೇರಿಕೊಳ್ಳುವವು. ಮುಂಗಾರಿನ ರಾಶಿಗಳು ಆಗಿರುವುದರಿಂದ ಬೀಸುವ ಕುಟ್ಟುವ ಕೆಲಸವೂ ಆರಂಭಗೊಳಿಸಬೇಕಾದ್ದರಿಂದ ತೊಳೆದು ಪೂಜಿಸಿ ಮುಂದೆ ಕಾರ್ಯಾರಂಭಿಸುವರು. ಇನ್ನುಳಿದ ವಸ್ತುಗಳು ಸಹಾಯಕವಾದವುಗಳೇ ಆದ್ದರಿಂದ ಹೊಸ ದಿನವೆಂಬ ನಂಬಿಕೆಯಿಂದ ಪೂಜಿಸುವ ನಂಬಿಕೆಯಿದೆ.

ದೀಪಾವಳಿಯಲ್ಲಿ ದನಕರುಗಳಿಗೆ ಮೊಸರು ಕುಂಕುಮ ಹಚ್ಚುವುದು, ಬೆಂಕಿ ದಾಟಿಸುವುದು ದೀವಟಿಗೆ ಬೆಳಗಿಸುವುದು, ಬೆರಣಿ ತಟ್ಟುವುದು ಈ ನಂಬಿಕೆಗಳು ಇವೆ. ಅವುಗಳನ್ನು (ಅಧ್ಯಾಯ ೪ ರಲ್ಲಿ ವಿವರಿಸಲಾಗಿದೆ).

**೪) ಅಮಾವಾಸ್ಯೆ ದಿವಸ ಧನಲಕ್ಷ್ಮೀಯನ್ನು ಪೂಜಿಸುವುದು :**

ಕಾರ್ತಿಕ ಮಾಸದ ಆಶ್ವಿಜ ಬಹುಳ ಅಮವಾಸ್ಯೆಯೆಂದು ಲಕ್ಷ್ಮೀಪೂಜೆ. ಈ ದಿನದ ಲಕ್ಷ್ಮೀಪೂಜೆಯನ್ನು ಧನಲಕ್ಷ್ಮೀ ಪೂಜೆಯನ್ನುವರು. ಬದುಕಿಗೆ ಬೇಕಾದ ಗಾಳಿಗೆ ನೀರು ಆಹಾರ ಜೊತೆ ಹಣವು ಅಗತ್ಯವಾಗಿರುವುದರಿಂದ ಸಿರಿ ಸಂಪತ್ತು ಸಮೃದ್ಧಿಯಾಗಲಿ ಎಂಬ ನಂಬಿಕೆಯಿಂದ ಲಕ್ಷ್ಮೀಯನ್ನು ಪೂಜಿಸುವರು.

೪೯ (ಅಡಿಟಿಪ್ಪಣಿ: ೪೯: ಕೃಷಿ ಆಚರಣೆ ಲೇಖಕರು ಮಲ್ಲಿಕಾರ್ಜುನ ಹೊಸ ಪಾಳ್ಯ ಪುಟ ಸಂಖ್ಯೆ ೯೨)

ಧವಸ ಧಾನ್ಯ ಹಣ, ಅಳತೆ ಲಕ್ಷ್ಮೀಯ ಅಧೀನ ಎನ್ನುವಂತೆ ಕಂಡು ಅವುಗಳನ್ನು ಪೂಜಿಸುವುದಾಗಲಿ, ಅವುಗಳನ್ನು ಕೈ ತಪ್ಪಿ ಯಾರಿಗೂ ಕೊಡದಂತೆ ಎಚ್ಚರವಹಿಸುವುದು ಎಲ್ಲಿ ತಮಗೆ ಹಣದ ಸಮಸ್ಯೆ ಬರಬಹುದೆಂಬ ಭಯ ಆವರಿಸಿರುವುದೇ ಇದಕ್ಕೆ ಕಾರಣ. ದುಡ್ಡಿದ್ದವನೇ ದೊಡ್ಡಪ್ಪ ಎನ್ನುವ ಆಸೆಯಿಂದ ಎಲ್ಲರಿಗೂ ಹಣ ಬರುವ ಆದಾಯ ಮೂಲಗಳು ಹೆಚ್ಚಲಿ ಎಂಬ ನಂಬಿಕೆಯಿರಬೇಕು.

ಈ ಪೂಜೆಯಲ್ಲಿ ಉಪಯೋಗಿಸುವ ಹೂಗಳು ಈ ಋತುಮಾನಕ್ಕನುಗುಣವಾಗಿ ಹೆಚ್ಚಿನ ಪ್ರಮಾಣದಲ್ಲಿ ಸಿಗುವುದು ಸೇವಂತಿಗೆ ಗುಲಾಬಿ, ಜಾಜಿ, ಮಲ್ಲಿಗೆ, ಚೆಂಡು ಹೂ ಇಂತಹ ಎಲ್ಲಾ ನಮೂನೆಯ ಹೂಗಳು ಸುಗಂಧ ಪರಿಮಳದ ಸೇವನೆಯು, ಬಾಳೆಹಣ್ಣು, ಸೇಬು, ಮೊಸಂಬಿ ಸೀತಾಫಲ, ಪೇರು ಹಣ್ಣು ಮೊದಲಾದವುಗಳು ಹಾಗೂ ದೀಪಾವಳಿ ಹಬ್ಬದ ವಿಶೇಷ ಸಿಹಿ ತಿಂಡಿಗಳೆಲ್ಲವು ದೇಹಕ್ಕೆ ಬೇಕಾದ ಶರ್ಕರ ಪಿಷ್ಠ, ಕೊಬ್ಬಿನಾಂಶ ಹಣ್ಣುಗಳಿಂದ ವಿಟಾಮಿನ ಅಂಶಗಳು ಒದಗಿಸುತ್ತವೆ. ಇವುಗಳು ಪೂಜೆಕ್ಕೆ ತರುವ ನೆಪದಿಂದಲಾದರೂ ತಿನ್ನುವ ಅವಕಾಶ ಒದಗಿ ದೇಹಕ್ಕೆ ಅಗತ್ಯವಾದ ಪೌಷ್ಟಿಕಾಂಶ ಒದಗಿಸಿಕೊಳ್ಳುವುದಾಗಿದೆ.

**೫) ಅಮಾವಾಸ್ಯೆ ದಿವಸ ರಾತ್ರಿ ಅಗಸರು ಆರತಿ ಬೆಳಗುವರು, ಚಳಿ ಬಿಡುವರು :**

ಅನುಕೂಲಸ್ಥರಾದರು ಮನೆಗಳಲ್ಲಿ ಹಬ್ಬ ಹರಿದಿನಗಳಲ್ಲಾದರೂ ಬಿಡುವು ಮಾಡಿಕೊಂಡು ಹಬ್ಬವನ್ನು ಆಚರಿಸುವರು ಮತ್ತು ಮೇಲುವರ್ಗದ ಜನತೆಯೇ ಇಂತಹ ಧಾರ್ಮಿಕ ಪದ್ಧತಿಯ ಆಚರಣೆಗೆ ಅರ್ಹರರು ಎನ್ನುವುದಾಗಿತ್ತು. ಆದ್ದರಿಂದ ನರಕಚತುರ್ಥಿಯಂದು ಮೇಲ್ವರ್ಗದವರು ತಮ್ಮ ಸಹೋದರರಿಗೆ ಆರತಿ ಬೆಳಗಿದರೆ ಮಡಿವಾಳ ಜಾತಿಯವರಿಗೆ ಅಮಾವಾಸ್ಯೆ ದಿನ ಅವಕಾಶ ಸಿಕ್ಕಿದೆ. ಮುಂಜಾನೆ ಬಟ್ಟೆ ಒಗೆಯುವ ಕೆಲಸ ಮುಗಿಸಿ ರಾತ್ರೊಹೊತ್ತಿಗೆ ತಾವು ಬಟ್ಟೆ ಒಗೆಯುವ ಮನೆಗಳಿಗೆ ಬಂದು ಆರತಿ ಬೆಳಗುತ್ತಾರೆ. ಇವರು ಆರತಿ ಬೆಳಗಿ ಚಳಿ ಬಿಟ್ಟು ಹೋಗುತ್ತಾರೆಂಬ ನಂಬಿಕೆಯೂ ಇದೆ. ಈ ಅವಧಿಯು ಮಳೆಗಾಲದ ನಿರ್ಗಮನ, ಚಳಿಗಾಲದ ಆಗಮನವಾಗುವ ಪರ್ವಕಾಲವಾದ್ದರಿಂದ ಋತುಮಾನದ ಬದಲಾವಣೆ ಅಗತ್ಯವಾಗಿ ನಡೆದಿರುತ್ತದೆ. ಆದ್ದರಿಂದ ಚಳಿ ಆರಂಭವಾಗುತ್ತದೆ. ಅಗಸರು ಈ ದಿನದ ರಾತ್ರಿಗೆ ವಿಶೇಷ ಅತಿಥಿಗಳಾಗಿ ಬರುವುದರಿಂದ ಈ ನಂಬಿಕೆಯಿರಬಹುದು.

**೬) ಬಲಿಪಾಡ್ಯದ ದಿನಾಚರಣೆ :**

ಕಾರ್ತಿಕ ಮಾಸದ ಶುದ್ಧ ಪಾಡ್ಯಮಿಯ ದಿನ ಬಲಿಪಾಡ್ಯಮಿ ಎಂದು ಆಚರಿಸಲಾಗುವದು. ಅದಕ್ಕೆ ಪೌರಾಣಿಕ ಕಥೆ ಹೀಗಿದೆ. ಪ್ರಹ್ಲಾದನ ಮೊಮ್ಮಗನಾದ ಬಲಿ ಚಕ್ರವರ್ತಿಗೆ ಅಶ್ವಮೇಧಯಾಗ ಮಾಡಿ ಇಂದ್ರನಾಗುವ ಬಯಕೆಯಾಗಿ ಯಾಗ ಮಗ್ನನಾಗಿರಲು ದೇವತೆಗಳು ವಿಷ್ಣುವಿನ ಮೊರೆ ಹೋಗಲು ವಿಷ್ಣು ಬಲಿಯನ್ನು ಸ್ವರ್ಗದಿಂದ ಓಡಿಸಲು ವಾಮನಾವತಾರ ತಾಳಿ ಶೋಣಿತಪುರಕ್ಕೆ ಬಂದು ಬಲಿ ಚಕ್ರವರ್ತಿಯನ್ನು ದಾನ ಬೇಡುತ್ತಾನೆ. ಆಗ ರಾಜ ಏನು ಬೇಕು ಕೇಳಿಕೋ ಎಂದಾಗ ವಿಷ್ಣು ಮೂರು ಹೆಜ್ಜೆಯಿಡಲು ಭೂಮಿಯನ್ನು ಕೇಳುತ್ತಾನೆ. ಅದಕ್ಕೆ ರಾಜ ಆಗಬಹುದು ಎಂದು ಒಪ್ಪುತ್ತಾನೆ. ಅನಂತರ ವಿಷ್ಣು ಒಂದು ಹೆಜ್ಜೆಯನ್ನು ಆಕಾಶಕ್ಕೂ ಮತ್ತೊಂದು ಹೆಜ್ಜೆಯನ್ನು ಭೂಮಿಗೂ ಹಾಕಿ ಆಕ್ರಮಿಸಿಕೊಂಡು ಮತ್ತೊಂದನ್ನೂ ತಲೆಯ ಮೇಲಿಡು ಎಂದು ತೋರಿಸುತ್ತಾನೆ. ಆಗ ವಿಷ್ಣು ಆತನನ್ನು ಪಾತಾಳಕ್ಕೆ ತುಳಿಯುತ್ತಾನೆ. ಇವನ್ನು

ತ್ರಿವಿಕ್ರಮನವತಾರ ಎಂದು ಹೇಳುವುದುಂಟು. ವಿಷ್ಣು ಆತನ ದಾನದ ಮನೋಭಾವವನ್ನು ನೋಡಿ ಸಂತೋಷವಾಗಿ "ನಿನಗೇನು ವರಬೇಕೋ ಕೇಳಿಕೋ" ಎಂದು ಹೇಳಿದ. ಅದಕ್ಕೆ ಆತನು ವಿಷ್ಣುವನ್ನು ಪಾತಾಳದಲ್ಲಿ ತನ್ನ ಮನೆಯ ಬಾಗೀಲು ಕಾಯಬೇಕು ಎಂದ ವಿಷ್ಣು ವರ್ಷದಲ್ಲಿ ಒಮ್ಮೆ ಭೂಮಂಡಲದಲ್ಲಿ ಬಲಿ ರಾಜ್ಯಭಾರ ನಡೆಯುವಂತೆ ಅನುಗ್ರಹಿಸುತ್ತಾನೆ. ಬಲಿಪಾಡ್ಯಮಿಯ ದಿನಪೂರ್ತಿ ಬಲಿ ರಾಜ್ಯಭಾರ ನಡೆಸುವನು ಎಂದು ಪ್ರತೀತಿ.[೫೦]

ದೀಪಾವಳಿ ಬಲಿಪಾಡ್ಯ ಬ್ರಾಹ್ಮೀ ಮೂಹರ್ತ ಇರುವ ದಿನ, ಆದ್ದರಿಂದ ಇಂದಿನ ಇಡಿ ದಿನವೆಲ್ಲಾ ಪೂಜೆಗಳು ನಡೆಯುತ್ತಲೆ ಇರುವವು. ಆದರೆ ಇಂದಿನ ದಿನಗಳಲ್ಲಿ ಈ ಹಬ್ಬದ ನಿಮಿತ್ಯ ಅತಿಯಾಗಿ ಬಳಸುವ ಪಟಾಕಿ ಸಿಡಿಮದ್ದುಗಳಿಂದ ಪರಿಸರ ಮಲೀನಗೊಳಿಸುವುದು ಕಾಣುತ್ತಿದ್ದೇವೆ.

**೭) ಪಾಡ್ಯದಿವಸ ಗೌರಿ ಪೂಜೆ ಆರಂಭಿಸುವುದು :**

ಪಾಡ್ಯದಿವಸ ಗೌರಿ ಹುಟ್ಟಿಕೊಳ್ಳುವ ದಿನವಾಗಿದ್ದು, ಪೂಜೆ ಆರಂಭಿಸುತ್ತಾರೆ. ಈ ಗೌರಿ ಪೂಜೆ ಗೌರಿ ಹುಣ್ಣಿಮೆಯವರೆಗೆ ಮಾಡುತ್ತಾರೆ, ಈ ಗೌರಿಯುನ್ನು ಈ ಭಾಗದ ಜನತೆ ಗೌರಿಕುಳ್ಳಿ (ಗಿಡ್ಡವಾಗಿರುವುದರಿಂದ ಈ ಹೆಸರು ಬಂದಿರಬೇಕು) ಎಂದು ಕರೆಯುತ್ತಾರೆ. ಆರಂಭದ ದಿನ ಹನುಮಂತ ದೇವರ ಗುಡಿಯಲ್ಲಿಟ್ಟು ಪೂಜಿಸುವರು. ಹದಿನೈದು ದಿನಗಳಲ್ಲಿ ಒಂದೊಂದು ದಿವಸ ಒಂದೊಂದು ಬಗೆಯ ಆಟವಾಡುವರು.

**ಗೌರಿ ಹುಣ್ಣಿಮೆ :**

ದೀಪಾವಳಿ ಪಾಡ್ಯ ದಿವಸ ಆರಂಭವಾಗುವ ಈ ಗೌರಿ ಪೂಜೆ ಗೌರಿ ಹುಣ್ಣಿಮೆಯವರೆಗೆ ನಡೆಯುತ್ತದೆ. ಶೀಗಿ ಪೂಜೆಯಲ್ಲಿ ಎಲ್ಲರೂ ಒಟ್ಟಿಗೆ ಸೇರಿ ಒಂದೆಡೆ ಕುಳಿತು ಹಾಡಿದರೆ ಈ ಗೌರಿ ಪೂಜೆಯಲ್ಲಿ ಪ್ರತಿ ದಿನ ಜಾಗಗಳನ್ನು ಬದಲಾಯಿಸಿ ಹೊಸ್ತೀಲು, ಬೀಸುವಕಲ್ಲು, ವಳ್ಳಕಲ್ಲು ಮೇಲೆ ಮನೆಮಾಳಿಗೆ, ಹೌಜು, ಜಗಲಿ ಮುಂತಾದ ಸ್ಥಳಗಳಲ್ಲಿಟ್ಟು ಪೂಜಿಸುವರು ಹಾಗೂ ದೇವಸ್ಥಾನ, ಹೊಲಗಳಿಗೂ ಬುತ್ತಿಕಟ್ಟಿಕೊಂಡು ಆಟವಾಡುವರು, ಹೋದ ಸ್ಥಳದಲ್ಲಿ ಗೌರಿಕುಳ್ಳಿ ಪೂಜಿಸಿ ನೈವೇದ್ಯ ತೋರಿ, ಗುಂಪಾಗಿ ಕುಳಿತು ಸಾಮೂಹಿಕ ಭೋಜನ ಮಾಡುವರು, ಸಂಜೆ ಮನೆಗೆ ಬರುವಾಗ ಗೌರಿ ಗಂಡ ಕುಯ್ಯಾದ ಯಾವುದೊಂದು ಗಡ್ಡಿ ಬೇನೆಯಿಂದ ಸತ್ತನೆಂದು ಎಲ್ಲರು 'ಹ್ಯಾಂಗ ಸತ್ತೋ ಕುಯ್ಯಾ' ಎಂದು ಸಾಮೂಹಿಕ ಅಳುವಿನಾಟ ಮುಗಿಸಿ ಮನೆ ಕಡೆಗೆ ಬಂದು ಬಿಡುವುದು ಇದು ಗೌರಿ ಆಟದ ಆಚರಣೆಯ ವಿಧಾನ.

ಇಲ್ಲಿ ಮಕ್ಕಳಿಗೆ ಮನರಂಜನೆ ಒದಗಿಸುವ ಆಟವೆನಿಸುತ್ತದೆ. ಆದರೆ ಇಲ್ಲಿ ಸಂಸಾರದ ನೋವು ನಲಿವುಗಳನ್ನು ಪ್ರತಿಬಿಂಬಿಸುತ್ತದೆ. ಶೀಗಿಯೂ ತವರಲ್ಲಿ ಹೆಚ್ಚು ದಿನ ಇರದೆ ಮಕ್ಕಳನ್ನು ಕರೆದುಕೊಂಡು ಗಂಡನ ಮನೆಗೆ ಹೋಗುತ್ತಾಳೆಂಬುದು ಶೀಗಿ ಆಚರಣೆಯಿಂದ ತಿಳಿಯುವುದು. ಆದರೆ ಗೌರಿ ಗಂಡನನ್ನು ಕಳೆದುಕೊಂಡ ಕಾರಣಕ್ಕಾಗಿ ತವರಲ್ಲಿ ಆಶ್ರಯ ಪಡೆದುಕೊಳ್ಳುತ್ತಾಳೆಂಬುದನ್ನು ಸೂಚಿಸುತ್ತದೆ.

ಹೀಗೆ ಉತ್ತರ ಕರ್ನಾಟಕದ ಪ್ರಮುಖ ಹಬ್ಬಗಳಲ್ಲಿ ಗೌರಿ ಹುಣ್ಣಿಮೆ ಒಂದಾಗಿದ್ದು ದವನದ ಹುಣ್ಣಿಮೆಯಂತೆ, ಕಾರ್ತಿಕ ಮಾಸದ ಈ ಹುಣ್ಣಿಮೆಯು ಒಳ್ಳೆದಿನವಾಗಿದೆಂದು ನಂಬಿಕೆಯೂ ಇದೆ.

---

೫೦ (ಅಡಿಟಿಪ್ಪಣಿ: ೫೦: ಜಾನಪದ ಐಸಿರಿ ಡಾ.ಬಿ.ಎಸ್.ಸ್ವಾಮಿ ಪುಟ ಸಂಖ್ಯೆ-೨೦)

**ಭಟ್ಟಿಯ ಆಚರಣೆ :**

ಈ ಭಾಗದಲ್ಲಿ ಆಚರಿಸುವ ಆಚರಣೆಗಳಲ್ಲಿ ಭಟ್ಟಿಯೂ ಒಂದಾಗಿದೆ. ಇದು ಎಲ್ಲಾ ಜಾತಿಯ ಜನರು ಆಚರಿಸುವುದು ತೀರಾ ಕಡಿಮೆ, ಕುರುಬ ಜನಾಂಗದಲ್ಲಿ ಇದರ ಆಚರಣೆ ಹೆಚ್ಚಾಗಿ ಕಂಡುಬರುತ್ತದೆ. ಭಟ್ಟಿ ಅಮವಾಸ್ಯೆಯಿಂದ ಎಳ್ಳೆ ಅಮಾವಾಸ್ಯೆಗಳವರೆಗಿನ ಕಾಲವನ್ನು ಭಟ್ಟಿ ದಿನಗಳೆಂದು ಕರೆಯುತ್ತಾರೆ. ಈ ಒಂದು ತಿಂಗಳದ ಅವಧಿಯಲ್ಲಿ ಬರುವ ರವಿವಾರಗಳಲ್ಲಿ ತಮಗೆ ಅನುಕೂಲವಾದ ಒಂದು ರವಿವಾರ ಮೈಲಾರ ಲಿಂಗನ ಹೆಸರಿನಲ್ಲಿ ನಾಯಿಯನ್ನು ಪೂಜಿಸಿ ನೈವೇದ್ಯ ಇಡುವರು ಮತ್ತು ಅಂದು ಮಾಡಿದ ವಿಶೇಷ ಅಡುಗೆಯನ್ನು ಅಯ್ಯಚಾರಿ ಮಾಡಿಕೊಂಡ ಕುರುಬರಿಗೆ ಕರೆಯಿಸಿ ಕೊಟಮಿಗೆ (ಹಡಿಲಿಗೆಯಂತಿರುವ ಅಗಲ ಪಾತ್ರೆ) ತುಂಬಿಕೊಡುವರು.

ಬೀದರ ಜಿಲ್ಲೆಯ ಭಾಲ್ಕಿ ತಾಲೂಕಿನಲ್ಲಿ ಬರುವ ಬೀದರ-ನಾಂದೇಡ ರಸ್ತೆಯ ಮೇಲೆ ಬರುವಂತಹ ಗ್ರಾಮ ಮೈಲಾರ ಇಲ್ಲಿಯ ದೇವರು ಮೈಲಾರಲಿಂಗ ಇತನ ಹೆಸರಿನಲ್ಲಿ ಬೀದರ ಜಿಲ್ಲೆಯ ಅನೇಕ ಕಡೆಗಳಲ್ಲಿ ಭಟ್ಟಿ ಎಂದು ಆಚರಿಸುತ್ತಾರೆ. ಈ ಮೈಲಾರಲಿಂಗ ಯಾರು ಮತ್ತು ನಾಯಿಯನ್ನು ಏಕೆ ಪೂಜಿಸುವರು ಎಂಬುದನ್ನು ತಿಳಿಯಲು ಪೌರಾಣಿಕ ಕಥೆಗಳುಂಟು.

ಆದಿ ಕಾಲದಿಂದ ಮಣಿಚೂಲ ಎಂಬ ಪರ್ವತ, ಋಷಿ, ಮುನಿಗಳ ತಪೋಭೂಮಿ ಅದು ಅನೇಕ ಬಗೆಯ ಪ್ರಾಣಿಗಳಿಂದಲೂ ನದಿ ನಿರ್ಝರಗಳಿಂದಲೂ ನಾನಾ ಬಗೆಯ ರತ್ನಗಳಿಂದಲೂ ಕೂಡಿ ಮೆರೆಯುತ್ತಿತ್ತು. ಇಲ್ಲಿ ಹಲವು ಋಷಿಗಳು ಪತಿ ವ್ರತೆಯರಾದ ತಮ್ಮ ಪತ್ನಿಯರೊಂದಿಗೆ ಆಶ್ರಮಗಳಲ್ಲಿ ಯಜ್ಞಯಾಗಾದಿಗಳನ್ನು ನೆರವೇರಿಸುತ್ತ ಸುಖದಿಂದ ಕಾಲ ಕಳೆಯುತ್ತಿದ್ದರು. ಹೀಗಿರಲು ಮಲ್ಲಾಸುರ ಮಣಿಕಾಸುರ ರಾಕ್ಷಸರು ಬೇಟೆಗೆಂದು ಮಣಿಚೂಲ ಪರ್ವತಕ್ಕೆ ಬಂದರು. ಇವರು ಬ್ರಹ್ಮದೇವನ ವರದಿಂದ ಉನ್ಮತ್ತರಾಗಿ ಲೋಕ ಕಂಟಕರಾದರು ಮಣಿಚೂಲ ಬೆಟ್ಟ ಪ್ರದೇಶ ಸಂತಾಪಕ್ಕೊಳಗಾಯಿತು. ಮುನಿಗಳು ಇಂದ್ರ, ವಿಷ್ಣು, ಇತ್ಯಾದಿ ಪ್ರಮುಖರು ಕೂಡಿ ಶಿವನ ಹತ್ತಿರ ಹೋಗಿ ರಕ್ಕಸನ ಉಪದ್ರ ದೌರ್ಜನ್ಯಗಳ ಪರಿಹಾರಕ್ಕೆ ಪ್ರಾರ್ಥಿಸುತ್ತಾರೆ. ಆಗ ಶಿವನು ಉಗ್ರನಾಗಿ ಜಡೆಯನ್ನು ಭೂಮಿಗೆ ಅಪ್ಪಳಿಸಿದನು. ಜಡೆಯಿಂದ ಅದ್ಭುತಾಕಾರದ ಮಹಾಮಾಯೆ ಮೂಡಿನಿಂತಳು. ಮುನಿಗಳು ಶಿವನ ಅಪ್ಪಣೆ ಪಡೆದು ತುಪ್ಪದಿಂದ ಅವಳಿಗೆ ಅಭಿಷೇಕ ಮಾಡಿದರು ಅವಳನ್ನು ಘೃತಮಾರಿ ಎಂದು ಕರೆದು ಅವಳಿಂದ ಸಂಹಾರದ ಅಭಯ ಪಡೆದರು. ಶಿವನು ಮಾರ್ತಂಡ ಭೈರವನಾದ ಅವನ ವೇಷ, ವಿಲಕ್ಷಣ ಹಳದಿ ಬಣ್ಣದ ಪಿತಾಂಬರ ಹುಲಿಚರ್ಮ ಕಂಬಳಿಯ ನಿಲುವಂಗಿ, ಕಂಬಳಿ ಟೊಪ್ಪಿಗೆ ಕಿರಿಟ, ಹುಬ್ಬುಗಳ ನಡುವೆ ಕುಂಕುಮ ಬಿಳಿಕುದುರೆಯೇರಿ ರಭಸದಿಂದ ಮುನ್ನುಗ್ಗಿದ ಮಾರ್ತಾಂಡ ಭೈರವನ ಜೊತೆಗೆ ಹೆಗ್ಗೆಯನಾಗಿ ಹರಿ ಭೈರವನ ಕೋಪದಿಂದ ಹುಟ್ಟಿದ ನಾಯಿಗಳು ವೀರಭದ್ರ ಜಯನಂದಿ ಇತ್ಯಾದಿ. ಪಾರ್ವತಿಯು ಗಂಗೆ ಮಾಳವ್ವನಾಗಿ ರಕ್ಕಸರ ವಿರುದ್ಧ ಹೋರಾಡಲು ಅಣಿಯಾದಾಗ ಚಂಡಿ ರಣಚಂಡಿ, ಕಾಲದುರ್ಗಿ ಹೀಗೆ ಉಗ್ರರೂಪ ಧರಿಸಿ ಸೈನ್ಯವನ್ನು ಕೂಡಿದಳು. ಇನ್ನು ವಿಷ್ಣು ಶಿವನ ಸೇನಾಪತಿ ಎಂದರೆ ಹೆಗ್ಗಡೆಯಾಗಿ ಸೈನ್ಯದ ಶಿಸ್ತನ್ನು ನೋಡಿಕೊಳ್ಳಲು ಅಣಿಯಾದ ಈ ರೀತಿ ಸಜ್ಜಾದ ಏಳು ಕೋಟಿ ದೇವಸೇನೆ ಮಲ್ಲಾಸುರನ ದಾಳಿಗೆ ಹೊರಟಿತು. ಮಾರ್ತಾಂಡ ಭೈರವನ ಉಗ್ರ ಕೋಪದಿಂದ ಡಮರು ಬಾರಿಸಿದರೆ ಮೂರುಲೋಕವು ನಡುಗಿದವು.

ಮಲ್ಲಾಸುರ, ಮಣಿಕಾಸುರ ಮತ್ತು ಶಿವನ ಸೈನ್ಯದ ನಡುವೆ ಭೀಕರ ಕದನ ನಡೆಯಿತು, ಮಣಿಕಾಸುರ ಗಾಯಗೊಂಡು ಅವನು ಶಿವನ ಪಾದಸೇರುತ್ತಾನೆ. ಎಂದು ಹಾಗೂ ಮಣಿಕಾಸುರ ಕೊನೆಗಳಿಗೆಯಲ್ಲಿ ಶಿವನು ಅವನನ್ನು ತುಳಿಯಲು ಪಾದಸ್ಪರ್ಶದಿಂದಾಗಿ ಜ್ಞಾನೋದಯವಾಯಿತು. ಆಗ ಶಿವನಿಗೆ ನಾನಾ ವಿಧದಲ್ಲಿ ಸ್ತುತಿಸಿದನು. ಇದರಿಂದ ಸುಪ್ರೀತನಾದ ಶಿವ ಮಣಿಕಾಸುರನಿಗೆ ನಿಜರೂಪ ತೋರಿ ವರ ಕೇಳಲು ಹೇಳುತ್ತಾನೆ. ಮಣಿಕನು ಶಿವನ ಪಾದ ಇದೇ ರೀತಿ ತನ್ನ ತಲೆಯ ಮೇಲೆ ವಿರಲಿ ಎಂದು ತನ್ನನ್ನು ವಾಹನವಾಗಿ ಸ್ವೀಕರಿಸಬೇಕೆಂದು ವಿಜ್ಞಾಪಿಸಿದನು ಅದನ್ನು ಶಿವನು ಒಪ್ಪಿದನು ಮಣಿಕನು ಕುದುರೆಯ ರೂಪದಲ್ಲಿ ಶಿವನಿಗೆ ವಾಹನವಾದನು ಎಂದು ಪೌರಾಣಿಕ ಕಥೆಯಿಂದ ತಿಳಿದು ಬರುತ್ತದೆ. ಇಲ್ಲಿ ಮಣಿಕಾಸುರನ ಸಾವಿನ ಬಗ್ಗೆ ಬೇರೆ ಬೇರೆಯಾದ ಹಿನ್ನೆಲೆಗಳಿವೆ. ಅದರಂತೆ ಮಲ್ಲಾಸುರ ಮಾರ್ತಾಂಡ ಭೈರವನ ಪಾಶುಪತಾಸ್ತ್ರ ಮಲ್ಲಾಸುರನನ್ನು ಸೀಳುತ್ತದೆ. ನೆಲಕ್ಕೆ ಬಿದ್ದಾಗ ಮಣಿಕನನ್ನು ತುಳಿದಂತೆ ಮಲ್ಲಾಸುರನನ್ನು ಭೈರವ ತುಳಿಯಲು ಮಲ್ಲನಿಗೆ ಜ್ಞಾನೋದಯವಾಗಿ ಶಿವನನ್ನು ಸ್ತುತಿಸಿದ ಶಿವನು ವರ ಕೇಳು ಎನ್ನಲು ಶಿವನ ಹೆಸರಿನ ಪೂರ್ವಾರ್ಧದಲ್ಲಿ ತನ್ನ ಹೆಸರು, ಉಳಿಯುವಂತೆ ವರ ಕೊಡಬೇಕೆಂದು ಪ್ರಾರ್ಥಿಸಿದನು. ಮಲ್ಲನ ಶಿರವು ಭೈರವನ ಅಡಿಯಲ್ಲಿಯೇ ಉಳಿಯಿತು ಶಿವನ ಭಕ್ತರು ಮೊದಲ ಮಲ್ಲನ ಹೆಸರನ್ನು ಹೇಳಿ ತರುವಾಯ ತನ್ನ ಹೆಸರು ಹೇಳುವಂತಾಗಲು ಮಲ್ಲಾರಿ ಎಂದು ಹೆಸರು ಧರಿಸಿದನು. ಅಂದಿನಿಂದ ಶಿವನಿಗೆ ಮಲ್ಲಸ್ಯರ ಅರಿ ಮಲ್ಲಾರಿ ಎಂಬ ಬಿರುದು ಬಂತು ಹಾಗೂ ಅಲ್ಲಿ ನೆರೆದ ಏಳು ಕೋಟಿ ಸೈನ್ಯವು ಮಲ್ಲಾರಿ ಮಾರ್ತಾಂಡ ಉಘೇ ಉಘೇ ಮಲ್ಲಾರಿ ಭೈರವ ಉಘೇ ಉಘೇ ಏಳು ಕೋಟಿ ಏಳು ಕೋಟಿ ಉಘೇ ಉಘೇ ಎಂದು ಉದ್ಘೋಷಿಸಿದರು.

ಹೀಗೆ ಅನೇಕ ಯುಗಗಳು ಗತಿಸಿದವು ಕಲಿಯುಗ ಸಮೀಪಿಸಿತು ಅದರ ಪ್ರಭಾವವನ್ನು ಮನಗಂಡು ಋಷಿಗಳು ವ್ಯಾಕುಲರಾಗಿ ಶಿವನನ್ನು ಕುರಿತು ಪ್ರಾರ್ಥಿಸಿದರು. ಶಿವನು ಪ್ರತ್ಯೇಕ್ಷನಾಗಿ ಋಷಿಗಳ ಕಷ್ಟವೇನೆಂದು ಕೇಳಿದನು. ಋಷಿಗಳು ಈವರೆಗೆ ತಾವು ಶಿವಧ್ಯಾನ ಪೂಜೆಯಲ್ಲಿ ನಿಶ್ಚಿಂತೆಯಿಂದ ಬಾಳಿದೆವು ಕಲಿಯುಗದಲ್ಲಿ ಹಾಗಿರಲು ಸಾಧ್ಯವಿಲ್ಲ ದೇವಾಧಿದೇವನು ತಮ್ಮ ನಿತ್ಯ ತಾಪತ್ರಯಗಳನ್ನು ನಿವಾರಿಸುತ್ತಿರಬೇಕು. ಅದಕ್ಕಾಗಿ ಶಿವನು ಲಿಂಗರೂಪದಲ್ಲಿ ಭೂಲೋಕದಲ್ಲಿಯೇ ಇರಬೇಕು ಭಕ್ತರ ಸಂಕಷ್ಟಗಳನ್ನು ಪರಿಹರಿಸುತ್ತಿರಬೇಕು ಎಂದು ಪ್ರಾರ್ಥಿಸಿದರು. ಅದಕ್ಕೊಪ್ಪಿ ಶಿವನು ಮಲ್ಲಾಸುರನನ್ನು ನಿಗ್ರಹಿಸಿದ ಮಣಿಚೂಲ ಪರ್ವತದಲ್ಲಿ ಸಮೀಪದ ನಟ ವೃಕ್ಷದ ಕೆಳಗೆ ಸ್ವಯಂ ಭೂಲಿಂಗದ್ವೆಯಗಳ ರೂಪದಲ್ಲಿ ಪ್ರಕಟವಾದನು. ಹಾಗೆ ಪ್ರಕಟವಾದುದು ಮಾರ್ಗಶಿರ್ಷ ಮಾಸದ ಶುದ್ಧ ಛಟ್ಟಿಯೆಂದು ಚಂದ್ರನು ಶತತಾರಾ ನಕ್ಷತ್ರದಲ್ಲಿ ಇದ್ದಾಗ ಅಂದು ರವಿವಾರವಾಗಿತ್ತು. ಲಿಂಗದ ಹಿಂದೆ ಮುನಿಗಳು ಶಿವನ ಭೋಗದ ಮೂರ್ತಿಯನ್ನು ಮಣ್ಣಿನಿಂದ ರಚಿಸಿ ಪೂಜಿಸಿದರು ಪೂಜೆಯ ಕಾಲದಲ್ಲಿ ಭಂಡಾರ ಮುಂತಾದ ಪವಿತ್ರ ವಸ್ತುಗಳನ್ನು ಉಪಯೋಗಿಸಿದರು. ಅಂದಿನಿಂದ ಭೂಲೋಕದಲ್ಲಿ ಜನರು ಅದೇ ಪ್ರಕಾರ ಶಿವನನ್ನು ಪೂಜಿಸಿ ತಮ್ಮ ಇಷ್ಟಾರ್ಥಗಳನ್ನು ಪೂರೈಸಿಕೊಳ್ಳ ತೊಡಗಿದರು. ಈ ಪೌರಾಣಿಕ ಕಥೆಯಲ್ಲಿ ಬರುವಂತೆ ಛಟ್ಟಿ ಮಾಸದ ರವಿವಾರದಂದು ನಾಯಿಯನ್ನು ಪೂಜಿಸುವ ನಂಬಿಕೆ ಇಂದಿಗೂ ರೂಢಿಯಲ್ಲಿದೆ. ಪುರಾಣದಲ್ಲಿ ಬರುವ ನಾಯಿ ಯುದ್ಧ ಸಂದರ್ಭದಲ್ಲಿ ಸಹಾಯಕವಾದ ನಂಬಿಕಸ್ಥ, ವಿಶ್ವಾಸವುಳ್ಳ ಪ್ರಾಣಿ ಹಾಗೂ ಶಿವನ ವಾಹನವಾಗಿದ್ದು ಕುದರೆಯು ಸಹಾಯಕವಾದ ಪ್ರಾಣಿಯಾಗಿರುವುದರಿಂದ ಅವುಗಳನ್ನು ಪೂಜಿಸುವುದುಂಟು.

ಛಟ್ಟಿಯನ್ನು ಚಿಕ್ಕ ದೀವಳಿಗೆ ಎನ್ನುವ ಪರಿಪಾಠವೂ ಇದೆ. ಮನೆಯನ್ನು ಸಾರಣೆಯಿಂದ ಶುಚಿಗೊಳಿಸಿ, ಬಟ್ಟೆ-ಬರೆಗಳನ್ನು ಒಗೆದು ಮಡಿಗೊಳಿಸುವರು. ಈ ಆಚರಣೆಯಿಂದಲಾದರೂ ಇಲ್ಲಿ ಸ್ವಚ್ಛವಾಗಿಡುವ ಕೆಲಸವಾಗುತ್ತದೆ.

ಈ ಆಚರಣೆಯಲ್ಲಿ ವಿಶೇಷವಾದ ನೈವೇದ್ಯ ತಯಾರಿಸುವುದು ರೂಢಿಯಲ್ಲಿದೆ. ಇದಕ್ಕೆ ಬುತ್ತಿ (ಮೋಸರನ್ನು) ತಯಾರಿಸಬೇಕು. ಅಕ್ಕಿಯ ಅನ್ನಕ್ಕೆ ಹಾಲು, ಮೊಸರುಗಳನ್ನು ಸೇರಿಸಿ ಚೆನ್ನಾಗಿ ಮಿದ್ದಿ ಮಾಡಿದ್ದು ಬುತ್ತಿ ಈ ಸಂದರ್ಭದಲ್ಲಿಯೇ ತಂದ ಬಿದರಿನ ಹೊಸ ಬುಟ್ಟಿಗಳಲ್ಲಿ ತುಂಬುವರು. ಕಡಲೆ ಬೇಳೆ ಮತ್ತು ಅಕ್ಕಿಯನ್ನು ಸೇರಿಸಿ ತಯಾರಿಸಿದ ಹುಗ್ಗಿ, ಕರಿದು ಮಾಡಿದ ಹೂರಣ ಗಡಬು, ಬದನೆಯಕಾಯಿ, ಅವರೆಕಾಳು ನುಗ್ಗಿಯ ಸೊಪ್ಪು ಕಡಲೆಯ ಕಾಳು ಈರುಳ್ಳಿ ಇವುಗಳನ್ನು ಸೇರಿಸಿ ಹಿಂಡಿ ಪಲ್ಯಾ ಮಾಡುವರು ವಿಶೇಷವಾಗಿ ಬದನೆಕಾಯಿ ಭರತ ಅಥವಾ ಬಜ್ಜಿ ನೈವೇದ್ಯಕ್ಕೆ ತೀರಾ ಅವಶ್ಯಕ ಬದನೆಯಕಾಯಿಗಳನ್ನು ಸುಟ್ಟು ಅಥವಾ ಕುದಿಸಿ ಅದಕ್ಕೆ ಕೆನೆ ಮೊಸರು ಸೇರಿಸಿ ಚೆನ್ನಾಗಿ ನಾದುವರು ಅನಂತರ ಅದಕ್ಕೆ ಹಸಿ ಈರುಳ್ಳಿಯನ್ನು ಹೆಚ್ಚಿಹಾಕಿ ಉಪ್ಪು, ಖಾರ, ಕೊತ್ತಂಬರಿ ಮುಂತಾದವುಗಳನ್ನು ಸೇರಿಸಿ ಮಾಡುವರು.

ಸಾಮಾನ್ಯವಾಗಿ ಈ ದಿನಗಳಲ್ಲಿ ವಿಶೇಷವಾಗಿ ಈ ಎಲ್ಲಾ ಕಾಯಿಪಲ್ಯಗಳು ಹೆಚ್ಚಿನ ಪ್ರಮಾಣದಲ್ಲಿ ಸಿಗುವುದರಿಂದ ಇವುಗಳನ್ನು ಆರೋಗ್ಯ ದೃಷ್ಟಿಯಿಂದ ಊಟಕ್ಕೆ ಬಳಸುವುದು ಸರಿಯಾಗಿದೆ. ಹಾಗೂ ಮನೆಯ ಕಾವಾಲಾಗಿರುವ ನಾಯಿಗೆ ದಿನ ನಿತ್ಯದಲ್ಲಿ ಯಾರು ವಿಶೇಷವಾದ ಆಕಳು ಎತ್ತುಗಳಿಗೆ ಪೂಜಿಸುವಂತೆ ಇದನ್ನು ಪೂಜಿಸುವುದಿಲ್ಲ. ಬಸವಣ್ಣನವರು ಹೇಳಿದಂತೆ ಸಕಲ ಪ್ರಾಣಿಗಳಲ್ಲಿ ದಯವಿರಲಿ ಎನ್ನುವಂತೆ ಈ ಒಂದು ಸಂದರ್ಭದಲ್ಲಾದರೂ ವಿಶ್ವಾಸದ ಪ್ರಾಣಿ ಎನಿಸಿದ ನಾಯಿಯು ಕೂಡಾ ಪೂಜಿಸಿಕೊಳ್ಳುತ್ತದೆ.

ಎಳ್ಳೆ ಅಮಾವಾಸ್ಯೆ ಈ ಹಬ್ಬವು ಪೂರ್ಣವಾಗಿ ಕೃಷಿಯ ಮೂಲವಾಗಿದೆ (ಅಧ್ಯಾಯ-೪ರಲ್ಲಿ ವಿವರಿಸಲಾಗಿದೆ).

**ಸಂಕ್ರಮಣ:**

ಹೇಮಂತ ಋತುವಿನ ಪುಷ್ಯಮಾಸದಲ್ಲಿ ಆಗಮಿಸುವ ಸಂಕ್ರಮಣವು ದೇಶದ ನಾನಾ ಕಡೆ ಅತ್ಯುತ್ಸಾಹದಿಂದ ಆಚರಿಸುವ ಹಬ್ಬವಾಗಿದೆ. ಬಣ್ಣ ಬಣ್ಣದ ಉಡುಗೆ ತೊಟ್ಟು ಮನೆ ಮನೆಗೆ ಹೋಗಿ ಎಳ್ಳು ಬೆಲ್ಲ ಹಂಚಿ ಬರುವ ಸಡಗರದ ಹಬ್ಬ ಪ್ರತಿ ವರ್ಷವೂ ಆಚರಿಸುವುದು ಜನವರಿ ೧೪ರಂದು.

ಸುಮಾರಾಗಿ ೧೯೭೦ ಕ್ಕಿಂತ ಹಿಂದೆ ಪ್ರತಿವರ್ಷವೂ ಸರ್ಕಾರದ ವಾರ್ಷಿಕ ಪಟ್ಟಿಯಲ್ಲಿ ಜನವರಿ ೧೪ ಉತ್ತರಾಯಣ ಪುಣ್ಯಕಾಲ. ತರುವಾಯದ ವರ್ಷಗಳಲ್ಲಿ ಇದರಲ್ಲಿ ಬದಲಾವಣೆ ತಂದು ಜನವರಿ ೧೪ ಮಕರ ಸಂಕ್ರಮಣ ಇದು ಕೆಲವು ಸಮಯದಲ್ಲಿ ಜನವರಿ ೧೩ ಅಥವಾ ೧೫ ರಂದು ಸಂಭವಿಸುವುದುಂಟು. ಸಂಕ್ರಮಣ ಎಂದರೆ ಸೂರ್ಯನು ಒಂದು ರಾಶಿಯಿಂದ ಇನ್ನೊಂದು ರಾಶಿಗೆ ಬರುವ ದಿನ. ಸೂರ್ಯನ ವಾರ್ಷಿಕ ಗತಿ ಏಕ ಪ್ರಕಾರವಾಗಿದೆ.

ಉತ್ತರ ಗೋಳಾರ್ಧ ನಿವಾಸಿಯಾಗಿದ್ದ ನಮ್ಮ ಪೂರ್ವಜ ಆದಿಮಾನವರಿಗೆ ಕಂಡ ದೃಶ್ಯಕ್ಕೂ ಇಂದಿನ ದೃಶ್ಯಕ್ಕೂ ಸಾಕಷ್ಟು ವ್ಯತ್ಯಾಸಗಳು ಕಂಡುಬರುತ್ತವೆ.

| ಹಲವಾರು ಸಾವಿರ ವರ್ಷಗಳ ಹಿಂದೆ | ವರ್ತಮಾನ ದಿನಗಳಲ್ಲಿ |
|---|---|
| ಜನೆವರಿ ೧೪ (ಮಕರ ಸಂಕ್ರಮಣ) | ಡಿಸೆಂಬರ್ ೨೧ |
| ಎಪ್ರಿಲ್ ೧೪ (ಮೇಷ ಸಂಕ್ರಮಣ) | ಮಾರ್ಚ ೨೧ |
| ಜುಲೈ ೧೪ (ಕರ್ಕಾಟಕ ಸಂಕ್ರಮಣ) | ಜೂನ್ ೨೨ |
| ಅಕ್ಟೋಬರ್ ೧೬ (ತುಲಾ ಸಂಕ್ರಮಣ) | ಸೆಪ್ಟೆಂಬರ್ ೨೩ |

ಅಂದಿನ ಉತ್ತರಾಯಣಾರಂಭ ಮತ್ತು ದಕ್ಷಿಣಾಯರಂಭ ಬಿಂದುಗಳು ಇವು ಮಕರ ಮತ್ತು ಕರ್ಕಾಟಕ ರಾಶಿಗಳಲ್ಲಿದ್ದವು. ಇಂದು ಧನು ಮತ್ತು ಮಿಥುನ ರಾಶಿಗಳಿಗೆ ವಲಸೆ ಹೋಗಿವೆ. ಆದ್ದರಿಂದ ಇಂದು ಉತ್ತರಾಯಣಾರಂಭವನ್ನು ಡಿಸೆಂಬರ್ ೨೧ರಂದು, ದಕ್ಷಿಣಾಯರಂಭವನ್ನು ಜೂನ್ ೨೨ರಂದು ಆಚರಿಸುವುದು ವೈಜ್ಞಾನಿಕವಾಗಿದೆ. ಆಗ ಈ ವರ್ತನೆ ವಾಸ್ತವಿತೆಯೊಂದಿಗೆ ಹೊಂದುವ ಧಾರ್ಮಿಕ ಆಚರಣೆ ಆಗುತ್ತದೆ. ಇಲ್ಲವಾದರೆ ಅರ್ಥ ಹೀನ ಶುಷ್ಕ ವಿಧಿ ಎಂದೆನಿಸಿಕೊಳ್ಳುತ್ತವೆ.

ಬುದ್ಧಿ ಮೌಢ್ಯದಲ್ಲಿ ದಿನಗಳು ಉರುಳಿ ಜಡ್ಡುಕಟ್ಟಿ ಮಕರ ಸಂಕ್ರಮಣವೇ ಉತ್ತರಾಯಣವೆಂಬ ಸಂಪ್ರದಾಯ ರೂಢಿಗೆ ಬಂದಿತು. ದಿನದಿಂದ ದಿನಕ್ಕೆ ಬದಲಾಗುತ್ತಿರುವ ವಿಶ್ವದಲ್ಲಿ ಮಾನವನ ಸ್ಥಗಿತ ಪರಂಪರೆ ಲೆಕ್ಕಿಸದೆ ಸೌರವ್ಯೂಹದ ಬದಲಾವಣೆ ಮಾಡಿಯೇ ಬಿಟ್ಟಿತು! ಫಲವಾಗಿ ಇಂದಿನ ಪರಿಸ್ಥಿತಿ ತೀರಾ ಬೇರೆ ಉತ್ತರಾಯಣಾರಂಭ ಘಟನೆ ಡಿಸೆಂಬರ್ ೨೧ ರಂದು ಸಂಭವಿಸುತ್ತದೆ. ಆದರೆ ಸಂಕ್ರಮಣ ಮಾತ್ರ ಅಂದಿನಂತೆ ಜನೆವರಿ ೧೪ ರಂದೆ ಘಟಿಸುತ್ತದೆ. ಸೂರ್ಯ ರಾಜ ಹಳೆಯ ಸಿಂಹಾಸನ (ಜನೆವರಿ ೧೪) ತೊರೆದು ಹೊಸ ಸಿಂಹಾಸನವನ್ನು (ಡಿಸೆಂಬರ್ ೨೧) ರಂದು ಅಲಂಕರಿಸಿದ್ದಾನೆ. ಈ ಹೊಸ ಸಿಂಹಾಸನವನ್ನು ಪುಣ್ಯಕಾಲವೆಂದು ಆಚರಿಸಬೇಕಾಗಿದೆ. ಮಕರ ಸಂಕ್ರಮಣದ ಕೃತಕ ಪ್ರತಿಷ್ಠೆ ಬಿಟ್ಟು ಹನ್ನೊಂದು ಸಂಕ್ರಮಣಗಳಂತೆ ಅದರ ಪಾಡಿಗೆ ಅದನ್ನು ಬಿಡತಕ್ಕದ್ದು.

ಸೂರ್ಯ ಕಣ್ಣಿಗೆ ಕಾಣುವ ದೇವರು. ಅವನ ಚಲನೆಯಿಂದಲೇ ಉಸಿರಾಡುವ ಜೀವಿಗಳ ಪಾಲಿಗೆ ಇದೊಂದು ಪುಣ್ಯಕಾಲವೆ ಸರಿ ದಕ್ಷಿಣಾಯದಲ್ಲಿ ಮುಚ್ಚಿದ್ದ ಸ್ವರ್ಗದ ಬಾಗಿಲು ಉತ್ತರಾಯಣಕ್ಕೆ ಸೂರ್ಯ ಕಾಲಿಡುವ ಈ ದಿನವೇ ತೆರೆಯುವುದೆಂಬ ನಂಬಿಕೆ. ಹಾಗಾಗಿಯೇ ಈ ದಿನ ದೇವಸ್ಥಾನಗಳಲ್ಲಿ ವಿಶೇಷ ಪೂಜೆ ತೀರ್ಥಸ್ನಾನ, ದಾನ ಮಾಡಿದರೆ ಪುಣ್ಯ ಬರುತ್ತದೆಂಬ ನಂಬಿಕೆ, ದೇವರ ಮುಂದೆ ನಂದಾದೀಪ ಬೆಳಗಿಸುವುದು ಮುಂತಾದವು ಈ ಹಬ್ಬದ ನಂಬಿಕೆಗಳಾಗಿವೆ. ಈ ಹಬ್ಬಕ್ಕೆ ವೈಜ್ಞಾನಿಕ ಮಹತ್ವವೂ ಇದೆ. ಜೀವರಾಶಿಯ ಚೇತನ ಸೂರ್ಯ ಕರ್ಕಾಟಕ ರಾಶಿಯಿಂದ ಉತ್ತರಾಯಣದ ಮಕರ ರಾಶಿಯತ್ತ ತನ್ನ ದಿಕ್ಕು ಬದಲಿಸುವ ಹಾಗೆಯೇ ತನ್ನ ಪರಿಧಿಯಲ್ಲಿ ತಿರುವು ಪಡೆದು ಸೂರ್ಯನ ಸಮೀಪಕ್ಕೆ ಸಾಗುವ ಅಂದರೆ ಬೇಸಿಗೆಯತ್ತ ಭೂಮಿ ಸಾಗಲಾರಂಭಿಸುವ ಶುಭಕಾಲ, ಸಂಕ್ರಮಣ ಎಂದರೆ ಪರಿವರ್ತನೆ ಎಂದು ಆಗಬಹುದಾಗಿದ್ದರಿಂದ ನಕ್ಷತ್ರ ಗ್ರಹಗಳ ಚಲನೆಯಲ್ಲಿನ ಪರಿವರ್ತನಾ ಕಾಲವನ್ನು ಶುಭವೆಂದು ಪರಿಗಣಿಸಲಾಗುವುದೆಂಬ ನಂಬಿಕೆ.

ಪ್ರಕೃತಿಯ ಮಡಿಲಲ್ಲಿ ಅದರ ಏರಿಳಿತಗಳಿಗೆ ಸ್ಪಂದಿಸುತ್ತಾ ಹಾಯಾಗಿರುವ ಮಾನವ ಚಳಿಗಾಲದ ಮೈ ಮುದಗಟ್ಟಿಸುವ ಚಳಿಯಿಂದ ಹೊರ ಬಂದು ಹೊಸ ಹುರುಪು ಹೊಸ ಚೈತನ್ಯ ನೀಡುವ ಬೇಸಿಗೆಯತ್ತ ಸಾಗಲು

ಇಲ್ಲಿಂದ ಮುಂದೆ ಉತ್ಸುಕನಾಗುತ್ತಾನೆ. ಇದು ಶಶಿರ ಋತುವಿನ ಕಾಲ ಬೇಸಿಗೆ ಆರಂಭವಾಗುವ ಮುಂಚೆಯೇ ಈ ತಿಂಗಳಲ್ಲಿ ವಿಪರೀತ ಚಳಿ ಇರುತ್ತದೆ. ಮರಗಿಡಗಳು ಎಲೆಯುದುರಿಸಿ ಬೋಳಾಗಿರುತ್ತವೆ.

ಇಚ್ಛಾಮರಣಿಯಾದ ಭೀಷ್ಮಾಚಾರ್ಯನು ಶರಶಯ್ಯೆಯಲ್ಲಿ ಮಲಗಿದ್ದು ಈ ಸಂಕ್ರಾಂತಿ ಹಬ್ಬದಂದು ಸಾಯುವ ಮನಸ್ಸು ಮಾಡಿದನಂತೆ, ಮಕರ ಸಂಕ್ರಾಂತಿಯ ದಿನ ಮರಣ ಹೊಂದಿದರೆ ಅವರಿಗೆ ಕೈಲಾಸ ಸಿಗುವುದೆಂಬುದು ನಮ್ಮ ಹಿರಿಯರ ನಂಬಿಕೆ.

ಸಂಕ್ರಮಣವೂ ಮೂರು ದಿನಗಳ ಕಾಲ ಆಚರಣೆಯಲ್ಲಿರುವ ಹಬ್ಬವಾಗಿದೆ. ಮೊದಲನೆ ದಿನ ಹೆಣ್ಣುಮಕ್ಕಳ ಬೋಗಿಯಂದು, ಮರುದಿವಸ ಸಂಕ್ರಮಣ ಮತ್ತು ಮೂರನೆ ದಿನ ಕರಿ ಎಂದು ಆಚರಿಸಲಾಗುವುದು. ಉತ್ತರಾಯಣದ ಪರ್ವಕಾಲ, ಪುಣ್ಯಕಾಲ ಎಂದಾದರೂ ಇದರ ನಂಬಿಕೆಗಳಲ್ಲಿ ಜನರು ಭಯವನ್ನು ಹೊಂದಿದ್ದಾರೆ.

**ಈ ಹಬ್ಬದ ನಂಬಿಕೆಗಳು ಹಿಗೆ ಆಚರಣೆಯಲ್ಲಿರುವವು.**

**೧) ಅಕ್ಕಿ ಎಳ್ಳು ಮಿಶ್ರಿತ ಖರಟಿಗೆ ಹಚ್ಚಿಕೊಳ್ಳುವುದು.**

ಸಂಕ್ರಾಂತಿಯಲ್ಲಿ ಸ್ನಾನಕ್ಕೆ ಮೊದಲು ಎಳ್ಳು-ಅಕ್ಕಿ ಮಿಶ್ರಣ ದಿಂದ ಮಾಡಿದ ಖರಟಿಗೆ (ಮೃದುವಾದ) ಮೈಗೆಲ್ಲಾ ಹಚ್ಚಿಕೊಳ್ಳುವುದು ರೂಢಿಯಲ್ಲಿದೆ. ಅದರ ಹಿಂದೆ ಇರುವ ವೈಜ್ಞಾನಿಕ ಉದ್ದೇಶವೆಂದರೆ ಚಳಿಗಾಲ ಸಮಯವಾಗಿರುವುದರಿಂದ ಚರ್ಮವೆಲ್ಲಾ ಚಳಿಗೆ ಒಡೆದಿರುತ್ತದೆ. ದೇಹದಲ್ಲಿ ಎಣ್ಣೆ ಅಂಶ ಕಡಿಮೆಯಾದರೆ ಚರ್ಮ ಒಡೆಯುತ್ತದೆ. ಖರಟೆಗೆ ಸಂಕ್ರಾಂತಿ ಹೊರತಾಗಿ ಚಳಿ ದಿನಗಳಲ್ಲಿ ಉಪಯೋಗಿಸುವುದರಿಂದಲೂ ಚರ್ಮ ಒಡೆಯುವುದನ್ನು, ತಡೆಹಿಡಿಯುವಂತೆ ಉಪಯೋಗಿಸಬಹುದು. ಇದನ್ನು ಸಂಕ್ರಾಂತಿ ಹೊರತಾಗಿ ಚಳಿ ದಿನಗಳಲ್ಲಿ ಉಪಯೋಗಿಸುವುದರಿಂದ ಚರ್ಮ ಮೃದುವಾಗಿರುವಂತೆ ರಕ್ಷಣೆ ಕೊಡುತ್ತದೆ. ಇದನ್ನು ಸಂಕ್ರಾಂತಿ ಹೊರತಾಗಿ ಚಳಿ ದಿನಗಳಲ್ಲಿ ಉಪಯೋಗಿಸುವುದರಿಂದ ಚರ್ಮ ಮೃದುವಾಗಿರುವಂತೆ ರಕ್ಷಣೆ ಕೊಡುತ್ತದೆ.

**೨) ಮಕರ ಸಂಕ್ರಮಣದ ಆರಂಭದ ದಿನ ಹೆಣ್ಣು ಮಕ್ಕಳ ಭೋಗಿ :**

ಸಂಕ್ರಮಣದ ಹಿಂದಿನ ದಿನ ಹೆಣ್ಣು ಮಕ್ಕಳ ಭೋಗಿ ಎನ್ನುವರು. ಇಂದಿನ ಮುಂಜಾನೆ ಮನೆಯೆಲ್ಲಾ ಸಾರಿಸಿ, ತಲೆ ಸ್ನಾನ ಮಾಡಿ ಅಂದಿನ ವಿಶೇಷವಾದ ಕಡಲೆ, ಕಬ್ಬು, ಸೌತೆಕಾಯಿ, ಬಾರೆಹಣ್ಣು, ಜಾಪಳಹಣ್ಣು, ಶೇಂಗಾ, ಎಳ್ಳು, ಬೆಲ್ಲ, ಕ್ಯಾರಿಕಾಯಿ, ಬಟಾಣಿ ಗಜ್ಜರಿ, ಎಳ್ಳುಂಡಿ ಹೀಗೆ ಹತ್ತು ಹಲವಾರು ಹಣ್ಣು ಹಾಗೂ ಸಜ್ಜಿರೊಟ್ಟಿ ಬದನೆಕಾಯಿ ಇವೆಲ್ಲಾ ಭೋಗಿಸುವ (ತಿನ್ನುವ) ದಿನವಾದ್ದರಿಂದ ಹೆಣ್ಣುಮಕ್ಕಳ ಭೋಗಿ ಎಂದಿರಬೇಕು. ಹಳ್ಳಿಯ ರೈತಾಪಿ ಜನಗಳು ಶ್ರಮ ಜೀವಿಗಳು ಬೇರೆ ಸಮಯದಲ್ಲಿ ಈ ತಿಂಡಿ ತಿನಿಸುಗಳಲ್ಲಿ ಒಂದೊಂದಾಗಿ ಸಿಕ್ಕರು ಅವುಗಳ ಬಳಕೆ ಮಾಡದೆ ಇರಬಹುದು. ಆದರೆ ಇಂತಹ ಹಬ್ಬಗಳ ಸಂದರ್ಭದಲ್ಲಾದರೆ ನಿಯಮವನ್ನು ಮುರಿಯಬಾರದೆನ್ನುವ ಕಾರಣಕ್ಕಾಗಿ ಸೇವಿಸಲು ಒಳ್ಳೆ ಅವಕಾಶ ದೊರಕಿಸುವ ಉದ್ದೇಶವಾಗಿದೆ. ಹೆಣ್ಮಕ್ಕಳು ಕೆಲಸದಿಂದಾಗಿ ತಿನ್ನಲು ನಿರ್ಲಕ್ಷಿಸಬಾರದೆಂಬ ಉದ್ದೇಶದಿಂದಾಗಿಯೂ ಹೆಣ್ಮಕ್ಕಳಿಗೆ ಒಂದು ದಿವಸ ಗಂಡಸರಿಗೆ ಇನ್ನೊಂದು ದಿವಸದ ಅವಕಾಶ ಕೊಡಲಾಗಿದೆ.

ಭೋಗಿ ದಿವಸ ಉಪಯೋಗಿಸುವ ಈ ಎಲ್ಲಾ ತಿನಿಸುಗಳ ಆರೋಗ್ಯಕ್ಕೆ ಬೇಕಾದ ಎಣ್ಣೆ ಮತ್ತು ಪೌಷ್ಠಿಕಾಂಶ ಒದಗಿಸುತ್ತವೆ. ಆದ್ದರಿಂದ ಈ ನಂಬಿಕೆಯು ವೈಜ್ಞಾನಿಕ ಉಪಯುಕ್ತ ಹೊಂದಿದೆ.

**೩) ಎಳ್ಳು ಬೆಲ್ಲ ಹಂಚುವುದು :**

ಎಳ್ಳುಬೆಲ್ಲ ಹಂಚುವುದರ ಕಾರಣವಾಗಿ ಪೌರಾಣಿಕ ಕಥೆಯೊಂದು ಹೀಗಿದೆ. "ತಿಲಾಸುರನೆಂಬ ರಾಕ್ಷಸನೊಬ್ಬ ಬ್ರಹ್ಮನಿಂದ ವರ ಪಡೆಯುತ್ತಾನೆ. ಆ ವರದ ಬಲದಿಂದ ಉನ್ಮತ್ತವಾಗಿ ಲೋಕ ಪೀಡಕನಾಗುತ್ತಾನೆ. ಆಗ ಸೂರ್ಯದೇವ ಮಕರ ಮತ್ತು ಕರ್ಕ ಎಂಬಿಬ್ಬರು ಮಹಿಳೆಯರ ಸಹಾಯದಿಂದ ಆ ತಿಲಾಸುರನನ್ನು ನಿವಾರಿಸಲು ಮುಂದಾಗುತ್ತಾರೆ. ಮಕರನು ತಿಲಾಸುರನ ಸಂಹಾರಕ್ಕಾಗಿ ಆತನ ಹೊಟ್ಟೆಯನ್ನು ತನ್ನ ಬಲ್ಲೆಯಿಂದ ತಿವಿದಾಗ ಅಲ್ಲಿಂದ ರಾಶಿ ಎಳ್ಳು ಹೊರಬರುತ್ತವೆ. ಕೊನೆಗೆ ಅಸುರ ಮೃತಪಡುತ್ತಾನೆ. ಈ ಕಾರಣಕ್ಕಾಗಿ ಭೂಮಿಗೆ ಎಳ್ಳಿನ ಪ್ರವೇಶವಾಗುತ್ತದೆ. ಆಗ ಸೂರ್ಯದೇವನು ಮಕರನನ್ನು ಸಾಹಸಕ್ಕಾಗಿ ಹೊಗಳಿ ನಿನ್ನನ್ನು ಮತ್ತು ನೀನು ಶೋಧಿಸಿದ ಎಳ್ಳನ್ನು ಪೂಜಿಸಿದವರಿಗೆ ಒಳಿತಾಗಲಿ ಎಂದು ಹಾರೈಸುತ್ತಾನೆ.[೫೧]

ಎಳ್ಳು ಎಣ್ಣಿಯ ಕಾಳು, ಚಳಿಗಾಲದಲ್ಲಿ ದೇಹವನ್ನು ಬಿಸಿಯಾಗಿಡಲು ಎಣ್ಣೆ, ಬೆಣ್ಣೆ, ತುಪ್ಪ ಇವೇ ಮೊದಲಾದ ಜಿಡ್ಡು ಪದಾರ್ಥಗಳನ್ನು ಅಗತ್ಯ ಪ್ರಮಾಣದಲ್ಲಿ ಸೇವಿಸುವುದು ಉತ್ತಮ ಚಳಿಗಾಲದ ಚಳಿಗೆ ಚರ್ಮ ಎಣ್ಣೆ ಅಂಶದ ಕೊರತೆಯಿಂದಾಗಿ ಒಣಗಿರುತ್ತದೆ. ಎಳ್ಳಿನ ಸೇವನೆಯಿಂದ ಎಣ್ಣೆ ಪದಾರ್ಥ ದೇಹಕ್ಕೆ ದೊರಕುವುದು.

"ಎಳ್ಳು ಬೆಲ್ಲ ತಿಂದು ಒಳ್ಳೆ ಮಾತಾಡು ಎನ್ನುವಂತೆ ಎಳ್ಳಿನಲ್ಲಿ ಜಿಡ್ಡಿಗೆ ಅಂಟಿಕೊಳ್ಳುವ ಗುಣವಿರುವುದರಿಂದ ಸ್ನೇಹ ವಿಶ್ವಾಸಗಳು ಹೀಗೆ ಉಳಿಯಲಿ ಎಂಬ ಒಳಾರ್ಥ ಮತ್ತು ಬೆಲ್ಲದ ಸವಿಯಂತೆ ಸವಿಯಾಗಿರಲಿ ಎಂಬುವುದೇ ಆಗಿದೆ."

**೪) ಸಂಕ್ರಾಂತಿಯಲ್ಲಿ ಮುತ್ತೈದಿಯರಿಗೆ ಅರಿಶಿಣ ಕುಂಕುಮ ಕೊಡುವುದು :**

ಅರಿಶಿಣ ಕುಂಕುಮ ಕೊಡುವ ಉದ್ದೇಶಕ್ಕಾಗಿ ಪೌರಾಣಿಕ ಕಥೆಯೊಂದು ಹೀಗಿದೆ. ರಾಕ್ಷಸನೊಬ್ಬನಿಗೆ ಬ್ರಾಹ್ಮಣರ ಮನೆಯಿಂದ ಆಹಾರವಾಗಿ ಹೋಗಬೇಕಾಗಿರುತ್ತದೆ. ಇಲ್ಲಿ ಊರಿನ ಜನತೆಯಲ್ಲಿ ದಿನಕ್ಕೊಬ್ಬರು ಆಹಾರವಾಗಿ ಹೋಗುವುದು ದುಃಖದ ಸಂಗತಿಯಾದರು ಅನಿವಾರ್ಯವಾಗಿತ್ತು. ಪಾಂಡವರು ಅಜ್ಞಾತಾವಾಸದಲ್ಲಿ ಬ್ರಾಹ್ಮಣರ ಮನೆಯಲ್ಲಿದ್ದಾಗ ಭೀಮನು ಬ್ರಾಹ್ಮಣನಿಗೆ ತಾನು ಹೋಗುವುದಾಗಿ ತಿಳಿಸುತ್ತಾನೆ. ಹೊರಡುವಾಗ ಆತನು ಬಂಡಿಯ ತುಂಬಾ ಎಣ್ಣೆ ಹೋಳಿಗೆ ಮತ್ತು ಇತರ ಆಹಾರವೆಲ್ಲಾ ಒಯ್ದಿರುತ್ತಾನೆ. ಆಹಾರಕ್ಕಾಗಿ ಕಾಯುತ್ತಿದ್ದ ರಾಕ್ಷಸನ ಎದುರಿಗೆ ಬಂಡಿ ನಿಲ್ಲಿಸಿ ತಂದ ಆಹಾರವೆಲ್ಲಾ ಒಯ್ದಿದ್ದುರುತ್ತಾನೆ. ಆಹಾರಕ್ಕಾಗಿ ಕಾಯುತ್ತಿದ್ದ ರಾಕ್ಷಸನ ಎದುರಿಗೆ ಬಂಡಿ ನಿಲ್ಲಿಸಿ ತಂದ ಆಹಾರವೆಲ್ಲಾ ಭೀಮನು ಒಂದೆ ಸಮನೆ ನೀಗಿಸಿಕೊಳ್ಳಲು ಭೀಮನ ಮೇಲೆ ಎರಗಿದ ರಾಕ್ಷಸನನ್ನು ಭೀಮನು ಕೊಂದು ಹಾಕಿದನು. ಇದರಿಂದ ಊರಿನ ಜನರು ಪ್ರಾಣ ಕಳೆದುಕೊಳ್ಳುವುದು ತಪ್ಪಿತು. ಸ್ತ್ರೀಯರು ತಮ್ಮ ಪತಿಯರನ್ನು ಕಳೆದುಕೊಳ್ಳುವ ಅವಕಾಶ ತಪ್ಪಿ ತಮ್ಮ ಕುಂಕುಮ ಅರಿಶಿಣದ ಸೌಭಾಗ್ಯ ಉಳಿಯುವಂತೆ ಮಾಡಿದ ಭೀಮ, 'ಈ ನೆನಪಿಗೋಸ್ಕರ ಅಂದಿನ ದಿವಸ ಅರಿಶಿಣ ಕುಂಕುಮ ಮುತ್ತೈದಿ ತನಗೆ ಯಾವತ್ತು ಇದೇ ರೀತಿಯಿರಲೆಂದು ಇತರರಿಗೆ ಕೊಡುವ ಪದ್ಧತಿ ರೂಢೀಯಾಯಿತು.[೫೨]

---

೫೧ (ಅಡಿಟಿಪ್ಪಣಿ: ೫೧: ಕೃಷಿ ಆಚರಣೆ ಮಲ್ಲಿಕಾರ್ಜುನ ಹೊಸ ಪಾಳ್ಯ ಮಟ ಸಂಖ್ಯೆ-೬೫)

೫೨ (ಅಡಿಟಿಪ್ಪಣಿ: ೫೨: ಜನಪದರ ಹೇಳಿಕೆ ಕಥೆ)

ಇಂದಿಗೂ ಮಾರ್ವಾಡಿಗಳ ಮನೆಯ ಹೆಂಗಸರು ಹದಿಮೂರು ಜನ ಮುತ್ತೈದೆಯರಿಗೆ ತಮ್ಮ ಕೈಲಾದ ಅಂದರೆ ಹಣೆ ಬೊಟ್ಟಿನಿಂದ ಹಿಡಿದು ಸೀರೆಯವರೆಗೂ ಯಾವುದಾದರೂ ಸರಿ ಎಳ್ಳುಂಡೆಗಳೊಡನೆ ಅವರ ಮನೆಗೆ ಹೋಗಿ ನೀಡಿ ನಮಸ್ಕರಿಸಿ ಬರುವ ಪದ್ಧತಿಯಿದೆ. ಹಾಗೂ ಇತರರು ಮುತ್ತೈದಿಯರನ್ನು ಮನೆಗೆ ಕರೆಯಿಸಿ ಕೊಡುವುದುಂಟು.

ಕುಂಕುಮ ಹಣೆಯ ಹುಬ್ಬುಗಳ ಮಧ್ಯೆ ಹಚ್ಚುವುದರಿಂದ ಅಲ್ಲಿನ ರಕ್ತಚಲನೆಯ ನರಗಳಿಗೆ ತಂಪನ್ನು ಮತ್ತು ರಕ್ತದ ಬಣ್ಣದ ಹೆಚ್ಚಳಕ್ಕೆ ಸಹಾಯಕವಾಗುವುದು. ಮಾಪುಳಕಾಯಿ ಒಳಗೊಂಡಂತೆ ಇನ್ನಿತರ ಗಿಡಮೂಲಿಕೆ ಹಣ್ಣಿನಿಂದ ತಯಾರಿಸಿದ ಕುಂಕುಮ ಆರೋಗ್ಯಕ್ಕೆ ಒಳ್ಳೆಯದು. ಅದೇ ರೀತಿ ಅರಿಶಿಣದ ಬಳಕೆಯು ಒಳ್ಳೆಯದು. ಆದರೆ ಇಂದಿನ ಕುಂಕುಮದಲ್ಲಿ ರಸಾಯನಿಕ ವಸ್ತುಗಳು ಹೆಚ್ಚಾಗಿ ಬಳಕೆಮಾಡುತ್ತಿರುವುದರಿಂದ ಚರ್ಮಕ್ಕೆ ಹಾನಿಯನ್ನುಂಟು ಮಾಡುತ್ತಿದೆ.

**೬) ಎಳ್ಳು ಶೇಂಗಾ ಹೋಳಿಗೆ ಮಾಡುವುದು :**

ಸಂಕ್ರಾಂತಿ ಮೂರನೆ ದಿನ ಹೆಚ್ಚು ಕಡಿಮೆ ಎಲ್ಲರ ಮನೆಗಳಲ್ಲಿ ತಪ್ಪದೆ ಎಳ್ಳು ಶೇಂಗಾ ಮತ್ತು ಬೆಲ್ಲ ಮಿಶ್ರಿತವಾದ ಹೋಳಿಗೆ ಇದ್ದಿರುತ್ತವೆ. ಸಂಕ್ರಾಂತಿಗೆ ಎಣ್ಣೆ ಪದಾರ್ಥಗಳನ್ನೇ ಹೆಚ್ಚಾಗಿ ಉಪಯೋಗಿಸುವುದು ಕಂಡುಬರುತ್ತವೆ. ಇದರ ಹಿಂದಿರುವ ವೈಜ್ಞಾನಿಕ ಉದ್ದೇಶವೆಂದರೆ ಚಳಿಯಿಂದಾಗಿ ಚರ್ಮ ಒಡೆದು ಒಣದಾಗಿರುತ್ತದೆ. ಅವಶ್ಯಕವಾಗಿ ಎಣ್ಣೆ ಅಂಶ ದೇಹಕ್ಕೆ ಬೇಕಾಗಿರುವುದು. ಇದರ ಉಪಯೋಗದಿಂದ ಆರೋಗ್ಯ ಕಾಪಾಡುತ್ತದೆ.

ಹೇಮಂತ ಋತುವಿನಲ್ಲಿ ಪ್ರಕೃತಿ ಅಂತರ್ಮುಖಿಯಾಗಿದ್ದು ಒಂದಿಷ್ಟು ರಸ ಕಳೆದು ಜೀವಗಳೂ ಕೂಡ ದೈಹಿಕವಾಗಿ ಮಾನಸಿಕವಾಗಿ ಸ್ವಲ್ಪ ಬಳಲುತ್ತವೆ. ಬೆಳಗಿನ ದಟ್ಟಮಂಜು, ವಾತಾವರಣದ ಶುಷ್ಕತೆ ದೇಹದಲ್ಲಿನ ಜಿಡ್ಡಿನಂಶ ಕಡಿತಗೊಳಿಸುತ್ತವೆ. ಚರ್ಮ ಕಿರಿಕಿರಿ ಅನುಭವಿಸುತ್ತದೆ. ಶಕ್ತಿ ಸಂಚಾರ ಮಂದವಾಗುತ್ತದೆ. ಹೀಗಿರುವಾಗ ಎಳ್ಳು ಕೊಬ್ಬರಿ ಶೇಂಗಾಗಳಲ್ಲಿರುವ ಜಿಡ್ಡಿನಾಂಶ ಬೆಲ್ಲದ ಶಕ್ತಿವರ್ಧಕ ಅಂಶವೆಲ್ಲವುಗಳ ಮಿಶ್ರಣವಾದ ಸಂಕ್ರಾಂತಿ ಎಳ್ಳಿನ ಸೇವನೆಯು ದೇಹಕ್ಕೆ ಅಗತ್ಯವಾದ ಋತುಮಾನಕ್ಕನುಗುಣವಾದ ಪೋಷಕ ಸತ್ವಗಳನ್ನು ಪೂರೈಸುತ್ತದೆ ಹಾಗೂ ಆರೋಗ್ಯವನ್ನು ಸುಸ್ಥಿತಿಯಲ್ಲಿಡುತ್ತದೆ. ಎಂಬುದನ್ನು ನಮ್ಮ ಪೂರ್ವಿಕರು ಕಂಡುಕೊಂಡಿದ್ದರು.

**೭) ಸಂಕ್ರಾಂತಿ ಹಬ್ಬ ಏನನ್ನು ಊಟ ಮಾಡಿದೆ. ಯಾವ ವಾಹನ ಬಳಸಿದೆ ಎಂದು ಪಂಚಾಂಗ ನೋಡುವುದು :**

ಸೂರ್ಯನು ತುಲಾ ರಾಶಿಯಿಂದ ಮಕರ ರಾಶಿಗೆ ಪ್ರವೇಶವಾಗುವ ದಿನ. ಆದರೆ ಜನಪದರು ಕಂಡುಕೊಂಡದ್ದು. ಸೂರ್ಯನಿಗೆ ಒದಗಿರುವ ಸಂಕಟಾವಸ್ಥೆ ಎಂದು. ವಿಕೃತ ವೇಷಧಾರಿಯಾದ ಸಂಕ್ರಾಂತಿಯು ಬಿಳಿ ಬಟ್ಟೆ ಧರಿಸಿ, ಬಿಳಿವಾಹನವೇರಿ, ಬಿಳಿ ಆಹಾರ ಊಟ ಮಾಡುತ್ತ ಎಂದು ಪಂಚಾಂಗದಲ್ಲಿದ್ದರೆ ಜನರೂ ಕೂಡ ಹಬ್ಬದ ಮೂರು ದಿನಗಳ ಕಾಲ ಬಿಳಿ ಬಟ್ಟೆ ಉಡುವುದಿಲ್ಲ ಆದರೆ ಬಿಳಿ ಆಹಾರವಾದ ಅನ್ನ ಮೊಸರು ದೇವರಿಗೆ ಅರ್ಪಿಸಿದ ನಂತರ ಮನೆಯಲ್ಲಿ ಎಲ್ಲರಿಗೂ ತಿನ್ನಲು ಕೊಡುತ್ತಾರೆ. ಅನ್ನ ಮೊಸರು ಕೂಡ ಆರೋಗ್ಯಕ್ಕೆ ಒಳ್ಳೆಯದೇ ಆಗಿದೆ. ಒಂದು ವೇಳೆ ಪಂಚಾಂಗದಲ್ಲಿರುವುದನ್ನು ಮಾಡದಿದ್ದರೆ ಏನಾದರೂ ಕಾದಾಟ

ಆರಂಭವಾಗುತ್ತದೆಂಬ ನಂಬಿಕೆ ಇಂದಿಗೂ ಉಳಿದು ಬಂದಿದೆ. ಅದಕ್ಕಾಗಿ ಪೀಡೆಯ ಸಂಕ್ರಾಂತಿ ಎಂದು ಹೇಳುವುದುಂಟು. ಈ ದಿನಗಳಲ್ಲಿ ಕಪ್ಪು ಬಟ್ಟೆ ಉಡಬಾರದೆಂಬ ನಿಷೇಧವು ಇದೆ. ಹಾಗೆ ಕರಿ ದಿನ ಕೇಡಾಗುತ್ತದೆಂಬ ಸಂಕುಚಿತ ನಂಬಿಕೆಗಳು ಇಂದಿನವರಿಗೂ ಉಳಿದಿರುವುದು ಶೋಚನೀಯವೆನಿಸುತ್ತದೆ. ಹಾಗೂ ಸಂಕ್ರಾಂತಿಯ ಆಚರಣೆಯ ಸ್ಪಷ್ಟ ಉದ್ದೇಶ ಜನರಿಗೆ ತಿಳಿಯದೇ ಇರುವುದು ಇದಕ್ಕೆ ಕಾರಣವಾಗಿರಬೇಕು. ವೈಜ್ಞಾನಿಕವಾಗಿ ಸೂರ್ಯನ ಚಲನೆಯನ್ನು ಗುರುತಿಸುವ ಮತ್ತು ಒಂದು ರಾಶಿಯಿಂದ ಇನ್ನೊಂದು ರಾಶಿಗೆ ಸೂರ್ಯ ಪ್ರವೇಶಿಸುವ ದಿನವೆಂದು ತಿಳಿದರೆ ಎಳ್ಳುಬೆಲ್ಲ ಹಂಚಿಕೊಂಡು ಸಂತೋಷ ಸಂಭ್ರಮದಿಂದ ಆಚರಿಸುವ ಹಬ್ಬಕ್ಕೆ ಇನ್ನು ಮೆರಗೂ ಮೂಡುತ್ತದೆ.

**ಮಹಾಶಿವರಾತ್ರಿ :**

ಬ್ರಹ್ಮ ಜಗತ್ತನ್ನು ಸೃಷ್ಟಿಸಿದರೆ, ಶಿವನು ಜಗತ್ತಿಗೆ ಒಡೆಯನೆಂಬ ನಂಬಿಕೆಯಿದೆ, ಅವನನ್ನು ಭೋಳೆಶಂಕರ, ಶಿವ, ಪರಮಾತ್ಮ, ಜಗದೀಶ್ವರ, ಭಗವಂತ, ಅರ್ಧನಾರೀಶ್ವರ, ಚರ್ಮಾಂಬರ ಹೀಗೆ ಹಲವಾರು ಹೆಸರುಗಳಿಂದ ಶಿವನನ್ನು ಕರೆಯಲಾಗುವುದು. ಈ ಜಗತ್ತೆ ಶಿವಮಯ ಎಂದು ಹೇಳಲಾಗುವುದು. ಎಲ್ಲದರಲ್ಲೂ ಮತ್ತು ಎಲ್ಲಾ ಸಮಯದಲ್ಲೂ ಶಿವನನ್ನು ಸ್ಮರಿಸಿದರೂ ತೃಪ್ತಿಕಾಣದೆ ಜನತೆಗೆ ಮಹಾಶಿವರಾತ್ರಿಯಲ್ಲಿ ಶಿವನನ್ನು ನೆನೆದರೆ ಪುಣ್ಯಕ್ಕೆ ಏಣಿಯೇ ಇಲ್ಲ ಜನ್ಮ ಜನ್ಮಾಂತರದ ಸರ್ವಪಾಪಗಳು ನಾಶವಾಗುತ್ತದೆ ಎನ್ನುವ ನಂಬಿಕೆಗಳು ಇವೆ.

ಈ ನಂಬಿಕೆಗಳ ಸುತ್ತ ತ್ಯಾಗ, ಸೇವೆ, ಸಹನೆಗುಣಗಳ ಬೆಳವಣಿಗೆಗೆ ಅವಕಾಶವಿರುತ್ತದೆ. ಅದೇ ರೀತಿಯಾಗಿ ಆರೋಗ್ಯವನ್ನು ಕಾಪಾಡುವ ವೈಜ್ಞಾನಿಕತೆಯ ಉಪಯೋಗಗಳು ಇವೆ. ಮಹಾಶಿವರಾತ್ರಿ ಆಚರಣೆ ಕುರಿತು ಅನೇಕ ಪೌರಾಣಿಕ ಕಥೆಗಳು ಇವೆ. ಶಿವಲೀಲಾಮೃತದ ಕಥೆಯೊಂದು ಹೀಗಿದೆ.

"ಬೇಡನೊಬ್ಬನು ಪ್ರಾಣಿಗಳನ್ನು ಬೇಟೆಯಾಡಲು ಅಡವಿಗೆ ಹೋಗುತ್ತಾನೆ. ದಟ್ಟವಾದ ಕಾಡಿನಲ್ಲಿ ಪ್ರಾಣಿಗಳು ಓಡಾಡುವುದೇ ಕಾಣದ ಬೇಡನು ಬೇಸತ್ತು ಅಲ್ಲಿರುವ ಬಿಲ್ವಪತ್ರೆಯ ಗಿಡವೇರಿ ಕುಳಿತನು. ಈ ಗಿಡದ ಬಗ್ಗೆಯಾಗಲಿ, ಬಿಲ್ವಪತ್ರೆಯ ಬಗ್ಗೆಯಾಗಲಿ, ಏನೆಂದು ಅರಿಯದ ಬೇಡ ಅದರ ಎಲೆ ತನ್ನ ಕಣ್ಣಿಗೆ ಬಡಿಯುತ್ತಿದ್ದು ಪ್ರಾಣಿಗಳನ್ನು ನೋಡಲು ಅಡ್ಡಿ ಮಾಡುತ್ತಿದ್ದವು ಆದ್ದರಿಂದ ಅವುಗಳನ್ನು ಒಂದೊಂದಾಗಿ ಕಡಿದು ಕೆಳಗೆ ಬೀಳಿಸುತ್ತಿದ್ದನು. ಮರದ ಕೆಳಗಿದ್ದ ಶಿವಲಿಂಗದ ಮೇಲೆ ಬಿಲ್ವಪತ್ರೆಗಳು ಬೀಳುತ್ತಿದ್ದವು.

ಹೀಗಿರುವಾಗ ಜಿಂಕೆಯೊಂದು ಕಣ್ಣಿಗೆ ಬೀಳಲು ಬಿಲ್ಲಿಗೆ ಬಾಣ ಸಿದ್ಧಪಡಿಸಲು ಅದು "ನಾನೂ ತುಂಬು ಗರ್ಭಿಣಿಯಾದ್ದರಿಂದ ನನ್ನ ಪ್ರಸವದ ನಂತರ ಹಿಂದಿರುಗಿ ಬರುವೆ" ಎಂದು ಧೈರ್ಯದಿಂದ ಬೇಡಿಕೊಂಡಿತು ಹೀಗೆ ಕೇಳಿದ ಜಿಂಕೆಯನ್ನು ಬಿಟ್ಟು ಇದೇ ರೀತಿ ಎರಡನೇ ಜಿಂಕೆ ತನ್ನ ಮಕ್ಕಳಿಗೆ ಹಾಲೂಣಿಸಿ ಬರುವುದಾಗಿಯೂ, ಮೂರನೆ ಜಿಂಕೆಯು ವಿರಹ ವೇದನೆಯಿಂದ ಬಳಲುವ ತನ್ನ ಗಂಡನಿಗೆ ತೃಪ್ತಿಪಡಿಸಿ ಬರುವುದಾಗಿಯೂ ಹೇಳಿತು. ಹಿಂದೆಂದೂ ಮಾತನಾಡದ ಈ ಪ್ರಾಣಿಗಳು ಮಾತನಾಡಿ ದೈನ್ಯದಿಂದ ಕೇಳಿರುವುದನ್ನು ನೋಡಿ ಕಠಿಣ ಮನಸ್ಸಿನ ಬೇಡನ ಹೃದಯ ಕರಗಿ ಅವುಗಳನ್ನು ಅವು ಹೇಳಿದಂತೆ ಬಿಟ್ಟನು. ಅವುಗಳ ಬರುವನ್ನು ಕಾಯುತ್ತ ಕುಳಿತ ಬೇಡನಿಗೆ ಬಿಲ್ವಪತ್ರೆ ಕಡಿದು ಕೆಳಗೆ ಹಾಕುವುದು ಒಂದು ಕೆಲಸವೆನಿಸಿತು. ಹಾಗೆಂಯೇ ಅಂದು ಶಿವರಾತ್ರಿಯಾಗಿದ್ದರಿಂದ ಶಿವಲಿಂಗ ಪೂಜೆ ಮಾಡುತ್ತಿದ್ದ ಜನರು ಶಿವ ಶಿವ ಹರ ಹರ ಮಾಹದೇವ ಎನ್ನುವ ನುಡಿ ಮೋಜು ಎನಿಸಿ ಅದನ್ನು ಹೇಳುತ್ತಿದ್ದನು.

ಇತ್ತ ಮಾತು ಕೊಟ್ಟ ಜಿಂಕೆಗಳೆಲ್ಲಾ ಮರಳಿ ಬಂದದ್ದನ್ನು ಕಂಡ ಬೇಡನು ಆ ಮೂರು ಮೃಗಗಳನ್ನು ಕಣ್ತುಂಬಾ ನೋಡಿ ಅವುಗಳ ಪಾದಗಳ ಮುಂದೆ ಬಿದ್ದು ಹೊರಳಾಡಿದನು. ಆತನು ಅವುಗಳನ್ನು ಕೊಲ್ಲುವುದು ಬಿಟ್ಟು ದೈನ್ಯಭಾವನೆ ಮೂಡಿತು.

ಬೇಟೆಗೆ ಬಂದ ಈ ಓರ್ವ ಕಾಡ ಬೇಡನು ಅದೇ ಶಿವರಾತ್ರಿಯ ದಿನ ಬಿಲ್ವಪತ್ರೆಯ ಮರವನ್ನೇರಿ ತನಗರಿಯದಂತೆ ಬಿಲ್ವದಳಗಳನ್ನು ಕತ್ತರಿಸಿ ಚೆಲ್ಲಿದನು. ಭೂಗತವಾದ ಪಂಚಮುಖಿ ಶಿವಲಿಂಗವನ್ನು ಏನೊಂದು ಅರಿಯದೇ ಸಹಸ್ರ ಬಿಲ್ವದಗಳಿಂದ ಪೂಜಿಸಿದನು. ಹಾಸ್ಯಕ್ಕಾಗಿ ಶಿವ ಶಿವ ಎಂದು ನುಡಿದು ಜನ್ಮ ಜನ್ಮಾಂತರದ ಪಾಪಗಳನ್ನು ಬೇಟೆ ಸಿಗದ ಕಾರಣ ಉಪವಾಸವಿರಬೇಕಾಯಿತು. ಬೇಟೆಗಾಗಿ ಇದೇ ಶಿವರಾತ್ರಿಯಲ್ಲಿ ದಿನ ಪೂರ್ಣ ಜಾಗರಣೆ ಮಾಡಬೇಕಾಯಿತು.

**ಮಹಾಶಿವರಾತ್ರಿ ಕುರಿತು ನಂಬಿಕೆಗಳು ಇಂತಿವೆ.**

೧) **ಶಿವರಾತ್ರಿ ದಿವಸ ಉಪವಾಸ ಮಾಡುವುದು :**

ಉಪವಾಸ ಈ ಕುರಿತು ವಿವರಣೆ ಆಚರಣೆ (ಅಧ್ಯಾಯ ಭಾಗ–೧ ರಲ್ಲಿ ಬಂದಿರುತ್ತದೆ) ಆರೋಗ್ಯವನ್ನು ಸಮತೋಲನದಲ್ಲಿಟ್ಟಿರುತ್ತದೆ. ಭೋಜನ ಭಕ್ಷ ಪ್ರೀಯರು ಒಂದು ದಿನವಾದರೂ ಭೋಜನ ತ್ಯಜಿಸಲು ಸಿದ್ಧರಾಗಿರುವುದಿಲ್ಲ. ಅಂತಹವರನ್ನು ಕಂಡ ಶಿವರಾತ್ರಿಯಲ್ಲಿ ಉಪವಾಸ ಮಾಡಿದರೆ ಒಳ್ಳೆಯದೆಂದು ಹೇಳಿರಬೇಕು.

೨) **ಶಿವರಾತ್ರಿಯಲ್ಲಿ ಜಾಗರಣೆ ಮಾಡುವುದು :**

ಉಪವಾಸ ಮಾಡುವ ನಂಬಿಕೆ ವೈಜ್ಞಾನಿಕತೆಯಿಂದ ಉಪಯುಕ್ತ ಎನಿಸಿದೆ. ಆದರೆ ಜಾಗರಣೆ ಮಾಡಬೇಕೆಂಬ ನಂಬಿಕೆ ಪೌರಾಣಿಕ ಕಥೆಗಳಿಂದ ಮಾತ್ರ ಮುಂದುವರೆದಿರಬಹುದಷ್ಟೇ ಇದರಿಂದ ಅನುಪಯುಕ್ತವೇ ಹೊರತು ಇನ್ನಾವುದೇ ಉಪಯುಕ್ತತೆಗಳು ಕಂಡುಬರುವುದಿಲ್ಲ ಏಕೆಂದರೆ ಆಹಾರ ಸೇವನೆಯಂತೆ ನಿದ್ರೆಯೂ ಆರೋಗ್ಯಕ್ಕೆ ಅಷ್ಟೇ ಮುಖ್ಯವಾಗಿದೆ. ಆಹಾರ ಒಂದು ದಿನ ಬಿಟ್ಟರೂ ಅಂಗಾಂಗಳಿಗೆ ಉಪಯುಕ್ತವಾಗುತ್ತದೆ. ಆದರೆ ನಿದ್ರೆ ಬಿಟ್ಟರೆ ಇನ್ನೂ ದೇಹ ಭಾರವಾಗಿ, ಮಾನಸಿಕ ನೆಮ್ಮದಿ ಹಾಳುಮಾಡುತ್ತದೆ. ಆರೋಗ್ಯದ ಮೇಲೆ ಪರಿಣಾಮವನ್ನುಂಟು ಮಾಡುತ್ತದೆಂದೇ ಹೇಳಬಹುದು.

೩) **ಶಿವಲಿಂಗಕ್ಕೆ ಬಿಲ್ವಪತ್ರೆ, ಉತ್ತರಾಣಿಕಡ್ಡಿ, ಬಿಳಿಎಕ್ಕಿ, ಅಡವಿಹೂಗಳೊಂದಿಗೆ ಪೂಜಿಸುವುದು:**

ಸಾಮಾನ್ಯ ದಿನಗಳ ಪೂಜೆಗಿಂತ ಮಹಾ ಶಿವರಾತ್ರಿಯ ಶಿವಲಿಂಗ ಪೂಜಕ್ಕೆ ಬಹಳ ಮಹತ್ವ ಕೊಡಲಾಗುತ್ತದೆ. ಶಿವನ ಪ್ರತೀಕವಾಗಿರುವ ಲಿಂಗಕ್ಕೆ ವಿಶಿಷ್ಟ ರೀತಿಯಲ್ಲಿ ಪೂಜಿಸುವ ಪದ್ಧತಿಯಿದೆ. ಶಿವರಾತ್ರಿ ದಿನ ಸಂಜೆ ಸಮಯಕ್ಕೆ ಪೂಜೆಗೆ ಬಿಲ್ವಪತ್ರೆ ಶಿವನ ಮೂರು ಕಣ್ಣುಗಳೆಂದು, ಬ್ರಹ್ಮ, ವಿಷ್ಣು, ಮಹೇಶ್ವರ ಸ್ವರೂಪವೆಂದು, ಮೂರು ದಳವಿರುವ ಒಂದು ಪತ್ರಿಯನ್ನು ಶಿವನಿಗೆ ಅರ್ಪಿಸಿದರೆ, ಮೂರು ಜನ್ಮಗಳ ಪಾಪ ಸಂಹಾರ ಮಾಡುತ್ತದೆ ಎಂಬ ನಂಬಿಕೆ ಇದೆ. ಅದರಂತೆ ಉತ್ತರಾಣೆ ಕಡ್ಡಿಯೂ ಬಸವನೊಂದಿಗೆ ಭೂಮಿಗೆ ಬಂತೆಂಬ ನಂಬಿಕೆಯೂ ಇದೆ. ಈ ಕಡ್ಡಿ ತುಪ್ಪದಲ್ಲಿ ಅದ್ದಿ ದೀಪ ಬೆಳಗುವರು ಇದರ ಸುವಾಸನೆ ಆರೋಗ್ಯಕ್ಕೆ

ಹಿತವೆನಿಸಿ ಸುತ್ತಲಿನ ಕ್ರಿಮಿಗಳನ್ನು ನಾಶಪಡಿಸುವ ವೈಜ್ಞಾನಿಕ ಗುಣವಿದೆ. ಬೇಸಿಗೆ ಕಾಲ ಆರಂಭವಾಗುವ ಈ ಸಂದರ್ಭದಲ್ಲಿ ಬಳ್ಳಿಗಳಲ್ಲಿ ಹೂ ಬಿಡುವುದು ಕಡಿಮೆಯಾಗಿರುತ್ತದೆ. ಆದರೆ ಇದೇ ಸಮಯದಲ್ಲಿ ವಿಶೇಷವಾಗಿ ಮುತ್ತಲು ಗಿಡಕ್ಕೆ ಹೂವು ಹತ್ತಿರುತ್ತವೆ. ಮುತ್ತಲು ಹೂ ಬಿಳಿ ಎಕ್ಕಿ ಹೂವ ಶಿವನಿಗೆ ಪ್ರಿಯವೆಂಬ ನಂಬಿಕೆಯಿಂದ ಅರ್ಪಿಸುವರು. ಔಷಧಿ ಗುಣವಿರುವ ಈ ಹೂಗಳ ವಾಸನೆ ಮತ್ತು ಬಳಕೆಯಿಂದ ಆರೋಗ್ಯಕ್ಕೆ ಉಪಯುಕ್ತವಾಗಿದೆ.

**೪) ವಿವಿಧ ಹಣ್ಣು – ಹಂಪಲುಗಳು ನೈವೇದ್ಯ ಮಾಡುವುದು:**

ಋತುಮಾನಕ್ಕೆ ಅನುಸಾರವಾಗಿ ಸಿಗುವ ಹಣ್ಣು ಹಂಪಲುಗಳು ತಿನ್ನುವುದರಿಂದ ಆರೋಗ್ಯಕ್ಕೆ ಪೌಷ್ಟಿಕಾಂಶ ಸಿಗುತ್ತದೆ. ಮತ್ತು ಅನಾರೋಗ್ಯದಿಂದ ರಕ್ಷಿಸುತ್ತದೆ. ಆದರೆ ಎಲ್ಲರೂ ಇವುಗಳನ್ನು ತಿನ್ನಲು ಇಷ್ಟಪಡದೆ ಇರಬಹುದು. ಬಡತನವಿರಬಹುದು. ಅಥವಾ ಏಕ ಆಹಾರ ಸೇವನೆ ರೂಢಿಯಾಗಿರಬಹುದು. ಇಂತಹ ಕಾರಣಗಳಿಂದ ಇತರ ಹಣ್ಣು–ಹಂಪಲು ಉಪಯೋಗಿಸದೆ ಇರಬಹುದು. ಹೀಗಾಗಿ ಪೌಷ್ಟಿಕಾಂಶ ಕೊರತೆಯಿಂದ ದೇಹದಲ್ಲಿ ಶಕ್ತಿ ಕಡಿಮೆಯಾಗುವುದು. ಆದ್ದರಿಂದ ಈ ಋತುವಿನಲ್ಲಿ ಸಿಗುವ ಖರ್ಜೂರ, ದ್ರಾಕ್ಷಿ, ಕಲ್ಲಂಗಡಿ, ಖರಬೂಜ, ಇಂತಹ ಹಣ್ಣುಗಳಿಂದ ಆರೋಗ್ಯಕ್ಕೆ ಬೇಕಾದ ಪೌಷ್ಟಿಕಾಂಶ ಮತ್ತು ನೀರನ್ನೊದಗಿಸುತ್ತವೆ. ಆದ್ದರಿಂದ ದೇವರಿಗೆ ಅರ್ಪಿಸುವ ನಂಬಿಕೆಯಿಂದಾದರೂ ಇವುಗಳನ್ನು ತಂದು ದೇವರಿಗೆ ಅರ್ಪಿಸಿ ನಂತರ ತಿನ್ನುವ ಅವಕಾಶ ಒದಗಿಸಿಕೊಡುತ್ತವೆ. ಆದ್ದರಿಂದ ಈ ದಿನಗಳಲ್ಲಿ ಸಿಗುವ ಹಣ್ಣು –ಹಂಪಲು ಅರ್ಪಿಸುವ ನಂಬಿಕೆ ಆರೋಗ್ಯಕ್ಕೆ ಉಪಯುಕ್ತವಾಗಿದೆ.

**೫) ಶಿವರಾತ್ರಿಯಲ್ಲಿ ಶಿವಧ್ಯಾನದಲ್ಲಿರಬೇಕು :**

ದಿನ ನಿತ್ಯವೂ ಒಂದಿಲ್ಲಾ ಒಂದು ಕೆಲಸ ಗಳಿಕೆಯಲ್ಲಿಯೇ ಕಾಲ ಕಳೆಯುವ ಮಾನವ ಒಂದು ದಿನದ ಮಟ್ಟಿಗಾದರೂ ಅವುಗಳ ಬಿಡುವಿನಿಂದ ಶಿವನನ್ನು ಸ್ಮರಿಸಬೇಕೆಂಬ ನಂಬಿಕೆಯಿದೆ ಧ್ಯಾನ ಇಂದ್ರೀಯಗಳನ್ನು ನಿಗ್ರಹಿಸುತ್ತದೆ. ಜ್ಞಾನ ವೃದ್ಧಿಸುತ್ತವೆ. ಸಹನಶಕ್ತಿಯನ್ನು ಹೆಚ್ಚಿಸುತ್ತದೆ. ಈ ಧ್ಯಾನದಲ್ಲಿ ಶಿವನನ್ನು ಸ್ಮರಿಸುವುದಾಗಿದೆ. ತನ್ನ ಸ್ವಾರ್ಥ ಬದುಕಿಗೆ ಕಡಿವಾಣ ಹಾಕುವ ಉದ್ದೇಶವಾಗಿದೆ. ಆಸೆಯೇ ದುಃಖಕ್ಕೆ ಮೂಲ ಎಂದು ಬುದ್ಧ ಹೇಳಿದಂತೆ ಮನುಷ್ಯ ತನ್ನ ಸ್ವಾರ್ಥ ಜೀವನಕ್ಕೆ ಆಸೆ ಪಡುತ್ತಿದ್ದಂತೆ ದುಃಖಗಳೇ ಹೆಚ್ಚು ಇಂತಹ ಧಾರ್ಮಿಕ ಆಚರಣೆಗಳ ಮುಖಾಂತರವಾದರೂ ನಿಯಂತ್ರಿಸಿಕೊಳ್ಳಲಿ ಎಂಬುವುದೇ ಆಗಿದೆ.

ರಾವಣ ಶಿವನನ್ನು ಸ್ಮರಿಸಿ ತಪಸ್ಸು ಮಾಡಿ ಶಿವನಿಂದ ಆತ್ಮಲಿಂಗ ಪಡೆದನು. ಶಿವಭಕ್ತನಾದ ರಾವಣನನ್ನು ಶ್ರೀ ರಾಮ ಸಂಹಾರ ಮಾಡಿದ್ದರಿಂದ ಆತನಿಗೆ ಪ್ರಾಪ್ತವಾದ ದೋಷಕ್ಕಾಗಿ ಸಮುದ್ರ ತೀರದಲ್ಲಿ ಲಿಂಗವನ್ನು ಸ್ಥಾಪಿಸಿ ಪೂಜಿಸಿದ. ಅದೇ ರಾಮೇಶ್ವರಲಿಂಗ, ಬೇಡರ ಕಣ್ಣಪ್ಪನೂ ಈ ಶಿವರಾತ್ರಿಯ ದಿನವೇ ಆತನ ಪೂಜಿಸಿ ಸದ್ಗತಿ ಪಡೆದ, ಶಿವರಾತ್ರಿಯಲ್ಲಿ ಇಂತಹ ಕಥೆಗಳನ್ನು ಕೇಳುವುದರಿಂದ ಶಿವನಾಮಸ್ಮರಣೆ ಮಾಡುವುದರಿಂದ, ಲಿಂಗದರ್ಶನ ಮಾಡುವುದರಿಂದ ವಿಶೇಷ ಪುಣ್ಯ ಬರುತ್ತದೆಂದು ನಂಬಿಕೆಯಿಂದ ಈ ದಿನ ಭಕ್ತರು ಶಿವನನ್ನು ಆರಾಧಿಸುತ್ತಾ ಉಪವಾಸ, ಜಾಗರಣೆ ಮಾಡುತ್ತಾರೆ.

**ಹೋಳಿಹುಣ್ಣಿಮೆ :**

ಸಂವತ್ಸರದ ಕೊನಗೆ ಬರುವ ಫಾಲ್ಗುಣ ಮಾಸದ ಶುದ್ಧ ಹುಣ್ಣಿಮೆಯೆಂದು ಹೋಳಿ ಹಬ್ಬ ಆಚರಿಸಲಾಗುವುದು. ಈ ಹಬ್ಬ ವಸಂತನಾಗಮನದ ಸಂದೇಶ ವಾಹಕವಾಗಿಯೇ ಬರುತ್ತದೆ. ಹೋಳಿಯು ಭಾರತೀಯರು ಆಚರಿಸುವ ಪ್ರಮುಖ ಹಬ್ಬಗಳಲ್ಲೊಂದಾಗಿದೆ. ಈ ಹಬ್ಬವನ್ನು ಬೇರೆ ಬೇರೆ ಹೆಸರಿನಿಂದಲೂ ಕರೆಯುತ್ತಾರೆ. ಹೋಳಿ ಹೋಲಿಕಾ ಕಾಮದಹನ ಹೋಲಿಕಾದಹನ ವಸಂತೋತ್ಸವ, ಮದನೋತ್ಸವ, ಹೋಳಿ ಹಬ್ಬ ಎಂದು ಕರೆಯುವರು. ಬೇರೆ ಬೇರೆ ಪ್ರದೇಶಗಳಲ್ಲಿ ಭಿನ್ನ ಹೆಸರಿನಿಂದ ಕರೆದರೂ ಹಬ್ಬದ ಉದ್ದೇಶ ಮಾತ್ರ ಒಂದೇ. ಆಚರಣೆಯ ವಿಧಾನಗಳು ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವಾಗುವುದು ಸ್ವಾಭಾವಿಕ. ಭಾರತೀಯ ಹಬ್ಬಗಳು ವಿಶೇಷವಾಗಿ ಹೆಣ್ಣುಮಕ್ಕಳ ಹಬ್ಬಗಳೇ ಹೆಚ್ಚಾಗಿವೆ. ಹೋಳಿ ಗಂಡಸರ ಹಬ್ಬ. ಜನಪದರಲ್ಲಿ ಇದನ್ನು ಕುರಿತು ಒಂದು ಕಥೆಯೂ ಇರುವುದಾಗಿ ಡಾ. ಗದ್ದಗಿಮಠ ಅವರು ಪ್ರಸ್ತಾಪಿಸುತ್ತಾರೆ ಆಗಾಗ ಬರುವ ಹಬ್ಬಗಳಲ್ಲಿ ಹೆಣ್ಣು ಮಕ್ಕಳು ಉಟ್ಟುತೊಟ್ಟು ಸಿಂಗರಿಸಿಕೊಂಡು ಆನಂದಪಡುವುದನ್ನು ನೋಡಿ ದುಡಿದ ಗಂಡಸರು ದೇವರಲ್ಲಿ ಮೊರೆ ಇಟ್ಟು ತನಗೂ ಒಂದು ಹಬ್ಬಬೇಕೆಂದು ಕೇಳಿಕೊಂಡನಂತೆ ಆಗ ದೇವರು ಈ ಹೋಳಿ ಹಬ್ಬವನ್ನು ಆಚರಿಸಿ ಹಾಲು, ಬಣ್ಣ ಆಡಲು ಸೃಷ್ಟಿಸಿಕೊಟ್ಟನಂತೆ![೫೩] ಸಾಮೂಹಿಕ ಬೀದಿ ಬೀದಿಗಳಲ್ಲಿ ಬೊಬ್ಬೆ ಅಬ್ಬರದೊಂದಿಗೆ ಬಣ್ಣ ಎರಚಾಡಿ ಹಲಗೆ ಹೊಡೆದು ಹಾಡಿ ಕುಣಿದು ಆಚರಿಸುವರು. ಬೌದ್ಧರು, ಜೈನರು ಸಹಿತ ಹೋಳಿಯನ್ನು ಆಚರಿಸುತ್ತಾರೆ.

ಇದು ಕಾಮವನ್ನು ಪ್ರಚೋದಿಸುವ, ಲೈಂಗಿಕತೆಯ ಅಶ್ಲೀಲ ಪದಗಳನ್ನು ಬೈಯುವುದು, ಬೊಬ್ಬೆ ಹೊಡೆಯುವುದು, ಕಾಮನನ್ನು ದಹಿಸುವುದು, ಬಣ್ಣ ಆಡುವುದು ಈ ಹಬ್ಬದ ವಿಶೇಷ ಆಚರಣೆಗಳೆನಿಸಿವೆ. ಉಳಿದ ಹಬ್ಬಗಳಲ್ಲಿ ಬೈಯುವುದು ಹೊಡೆಯುವುದು ಯಾವುದು ಇರುವುದಿಲ್ಲ ಆದರೆ ಈ ಹಬ್ಬದಲ್ಲಿ ಅವೇ ವಿಶೇಷವಾಗಿವೆ.

ಹೋಳಿಯ ಅಗ್ನಿ ಪೂಜೆಯ ಹಳೆಯದೆಲ್ಲಾ ಸುಟ್ಟು ಹೊಸ ಸಂವತ್ಸರಕ್ಕೆ ನಾಂದಿಯಾಗಿರುತ್ತದೆ. ಅದುವೆ ಮುಂದೆ ಬರುವ ಯುಗಾದಿ ಹಬ್ಬವಾಗಿರುತ್ತದೆ. ಈ ಹೋಳಿ ಆಚರಣೆಯನ್ನು ಚೆನ್ನಾಗಿ ಮಾಡಿದರೆ ಆ ವರ್ಷದ ಮಳೆ ಬೆಳೆ ಸಮೃದ್ಧವಾಗಿರುತ್ತವೆಂಬ ನಂಬುಗೆ.

"ಹೋಳೀ ಆಡದ ನಾಡು ಹಾಳಾತೋ ಹಳ್ಳಾತೊ
ಗೋಳಾತೊ ಜನರ ಜಿನಗಾಗಿ। ಮಳಿಹೋಗಿ
ಬೀಳಾತೋ ಭೂಮಿ ಬರಗಾಲ।"[೫೪]
ಅದಕ್ಕಾಗಿ ಈ ಆಚರಣೆ ಅನಿವಾರ್ಯವಾಗಿ ಮಾಡಲೇಬೇಕೆಂಬುದು ಜನಪದರ ನಂಬಿಕೆಯಾಗಿದೆ.

ಓಣಿಯು ವಿಸ್ತಾರವಾದ ಸ್ಥಳದಲ್ಲಿ ಕಾಮನ ದಹನಕ್ಕೆ ಸಂಗ್ರಹಿಸಿದ ಕುಳ್ಳಬಾನ ಒಟ್ಟಿ, ಕಟ್ಟಿಗೆಗಳನ್ನು ಸುತ್ತಲೂ ನಿಲ್ಲಿಸಿ ನಟ್ಟ ನಡುವೆ ಒಂದು ಔಡಲ ಗಿಡ ತಂದು ನೆಡುವರು. ಅದು ಹೋಳಿಯ ಸಂಕೇತ ಎಂದು

---

೫೩(ಅಡಿಟಿಪ್ಪಣಿ: ೫೩: ಬೇಳಿ-೧ ದೇಸಿ ಸಂಸ್ಕೃತಿಯ ಆಯಾಮಗಳು ಡಾ.ಬಿ.ಬಿರಾದಾರ ಪುಟ ಸಂಖ್ಯೆ-೨೯೯)
೫೪(ಅಡಿಟಿಪ್ಪಣಿ: ೫೪: ಬೇಳಿ-೧ ದೇಸಿ ಸಂಸ್ಕೃತಿಯ ಆಯಾಮಗಳು ಡಾ.ಬಿ.ಬಿರಾದಾರ ಪುಟ ಸಂಖ್ಯೆ-೩೦೦)

ಹೇಳುವುದುಂಟು, ಕಾಮಪ್ರಚೋದನೆಯ ಊಳಾಗಡ್ಡಿ ಹೂ ಮತ್ತು ಬೇವಿನ ಹೂ ಕಾಮನಿಗೆ ಅರ್ಪಿಸುವರು. ಕಾಮನನ್ನು ಪೂಜಿಸಿ ನೈವೇದ್ಯ ಮಾಡಿ ನಮಸ್ಕರಿಸುವರು, ಹುಣ್ಣಿಮೆ ಬೆಳಂದಿಗಳಿನಲ್ಲಿ ಸಾಮೂಹಿಕ ಗುಂಪು ಸೇರಿ ಹಾಡು ಹಾಡುವುದು, ಕುಣಿಯುವುದು, ಇಂದಿನ ದಿವಸ ಕೋಲಾಟವು ಈ ಹಿಂದೆ ನಡೆಯುತ್ತಿದ್ದವಂತೆ ! ರಾತ್ರಿ ಹನ್ನೆರಡರ ತನಕ ಹೊಯ್ಕೊಂಡು, ಹಾಡಿ ಕಾಮನ ಕುಳ್ಳು ಬಾನಕ್ಕೆ ಬೆಂಕಿ ಹಚ್ಚಿ ಕಾಮ ದಹನ ಮಾಡುವುದು. ಮರುದಿವಸ ಬಣ್ಣದ ಆಟ ಆಡುವರು.

**ಈ ಹಬ್ಬದ ಕುರಿತು ನಂಬಿಕೆಗಳು ಇಂತಿವೆ.**

೧) **ಹೋಳಿ ಹುಣ್ಣಿಮೆ ಆಗಮನಕ್ಕೆ ಬೊಬ್ಬಿ ಹಾಕುವುದು :**

ಶಿವರಾತ್ರಿ ಅಮವಾಸ್ಯೆಯ ನಂತರದ ಮೂರು-ನಾಲ್ಕು ದಿವಸಗಳಲ್ಲಿ ಚಂದ್ರನು ಕಾಣಿಸಿದ ದಿವಸವೇ ಬೊಬ್ಬಿ ಹೊಡೆದು ಮೊದಲು ಗುಂಪಿನಲ್ಲಿ ಹುಡುಗರೆಲ್ಲಾ ಸೇರಿಕೊಳ್ಳುತ್ತಾರೆ. ಗುಂಪಿನೊಂದಿಗೆ ಅಂದಿನಿಂದ ಮೊದಲು ಮಾಡಿ ಪ್ರತಿದಿನ ಹುಣ್ಣಿಮೆಯವರಿಗೆ ಕುಳ್ಳು, ಕಟ್ಟಿಗೆ ಕದಿಯುವ ಕೆಲಸ ಆರಂಭವಾಗುವುದು. ಏಕೆಂದರೆ ಜನಪದರು ಹೇಳುವ ಕಥೆಯಂತೆ· ಕಾಮನನ್ನು ಸುಡಲು ಯಾರು ಕಟ್ಟಿಗೆ ಕೊಡದಿದ್ದಕ್ಕಾಗಿ ಕದ್ದು ತಂದು ಕಾಮನನ್ನು ಸುಡುತ್ತಾರೆ. ಈ ನಂಬಿಕೆಯಿಂದಿಗೂ ಕುಳ್ಳು ಕದಿಯುವುದು ರೂಢಿಯಲ್ಲಿದೆ.

೨) **ಕಾಮದಹನ ಮಾಡುವುದು:**

ಹೋಳಿ ಹುಣ್ಣಿಮೆಯ ಆಚರಣೆಗೆ ಕಾಮದಹನವೇ ವಿಶೇಷ ಮೂಲಕಾರಣವಾಗಿದೆ. ಇದಕ್ಕೆ ಪೌರಾಣಿಕ ಹಿನ್ನೆಲೆಯ ಕಥೆಯೊಂದು ಹೀಗಿದೆ.

"ಭೂಲೋಕದಲ್ಲಿ ತಾರಕಾಸುರ ಎಂಬ ರಾಕ್ಷಸನ ಉಪಟಳ ಹೆಚ್ಚಾಗಿತ್ತು. ಆತನು ಈಶ್ವರನಿಂದ ಒಂದು ವರ ಪಡೆದಿರುತ್ತಾನೆ. ಅದೇನೆಂದರೆ ತನ್ನ ಮರಣ ಈಶ್ವರನ ಮಗನಿಂದಲೇ ಆಗಬೇಕೆಂದು ರಾಕ್ಷಸನದ್ದು ದೇವತೆಗಳಿಗೆ ದೊಡ್ಡ ಚಿಂತೆಯಾಗುತ್ತದೆ. ಶಿವನಿಗೆ ಮಕ್ಕಳಾಗಬೇಕು ಅಂದರೆ ಪಾರ್ವತಿ ದಕ್ಷಯಜ್ಞದಲ್ಲಿ ದಹಿಸಿ ಹೋಗಿದ್ದು ಮತ್ತೆ ಪರ್ವತ ರಾಜನ ಮಗಳಾಗಿ ಹುಟ್ಟಿದ್ದಾಳೆ. ಇದೆ ಒಳ್ಳೆ ಸಮಯವೆಂದು ದೇವತೆಗಳೆಲ್ಲಾ ಈಶ್ವರನನ್ನು ಆಕೆಯು ವರಿಸುವಂತೆ ಮಾಡುತ್ತಾರೆ. ಪಾರ್ವತಿ ತಪಸ್ಸು ಮಾಡಿ ಈಶ್ವರನನ್ನು ಒಲಿಸುವ ಪ್ರಯತ್ನ ಮಾಡುತ್ತಾಳೆ. ಆದರೆ ಈಶ್ವರ ಅದಕ್ಕೆ ಜಗ್ಗಲಿಲ್ಲ. ಆಗ ಮನ್ಮಥನ ಕಾಮ ಬಾಣವನ್ನು ಬಿಡುವಂತೆ ಮಾಡುತ್ತಾರೆ. ಆಗ ಈಶ್ವರ ಕೋಪದಿಂದ ತನ್ನ ಹಣೆಗಣ್ಣಿನಿಂದ ಮನ್ಮಥನ್ನು ಸುಟ್ಟು ಭಸ್ಮ ಮಾಡಿದ ರತಿಯು ದುಃಖಿಸುತ್ತಾಳೆ. ಆಗ ಪಾರ್ವತಿ ಈಶ್ವರನಲ್ಲಿ ತನ್ನ ಗಂಡನನ್ನು ಬೇಡೆಂದು ರತಿಗೆ ಹೇಳುತ್ತಾಳೆ.

ರತಿಯು ಈಶ್ವರನನ್ನು ತನ್ನ ಗಂಡನನ್ನು ದೊರಕಿಸಿಕೊಡುವಂತೆ ಬೇಡುತ್ತಾಳೆ. ಆಗ ಈಶ್ವರ "ನೀನು ಯೋಚನೆ ಮಾಡಬೇಡಮ್ಮಾ, ನಿನಗೆ ಮಾತ್ರ ನಿನ್ನ ಗಂಡ ಶರೀರನಾಗಿ ಕಾಣುತ್ತಾನೆ" ಆದರೆ ನನ್ನನ್ನೇ ವಿಚಲಿತನಾಗಿ ಮಾಡಿದ ಕಾಮ ಸಾಮಾನ್ಯನಲ್ಲ. ಆದ್ದರಿಂದ ಆತನು ಬೇರೆಯವರಿಗೆ ಕಾಣದಿರಲಿ ಎಂದು ಹೇಳಿ ಆಕೆಯನ್ನು ಸಮಾಧಾನಿಸುತ್ತಾನೆ. ಪಾರ್ವತಿ ತಪಸ್ಸುಮಾಡಿ ಶಿವನನ್ನು ಪ್ರೀತಿಯಿಂದ ಒಲಿಸಿಕೊಂಡು ಮದುವೆಯಾಗಿ ಕುಮಾರನ ಜನನವಾಗುತ್ತದೆ. ತಾರಕಾಸುರನ ವಧೆಯಾಗುತ್ತದೆ. ಕಾಮವೆಂಬ ಕೆಟ್ಟ ಆಸೆಯನ್ನು ಈಶ್ವರ ತನ್ನ

ಕಣ್ಣಿನಿಂದ ಸುಟ್ಟಿದ ಈ ಘಟನೆ ಕಾಮದಹನ ಎಂದು ಹೇಳುವುದು[೩೩] ಇಂದಿಗೂ ಔಡಲಗಿಡ ಕಾಮ (ಹೋಳಿ)ನೆಂದು ಸುಡುವರು ಇದು ವಸಂತ (ಬಸಂತ) ಹುಣ್ಣಿಮೆಯಂದು ನಡೆದ್ದುದರಿಂದ ಕಾಮದಹನ ಎಂದು ಹೆಸರಾಯಿತು.

ಇನ್ನೊಂದು ಜನಪದರು ಹೇಳುವ ಕಥೆಯೊಂದು ಹೀಗಿದೆ.

ಒಮ್ಮೆ ಶಿವನು ಪಾರ್ವತಿಯನ್ನು ಕುರಿತು ಪ್ರಪಂಚದಲ್ಲಿ ಯಾರು ಚೆಲುವರು ಎಂದು ಕೇಳಿದಾಗ ಪಾರ್ವತಿ ಸಹಜವಾಗಿ ಕಾಮನೇ ಅಧಿಕ ಚೆಲುವ ಎಂದಳಂತೆ ಗಂಡನನ್ನು ಬಿಟ್ಟು ಪರಪುರುಷನನ್ನು ಚೆಲುವ ಎಂದು ಮಾತು ಶಿವನಿಗೆ ಕೋಪ ಬಂದು ಪಾರ್ವತಿಗೆ ಏನು ಮಾಡಲಾಗದೆ ಶಿವ ಕಾಮನ ಮೇಲೆ ಕೊಪಗೊಂಡು ಉರಿಗಣ್ಣು ತೆರೆದು ಕಾಮನನ್ನೇ ಸುಟ್ಟು ಬಿಟ್ಟನಂತೆ! ಎನ್ನುವುದು ಪ್ರಚಲಿತದಲ್ಲಿದೆ.

**೩) ಅಶ್ಲೀಲ ಪದಗಳಿಂದ ಬೈಯುವುದು :**

ಹೋಳಿಯಲ್ಲಿ ಸೇರಿ ಆಡುವ ಹುಡುಗರಿಗೆ ಡುಂಢಾ ಎನ್ನುವ ರಾಕ್ಷಿ ಪ್ರವೃತ್ತಿಯ ಸ್ತ್ರೀಯೊಬ್ಬಳು ಸತಾಯಿಸುತ್ತಿದ್ದಳು. ಆದ್ದರಿಂದ ಹುಡುಗರು ಗುಂಪಾಗಿ ಅಶ್ಲೀಲ ಪದಗಳನ್ನು ಬೈಯುವುದನ್ನು ಕಂಡು ಓಡಿ ಹೋಗಲಿ ಎನ್ನುವ ಕಾರಣವಾಗಿದೆ.

**೪) ಕುಳ್ಳ ಕಟ್ಟಿಗೆ ಕಳ್ಳತನ ಮಾಡಿ ಸಂಗ್ರಹಿಸುವುದು :**

ಕುಳ್ಳ ಕಟ್ಟಿಗೆಗೇನು ಬರಗಾಲವಲ್ಲ ಆದರೆ ಒಂದೊಂದು ಸಂದರ್ಭದಲ್ಲಿ ಸಾಮಾನ್ಯವಾಗಿ ಸಿಗುವ ವಸ್ತುಗಳಿಗೂ ಎಂಥಹ ಬೇಡಿಕೆಯಿರುತ್ತದೆ. ಅದಕ್ಕೆ ಹೇಳುವುದು "ಸಮಯ ಬಂದಾಗ ಕತ್ತೆಗೂ ಕಾಲು ಹಿಡಿಯಬೇಕಾಗುತ್ತದೆ" ಈ ಅನಿವಾರ್ಯ ಪರಿಸ್ಥಿತಿಯಲ್ಲಿ ಕೆಲಸ ಸಾಗಿಸಬೇಕಾದಲ್ಲಿ ಕಳ್ಳತನಕ್ಕೂ ಮೂಲವಾಗಿ ಬಿಡುತ್ತದೆ. ಕಾಮದಹನಕ್ಕೂ ಇಂತಹದ್ದೇ ಒಂದು ಘಟನೆ ಕಾರಣವಾಗಿರುವುದು ಹೋಳಿ ಮೂಲ ಕಥೆಯಿಂದ ತಿಳಿಯಬಹುದು.

ಕಾಮನನ್ನು ಕಳೆದುಕೊಂಡ ರತಿಯ ಪ್ರಲಾಪವನ್ನು ಕಂಡು ಮನಕರಗಿದ ಶಿವನು "ಹೋಗಿರಿ, ನಿನ್ನ ಪತಿಯು ನನ್ನ ಮೇಲೆ ಬಿಟ್ಟ ಬಾಣ ಪ್ರಯೋಗದ ತಪ್ಪಿನಿಂದಾಗಿ ನೀವಿಬ್ಬರೂ ಭೂಮಿಯಲ್ಲಿ ಹುಟ್ಟುವಿರಿ, ನಿನ್ನ ಸ್ವಾಮಿ ಕಾಮ ಬ್ರಾಹ್ಮಣ ಜಾತಿಯಲ್ಲಿ ಹುಟ್ಟುತ್ತಾನೆ. ನೀನು ಹೊಲೆಯ ಜಾತಿಯಲ್ಲಿ ಹುಟ್ಟಿ ವೇಶ್ಯೆಯಾಗುವಿ. ಆಗ ಮತ್ತೆ ನಿಮಿಬ್ಬರ ಸಮಾಗಮವಾಗುತ್ತದೆ. ಎಂದು ಹರಿಸಿ ಕಳಿಸುತ್ತಾನೆ". ಅದರಂತೆ ಕಾಮಣ್ಣ ಬ್ರಾಹ್ಮಣ ಕುಲದ ಕೃಷ್ಣಭಟನ ಮಗನಾಗಿ ಹುಟ್ಟಿದರೆ, ರತಿ ಹೊಲೆಕುಲದ ಚಂದಣ್ಣನ ಮಗಳಾಗಿ ಜನ್ಮ ತಾಳುತ್ತಾಳೆ. ಅವಳಿಗೆ "ಹೋಳಿ" ಎಂದು ಹೆಸರಿಸುತ್ತಾರೆ, ರತಿಯೇ ಹೋಳಿ ಆದಾಗ ಸೌಂದರ್ಯವತಿ ಆಗಿರುತ್ತಾರೆ. ಈರ್ವರೂ ವಯಸ್ಸಿಗೆ ಬರುತ್ತಾರೆ. ಕಾಮ ಆಕಸ್ಮಿಕವಾಗಿ ಹೇಳಿದನ್ನು ಕಂಡು ಮೊದಲ ನೋಟದಲ್ಲೇ ಮೋಹನಗೊಳ್ಳುತ್ತಾನೆ. ಆದರೆ ವೇಶ್ಯೆಯಾದ ಅವಳನ್ನು ನಿಯಂತ್ರಿಸುವ ಅವಳ ತಂದೆ ಚಂದಪ್ಪ ಬಿಂದಿಗೆ ಹೊನ್ನು ಕೊಟ್ಟರೆ ಬಂದು ಕೂಡಲು ಕಾಮನಿಗೆ ಹೇಳುತ್ತಾನೆ. ಕಾಮ ತನ್ನ ಮನೆಯಿಂದ ಬಿಂದಿಗೆ ಹೊನ್ನು ತಂದು ಕೊಟ್ಟು ಹೋಳಿಯನ್ನು ಕೂಡುತ್ತಾನೆ. ಆದರೆ ನಿತ್ಯ ಹೊನ್ನು ಸಿಗದೆ ಅಸಹಾಯಕ ಸ್ಥಿತಿಯಲ್ಲಿ ಕಾಮ ಒದ್ದಾಡುತ್ತಾನೆ.

---

೩೩ (ಅಡಿಟಿಪ್ಪಣಿ: ೩೩: ಜಾನಪದ ಐಸಿರಿ, ಲೇಖಕರು ಡಾ.ಬಿ.ಎಸ್.ಸ್ವಾಮಿ ಪುಟ ಸಂಖ್ಯೆ ೧೯೪)

ಕಾಮನ ಈ ಪ್ರೇಮ ಬೈಲಾಗುತ್ತದೆ. ಸಂಪ್ರದಾಯಸ್ಥ ಬ್ರಾಹ್ಮಣ ಸಮಾಜ ಸಿಡಿದೇಳುತ್ತದೆ. ಕೃಷ್ಣಭಟನನ್ನು ಕರೆದು ಛೀಮಾರಿ ಹಾಕುವುದಲ್ಲದೆ, ಕುಲದಿಂದ ಹೊರಹಾಕುವ ಹೆದರಿಕೆ ಹಾಕಿ ಮಗನನ್ನು ಮನೆಯಿಂದ ಹೊರ ಹಾಕಿಸುತ್ತಾರೆ. ಅಷ್ಟೇ ಅಲ್ಲ ಮಗ ಶಾಶ್ವತವಾಗಿ ಸತ್ತನೆಂದು ಶ್ರಾದ್ಧವನ್ನು ಮಾಡಿಸುತ್ತಾರೆ; ನೆಲೆ ಕಳೆದುಕೊಂಡು ಕೂಳು ನೀರಿಗೂ ಗತಿ ಇಲ್ಲದೆ ಕಾಮ ಗೆಳೆಯರ ಮನೆ–ಮನೆ ಅಲೆದಾಡಿ ಆಸರೆ ಪಡೆದು ಎಷ್ಟು ದಿನ ಬದುಕಿರಬಹುದು! ಅದರಲ್ಲಿ ಹೋಳಿಯ ವಿರಹದಿಂದ ಹುಚ್ಚನಾಗಿ ಮಮ್ಮಲ ಮರುಗುತ್ತಾನೆ. ಸರಿಯಾದ ಊಟ ನಿದ್ರೆ ಇಲ್ಲದೇ ರೋಗಗ್ರಸ್ಥನಾಗಿ ಬೀದಿಯ ಒಂದು ಕಟ್ಟೆಯ ಮೇಲೆ ಬಿದ್ದಿರುತ್ತಾನೆ ಸ್ನೇಹಿತರ ಸಹಾನುಭೂತಿ ಎಷ್ಟು ದಿನ ಇದ್ದೀತು ! ಸಮಾಜದ ಬಹಿಷ್ಕಾರಕ್ಕೊಳಗಾದ ಕಾಮನನ್ನು ನೋಡಲು ಬ್ರಾಹ್ಮಣರು ಯಾರು ಮುಂದೆ ಬರುವುದಿಲ್ಲ. ಇನ್ನುಳಿದ ಸಮಾಜದ ಜನರಿಗೆ ಅವರ ಸಂಸ್ಕಾರ ಕ್ರಿಯೆಗಳ ಬಗ್ಗೆ ಗೊತ್ತಿರದೆ ಮರುಕ ಪಟ್ಟು ಸುಮ್ಮನಿರುತ್ತಾರೆ. ಆದರೆ ಜಾತಿ ಧರ್ಮಗಳರಿಯದ ಗೆಳೆಯರಿಗೆ ಬಿಡಲಾರದ ಕರ್ಮವಾಗಿತ್ತು.

ಅವರೆಲ್ಲ ಕೂಡಿ ಶವಸಂಸ್ಕಾರಕ್ಕೆ ಕುಳ್ಳು–ಕಟ್ಟಿಗೆ ಬೇಡಿ ಸಂಗ್ರಹಿಸಲು ಮನೆ ಮನೆಗೆ ಹೋದರೆ ಜನರ ಸಹಾಯವಿಲ್ಲ. ಆಗ ಅನಿವಾರ್ಯವಾಗಿ ಊರ ಹೊರಗಿನ ದೊಡ್ಡಿ, ಹಿತ್ತಲುಗಳಲ್ಲಿ ಸಂಗ್ರಹಿಸಿಟ್ಟ ಕುಳ್ಳು–ಕಟ್ಟಿಗೆ ಕಳ್ಳತನ ಮಾಡಿ ತರುತ್ತಾರೆ. ಆದ್ದರಿಂದ ಇಂದಿಗೂ ಕದಿಯುವುದೇ ರೂಢಿಯಲ್ಲಿದೆ. ಆದರೆ ದೊಡ್ಡ ಸಮಸ್ಯೆ ಎಂದರೆ ಕಿಚ್ಚು ಹಚ್ಚಲು ಬೆಂಕಿಯನ್ನು ಕೂಡಾ ಕೊಡಲು ಯಾರು ಒಪ್ಪಲಿಲ್ಲ. ಆಗ ಕೂಡಿದ ಗೆಳೆಯರೂ ಸೇರಿ ಹೊಲಗೇರಿಗೆ ಹೋಗಿ, ಅದು ಹೋಳಿಯ ವಿರಹದಲ್ಲಿ ಸತ್ತುದ್ದರಿಂದ ಅವಳ ಮನೆಯ ಬೆಂಕಿಯನ್ನೇ ತರಲು ನಿರ್ಧರಿಸುತ್ತಾರೆ. ಅವರೂ ಅದಕ್ಕೆ ಪ್ರತಿರೋಧ ಒಡ್ಡುತ್ತಾರೆ. ಭಾವಪರವಶರಾದ ತರುಣರು ಹೋರಾಡಿ ಬೆಂಕಿಯಷ್ಟೇ ಅಲ್ಲ, ಕಾಮನ ಪ್ರೇಯಸಿ ಹೋಳಿಯನ್ನು ಹೊತ್ತು ತಂದು ಕಾಮನ ಜೊತೆಗೆ ದಹನ ಮಾಡುತ್ತಾರೆ. ಇಂದಿಗೂ ಬೆಂಕಿ ಹಚ್ಚಲು ಬೇರೆ ಓಣಿಯಿಂದ ಕದ್ದು ತಂದು ಹಚ್ಚುವರು.

ಇದು ಕೊಡಬಾರದು ಎಂದು ಒಂದು ಓಣಿಯವರ ಹಟವಾದರೆ ತರಲು ಬಂದವರು ಬಿಡಬಾರದೆನ್ನುವ ಹಠದಲ್ಲಿರುತ್ತಾರೆ.

**೫) ಕಾಮದಹನ ಮಾಡಿದ ಬೆಂಕಿಯಲ್ಲಿ ಕಡಲೆ, ಖೊಬ್ರಿ ಸುಡುವುದು :**

ಕಾಮದಹನ ಮಾಡಿದ ನಂತರ ರಾತ್ರಿಯಲ್ಲ ಎಚ್ಚರಿರುವರು. ಆದ್ದರಿಂದ ತಮ್ಮ ಸಮಯ ಕಳೆಯಲು, ಆಗ ತಾನೆ ಕಡ್ಲಿ ರಾಶಿ ಮುಗಿದು ಮನೆಯಲ್ಲಿದ್ದು ಕಡಲೆಯನ್ನು ಹುರಿಯುತ್ತಿರಬೇಕು. ಕುಳ್ಳು–ಕಟ್ಟಿಗೆ ಜಾಸ್ತಿ ಪ್ರಮಾಣದಲ್ಲಿದ್ದರಿಂದ ಬೆಂಕಿಯು ಬಹಳಷ್ಟಿರುತ್ತದೆ. ಗಟ್ಟಿಯಾಗಿರುವ ಕಡಲೆ ಮತ್ತು ಖೊಬ್ರಿ ಸುಡಲು ಸೂಕ್ತವಾದ ಬೆಂಕಿಯಿರುತ್ತದೆ. ಈ ಗಟ್ಟಿಯಾದ ಕಡಲೆ ಮತ್ತು ಖೊಬ್ರಿ ತಿನ್ನುವುದರಿಂದ ಮುಖಕ್ಕೆ ವ್ಯಾಯಾಮವೂ ಹಾಗೂ ಹಲ್ಲಿನಿಂದ ಕಚ್ಚುವುದರಿಂದ ಹಲ್ಲುಗಳು ಗಟ್ಟಿಯಾಗುತ್ತವೆ ಎನ್ನುವ ಉದ್ದೇಶದಿಂದಲೇ ಈ ಬೆಂಕಿಯಲ್ಲಿ ಸುಟ್ಟು ಕಡಲೆ ಖೊಬ್ರಿ ಸ್ವಲ್ಪಾದರೂ ತಿನ್ನಬೇಕೆಂಬ ನಂಬಿಕೆಯಿದೆ.

**೬) ಕಾಮದಹನದಲ್ಲಿದ್ದ ಬೂದಿ ಬೆಳೆಗಳಿಗೆ ಹಾಕಿದರೆ ಒಳ್ಳೆಯದು:**

ಸಾಮಾನ್ಯವಾಗಿ ಬಹಳ ಪ್ರಮಾಣದ ಕಟ್ಟಿಗೆ–ಕುಳ್ಳಿನಿಂದ ಬೆಂಕಿ ಹಾಗೂ ಬೂದಿ ಸಾಕಷ್ಟು ಸಂಗ್ರಹವಾಗುತ್ತದೆ. ಇದನ್ನು ಬೀದಿಯಲ್ಲಿಟ್ಟರೆ ಹಾಳಾಗಿಯೇ ಹೋಗುತ್ತದೆ ಮತ್ತು ಓಡಾಡುವ ಸಮಯದಲ್ಲಿ

ಕಾಲಿಟ್ಟಂತೆ ಹಾರುತ್ತದೆ. ಇದರಿಂದ ಧೂಳಿನ ಕಣ ದೇಹ ಸೇರುವುದು ಖಂಡಿತ ಇದನ್ನು ತಪ್ಪಿಸಲು ಬೆಳೆಗೆ ಹಾಕುವ ನಂಬಿಕೆ ಇದ್ದಿರಬೇಕು. ಇನ್ನೊಂದು ಕಡೆ ಸಾಮಾನ್ಯವಾಗಿ ದಿನ ನಿತ್ಯ ಮನೆಯಲ್ಲಿಯ ಒಲೆಯಲ್ಲಿ ಹೆಚ್ಚಾಗಿ ಬೀಳುವ ಕುಳ್ಳು ಬೂದಿ ಸಂಗ್ರಹಿಸಿ ಅದನ್ನು ಬಿತ್ತಲು ಕಾಯ್ದಿರಿಸುವ ಬೀಜಗಳಿಗೆ ಹಚ್ಚಿಡುತ್ತಾರೆ ಹಾಗೂ ಮೆಣಸಿನಕಾಯಿ ಗಿಡಗಳಿಗೂ ಇತರ ಸಸ್ಯಗಳಿಗೂ ಹಾಕಿದರೆ ಗೊಬ್ಬರವಷ್ಟೇ ಫಲವತ್ತತೆ ಸಿಗುತ್ತದೆ. ಹೀಗಿರುವಾಗ ದೇವರ ಪ್ರತೀಕವಾಗಿ ಆಚರಿಸುವ ಈ ಕಾಮದಹನದ ಬೂದಿ ಇನ್ನೂ ಉತ್ತಮ ಎಂಬ ನಂಬಿಕೆ ಹಾಗೂ ಬೇರೆ ಬೇರೆ ಕಡೆಯಿಂದ ಸಂಗ್ರಹಿಸಿದ ಸಗಣಿಯ ಕುಳ್ಳು ಇರುವುದರಿಂದ ಬೂದಿಯು ಅಷ್ಟೇ ಒಳ್ಳೆಯದಾಗಿರುತ್ತದೆ. ಬೆಳೆಗೆ ಹಾಕಿದರೆ ಒಳ್ಳೆಯ ದಾಗಿ ಬರುತ್ತದೆಂದು ಬೂದಿ ಮತ್ತು ಮನೆಗಳಲ್ಲಿ ಇದ್ದಿಲು ಉಪಯೋಗಿಸುಕೊಳ್ಳುತ್ತಾರೆ.

**೭) ರಂಗಪಂಚಮಿಗೆ ಬಣ್ಣ ಹಾಕುವುದು :**

ಕಾಮ ದಹನವಾದ ರಾತ್ರಿಯೆಲ್ಲಾ ಚೀರುತ್ತಾ ಕುಣಿಯುತ್ತ ಕಾಲ ಕಳೆದು ಮುಂಜಾನೆ ಕಾಮನ ಬೂದಿಯನ್ನು ಒಬ್ಬರೊಬ್ಬರನ್ನು ಹಚ್ಚಿಕೊಳ್ಳುವುದು ಇದರ ಬದಲಾಗಿ ಇಂದು ವಿವಿಧ ರಸಾಯನಿಕಗಳನ್ನು ಒಳಗೊಂಡಿರುವ ಬಗೆ ಬಗೆಯ ಬಣ್ಣಗಳನ್ನು ಉಪಯೋಗಿಸುತ್ತಿರುವ ಈ ಬಣ್ಣ ತಲೆ ಮೇಲೆ ಸುರಿಸುವುದರಿಂದ ಅದು ಮೂಗು ಬಾಯಿ ಮೂಲಕ ದೇಹವನ್ನು ಸೇರಿ ಆರೋಗ್ಯಕ್ಕೆ ಹಾನಿಯುಂಟು ಮಾಡುತ್ತೀವೆ.

ಅದರ ಉಪಯೋಗ ದೇಹಕ್ಕೆ ಹಾನಿಯಾಗದ ರೀತಿಯಲ್ಲಿ ಬಳಸಬೇಕಾಗಿದೆ. ಹೋಳಿ ಹಬ್ಬವನ್ನು ಬೇಸಿಗೆಯ ಆರಂಭದಲ್ಲಿ ಆಚರಿಸಲಾಗುವುದು. ಈ ವೇಳೆ ವಾತಾವರಣದ ಉಷ್ಣತೆಯಲ್ಲಿ ಬಹಳಷ್ಟು ಏರಿಕೆ ಕಂಡುಬರುವುದು. ಹೆಚ್ಚು ಉಷ್ಣತೆಯ ಕಾರಣದಿಂದ ಚರ್ಮದ ಮೇಲೆ ಬೊಕ್ಕೆಗಳು ಏಳುವ ಸಾಧ್ಯತೆಯುಂಟು. ಹೋಳಿಯ ನೆಪದಲ್ಲಿ ಶ್ರೀಗಂಧ ಹಾಗೂ ಅರಿಶಿಣ ಬೆರೆಸಿದ ನೀರನ್ನು ಮೈ ಮೇಲೆ ಸುರಿದು ಕೊಂಡರೆ, ಔಷಧೀಯ ಗುಣಗಳಿಂದ ಕೂಡಿದ ಶ್ರೀಗಂಧ ಮತ್ತು ಅರಿಶಿಣದ ಪ್ರಭಾವ ಚರ್ಮದ ಮೇಲೆ ಉಂಟಾಗುವುದರಿಂದ ಚರ್ಮರೋಗಗಳು ಸಂಭವಿಸುವ ಸಾಧ್ಯತೆ ಕಡಿಮೆಯಾಗುವುದು ಮತ್ತು ಚರ್ಮಕ್ಕೆ ಸೋಂಕು ತಟ್ಟುವುದಿಲ್ಲ.

ರಂಗೀನಾಟದಲ್ಲಿ ಭಾಗವಹಿಸುತ್ತಿದ್ದ ಸ್ತ್ರೀ ಪುರುಷರು ಅತಿ ಸ್ವೇಚ್ಛೇಯಿಂದ ವರ್ತಿಸುತ್ತಿದ್ದುಂಟು. ಲೈಂಗಿಕಿಚ್ಛೆಯ ಶಮನ, ದಮನ ಈ ಸ್ವೇಚ್ಛಾಚರಣೆಯ ಮುಖ್ಯ ಗುರಿಯಾಗಿತ್ತು. ಆದರೆ ಇಂದಿನ ಈ ರಂಗೀನಾಟದ ನೆಪದಲ್ಲಿ ಅಸಭ್ಯ ವರ್ತನೆಗಳು ಹೆಚ್ಚು ಹೆಚ್ಚಾಗಿ ನಡೆಯುತ್ತವೆ.

ಕಾಮದಹನ ಬಣ್ಣ ಆಡುವವರೆಗೆ ಹೊಯ್ಕೊಂಡಿರುವ ಬಾಯಿಗೆ ಹೋಳಿಗೆ ತುಪ್ಪ ಹಾಕಿ ಹೊಯ್ಕೋಳ್ಳುವುದು ನಿಲ್ಲಿಸುವರು.

**ಮೊಹರಂ :**

ಉತ್ತರ ಕರ್ನಾಟಕದಲ್ಲಿ ಮೊಹರಂ ಹಬ್ಬವನ್ನು ಹಿಂದೂ-ಮುಸ್ಲಿಂಮರಿಬ್ಬರೂ ಕಲೆತು ಆಚರಿಸುವರು. ಇದಕ್ಕೆ ಅಲಾಯಿ ಹಬ್ಬವೆಂದು ಹೆಸರು. ಈ ಹಬ್ಬ ಹಿಂದೂ ಮುಸ್ಲಿಂ ಧರ್ಮಗಳ ಪ್ರೇಮದ ಸಂಕೇತವಾಗಿದೆ. ಹಿಂದೂ-ಮುಸ್ಲಿಂರು ಹಿಂದಿನಿಂದ ಸಹೋದರರಾಗಿ ಹಾಗೂ ಮಿತ್ರರಾಗಿ ನಡೆದುಕೊಂಡು ಬಂದಿದ್ದಾರೆ. ಹಬ್ಬ ಹರಿದಿನಗಳಲ್ಲಿ ಕಲೆತು ಸಂತೋಷದಿಂದ ಹಾಡಿ ಕುಣಿದಿದ್ದಾರೆ. ಇದಕ್ಕೆ ಜನಪದ ಹಾಡುಗಳೇ ಸಾಕ್ಷಿಯಾಗಿವೆ.

ಹಿಂದೂ ಶರಣರನ್ನು ಮುಸ್ಲಿಮರು ನೆನೆದಿದ್ದಾರೆ. ಮುಸ್ಲಿಂ ಸಂತರನ್ನು ಹಿಂದೂಗಳು ಪೂಜ್ಯನೀಯ ಭಾವದಿಂದ ಕಂಡಿದ್ದಾರೆ. ಮಧ್ಯಕಾಲೀನ ಇತಿಹಾಸದಲ್ಲಿ ಆಳಿ ಹೋದ ಜೀದರನ ಸುಲ್ತಾನರು ಉರ್ಸ್‌ನಲ್ಲಿ ಒಬ್ಬ ಹಿಂದೂ ಪೂಜಾರಿಯನ್ನು ಮತ್ತು ಇನ್ನೊಬ್ಬ ಮುಸ್ಲಿಂ ಸಂತರನ್ನು ನೇಮಕ ಮಾಡುತ್ತಿದ್ದರು. ವಿಜಯನಗರದ ಸಂಖಿಗಮವಂಶ ಪ್ರೌಢದೇವರಾಯನು ತನ್ನ ಆಸ್ಥಾನದ ಎತ್ತರ ಪೀಠವೊಂದರಲ್ಲಿ ಖುರಾನನ್ನು ಇಟ್ಟಿದ್ದರು ಮತ್ತು ರಂಜಾನ ತಿಂಗಳದ ಕೊನೆಗೆ ಆಚರಿಸುವ ಹಬ್ಬದಲ್ಲಿ ಹಿಂದೂಗಳನ್ನು ಊಟಕ್ಕೆ ಕರೆಯುವರು. ಇಂತಹ ಹಲವಾರು ಆಚರಣೆಗಳು ಹಿಂದೂ-ಮುಸ್ಲಿಂ ಭಾವೈಕ್ಯದ ಪ್ರತೀಕಗಳಾಗಿವೆ.

ಮೊಹರಂ ತಿಂಗಳಲ್ಲಿ ಚಂದ್ರನ ದರ್ಶನವಾಗುವ ದಿನ ಮಸೀದಿಯ ಹಿಂದೆ ಗ್ರಾಮದ ಮುಲ್ಲಾನ ಹಿರಿತನದಲ್ಲಿ ಊರ ಪ್ರಮುಖರನ್ನು ಸೇರಿಸಿಕೊಂಡು ಬೆಂಕಿ ಹಾಕುವ ತಗ್ಗು ಸಿದ್ಧಪಡಿಸುವರು. ಇದಕ್ಕೆ ಗುದ್ದಿಬಿದ್ದು ಅನ್ನುತ್ತಾರೆ. ಗುದ್ದಿಬಿದ್ದ ನಾಲ್ಕನೆ ದಿನ ಮಸೀದಿಯಲ್ಲಿ ಬಾಜಾ ಬಜಂತ್ರಿಯೊಂದಿಗೆ ಗಜ್ಜಿವೇರಾ ಲಾಲಾಸಾಹೇಬ ಹಸನಹುಸೇನಿ ಡೋಲಿಗಳನ್ನು ಕೂಡಿಸಿ ಹಿಂದೂ ಮುಸ್ಲಿಂರು ಭಕ್ತಿಯಿಂದ ಪೂಜಿಸುವರು ಮೊಹರಂ ಕೊನೆಯ ದಿನ ಹಿಂದೂಗಳು ಮಾಲ್ದಿ ಮತ್ತು ವಗ್ಗರಣೆ ಹಾಕಿ ಮಾಡಿದ ಅನ್ನ ನೈವೇದ್ಯ ಕೊಡುವರು. ಅಲಾಯಿ ಕುಣಿಸುತ್ತಾ ಧೂಲಾ ಧೂಲಾ ಎಂದು ನವೀಲು ಗರಿಯಿಂದ ಜನರಿಗೆ ತಲೆ, ಮೈಗೆ ಬಡಿಯುವರು ಇದರಿಂದ ದೇಹದ ಪೀಡೆಗಳು ದೂರಾಗುತ್ತವೆಂಬ ನಂಬಿಕೆ. ಇದರಿಂದ ನಿಂಬೆ ಹಣ್ಣು ಕೂಡಾ ಮಂತ್ರಿಸಿಕೊಳ್ಳುವರು. ಹಲಗೆ ವಾದ್ಯಗಳೊಂದಿಗೆ ಕರಬಲಾ ಹಾಡುಗಳನ್ನು ಬೆಳಗಾಗುವವರೆಗೆ ಹಾಡುತ್ತಾರೆ. ಈ ಹಾಡುಗಳು ಮೊಹರಂ ಹಬ್ಬದ ಅಂಗವಾಗಿ ಕೇಳಿ ಬರುವ ಅಲಾವಿ ಪದಗಳು ಚರಿತ್ರೆಯ ವಿವರಗಳನ್ನು ದೊರಕಿಸುವಂತಹವೇ ಆಗಿವೆ.

ಹಜರತ್ ಆಲಿಯವರ ಕಾಲದಲ್ಲಿ ಮುಸ್ಲಿಂರ ಎರಡು ಪಂಗಡಗಳ ಮಧ್ಯೆ ಅಸಮಾಧಾನದ ಹೊಗೆ ಎದ್ದಿತು. ಆ ಸಮಯದಲ್ಲಿ ನ್ಯಾಯ-ಅನ್ಯಾಯ, ದ್ವೇಷ, ಪ್ರೇಮ, ಹಿಂಸೆ-ಅಹಿಂಸೆಗಳ ನಡುವೆ ಘರ್ಷಣೆಯಾಯಿತು. ಧರ್ಮ ಸಂರಕ್ಷಣೆಗಾಗಿ ಸೈನ್ಯ ಕಟ್ಟಿ ಹೋರಾಟದ ಇಮಾಮ ಹುಸೇನರು ಕರ್ಬಲಾದ ರಣಭೂಮಿಯಲ್ಲಿ ಮೊಹರಂ ತಿಂಗಳ ಹತ್ತನೆ ದಿನ ಮಡಿದರು. ಅವರ ಆತ್ಮಬಲಿದಾನ ಈ ಧರ್ಮದುರಂತದ ಕಥೆ ಜನರ ಮನದಲ್ಲಿ ಹಸಿರಾಗಿ ಉಳಿದಂತೆ ಮಾಡಿದ ಪ್ರಯತ್ನವೇ ಈ ಮೊಹರಂ ಈ ನೆನಪಿಗೋಸ್ಕರ ಇಂದಿಗೂ ಕೊನೆಯ ದಿನ ಬೆಂಕಿ ಹಚ್ಚಿ ಹಾರುವ ದೃಶ್ಯ ದುರಂತದೊಂದಿಗೆ ಹಬ್ಬ ಮುಕ್ತಾಯಗೊಳಿಸುತ್ತಾರೆ.

ಇದು ಈಗ ಹಬ್ಬವಾಗಿ ಹಿಂದೂ-ಮುಸ್ಲೀಂರ ಭಾಂದವ್ಯ ಭದ್ರ ಬುನಾದಿಯಾಗಿ ಪರಿಣಮಿಸಿದೆ.

ಕರ್ಬಲಾ ಮೇಳದಲ್ಲಿ ಹಾಡುವರು ಏರು ಇಳು ಧ್ವನಿಯಲ್ಲಿ ಹಾಡುವರು ಮುಸ್ಲಿಂ ಧರ್ಮದಲ್ಲಿ ಆಗಿ ಹೋದ ಸಾಧು ಸತ್ಪುರುಷರ ಸವಾಲು ಹಾಕಿ ಹಾಡುವುದು ಉಂಟು. ಹಿಂದೂ ಧರ್ಮದ ಪುರಾಣ ಕಥೆಗಳು ಮಹಾಭಾರತದಂತೆ ಯುದ್ಧವರ್ಣನೆಗಳು. ಸಾಮಾಜಿಕ ಕಥನ ಕವನಗಳು, ಅತ್ಯಾಚಾರ, ದೇಶಭಕ್ತ ಕುರಿತು ಹಾಡುತ್ತಾರೆ. ಹಿಂದೂ-ಮುಸ್ಲಿಂ ದೇವರಿಗೆ ಒಟ್ಟಿಗೆ ನೆನೆಯುವ ಪದ್ಯದ ಸಾಲುಗಳು ಹೀಗಿವೆ.

"ಇಳು" ದೇವ ಕೂಡಿರಿ ಇಂದು ವಿನಯದಿಂದ ನಾನು ಮಾಡುವೆ ಸಲಾಮ
"ಏರ್" ಒಂದು ಲಕ್ಷ ಎಂಬತ್ತು ಸಾವಿರ ಶರಣರಿಗೆ ನಮ್ಮ ಸಲಾಮ ಜನನಿ ಜನಕರೆ॥
ನಮ್ಮ ಮಿತ್ರರಿಗೆ ವಿನಯದಿಂದ ಮಾಡುವೆ ಸಲಾಮ.
ಮೊದಲಿಗೆ ನೆನದೇನೋ ಅಲ್ಲಾನ ನಾಮ॥ ಪ್ರಥಮ ನೆನೆವೇನೋ ಶಿವನ ಧ್ಯಾನ॥[೫೬]

---

೫೬ (ಅಡಿಟಿಪ್ಪಣಿ: ೫೬: ಜಾನಪದ ಐಸಿರಿ, ಲೇಖಕರು ಡಾ.ಬಿ.ಎಸ್.ಸ್ವಾಮಿ ಪುಟ ಸಂಖ್ಯೆ ೫೭೧)

ಭಾಗ –೩ : ಲೌಕಿಕ ಜೀವನ :

೧) ವಿವಾಹ

೨) ಸೋಬಾನ

೩) ಬಸುರಿ

೪) ಬಾಣಂತಿ

೫) ಮಕ್ಕಳು

೬) ಮೈನೆರೆದಾಗ.

**ವಿವಾಹ :**

ಪರಂಪರೆಯ ಬೆಳವಣಿಗೆಗೆ, ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ನಿರಂತರತೆಗೆ ಲೌಕಿಕ ಜೀವನವು ಅಷ್ಟೇ ಪ್ರಮುಖವಾಗಿದೆ. ಇದರ ಕೇಂದ್ರ ಬಿಂದುವಾದ ಮಾನವ ಮದುವೆ, ಮಕ್ಕಳು, ಸಂಸಾರದ ಜೊತೆಗೆ ತನ್ನ ಬದುಕನ್ನು ಸಾಗಿಸಿಕೊಂಡು ಹೋಗುತ್ತಾನೆ. ವೃದ್ಧಾಪದ ಬದುಕಿಗೆ ಆಶ್ರಯವಾಗಿದೆ. ತನ್ನ ಅಸ್ತಿತ್ವದ ಉಳುವಿಗಾಗಿ ತನ್ನ ಬೆಳೆಯುವ ಬಳ್ಳಿಯನ್ನು ಆಶ್ರಯಿಸಬೇಕಾಗುತ್ತದೆ. ಅದಕ್ಕಾಗಿ ವಿವಾಹಕ್ಕೆ ಮೊರೆ ಹೋದ, ಪ್ರಾಚೀನ ಕಾಲದ ಅಲೆಮಾರಿ ಜೀವನದಿಂದ ಕೃಷಿ ಆರಂಭಿಸಿ ಅಲೆ ನೆಲೆಯೂರಿದ ಮಾನವ ಮನೆಯಲ್ಲಿ ಆಹಾರ ಬೇಯಿಸಲು ತನ್ನ ಸಹಾಯಕ್ಕಾಗಿ ಹೆಣ್ಣಿನ ಸಹಾಯ ಪಡೆದ, ಸಂಪರ್ಕ ಬೆಳೆದಂತೆ ಒಡನಾಟದಿಂದ ತನ್ನ ಸಂಸಾರ ಅಥವಾ ಕುಟುಂಬ ರಚಿಸಿಕೊಂಡ, ಅದುವೆ ಸಮಾಜದ ಬೆಳವಣಿಗೆಗೆ ಮೂಲಕಾರಣವಾಯಿತು.

ಹೀಗೆ ಸಹಾಯಕ್ಕಾಗಿ ಅವಶ್ಯಕವಾಗಿ ಬೇಕಾಗಿದ್ದ ಹುಡಗಿಯನ್ನು ಹಣಕೊಟ್ಟು ಕೊಂಡುಕೊಳ್ಳುವುದು ಎಲ್ಲಾ ದೇಶಗಳಲ್ಲೂ ರೂಢಿಯಾಗಿತ್ತು. ಅದೇ ಇಂದಿನ ಕಾಲದಲ್ಲಿ ಗಂಡಿಗೆ ದಕ್ಷಿಣ ಕೊಡುವೆ ಬದಲಾವಣೆಯಾಗಿದೆ. ಹೀಗೆ ಅನೇಕ ಮೂಲಕಾರಣಗಳನ್ನು ಮತ್ತು ಅವುಗಳಿಗೆ ಒಂದೊಂದು ಉದ್ದೇಶವಿಟ್ಟು ಕೊಂಡ ವಿವಾಹದ ಆಚರಣೆಗಳು ರೂಢಿಯಲ್ಲಿ ಬಂದವು.

ಮದುವೆಗಳಲ್ಲಿ ಎಂಟು ವಿಧವಾಗಿ ವಿಂಗಡಿಸಲ್ಪಟ್ಟಿವೆಯೆಂದು ಶಾಸ್ತ್ರಕಾರರು ನಿರ್ಣಯಿಸಿ ಅವುಗಳಲ್ಲಿ ನಡೆದ ಪ್ರಧಾನ ವಿಷಯ ವಿವರಣೆ ನೀಡಿದ್ದಾರೆ.

೧) **ಬ್ರಹ್ಮ ವಿವಾಹ** : ಹುಡಗಿಯನ್ನು ಕೇಳಲು ಬರುವ ಮುಂಚೆಯೇ ಕನ್ಯಾದಾತ ತಾನೇ ಪ್ರಯತ್ನಿಸಿ ಕನ್ಯೆಯನ್ನು ಕೊಡುವುದು.

೨) **ದೈವ ವಿವಾಹ** : ಕನ್ಯಾದಾತ ಯಜ್ಞಾ ಮಾಡಿಸುತ್ತಿರುವಾಗ ಆ ಋತ್ವಿಜನಿಗೆ (ದಕ್ಷಿಣೆ ತೆಗೆದುಕೊಂಡು ಯಜ್ಞಾಮಾಡುವುವನಿಗೆ) ಕನ್ಯೆಯನ್ನು ಅಲಂಕರಿಸಿ ದಾನ ಮಾಡಿದರೆ ಅದು ದೈವ ವಿವಾಹ.

೩) **ಆರ್ಷ ವಿವಾಹ** : ವರನಿಂದ ಒಂದೆರಡು ಜೊತೆ ಹಸುಗಳನ್ನು ಪಡೆದು ಕನ್ಯೆಯನ್ನು ಕೊಡುವುದು.

೪) **ಪ್ರಜಾಪತ್ಯ ವಿವಾಹ** : ಕನ್ಯೆಯನ್ನು ವರನು ಕೇಳಲು ಬಂದ ನಂತರ ನೀನು ಇವಳನ್ನು ಧರ್ಮಪತ್ನಿಯಾಗಿ ಮಾಡಿಕೊಳ್ಳಬೇಕೆಂದು ಹೇಳಿ ಕನ್ಯೆಯನ್ನು ಕೊಡುವುದು.

೫) **ಅಸುರ ವಿವಾಹ** : ಹಣಕೊಟ್ಟು ಹೆಣ್ಣನ್ನು ಕೊಳ್ಳುವುದು.

೬) **ಗಾಂಧರ್ವ :** ವಧುವರರು ಒಬ್ಬರನ್ನೊಬ್ಬರು ಕಾಮಿಸಿ ಹಿರಿಯರ ಅನುಮತಿಯಿಲ್ಲದೆಯೆ ಜೊತೆಗೂಡಿದರೆ ಅದು ಗಾಂಧರ್ವ.

೭) **ರಾಕ್ಷಸ ವಿವಾಹ :** ಹುಡಗಿಯ ಬಂಧುಗಳೊಂದಿಗೆ ಕಾದಾಡಿ ಅವಳನ್ನು ಬಲತ್ಕಾರವಾಗಿ ತಂದರೆ ರಾಕ್ಷಸ ವಿವಾಹವಂತೆ.

೮) **ಪೈಶಾಚಿ ವಿವಾಹ :** ನಿದ್ರೆಯಲ್ಲೊ, ನಶೆಯಲ್ಲೋ ಇರುವಾಗ ಯಾರಿಗೂ ತಿಳಿದೆಯೆ ಮೇಲ್ಬಿದ್ದು ಜೊತೆಗೂಡಿದರೆ ಪೈಶಾಚಿ ವಿವಾಹವಂತೆ.[೫೭]

ಜನಪದರಲ್ಲಿ ಮದುವೆ ಕೇವಲ ಲೈಂಗಿಕ ಭೋಗದ ಅವಶ್ಯಕತೆಗಿಂತ ಸಂತಾನ ಅಭಿವೃದ್ಧಿಯ ಸಾರ್ಥಕತೆಯ ಅನಿವಾರ್ಯವಾಗಿರುತ್ತದೆ. ಹುಟ್ಟಿನ ಸಾರ್ಥಕತೆಯನ್ನು ಪೂರೈಸುವ ಸಾಮಾಜಿಕ ಅನಿವಾರ್ಯ ಮೌಲ್ಯ ಮದುವೆ.

ಮದುವೆ ಪೂರ್ವ ಜನ್ಮದ ಋಣಾನುಬಂಧ ಎಂಬ ಭಾರತೀಯರ ನಂಬುಗೆಗಳು ಅದಕ್ಕೆ ದೈವತ್ವದ ಅನುಗ್ರಹ ಎಂಬ ಪೂಜ್ಯತೆ ನೀಡಿವೆ. ಮದುಮಕ್ಕಳನ್ನು ರಾಧೆ-ಕೃಷ್ಣ, ಶಿವ-ಪಾರ್ವತಿಯರೆಂದೇ ಕಾಣುತ್ತಾರೆ. ಅದಕ್ಕಾಗಿ ಮದುವೆ ಶುಭದಿನದಂದು ಅನೇಕ ಧಾರ್ಮಿಕ ನಿಯಮಗಳನ್ನು ಅನುಸರಿಸುತ್ತಾರೆ. ಆದರೆ ಇಂದಿನ ಕಾಲದಲ್ಲಿ ಜರುಗುವ ಪ್ರೇಮವಿವಾಹ, ರಜಿಸ್ಟಾರ್ ಮ್ಯಾರೇಜಗಳಂತಹವು ಯಾವುದೇ ಧಾರ್ಮಿಕ ವಿಧಿ ಆಚರಣೆ ಅನುಸರಿಸಿಕೊಂಡು ಬರಲಾರದೆ ಹಾಗೆಯೇ ನಡೆಯುವಂತಹವು, ಮದುವೆಗೆ ಹೆಣ್ಣು ಗಂಡು ಗೊತ್ತುಮಾಡಿ ಏರ್ಪಾಡು ಮಾಡುವ ವ್ಯವಸ್ಥೆಯೇ ಹೆಚ್ಚಾಗಿ ಕಾಣುತ್ತೇವೆ.

**ಇಂತಹ ವಿವಾಹ ಕುರಿತ ಅನೇಕ ನಂಬಿಕೆ ಮತ್ತು ಆಚರಣೆಗಳು ಇಂತಿವೆ.**

೧) **ಹೆಣ್ಣು ನೋಡಲು ಹೋದಾಗ ಕುಂಕುಮ ಹಚ್ಚುವುದು :**

ವಿವಾಹ ಮಾಡಿಕೊಳ್ಳುವ ಹುಡುಗನು ಮೊದಲ ಶುಭದಿನ ನೋಡಿ ಹುಡಗಿಯನ್ನು ನೋಡಬೇಕೆಂಬ ನಂಬಿಕೆಯಿದೆ, ನೋಡಲು ಬಂದ ಕನ್ಯೆಗೆ ಹೂವು, ಹಣ್ಣು, ಸಕ್ಕರೆ, ಕುಂಕುಮ ರೂಪಾಯಿ ಒಟ್ಟಾಗಿ ಎರಡು ಇಲ್ಲವೆ ಐದು ಜೋಡಿಯಾಗಿ ಉಡಿಯಲ್ಲಿಟ್ಟು ಕುಂಕುಮ ಹಚ್ಚುವರು. ಕುಂಕುಮ ಮುತ್ತೈದಿತನದ ಸೌಭಾಗ್ಯ, ಹೆಣ್ಣಿಗೆ ಮುತ್ತೈದಿ ಸ್ಥಾನ ಅಲಂಕಿರಸಲು ಕೆಲವು ಮದುವೆ ನಂತರ ಬಂದರೆ ಕುಂಕುಮ ಹೂ ಹುಟ್ಟಿನಿಂದಲೇ ಉಪಯೋಗಿಸುವಂತಹವು ಅದಕ್ಕಾಗಿ ನೋಡಲು ಬಂದಾಗ ಹಾಗೆಯೇ ನೋಡುವುದಕ್ಕಿಂತ ಸೌಜನ್ಯತೆ ತೋರಿಸುವಂತಹ ಒಂದು ಸಾಮಾನ್ಯ ನಂಬಿಕೆ ಎನಿಸುತ್ತದೆ.

೨) **ನಿಶ್ಚಿತಾರ್ಥ ಮಾಡುವುದು ಉಂಗುರ ಇಡುವುದು :**

ವಿವಾಹಕ್ಕೆ ಮುಂಚೆ ಹೆಣ್ಣು-ಗಂಡು ಜೋಡಿಯನ್ನು ಗೊತ್ತುಪಡಿಸಿದ ದಿನವೆ ನಿಶ್ಚಿತಾರ್ಥ ಇದರಲ್ಲಿ ಹೆಣ್ಣು-ಗಂಡಿನ ಸಂಬಂಧಿಕರು ಪಾಲ್ಗೊಂಡು ಆಚರಿಸುವುದು ಧಾರ್ಮಿಕ ವಿಧಿ ನಿಮಿತ್ತ್ಯ ಮಾತ್ರ. ಇಲ್ಲಿ ಅನಾವಶ್ಯಕ ಹಣದ ವೆಚ್ಚಕ್ಕೆ ದಾರಿ ಮಾಡಿಕೊಡುವುದೇ ಆಗಿದೆ. ಜನತೆಯಲ್ಲಿಯ ವೈಜ್ಞಾನಿಕ ಮನೋಧರ್ಮದ

೫೭ (ಅಡಿಟಿಪ್ಪಣಿ: ೫೭: ವಿವಾಹ ಹುಟ್ಟು ಮತ್ತು ಸರ್ವೋತ್ತರ, ತಾಪಿ ಧರ್ಮರಾವ ಅನುವಾದ:ರವಿ ಬೆಳಗೆರೆ ಪುಟ ಸಂಖ್ಯೆ ೧೪೫)

ಕೊರತೆಯೇ ಕಾರಣವಾಗಿರುವುದು. ಟೋಪಿ ಟಾವೇಲಗಳು ಮಾಡುವುದು ಸೀರಿ ಉಡಿಸುವುದು ಅವರವರ ಕಡೆಯಿಂದ ಎಷ್ಟು ಸಂಖ್ಯೆಯಲ್ಲಿ ಬಂದಿರುತ್ತಾರೋ ಅಷ್ಟು ಜನರಿಗೆ ಮಾಡುವುದು ಇವೆಲ್ಲಾ ಅನಾವಶ್ಯಕ ವೆಚ್ಚಕ್ಕೆ ಭಾರವಾಗಿವೆ.

ಹುಡಗಿಯ ಮನೆಗೆ ಹುಡುಗನನ್ನು ಕರೆಯಿಸಿ ಉಂಗುರ ಇಡುವುದು ಪ್ರಾಚೀನ ಕಾಲದಿಂದಲೂ ಬಂದದ್ದೆಂದು ಹಾಗೂ ಸಂಶೋಧಕರು ಈ ಉಂಗುರಗಳಿಗೆ ಜೊತೆಗೂಡುವ ಪದ್ಧತಿಗೂ ಸ್ವಲ್ಪ ಸಂಬಂಧವಿದೆಯೆಂದು ನಿರ್ಧರಿಸಿದ್ದಾರೆ. "ಗಂಡ ಹೆಂಡಿರ ಕಾರ್ಯಕ್ಕೆ ಉಂಗುರವೊಂದು ನಿದರ್ಶನವೆಂಬ ಅಭಿಪ್ರಾಯ ಇಂದಿಗೂ ಆಫ್ರಿಕಾ ಮಧ್ಯಭಾಗದಲ್ಲೂ ಅಮೇರಿಕಾ, ಇಂಡಿಯನ್ನರಲ್ಲೂ ಇದೆಯೆನ್ನಲಾಗಿದೆ"[೫೮] ಉಂಗುರ ಬೆರಳಿನ ನರವು ಹೃದಯಕ್ಕೆ ಸಂಪರ್ಕಿಸುವುದರಿಂದ, ಗಂಡು ಹೆಣ್ಣಿನ ಈ ಬೆರಳಿನ ಸ್ಪರ್ಶ ಹೃದಯ ಸಂವೇದನೆಗೊಳ್ಳಲು ಕಾರಣವಾಗುತ್ತದೆಂಬ ವೈಜ್ಞಾನಿಕ ವಿಚಾರ ಈ ನಂಬಿಕೆಯಲ್ಲಿದೆ.

**೩) ಸಂಬಂಧಿಕರಲ್ಲಿ ಮದುವೆಯಾಗುವುದು :**

ತಮ್ಮ ಸಂಬಂಧಗಳು ದೂರವಾಗಬಾರದು ಮತ್ತು ಅಪರಿಚಿತ ಮನೆಗೆ ಹೋಗಿ ಕಷ್ಟ ಸಹಿಸುವುದಕ್ಕಿಂತಲೂ ಸಂಬಂಧಿಕರ ಮನೆಯಾದರೆ ಎಲ್ಲರೂ ಪರಿಚಯದವಾಗಿರುತ್ತಾರೆನ್ನುವ ಕಾರಣದಿಂದ ಸಂಬಂಧಿಕರಲ್ಲಿ ಮದುವೆಯಾಗುವ ಪದ್ಧತಿ ರೂಢಿಯಲ್ಲಿರಬಹುದು. ಇನ್ನೊಂದು ಮುಖ್ಯ ಕಾರಣವೆಂದರೆ ಆಸ್ಥಿಯನ್ನು ಬೇರೆಯವರ ಸ್ವತ್ತಾಗಬಾರದೆಂದು ಸಂಬಂಧಿಕರಲ್ಲಿಯೇ ಅದು ಉಳಿಯಲೆಂದು ಈ ವಿವಾಹ ರೂಢೀಯಲ್ಲಿರುವುದು. ಆದರೆ ಸಂಬಂಧಿಕರಲ್ಲಿಯೇ ತಲೆಮಾರಿನಿಂದ ತಲೆಮಾರಿಗೆ ವಿವಾಹವಾಗುತ್ತಿದ್ದರೆ ಹುಟ್ಟುವ ಮಕ್ಕಳ ಬೆಳವಣಿಗೆ ಮೇಲೆ ಪರಿಣಾಮ ಉಂಟಾಗುತ್ತದೆ.

ಈಜಿಪ್ಟಿನ ದೊರೆಯಾದ ಫೇರೋ ಕುಟುಂಬದ ಗಂಡಸರು ರಾಜಕುಟುಂಬದ ಪಾವಿತ್ರ್ಯತೆ ಮತ್ತು ಆಸ್ತಿ ಕೈ ತಪ್ಪಿ ಹೋಗಬಾರದೆಂದು ತಮ್ಮ ಸಹೋದರಿಯನ್ನೇ ವಿವಾಹವಾಗುತ್ತಿದ್ದರು. ಆದರೆ ಇವರ ಪೀಳಿಗೆ ಐದಾರು ತಲೆಮಾರಗಳ ನಂತರದಲ್ಲಿ ಮುಂದುವರೆಯಲಿಲ್ಲ.

**೪) ಅವಿವಾಹಿತರು ಮದರಂಗಿ ಇಡಬಾರದು :**

ಮದರಂಗಿ ಕಾಮ ಪ್ರಚೋದನೆಗೆ ಕಾರಣ ಎನ್ನುವ ಮನಶಾಸ್ತ್ರೀಯ ದೃಷ್ಟಿಯನ್ನು ಹೊಂದಿಕೊಂಡು ಅವಿವಾಹಿತರು ಮದರಂಗಿ ಇಡಬಾರದೆಂಬ ನಿಷೇಧ ಹುಟ್ಟಿಕೊಂಡಿದೆ. ಆದರೆ ಈ ದಿನಗಳಲ್ಲಿ ರೆಡಿಮೇಡನಲ್ಲಿ ಸಿಗುವ ಮದರಂಗಿ ಕೋನುಗಳು ತಂದು ಸಾಮಾನ್ಯ ದಿನಗಳಲ್ಲಿ ಹಚ್ಚಿಕೊಳ್ಳುವುದುಂಟು. ಈ ಹಿಂದಿನ ದಿನಗಳಲ್ಲಿ ಮದುವೆ ದಿನಗಳಲ್ಲಿ ಮಾತ್ರ ಹಂಚಿಕೊಳ್ಳುತ್ತಿದ್ದರು. ಸೌಂದರ್ಯವರ್ಧಕ ಸಾಧನೆಗಳ ಜೊತೆ ಇದು ಒಂದಾಗಿ ಹೆಚ್ಚಾಗಿ ಬಳಕೆಯಾಗುತ್ತಿರುವುದು ಕಂಡುಬರುತ್ತದೆ.

**೫) ಮದುವೆ ಹೆಣ್ಣಿಗಿಂತ ಗಂಡು ದೊಡ್ಡವನಾಗಿರಬೇಕು :**

ಹೆಣ್ಣು ಮಕ್ಕಳಲ್ಲಿ ೪೦ ರಿಂದ ೫೦ನೇ ವಯಸ್ಸಿನಲ್ಲಿ ಮುಟ್ಟು ನಿಲ್ಲುತ್ತದೆ. ಅಂಡಾಣು ಉತ್ಪತ್ತಿ ಆ ವೇಳೆಗೆ ನಿಲ್ಲುವುದರಿಂದ ಹೆಂಗಸು ಮಗು ಪಡೆಯಲು ಅಸಮರ್ಥಳಾಗುತ್ತಾಳೆ. ಬಯಕೆಗಳು ಕೂಡಾ

---

೫೮ (ಅಡಿಟಿಪ್ಪಣಿ: ೫೮: ವಿವಾಹ ಹುಟ್ಟು ಪೂರ್ವೋತ್ತರ ಲೇಖಕರು: ಧರ್ಮರಾವ ಪುಟ ಸಂಖ್ಯೆ ೧೨೮)

ನಶಿಸುತ್ತವೆ. ಹೀಗೆ ಹೆಣ್ಣು ಸಣ್ಣ ವಯಸ್ಸಿನಲ್ಲಿ ಲೈಂಗಿಕವಾಗಿ ಪ್ರಬುದ್ಧಳಾಗಿ ಬೇಗ ಆಕೆಯ ಲೈಂಗಿಕ ಶಕ್ತಿ ಕೊನೆಗೊಳ್ಳುತ್ತದೆ. ಆದರೆ ಗಂಡಸು ತಡವಾಗಿ ಪ್ರಬುದ್ಧನಾಗಿ ಕೊನೆ ತನಕ ಲೈಂಗಿಕ ಬಯಕೆ ಉಳಿಸಿಕೊಳ್ಳುತ್ತಾನೆ. ಈ ಪ್ರಕೃತಿ ವೈಚಿತ್ರದಿಂದಲೋ ಏನೋ ನಮ್ಮ ಹಿಂದೂ ಸಂಪ್ರದಾಯದಲ್ಲಿ ಗಂಡಿಗಿಂತಲೂ ಸುಮಾರು ಎಂಟರಿಂದ ಹತ್ತು ವರ್ಷ ಕಿರಿಯಳಾದ ಹುಡುಗಿಯನ್ನು ಮದುವೆ ಮಾಡುವುದು ಉತ್ತಮ ಪದ್ಧತಿಯೇಯಿದೆ. ವೈದ್ಯಕೀಯ ಪದ್ಧತಿಯಲ್ಲೂ ಇದು ಸರಿಯಾದ ಕ್ರಮವೆಂದು ಲೇಖಕರಾದ ರಾಮಲಿಂಗಯ್ಯ ಉಪ್ಪಿನಕೆರೆ ಅಭಿಪ್ರಾಯಪಡುತ್ತಾರೆ. ಒಂದು ವೇಳೆ ಗಂಡನಿಗಿಂತಲು ದೊಡ್ಡವಳಾದರೆ, ಸಮ ವಯಸ್ಕಳಾದರೆ, ಗಂಡು ತನ್ನ ಇಳಿ ವಯಸ್ಸಿನಲ್ಲಿ ಆಕೆಯನ್ನು ಪೂರೈಸಿಕೊಳ್ಳಲಾಗುವುದಿಲ್ಲ. ಅಷ್ಟೇ ಅಲ್ಲದೆ ದೈಹಿಕ ಮತ್ತು ಮಾನಸಿಕ ಶ್ರಮಕ್ಕೆ ಹೆಚ್ಚು ಗುರಿಯಾಗುವ ಗಂಡು ಮುಪ್ಪಿನ ಕಾಲದಲ್ಲಿ ಬಹಳಷ್ಟು ತೊಂದರೆಗಳಿಗೆ ಈಡಾಗುವುದು ಸಹಜ. ಕಣ್ಣು ಸರಿಯಾಗಿ ಕಾಣದಿರುವುದು ಇನ್ನಿತರೆ ದೇಹಾರೋಗ್ಯವನ್ನು ನೋಡಿಕೊಳ್ಳಲು ಪತ್ನಿಗಿಂತ ಉತ್ತಮರಾದ ಆತ್ಮೀಯರು ಯಾರು ಇರುವುದಿಲ್ಲ. ಆದ್ದರಿಂದ ಗಂಡ ಹೆಂಡತಿಯ ಸೇವೆಯನ್ನು ಪಡೆಯಬೇಕಾದರೆ ತನಗಿಂತ ಕಡಿಮೆ ವಯಸ್ಸಿನ ಹೆಣ್ಣನ್ನು ಮದುವೆಯಾಗಬೇಕು.

**೬) ವಿವಾಹದಲ್ಲಿ ತಾಳಿ, ಕಾಲುಂಗುರ, ಬಳೆ, ಓಲೆ ಹಾಕುವುದು :**

ವಿವಾಹದ ನಂತರ ತಾಳಿಯೇ ಹೆಣ್ಣಿನ ಸೌಭಾಗ್ಯವಾಗಿ ಪೂಜಿಸಲ್ಪಡುತ್ತದೆ. ಆದರೆ ಪ್ರಾಚೀನಕಾಲದ ಆರಂಭದ ದಿನಗಳಲ್ಲಿ ತಾಳಿಯಿರಲಿಲ್ಲ. ವಿವಾಹವಾದ ಹೆಣ್ಣು ಎಂದು ಗುರುತಿಸಲು ಒಂದೊಂದು ಲಾಂಛನಗಳಾಗಿ ಬಳಕೆಗೆ ಬಂದವು. ಅದರಂತೆ ವಿವಾಹದ ಬದುಕಿಗೆ ಹೆಣ್ಣಿಗೆ ಪ್ರಮುಖವಾಗಿರುವುದು ತಾಳಿ. ಅದರೊಂದಿಗೆ ಕಾಲುಂಗರ ಕೂಡಾ ಆಗಿದೆ. ಅನಾಗರಿಕರಲ್ಲಿ ಗೆದ್ದವನದೇ ಹಕ್ಕು ಎನ್ನುವಂತೆ ಹೆಣ್ಣನ್ನು ಯಾವ ವ್ಯಕ್ತೀ ಬಲಾಢ್ಯ ಚತುರನೋ ಅವನು ಮದುವೆಯಾದ ಗಂಡಿನಿಂದಲೂ ತನಗೆ ಬೇಕಾದ ಹೆಣ್ಣನ್ನು ಒಯ್ಯುತ್ತಿದ್ದನು. ಇದನ್ನು ತಪ್ಪಿಸಲು ಹಾಗೂ ಗಂಡು ತಾನು ಸಾಹಸದಿಂದ ಹೆಣ್ಣನ್ನು ಗೆದ್ದುಕೊಂಡು ಬಂದನೆಂದು ಗುರುತಿಸಲು ಸಾಮ್ರಾಜ್ಯ ಗೆದ್ದ ಅರಸ ವಿಜಯದ ಸಂಕೇತವಾಗಿ ಗುಡಿ ಗೋಪುರ ಸಾಮ್ರಾಜ್ಯ ಗಡಿ ಗುರುತಿಸಿದಂತೆ, ಅವನು ತಲೆ ಗೂದಲಿನಲ್ಲಿ ಈಟಿಯನ್ನು ಲಾಂಛನವಾಗಿ ಇಡುತ್ತಿದ್ದರು. ಇದು ಗ್ರೀಕ್ ದೇಶದಲ್ಲಿ ಆಚರಣೆಯಲ್ಲಿದ್ದರೆ. ತಾರ್ತಾರು ಕೊರಳಿಗೆ ಕರವಸ್ತ್ರ ಇಲ್ಲವೆ ಹಗ್ಗ ಸುತ್ತವುದು ಅವರ ಲಾಂಛನ ಹಗ್ಗಕ್ಕೆ ಬದಲಾಗಿ ದಾರ ಸುತ್ತಿದರೂ ಅದು ಲಾಂಛನವೇ "ಅದೇ ಗಳಸೂತ್ರ ಅದೇ ಮಂಗಳಸೂತ್ರ"[೫೯] ವೆಂದು ದೊಡ್ಡದಾಗಿ ಹೇಳಿಕೊಳ್ಳುತ್ತೇವೆ. ಇದಕ್ಕೆ ತಾಳಿ ಬಿಳಲೆ ಇರುತ್ತಿರಲಿಲ್ಲ. ಇದು ಇಂಡಿಯಾದಲ್ಲೂ ರೂಢಿಯಲ್ಲಿತ್ತು. ಇಲ್ಲಿ ಕೂಡಾ ತಾಳಿಗೂ ಮದುವೆಗೂ ಮೂಲತಃ ಸಂಬಂಧವಿರಲಿಲ್ಲ. ಅದು ಕೆಟ್ಟ ಶಕ್ತಿಗಳನ್ನು ದೂರವಿಡಲು ಹೆಣ್ಣು ಮಕ್ಕಳು ಧರಿಸುತ್ತಿದ್ದ ತಾಯತ ಆಗಿದ್ದು, ಅದು ಒಡವೆಯಂತೂ ಬಳಕೆಯಾಗುತ್ತಿತ್ತು. ಮಂಗಳ ಸೂತ್ರ ಬೇರೆ ತಾಳಿ ಬೇರೆಯಾಗಿತ್ತು. ಮಂಗಳಸೂತ್ರ ಹೆಸರೆ ಹೇಳುವಂತೆ ಮಂಗಳಕರವಾದ ದಾರ, ಅದು ಅರಿಶಿಣದಲ್ಲಿ ಅದ್ದಿದ್ದ ದಾರವಾಗಿ ಕಟ್ಟುವ ಪದ್ಧತಿ ಭಾರತದಲ್ಲಿತ್ತು. ಈಗಲೂ ಅನೇಕ ಜಾತಿಗಳಲ್ಲಿ ಗಂಡು ಹೆಣ್ಣಿಗೆ ಅರಿಶಿಣದಾರ ಕಟ್ಟುವುದುಂಟು. ಹರಿಶ್ಚಂದ್ರ ಕಾವ್ಯದಲ್ಲಿ 'ಮಂಗಳ ಸೂತ್ರದೊಳಗಿನ ಐದೆದಾಳಿ' ಎಂಬ ಉಕ್ತಿ ಮತ್ತು ದೀಪದ ಕಲಿಯುರ ಕಾವ್ಯದಲ್ಲಿ ಹೆಂಡತಿ ತನ್ನ ಗಂಡನಿಗೆ ತನ್ನ ಕೊರಳಲ್ಲಿ ಇಷ್ಟು ದಿನವಾದರೂ ಬರಿಯ ಕರಿಮಣಿಯಿದೆ.

೫೯ (ಅಡಿಟಿಪ್ಪಣಿ: ೫೯: ವಿವಾಹ ಹುಟ್ಟು ಪೂರ್ವೋತ್ತರ ಲೇಖಕರು: ಧರ್ಮರಾವ ಪುಟ ಸಂಖ್ಯೆ ೧೨೮)

ಅದರಲ್ಲಿ ತಾಳಿ ರೂಪದ ಚಿನ್ನ ಸ್ವಲ್ಪವೂ ಸೇರಿಕೊಂಡಿಲ್ಲ ಎಂದು ಆಕ್ಷೇಪಣೆ ಮಾಡುವುದರಿಂದ, ಓಂದೆ ಮಾಂಗಲ್ಯ ಮತ್ತು ತಾಳಿಗಳೆರಡೂ ಬೇರೆ ಬೇರೆಯಾಗಿ ಭಾವಿಸಿದ್ದರೆಂದು ಗೊತ್ತಾಗುತ್ತದೆ. ಹೀಗೆ ವಿವಾಹವಾದ ಹೆಣ್ಣು ಎಂದು ಗುರುತಿಸಲು ತಾಳಿ ಮಂಗಳಸೂತ್ರಕ್ಕೆ ಸೇರಿದ್ದು ನಂತರದ ಕಾಲದಲ್ಲಿ ರೂಢಿಯಲ್ಲಿ ಬಂದಿದ್ದಾಗಿದೆ. ಸಾವಿರ ವರ್ಷಗಳ ಹಿಂದೆ ಮುತ್ತೈದಿತನದ ಲಕ್ಷಣಗಳಾಗಿ ಓಲೆ, ಕಡಗಗಳಿದ್ದವು. ಇವು ಈಗೂ ಇವೆ ಇದಕ್ಕಿಂತಲೂ ತಾಳಿಗೆ ಪ್ರಾಮುಖ್ಯತೆವಿದೆ. ವಿವಾಹವಾಗದ ಎಷ್ಟೋ ಹುಡಗಿಯರು ತಾಳಿಯಿರದ ಕರಿಮಣಿ ಸರಗಳನ್ನು ತಮ್ಮ ರಕ್ಷಣೆಗೊಸ್ಕರ ಹಾಕಿಕೊಳ್ಳುವುದುಂಟು. ಈ ತಾಳಿಯ ಆಕಾರದಲ್ಲಿ ಬೇರೆ ಬೇರೆ ನಮೂನೆಗಳಿವೆ.

ಹೆಣ್ಣನ್ನು ಅಡಿಯಿಂದ ಮುಡಿಯವರೆಗೆ ನೋಡುವ ಗಂಡಸರ ವಕ್ರದೃಷ್ಟಿಗೆ ತಾಳಿ ಕಾಲುಂಗರ ನೀರಿಳಿಸುತ್ತವೆ. ಕಾಲುಂಗರ ಕೂಡಾ ವಿವಾಹದಲ್ಲಿ ಹೆಣ್ಣಿಗೆ ಸಿಗುವ ಸೌಭಾಗ್ಯ. ನಾರಿಯರು ತಮ್ಮ ಶರೀರವನ್ನು ಬಿಸಿಲಿನಿಂದ ಹಾಗೂ ಸಮಾಜದ ಗಂಡಸರಿಂದ ರಕ್ಷಿಸಿಕೊಳ್ಳಲು ತಲೆ ತುಂಬಾ ಸೆರಗು ಹಚ್ಚುಕೊಳ್ಳುತ್ತಾರೆ.

ಬಳೆಯು ಹೆಣ್ಣಿನ ಸೌಂದರ್ಯದ ಹೆಚ್ಚಿಸುವ ಗೌರವದ ಸಂಕೇತವೂ ಆಗಿದೆ. ಹಿಂದಿನಿಂದ ಬಳೆಯಾವ ರೀತಿಯಾಗಿ ಬಳಕೆಯಲ್ಲಿ ಬಂತು ಎನ್ನವ ಅಭಿಪ್ರಾಯ ಹೀಗಿದೆ.

ದಕ್ಕನಲ್ಲಿ ಅನಾಗರಿಕ ಪಂಗಡವೊಂದರ ಮದುಮಗ ಒಬ್ಬ ಹುಡುಗಿಯನ್ನು ತನ್ನ ಮೇಲೆ ಹೊತ್ತು ತರುವಾಗ ಮದುಮಗಳು ಅಳುತ್ತಿರುತ್ತಾಳೆ. ಆ ಹುಡಗಿಯ ಗೆಳತಿಯರು ಕಲ್ಲು ಎಸೆಯುತ್ತಾರೆ. ಆದ್ದರಿಂದ ಮನೆಗೆ ಬಂದ ನಂತರ ಮದುಮಗಳಿಗೆ ನಾಲ್ಕು ಮಣ ಭಾರದ ಹಿತ್ತಾಳೆ ಬಳೆಗಳನ್ನು ಅವಳ ಕೈಗಿ ತೊಡಿಸುತ್ತಾರೆ. ಮೊದಲಿಗೆ ಮದುಮಗಳಿಗೆ ಮೂರು ದಿನ ಬೇಡಿಕೆಗಳನ್ನೇ ತೊಡಿಸುತ್ತಿದ್ದರು. ಆ ಆಚಾರವೇ ಈ ಬಳೆಗಳ ಆಚಾರವಾಗಿ ಪರಿಣಮಿಸಿತು. [೬೦] ಈಗಲೂ ಓಡ್ರ ದೇಶದಲ್ಲಿ ಎಷ್ಟು ಭಾರದ ಹಿತ್ತಾಳೆ ಬಳೆ ತೊಡಿಸಿದರೆ ಅಷ್ಟು ಅವರ ಶ್ರೀಮಂತಿಕೆ ತೊರಿಸುವುದೆಂಬ ಭಾವನೆಯಿದೆ. ಹಾಗೆಯೇ ನಮ್ಮಲ್ಲಿ ಹಿತ್ತಾಳೆ ಸ್ಥಾನದಲ್ಲಿ ಬಂಗಾರ ಬಳೆಯನ್ನು ವಿವಾಹದಲ್ಲಿ ಹಾಕುವುದುಂಟು. ಬಡವ ಶ್ರೀಮಂತ ಜಾತಿ ಬೇಧಗಳಿಲ್ಲದೆ ಸ್ತ್ರೀಕುಲಕ್ಕೆ ಸೌಂದರ್ಯ ಹೆಚ್ಚಿಸುವ ಗಾಜಿನ ಬಳೆಗಳಿಗೆ ವಿಶೇಷ ಗೌರವವಿದೆ. ಅದರಲ್ಲಿ ಕೆಂಪು ಮತ್ತು ಹಸಿರು ಬಣ್ಣಗಳಿಗಂತೂ ಹೆಚ್ಚಿನ ವಿಶೇಷತೆಯಿದೆ. ಗಾಜಿನ ಬಳೆಗಳ ಬದಲಾಗಿ ಬಂದಿರುವ ಬಳೆಗಳುಂಟು ಹಾಗೂ ಇವತ್ತು ಬಳೆಗಳು ಬಳಸದೇ ಇರುವವರೂ ಇದ್ದಾರೆ. ಅವರು ತೆಗೆದಿಟ್ಟ ಬಳೆಯೊಂದಿಗೆ ತಳಕು ಹಾಕಿಕೊಂಡಿದ್ದ ಹತ್ತೆಂಟು ಭಾವನೆಗಳು ಸಹ ಕಳಚಿಕೊಳ್ಳುತ್ತೀವೆ.

ಕಿವಿಯ ಓಲೆಯು ಓಲೆಯ ಗರಿಯಿಂದ ಹಾಕಿಕೊಳ್ಳುತ್ತಿದ್ದರು. ಅದೇ ಮುಂದುವರೆದು ಓಲೆಯೆಂದು ಬಳಕೆಯಲ್ಲಿರಬಹುದು. ಬಂಗಾರ ಬಳಕೆಯಿರದಿದ್ದ ಸಂದರ್ಭದಲ್ಲಿ ಅಥವಾ ಬಡತನದಲ್ಲಿದ್ದ ಹೆಚ್ಚು ಜನತೆ ತಮ್ಮ ಕಿವಿಗಳಿಗೆ ಆಭರಣಗಳಾಗಿ ಓಲೆಯಗರಿ (ಕಡ್ಡಿ)ಯನ್ನು ಬಳಸುತ್ತಿದ್ದಿರಬೇಕು. ಓಲೆಯು ಕೂಡಾ ಮುತ್ತೈದಿ ಎಂದು ಗೌರವಿಸುವುದುಂಟು. ಅದೇ ರೀತಿ ಮೂಗುತಿ ಕೂಡಾ ಮುತ್ತೈದಿ ಸಂಕೇತವಾಗಿದೆ.

ಓಲೆ, ಬಳೆ, ಮೂಗುತಿ ಇರದೇ ಇರುವ ಸಣ್ಣ ಹೆಣ್ಣು ಮಕ್ಕಳಿಗೂ ಗಂಡು ಮಕ್ಕಳಿಗೂ ಇರುವ ವ್ಯತ್ಯಾಸ ಗುರುತಿಸುವುದು ಕಷ್ಟವಾಗುತ್ತದೆ. ಆದ್ದರಿಂದ ಹೆಣ್ಣು ಗಂಡು ಎಂದು ಗುರುತಿಸಲು ಸಹಾಯಕವಾಗಿ ಓಲೆ, ಬಳೆ,

---

೬೦ (ಅಡಿಟಿಪ್ಪಣಿ: ೬೦: ವಿವಾಹ ಹುಟ್ಟು ಪೂರ್ವೋತ್ತರ ಲೇಖಕರು: ಧರ್ಮರಾವ ಪುಟ ಸಂಖ್ಯೆ ೧೨೮)

ಮೂಗುತಿ ಚಿಕ್ಕಂದಿನಿಂದಲೂ ಹಾಗೂ ತಾಳಿ ಕಾಲುಂಗರ ವಿವಾಹದ ನಂತರ ರಕ್ಷಣೆಯಾಗಿ ಮತ್ತು ಹೆಣ್ಣಿನ ಸೌಂದರ್ಯ ಹೆಚ್ಚಿಸುವ ಅಲಂಕಾರದ ಒಡವೆಗಳಾಗಿವೆ. ಅದರಂತೆ ಹೂವು, ಅರಿಶಿಣ, ಕುಂಕುಮಗಳು ಮುತ್ತೈದಿತನದ ಸೌಭಾಗ್ಯಗಳಾಗಿ ಬಳಸುವುದು. ಅರಿಶಿಣ, ಕುಂಕುಮಗಳಲ್ಲಿ ಔಷಧೀಯ ಗುಣಗಳಿರುವವು. ಅರಿಶಿಣ ದೇಹಕ್ಕೆ ಲೇಪಿಸಿಕೊಳ್ಳುವುದರಿಂದ ಚರ್ಮವನ್ನು ರಕ್ಷಿಸುತ್ತದೆ.

**೭) ಮದುವೆಯಗಳಲ್ಲಿ ಆಯರಿ ಮಾಡುವುದು :**

ಮದುವೆ ಮಾಡಿ ನೋಡು ಮನೆ ಕಟ್ಟಿ ನೋಡು ಎನ್ನುವ ಮಾತೆ ಇದೆ. ಈ ಕೆಲಸಗಳು ದಿನ ನಿತ್ಯ ಮಾಡುವ ಹಾಗೂ ಕಡಿಮೆ ಪ್ರಮಾಣದ ಖರ್ಚಿನಲ್ಲಿ ಮಾಡುವಂತಹವು. ಅಲ್ಲ. ಹಣ ಇದ್ದವರು ಈ ಕೆಲಸಗಳು ಸರಳವಾಗಿ ನಿರ್ವಹಿಸುತ್ತಾರೆ ಆದರೆ ಬಡತನದಲ್ಲಿದ್ದವರು ಸಾಲ ಮಾಡಿ ಈ ಕೆಲಸಗಳನ್ನು ಮಾಡಿದರೆ ಅವರು ಸಾಲದ ಹೊರೆಯನ್ನು ದೀರ್ಘಕಾಲದವರೆಗೆ ನಿಭಾಯಿಸಬೇಕಾಗುತ್ತದೆ. ಆದ್ದರಿಂದ ಮದುವೆ ಮಾಡಿ ಹಣ ಖರ್ಚು ಮಾಡಿಕೊಳ್ಳುವುದು ಸಹಜವಾಗಿರುತ್ತದೆ. ಹೀಗೆ ಮದುವೆಗೆ ಬಂದ ಜನರು ಅಂತಹ ಸಂದರ್ಭದಲ್ಲಿ ಸಹಾಯವಾಗಲೆಂದು ಹಣವನ್ನು ಆಯೇರಿಯಾಗಿ ಮಾಡುವ ಪದ್ಧತಿ ಬೆಳೆದುಕೊಂಡು ಬಂದಿರುವುದಾಗಿದೆ.

**೮) ಸುರಗಿ ಸುತ್ತುವುದು ಮತ್ತು ಸುರಗಿ ಸಾಮಾನು ಕೊಡುವುದು :**

ಸುರಗಿ ಮದುವೆ ಮುನ್ನಾ ದಿನ ರಾತ್ರಿ ಅರಿಶಿಣ ಹಚ್ಚುವ ಕಾರ್ಯಕ್ರಮದಲ್ಲಿ ಪೂರ್ವಕ್ಕೆ ಮುಖ ಮಾಡಿಕೂರುವಂತೆ ನಾಲ್ಕು ಕಡೆ ತಂಬಿಗೆ ಇಟ್ಟು ಸಣ್ಣದಾರದಿಂದ ಐದು ಸುತ್ತಿನಿಂದ ಚೌಕಾಕಾರವಾಗಿ ನಿರ್ಮಿಸಿರುವುದನ್ನು ಸುರಗಿ ಎನ್ನುವರು. ತಂಬಿಗೆಗೆ ಒಬ್ಬರಂತೆ ಕೈ ಹಿಡಿದು ಮುತ್ತೈದಿಯರು ಕೂಡುತ್ತಾರೆ. ನಡುವೆ ವಧು ವರರನು ಪೂರ್ವ ದಿಕ್ಕಿಗೆ ಮುಖಮಾಡಿ ಕೂಡಿಸಿ ಎಣ್ಣೆ ಹಚ್ಚಿ ಸ್ನಾನ ಮಾಡಿಸುತ್ತಾರೆ. ಆದ್ದರಿಂದ ಈ ಚೌಕಟ್ಟಿನಲ್ಲಿ ಯಾರು ಬರಬಾರದೆಂಬ ಸೀಮಿತ ರೇಖೆಯಾಗಿರಬೇಕು. ಸ್ನಾನದ ನಂತರ ನಾಲ್ಕು ಜನರು ಒಮ್ಮೆಗೆ ಆ ದಾರ ತೆಗೆಯುವರು. ಇದು ವಿವಾಹದ ದಿನವು ಇನ್ನೊಂದು ಸಲ ಸುರಗಿ ಸುತ್ತಿ ಅದೇ ರೀತಿ ಮಾಡುವರು.

'ಸುರಗಿ' ನಿಘಂಟುವಿನ ಅರ್ಥ ಸಣ್ಣ ಖಠಾರಿ ಎಂದಿದೆ. ಛುರಿಕಾ ಸಂಸ್ಕೃತ ಪದದ ತದ್ಭವ 'ಚೂರಿ' ಸುರಗಿ ಎಂದಾಗಿದೆ. ಒಂದು ಕಾಲದಲ್ಲಿ ಮದುವೆ ಹೆಣ್ಣನ್ನು ಗೆದ್ದು ತರುವ ಪದ್ಧತಿಯಿತ್ತು ಅಥವಾ ಹೆಣ್ಣು ಅಪಹರಿಸುವ ಪದ್ಧತಿಯಿತ್ತು. ಇಂತಹದ್ದರಿಂದ ಮಗಳು ಸುರಕ್ಷಿತವಾಗಿ ಗಂಡನ ಮನೆ ತಲುಪಲೆಂದು ಸುರಗಿ (ಖಠಾರಿ) ಜೊತೆಗೆ ಸಾರಿಗೆ ಸೌಲಭ್ಯವಿರದಿದ್ದ ಆ ಕಾಲದಲ್ಲಿ ಪ್ರವಾಸದ ಮಧ್ಯ ಸಹಾಯಕವಾಗಿ ಮಾಡಿದ ಅಡುಗೆಯಲ್ಲಿ ಕೋಡುಬಳೆ, ಕರ್ಚಿಕಾಯಿ ಇತರ ಪದಾರ್ಥಗಳು ಜೊತೆಗೆ ಕೊಡುತ್ತಿದ್ದುಂಟು ಆದರೆ ಇಂದಿನ ದಿನಗಳಲ್ಲಿ ಅವಶ್ಯಕವಿರುವ, ಇಲ್ಲದಿರುವ ತಮ್ಮ ಶ್ರೀಮಂತಿಕೆಯನ್ನೂ ತೋರಿಸಿಕೊಳ್ಳುವ ಜಂಭದಲ್ಲಿ ಮನೆಯ ಉಪಯೋಗಕ್ಕಾಗಿ ಬಳಸುವ ವಸ್ತುಗಳೇಲ್ಲವೂ ಕೊಡುವುದು ರೂಢಿಯಾಗಿದೆ. ಆದರೆ ಸಮಾಜದಲ್ಲಿ ಬಡತನದಲ್ಲಿರುವ ತಂದೆ ತಾಯಿಗಳಿಗೆ ಇದು ದೊಡ್ಡ ಸಮಸ್ಯೆಯಾಗಿ ಜೀವಸುಂಗುತ್ತದೆ. ಎಲ್ಲವೂ ಕೊಟ್ಟರೆ ಸಾಲದ ಭಾರ ಹೆಚ್ಚಾಗುವುದು, ಕೊಡದಿದ್ದರೆ ಮಗಳಿಗೆ ಕಿರುಕುಳ ಕೊಡುವರೆಂಬ ಭಯ, ಸಮಾಜ ಜನತೆಯು ನಿಂದನೆ ಓಗಾಗಿಯೇ ಹೆಣ್ಣು ಹುಟ್ಟಿದರೆ ಹುಣ್ಣು ಎಂಬ ನೋವಿನ ಭಾವನೆ ಬಡತನದ ತಂದೆ ತಾಯಿಯರಲ್ಲಿ ಹಚ್ಚು ಹಸುರಾಗಿ ಉಳಿದಿವೆ.

೯)     **ಆಷಾಢದಲ್ಲಿ ಹೊಸದಾಗಿ ಮದುವೆಯಾದ ಹೆಣ್ಣು ಗಂಡನ ಮನೆಯಲ್ಲಿರಬಾರದು:**

ಆಷಾಢ ತಿಂಗಲ್ಲಿ ಹೆಚ್ಚಿನ ಮಳೆ ಅಧಿಕ ಗಾಳಿಯಿಂದಾಗಿ ಹವಮಾನದಲ್ಲಿ ಏರುಪೇರು ಆಗಿರುವುದರಿಂದ ಅನಾರೋಗ್ಯಕ್ಕೆ ಎಡೆಮಾಡಿಕೊಡುವ ಸಂಭವ ಹೆಚ್ಚು ಆದ್ದರಿಂದ ಲೈಂಗಿಕ ಪ್ರಕ್ರಿಯೆಯಲ್ಲಿ ತೊಡಗುವ ನವ ವಧುವರರಿಗೆ ಇದರಿಂದ ಆರೋಗ್ಯದ ಮೇಲೆ ಅನಾನುಕೂಲ ಪರಿಣಾಮ ಉಂಟಾಗುವುದನ್ನು ತಪ್ಪಿಸಲು ಈ ನಂಬಿಕೆ ರೂಢಿಯಲ್ಲಿರುವುದು.

**ಸೋಬಾನ :**

ಇದು ವಿವಾಹದ ನಂತರ ನಡೆಯುವ ಆಚರಣೆ, ಶಾಸ್ತ್ರೋಕ್ತವಾಗಿ ಗಂಡ ಹೆಂಡಿರನ್ನು ಕೂಡಿಸುತ್ತಾರೆ. ಇದಕ್ಕೆ ಹಿರಿಯರು ವಿವರಣೆ ಕೊಡಲು ಅಸಮರ್ಥರಾಗಬಹುದಾದರೂ ಅವರ ಈ ಪದ್ಧತಿಯನ್ನಂತೂ ವೈದ್ಯಕೀಯ ದೃಷ್ಟಿಯಿಂದ ಪರಿಶೀಲಿಸಿದಾಗ ಮೆಚ್ಚಬೇಕಾಗುತ್ತದೆ. ಮದುವೆ ಸೋಬಾನುಗಳನ್ನು ವಂಶಾಭಿವೃದ್ಧಿಗೆ ಅಗತ್ಯ ಶುಭ ಕಾರ್ಯಗಳೆಂದು ನಂಬಿದ್ದರು.

ಸಾಮಾನ್ಯವಾಗಿ ಹೆಂಗಸರಲ್ಲಿ ಮುಟ್ಟಾದ ಹದಿನಾಲ್ಕನೇ ದಿವಸಕ್ಕೆ ಅಂಡಾಶಯದಿಂದ ಅಂಡಾಣು ಬಿಡುಗಡೆಯಾಗುತ್ತದೆ. ಅದು ಗರ್ಭಾಶಯದ ಕಡೆಗೆ ತೆವಳತೊಡಗಿ ಗರ್ಭಕೋಶ ತಲುಪಲು ಒಂದೆರಡು ದಿವಸಗಳ ಕಾಲ ಬೇಕಾಗುತ್ತದೆ. ಆ ದಿನ ಪುರುಷನಿಂದ ವೀರ್ಯದಾನವಾದರೆ ವೀರ್ಯಾಣು ಅಂಡಾಣು ಒಂದು ಗೂಡಿ ಮೊಟ್ಟೆಯಾಗಿ ಗರ್ಭಧರಿಸುವ ಸಾಧ್ಯತೆ ಹೆಚ್ಚು. ಈ ಸಮಯದನಂತರ ಪ್ರತಿ ದಿನ ಕಳೆದಾಗಲೂ ಗರ್ಭಧರಿಸುವ ಸಾಧ್ಯತೆ ಕಡಿಮೆಯಾಗತೊಡಗುತ್ತೆ. ಉತ್ತಮ ಸಂತಾನಕ್ಕೆಂಬಂತೆ ಒಳ್ಳೆಯ ಕಾಲ ಶಾಸ್ತ್ರಗಳನ್ನು ಪೂರ್ವಿಕರು ಅಳವಡಿಸಿದ್ದಾರೆ. ಇವು ಅತ್ಯವಶ್ಯಕವೆನಿಸುವುದಿಲ್ಲ. ಮಾನಸಿಕ ನೆಮ್ಮದಿಗಾಗಿ ಮಾತ್ರ ರಾತ್ರಿ ಒಳ್ಳೆಯದಾದರೂ ಇಂತಿಷ್ಟು ಗಳಿಗೆಗೆ ಎಂಬ ನಿಯಮ ಅನಗತ್ಯ ಸಂತಾನದ ಮೇಲೆ ದಂಪತಿಗಳ ಮಾನಸಿಕ ಸ್ಥಿತಿ ಪ್ರಭಾವ ಬೀರುತ್ತದೆಂದು ಮನಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ. ಉತ್ತಮ ಸಂತಾನಕ್ಕಾಗಿ ಸುಖ, ಶಾಂತಿ, ನಿಷ್ಕಲ್ಮಶ ಮನಸ್ಸು ಮುಂತಾದವು ಒಳಗೊಂಡ ಮಾನಸಿಕ ನೆಮ್ಮದಿ ಅಗತ್ಯ. ಪ್ರಸ್ಥದ ಸಂದರ್ಭದಲ್ಲಿ ಅನುಸರಿಸುವ ನಂಬಿಕೆಗಳು ಹೀಗಿವೆ.

೧)     **ಹಾಲು ಹಣ್ಣು ಇಡುವುದು :**

ಪ್ರಸ್ಥದ ಸಮಯದಲ್ಲಿ ಹಾಲು ಹಣ್ಣು ಇಡುವ ನಂಬಿಕೆಯು ಕೇವಲ ತೋರಿಕೆಯ ಆಚರಣೆಯಾಗಿರದೆ, ಇದು ವೈಜ್ಞಾನಿಕ ವಿಚಾರಗಳಿಂದ ಒಳಗೊಂಡ ಆರೋಗ್ಯವನ್ನು ಕಾಪಾಡುವ ಗುಣ ಇಲ್ಲಿ ಕಾಣುತ್ತೇವೆ. ಸಂಗಾತಿಯೊಡನೆ ಕೂಡಿದಾಗ ಭಾವನೆ ಹೆಚ್ಚು ಕುದುರೆಯಾಗುತ್ತದೆ. ಈ ಸಮಯಯಲ್ಲಿ ಜಠರದಲ್ಲಿ ಒಸರುವ ಹೈಡ್ರೋಕ್ಲೋರಿಕ ಆಮ್ಲ ದುರ್ಬಲವಾಗಿ ಹೊಟ್ಟೆ ಉರಿ ಆಗುವುದು. ಆದ್ದರಿಂದ ಇದರ ಜತೆಗೆ ಹಾಲು ಒಳ್ಳೆಯ ಪೌಷ್ಟಿಕ ಅಂಶಗಳನ್ನು ಒದಗಿಸುತ್ತದೆ” [೬೧]

೨)     **ಪ್ರಸ್ಥದ ಮಾರನೆ ದಿನ ಹೆಣ್ಣು, ಅದೇ ಮನೆಯಲ್ಲಿ ಇರಬಾರದು:**

ಒಸಗೆಯ ದಿನ ರಾತ್ರಿ ಪೂರ್ತಿ ಮೈ ಒಡ್ಡಿ ಮಾನಸಿಕವಾಗಿ ದೈಹಿಕವಾಗಿ ಬಳಲಿರುವಾಕೆ ಮತ್ತೆ ಗಂಡನ ಆಸೆಗೆ ಬಲಿಯಾಗಿ ಮತ್ತಷ್ಟು ಬಳಲುತ್ತಾಳೆಂದು ಗಂಡನಿಂದ ಬೇರೆಯಾಗಿಡುವ ಉದ್ದೇಶದಿಂದ ಮಾರನೆ ದಿನ ಗಂಡ ಮನೆಯಲ್ಲಿರಬಾರದೆಂದು ನಂಬಿಕೆಯಿಂದಾಗಿ ತವರಿಗೆ ಹೋಗುವ ಪದ್ಧತಿಯಿದೆ.

---

೬೧ (ಅಡಿಟಿಪ್ಪಣಿ: ೬೧: ವೈದ್ಯಕೀಯ ನಂಬಿಕೆಗಳ ವಿಶ್ಲೇಷಣೆ ರಾಮಲಿಂಗಯ್ಯ ಉಪ್ಪಿನ ಕೆರೆ ಪುಟ ಸಂಖ್ಯೆ ೧೦೪)

೩) **ಕೂಡಾವಳಿಗೆ ಹಗಲು ಒಳ್ಳೆಯ ಕಾಲವಲ್ಲ :**

ದಂಪತಿಗಳಲ್ಲಿ ಹಗಲಿನಲ್ಲಿ ತಮ್ಮ ಕೂಡುವಿಕೆ ಚಟುವಟಿಕೆ ಬಗೆಗೆ ಇತರರ ಗಮನ ಇದೆ ಎಂಬ ನಾಚಿಕೆ ಇರುತ್ತದೆ. ಒಸಗೆ ದಿನ ರಾತ್ರಿ ಪೂರ್ತಿ ದೀಪ ನಂದದಂತೆ ನೋಡಿಕೊಳ್ಳಬೇಕೆಂಬ ನಂಬಿಕೆಯಿರುವುದು ನಾಚುವ ಗಂಡ ಹೆಣ್ಣಿನಲ್ಲಿ ನಾಚಿಕೆ ಬಿಟ್ಟು ದೈಹಿಕವಾಗಿ, ಮಾನಸಿಕವಾಗಿ ಹತ್ತಿರವಾಗಲಿ ಎಂಬ ಉದ್ದೇಶದಿಂದ ದೀಪವಿಲ್ಲದಿದ್ದಾಗ ನಾಚಿ ಮೌನದಿಂದಿರುವ ಸಂಗಾತಿಯ ಮುಖದ ಮೇಲಿನ ಪ್ರತಿಕ್ರಿಯೆ ತಿಳಿಯಲು ಮಾತಾಡಲು ಅವಕಾಶವೆ ಅಷ್ಟೇ. ಹೀಗೆ ಪ್ರಸ್ಥ ಯಾಂತ್ರಿಕವಾಗಿರದೇ ಸಾಧ್ಯವಾದ ಮಟ್ಟಿಗೆ ಇಬ್ಬರ ಮನದಾಳಕ್ಕೂ ಒಬ್ಬೊಬ್ಬರು ಹೊಕ್ಕಿರಲೆಂದು ದೀಪ ಉರಿಸಲು ಹೇಳುತ್ತಾರೆ.

**ಬಸರಿ :**

ತಾಯಿಯಾಗುವ ಮೊದಲು ಪಿಂಡಕೂಸನ್ನು ತನ್ನ ಗರ್ಭದಲ್ಲಿ ಹೊತ್ತಿರುವ ಸ್ತ್ರೀಯನ್ನು ಗರ್ಭಿಣಿ, ಬಸುರಿಯೆಂದು ಕರೆಯುವರು. ಸಾಮಾನ್ಯವಾಗಿ ಈ ಕಾಲಾವಧಿಯ ಈ ಸ್ತ್ರೀಯನ್ನು ತವರಾಗಲಿ ಅಥವಾ ಗಂಡನ ಮನೆಯವರಾಗಲಿ ಜಾಗರೂಕವಾಗಿ ನೋಡಿಕೊಳ್ಳುತ್ತಾರೆ. ತಮ್ಮ ವಂಶ ಕುಡಿಯು ಆಗಿರುವ ಮಗುವಿನಿಂದಾಗಿ ತಾಯಿಗೆ ಈ ಅವಧಿಯಲ್ಲಿ ವಿಶೇಷ ರಕ್ಷಣೆ ಸಿಗುತ್ತದೆ. ಇದನ್ನು ನೋಡಿದ ಮಕ್ಕಳಾಗದ ಸ್ತ್ರೀಯು ತಾನು ಉಂಡು ಎಸೆದ ಬಾಳೆ ಎಲೆಯಂತೆ ಗಾಣದ ಎತ್ತಿನಂತೆ ಎಂದು ಮರುಗುತ್ತಾಳೆ.

ಗರ್ಭಿಣಿಗೆ ಏನೇನು ಬಯಕೆಗಳು ಇರುತ್ತವೆಯೋ ಅದನ್ನು ತವರಿಂದ ಗಂಡನ ಮನೆಯಿಂದ ಪೂರೈಸಿಕೊಳ್ಳುತ್ತಾಳೆ. ಈ ಕಾರ್ಯದಲ್ಲಿ ಹೆಚ್ಚು ಹೊರೆ ತಾಳುವವರು ತವರರವರೇ ವಂಶದ ಬಳ್ಳಿ ಗಂಡನ ಮನೆಯಾದಾದರೂ ಈ ಸಂದರ್ಭದಲ್ಲಿ ಬಯಕೆಗಳನ್ನೆಲ್ಲಾ ಈಡೇರಿಸುವುದು ತವರಿನ ಖರ್ಚಿನಲ್ಲೇ.

ಕಣ್ಣಿಗೆ ಕಾಣದ ರೂಪದಲ್ಲಿರುವ ಸೂಕ್ಷ್ಮಾತಿ ಸೂಕ್ಷ್ಮ ಕಣದಿಂದ ಲೆಕ್ಕವಿಲ್ಲದ ಸಹಸ್ರ ಕೋಟಿ ಕಣಗಳ– ವಿವಿಧ ರೂಪು ಹಾಗೂ ಕ್ರಿಯೆಗಳ ಅಂಗಾಂಗಳನ್ನು ಹೊಂದಿ ವಿಚಿತ್ರ ಆದರೂ ಸತ್ಯವೆನಿಸುವ ಶರೀರವಾಗಿ ಬೆಳೆಯುವ ಚಮತ್ಕಾರ ಅದ್ಭುತವೆನಿಸುತ್ತದೆ. ಗರ್ಭದಲ್ಲಿರುವ ಮೊದಲೆರಡು ತಿಂಗಳುವರೆಗೆ ಭ್ರೂಣ ವೆನಿಸುವ ಚಿಕ್ಕ ಜೀವ ಮುದ್ದೆ ಮುಂದೆ ಏಳು ತಿಂಗಳುವರೆಗೆ ಪಿಂಡಕೂಸು ಎನಿಸಿಕೊಳ್ಳುತ್ತದೆ.

೧) **ಮೂರನೇ ತಿಂಗಳಲ್ಲಿ ಹುಳಿ ಬಯಸುವುದು ಮತ್ತು ಹಣ್ಣು ಕೊಡುವುದು :**

ಮೊದಲು ಮೂರು ತಿಂಗಳಲ್ಲಿ ಹೆಚ್ಚಿನ ಗರ್ಭಿಣಿಯರಿಗೆ ಹೊಟ್ಟೆ ತೊಳೆಸುವಿಕೆ ವಾಂತಿಯಾಗುವುದು ಸಹಜವಾಗಿರುತ್ತದೆ. ಪದೇ ಪದೇ ವಾಂತಿಯಿಂದಾಗಿ ಬಾಯಿಯೆಲ್ಲಾ ಸಪ್ಪಗಾಗಿ ಬಿಡುತ್ತದೆ. ಯಾವುದೇ ಆಹಾರ ಕಂಡರೂ ವಾಕರಿಕೆ ಉಂಟಾಗಿ ಖಾರ, ಉಪ್ಪನ್ನು ರುಚಿಸದ ನಾಲಿಗೆಗೆ ಈ ಸಮಯದಲ್ಲಿ ಹುಳಿ ತಿನ್ನಬೇಕೆನಿಸುತ್ತದೆ. ನೆಲ್ಲಿಕಾಯಿ, ಹುಣಿಸಿನಕಾಯಿ ಮಾವು ಮುಂತಾದ ಹುಳಿಯಿಂದ ಕೂಡಿದ ಕಾಯಿ ತಿನ್ನುವುದುಂಟು. ಇದು ಅವರಿಗೆ ತೀರಾ ಹಿತವೆನಿಸುತ್ತದೆ. ಅವರಿಗೆ ತೀರ ಅಗತ್ಯವಾಗಿ ಬೇಕಾದ ಸಿ–ಜೀವಸತ್ವದ ಒಹುಭಾಗವನ್ನು ಇಂತಹ ಕಾಯಿಗಳಿಂದ ಪೂರೈಸಿಕೊಳ್ಳುತ್ತಾರೆ. ಈ ಜೀವ ಸತ್ವ ರಕ್ತಕಣಗಳ ಬಲಿಯುವಿಕೆಗೆ, ಶರೀರದ ರೋಗ ನಿರೋಧಕ ಕ್ರಿಯೆಗೆ ಪಿಂಡ ಮೂಳೆ ಬಲಿಯಲು ಸಹಕರಿಸುತ್ತದೆ.

ಈ ಸಮಯದಲ್ಲಿ ಜೀರ್ಣಶಕ್ತಿ ಕಡಿಮೆಯಾಗಿರುವುದರಿಂದ ಅಲ್ಪ ಆಹಾರಗಳಾಗಿ ದ್ರವ ಪದಾರ್ಥಗಳು ಹಣ್ಣುಗಳು ಗರ್ಭಿಣಿಯ ಆರೋಗ್ಯಕ್ಕೆ ಉತ್ತಮವಾಗಿವೆ. ಈ ದಿನಗಳಲ್ಲಿ ತಣ್ಣಗಿನ ಹಾಲಿಗೆ ಜೇನು ತುಪ್ಪ ಬೆರಸಿ ದಿನವು, ತೆಗೆದುಕೊಳ್ಳಬಹುದು. ಆದಷ್ಟು ಸಿಹಿಯಾದ ಆಹಾರ ಪದಾರ್ಥಗಳನ್ನು ಸೇವಿಸುವುದು ಉತ್ತಮ. ಉದಾಹರಣೆಗೆ ಶಾವಿಗೆ ಪಾಯಸ, ಗಸಗಸೆ ಪಾಯಸ, ಹಾಲು ಹಣ್ಣು ಇವು ಉಪಯೋಗಿಸುವುದು ಉತ್ತಮ. ಖಾರವಾದಂತಹ ಆಹಾರ ಸೇವನೆ ಕಡಿಮೆಗೊಳಿಸಬೇಕು. ಸರಿಯಾಗಿ ಉಟ ಮಾಡಲು ಅಸಮರ್ಥರಾಗಿರುತ್ತಾರೆ. ಆದ ಕಾರಣ ದ್ರವಾಹಾರ ಹಾಲು ಹಣ್ಣು ಮುಂತಾದವು ದೇಹಕ್ಕೆ ಅಗತ್ಯವಾದ ನೀರಿನಾಂಶವನ್ನು ಒದಗಿಸುತ್ತದೆ. ಆದ್ದರಿಂದ ಮೂರನೆ ತಿಂಗಳಿನಲ್ಲಿ ಗರ್ಭಿಣೀಯರಿಗೆ ಹಣ್ಣು ಕೊಡುವ ಪದ್ಧತಿ ಒಳ್ಳೆಯದೇ ಆಗಿದೆ.

**೨) ಬಯಕೆ (ಬಂಕಿ) ಊಟ ಕೊಡುವುದು :**

ಮೂರನೆ ತಿಂಗಳಲ್ಲಿ ಗರ್ಭಿಣಿಯರಿಗಾಗುವ ಹೊಟ್ಟೆ ತೊಳಿಸುವಿಕೆ ವಾಂತಿ ಇವುಗಳ ಆರಂಭ ಕಾಲಕ್ಕೆ ಜನಪದರು ಬಂಕಿ ಎಂದೇ ಗುರುತಿಸುವರು ಆದರೆ ಮೂರನೆ ತಿಂಗಳಲ್ಲಿ ಊಟ ಮಾಡಲು ಅಸಮರ್ಥರಾಗಿರುವರು. ನಂತರ ದಿನಗಳಲ್ಲಿ ಇದು ಕಡಿಮೆಯಾಗುವುದು ಆದ್ದರಿಂದ ಐದನೇ ತಿಂಗಳಲ್ಲಿ ತವರಿನವರು ಸೇರಿದಂತೆ ಇತರ ಬಂಧು ಬಾಂಧವರು ಅವಳಿಗೆ ರುಚಿಸುವ ವಿವಿಧ ನಮೂನೆಯ ಅಡುಗೆ ಪದಾರ್ಥಗಳನ್ನು ಮಾಡಿ ತಂದು ಗರ್ಭಿಣಿಗೆ ಬಯಕೆಯ ಊಟ ಬಡಿಸುವರು. ಇದು ದೊಡ್ಡ ಪ್ರಮಾಣದಲ್ಲಿ ಮಾಡಲಾಗುತ್ತದೆ. ಏಕೆಂದರೆ ಆಕೆ ಊಟ ಮಾಡಿದ್ದೇನಾಗಿರಬಹುದೆಂದು ಇತರರು ಆಸೆ ಪಡಬಾರದೆಂಬುದಾಗಿರಬೇಕು.

ಇದು ಕೇವಲ ಆಚರಣೆಯಷ್ಟೇ ಅಲ್ಲ ಗರ್ಭಿಣಿಯಾದವಳಿಗೆ ತನ್ನ ಮಗುವಿನ ಬೆಳವಣಿಗೆಗಾಗಿ ಪೌಷ್ಠಿಕ ಆಹಾರ ಸೇವನೆ ಅಗತ್ಯವಾಗಿ ಬೇಕಾಗಿರುತ್ತದೆ. ಇದರಲ್ಲಿ ಆಕೆಯ ಆರೋಗ್ಯ ಕಾಪಾಡುವ ಮತ್ತು ಮಗುವಿನ ಬೆಳವಣಿಗೆಗೆ ಸಹಾಯಕವಾದ ಪೌಷ್ಠಿಕ ಅಂಶಗಳ ಆಹಾರ ಪದಾರ್ಥಗಳಿರುತ್ತದೆ. ಇದರ ಬಗ್ಗೆ ಕುರಿತು ಡಾ. ಎಸ್.ಎಸ್.ಪಾಟೀಲರು ನಮ್ಮ ದೇಹವೇ ದೇಗುಲ ಎನ್ನುವ ಕೃತಿಯಲ್ಲಿ ಹೀಗೆ ವಿವರಿಸುವರು. ತಾಯಿಯಾದವಳಿಗೆ ಸಾಕಷ್ಟು ಪ್ರಮಾಣದಲ್ಲಿ ಕಾರ್ಬೋಹೈಡ್ರೇಟ್, ಪ್ರೋಟಿನ್ ಹಾಗೂ ಫ್ಯಾಟ್ ಸಿಗಬೇಕು. ವಿಟಾಮಿನುಗಳು ಖನಿಜಾಂಶಗಳು ದೊರಕಬೇಕು. ತಾಯಿಗೆ ತನ್ನ ಹಾಗೂ ತನ್ನ ಗರ್ಭದಲ್ಲಿ ಬೆಳೆಯುತ್ತಿರುವ ಪಿಂಡಕ್ಕೆ ಬೇಕಾಗುವ ಶಕ್ತಿ ಸಿಗುವಂತಾಗಬೇಕು. ಗೋಧಿ, ಜೋಳ, ರಾಗಿ ಅಕ್ಕಿಗಳಲ್ಲಿ ಸಾಕಷ್ಟು ಕಾರ್ಬೋಹೈಡ್ರೇಟ ಇರುತ್ತದೆ. ತುಪ್ಪ ಎಣ್ಣೆಗಳಿಂದ ಫ್ಯಾಟ್ ಸಿಗುತ್ತದೆ. ಹಸಿರು ತಪ್ಪಲು ಪಲ್ಯಗಳಿಂದ ವಿಟಾಮಿನಗಳು ಖನಿಜಾಂಶಗಳು ದೊರಕುತ್ತವೆ. ಮೊಳಕೆಯೊಡೆಯುವ ದಾನ್ಯಗಳಿಂದ ಶಕ್ತಿಯುತ ಆಹಾರ ಸಿಗುತ್ತದೆ. ಗರ್ಭಿಣಿಯು ಇವೆಲ್ಲವುಗಳನ್ನು ಸಮತೋಲನದಲ್ಲಿ ಉಪಯೋಗಿಸಬೇಕು. ಹಾಗಾಗಿ ಶೇಂಗಾ ಹೋಳಿಗೆ, ಸಜ್ಜೆ ರೊಟ್ಟಿ, ಮಾಲ್ದಿ, ಕೋಡಬಳೆ, ಕರ್ಚಿಕಾಯಿ ಜೋಳದ ಅನ್ನ, ಪಲ್ಯೆಗಳು, ಮೊಸರು, ತುಪ್ಪ ಇತ್ಯಾದಿಗಳು ಬಯಕೆ ಊಟದಲ್ಲಿ ಸೇರಿರುತ್ತದೆ. ಮಾನಸಿಕವಾಗಿ ಸಂತಸದಿಂದಿರಲು ಬಂಧುಗಳು ಬಂದು ಹೋಗುವುದು, ಕುಪ್ಪಸ ಅಂತಹ ಕಾರ್ಯಕ್ರಮ ಮಾಡುವುದು ಇವೆಲ್ಲಾ ತಾಯಿ ಮತ್ತು ಮಗುವಿನ ಆರೋಗ್ಯಕ್ಕಾಗಿ. ತಾಯಿ ದೈಹಿಕ ಮತ್ತು ಮಾನಸಿಕವಾಗಿ ಆರೋಗ್ಯದಿಂದ ಇದ್ದರೆ ಮಗುವಿನ ಶಾರೀರಿಕ ಮತ್ತು ಬೌದ್ಧಿಕ ಬೆಳವಣಿಗೆ ಕೂಡಾ ಸರಿಯಾಗಿ ಆಗುತ್ತದೆ.

**೩) ಪ್ರತಿದಿನ ಮೊಟ್ಟ ಮೊದಲು ಮೃದು ಮತ್ತು ರುಚಿಯಾದ ಆಹಾರ ಸೇವಿಸಬೇಕು :**

ಗರ್ಭಿಣಿಗೆ ಖಾರ ಪದಾರ್ಥಗಳು ದೇಹಕ್ಕೆ ಒಳ್ಳೆಯದಲ್ಲಾ ಅದಕ್ಕಾಗಿ ಮಗುವಿನ ಬೆಳವಣಿಗೆ ದೃಷ್ಟಿಯಿಂದ ಮೊದಲು ರುಚಿಯಾದ ಮತ್ತು ಮೃದುವಾದ ಆಹಾರ ಸೇವನೆಯಿಂದ ಹೊಟ್ಟೆಗೂ ಹಿತವಾಗಿರುತ್ತದೆ. ಜೀರ್ಣವೂ ಆಗುತ್ತದೆ.

**೪) ಕುಪ್ಪಸ ತೊಡಿಸುವುದು :**

ಪಿಂಡ ಕೂಸಿಗೆ ಜೀವ ತುಂಬುವುದು ಏಳನೇ ತಿಂಗಳಾಗಿರುವುದರಿಂದ ಅದರಲ್ಲಿ ಅರಿವು ಮೂಡಿರುತ್ತದೆ. ಬಾಹ್ಯ ಆಚರಣೆಯ ಪ್ರಭಾವ ಮಗುವಿನ ಮೇಲೆ ಆಗುತ್ತದೆ. ಆದ್ದರಿಂದ ಏಳನೆ ಅಥವಾ ಓಂಭತ್ತನೇ ತಿಂಗಳಲ್ಲಿ ಸೀಮಂತ ಮಾಡುವರು. ಇನ್ನು ಬೆಸ್ ಸಂಖ್ಯೆಗೆ ಸಂಬಂಧಿಸಿದ ಸಂಖ್ಯೆಗಳಲ್ಲಿ ೭ ಒಂದು ರೀತಿಯಲ್ಲಿ ಬಳಕೆಗೆ ತರುವುದಿಲ್ಲ ಓಂಭತ್ತನೇ ತಿಂಗಳಲ್ಲಿ ಹೆರಿಗೆಯಾಗುವ ಸಂದರ್ಭವಿರುವುದರಿಂದಾಗಿ ಕುಪ್ಪಸ ಕಾರ್ಯಕ್ರಮದ ಆಚರಣೆಯಾಗುತ್ತದೆಯೋ ಇಲ್ಲವೋ ಎನ್ನುವ ಭಯ. ಈ ತಪ್ಪಿನ ಅರಿವಿನಿಂದಾಗಿ ಇನ್ನೂ ಹಿಂದೆ ಸರಿದು ಐದನೇ ತಿಂಗಳಲ್ಲೂ ಕುಪ್ಪಸ ತೊಡಿಸುವ ಆಚರಣೆ ಬೀದರ ಜಿಲ್ಲೆಯಲ್ಲಿದೆ.

**೫) ಗರ್ಭಿಣಿಯರು ಹೆಣದ ಮಾಳಕ್ಕೆ ಹೋಗಬಾರದು :**

ಹೆಣದ ಮಾಳದಲ್ಲಿ ದುಃಖಿತರಾದ ಬಂಧು–ಬಾಂಧವರೆಲ್ಲರೂ ಅತಿ ದುಃಖಿತರಾಗಿ ಕೆಚ್ಚಿನಿಂದ ಅಳುತ್ತಿರುತ್ತಾರೆ. ಇಂತಹ ವಿದ್ರಕಾರವಾದ ಘಟನೆಯಿಂದ ಗರ್ಭಿಣಿ ಮಾನಸಿಕ ಆಘಾತಕ್ಕೆ ಒಳಗಾಗಬಾರದೆಂಬ ನಂಬಿಕೆಯಿಂದ ಹೀಗೆ ಹೇಳಿರಬೇಕು ಮತ್ತು ಬಹಳ ಹೊತ್ತು ಒಂದೇ ಸ್ಥಳದಲ್ಲಿ ಕೂರಬೇಕಾಗುತ್ತದೆ. ಇದು ಗರ್ಭಿಣಿಯಿಂದಾಗುವುದಿಲ್ಲ. ಅವಳ ದೈಹಿಕ ಮತ್ತು ಮಾನಸಿಕ ತೊಂದರೆಗೆ ಒಳಗಾಗುವುದನ್ನು ತಪ್ಪಿಸುವ ಉದ್ದೇಶ ಈ ನಂಬಿಕೆಯಲ್ಲಿದೆ.

**೬) ಗರ್ಭಿಣಿಯು ಕವಚುಗಾಲು ಹಾಕಿಕೊಂಡು ಕುಳಿತುಕೊಳ್ಳಬಾರದು :**

ಗರ್ಭಿಣಿಯು ಕವಚುಗಾಲು ಹಾಕಿಕೊಂಡು ಕುಳಿತುಕೊಳ್ಳುವುದು ಆರಾಮವಾಗಿರುವುದಿಲ್ಲ, ಇದರ ಜತೆಗೆ ವೈದ್ಯಕೀಯವಾಗಿ ಕೂಡ ಅನಾನುಕೂಲ ಕಾಣಬಹುದು ಎಂದು ಡಾ. ರಾಮಲಿಂಗಯ್ಯ ಉಪ್ಪಿನ ಕೇರಿಯವರು ತಮ್ಮ ಲೇಖನದಲ್ಲಿ ಹೀಗೆ ಹೇಳುವರು. ಗರ್ಭಿಣಿಯಲ್ಲಿ ಪಿಂಡ ದೊಡ್ಡದಾಗುತ್ತಿದ್ದಂತೆ ಗರ್ಭಚೀಲ ಹೊಟ್ಟೆಯ ಬಹುಭಾಗವನ್ನು ಆಕ್ರಮಿಸತೊಡಗುತ್ತದೆ. ಆಗ ಕಾಲಿನ ಮಲೀನ ರಕ್ತವನ್ನು ಹೊಟ್ಟೆಗೆ ತರುವ ಈ ಲಿಯಾಕ್ ಅಭಿಧಮನಿಗಳ ಮೇಲೆ ಪಿಂಡದ ಒತ್ತಡ ಬಿದ್ದು ರಕ್ತ ಚಲನೆಗೆ ತಡೆ ಉಂಟಾಗಿ ಬಸುರಿಯರಲ್ಲಿ ನೀಲು ಹುಂಬುಗಳಾಗುವುದು ಜಮ್ಮು ಗಡುವಿಕೆ ತೀವ್ರವಾಗಬಹುದು.[೬೨]

**೭) ಸೀಮಂತ ಮಾಡುವವರೆಗೆ ತವರಿಗೆ ಹೋಗಬಾರದು: ಚೊಚ್ಚಲ ಹೆರಗೆ ತೌರಲ್ಲೆ ಆಗಬೇಕು :**

ಸೀಮಂತ ಮುಗಿಸಿಕೊಂಡು ಹೆರಿಗೆಗೆ ತವರಿಗೆಂದು ಬಂದ ಹೆಣ್ಣಿನಲ್ಲಿ ತನ್ನ ಗಂಡನ ಮನೆಯ ಸಂತೋಷದ ನೆನಪು ಆಕೆಯಲ್ಲಿ ಖುಷಿಯನ್ನು ತಂದುಕೊಡುತ್ತದೆ. ಹೆರಿಗೆ ಸಮಯದಲ್ಲಿ · ಮಾನಸಿಕವಾಗಿ

---

೬೨ (ಅಡಿಟಿಪ್ಪಣಿ: ೬೨: ವೈದ್ಯಕೀಯ ಸಂಬಿಕೆಗಳ ವಿಶ್ಲೇಷಣೆ ರಾಮಲಿಂಗಯ್ಯ ಉಪ್ಪಿನ [illegible])

ನೆಮ್ಮದಿಯಿಂದಿರುತ್ತಾಳೆ ಹಾಗೂ ಇಷ್ಟನ್ನು ಮೀರಿ ತನ್ನ ಹೆಚ್ಚಿನ ನೋವು ಗಂಡ ಮನೆಯಲ್ಲಿ ಯಾರಲ್ಲೂ ಹೇಳಿಕೊಳ್ಳುವ ಧೈರ್ಯವೂ ಇರುವುದಿಲ್ಲ. ಯಾರು ನೋವು ಕೇಳುವ ಗೋಜಿಗೂ ಹೋಗುವುದಿಲ್ಲ. ಅಲ್ಲದೆ ಗಂಡನ ಕಾಮಾಭಿಲಾಷೆಗೆ ಪ್ರತಿಯಾಡದೇ ಸಹಕರಿಸಬೇಕಾಗಬಹುದು ಇದರಿಂದಾಗಿ ಸೀಮಂತ ಮಾಡಿ ತವರಿಗೆ ಕರೆದೊಯ್ಯುವುದು. ಹೆರಿಗೆ ನೋವಿನ ಅನುಭವ ಮೊದಲು ಕಾಣುವ ಸ್ತ್ರೀಯು ಅದನ್ನು ತನ್ನ ತಾಯಿಯಲ್ಲಿ ಹೇಳಿಕೊಳ್ಳಬಲ್ಲಳು. ಹೆರಿಗೆಯ ನಂತರ ನಿಶಕ್ತಳಾದ ಆಕೆಯ ಮತ್ತು ಮಗುವಿನ ಪೋಷಣೆ ತಾಯಿ ಕಾಳಜಿ ವಹಿಸಿ ಮಾಡಿದಂತೆ ಇತರರು ಮಾಡುವುದಿಲ್ಲ. ಹಾಗಾಗಿ ಬಹಳ ದಿನದ ವಿಶ್ರಾಂತಿ ಬೇಕಾಗಿರುವುದರಿಂದ ತನ್ನ ತಾಯಿಯಿಂದ ಕಲಿಯುತ್ತಾಳೆ. ಇಂತಹ ಕಾರಣಗಳಿಂದ ತೌರಿಗೆ ಹೋಗಬೇಕೆಂಬ ನಂಬಿಕೆಯಿದೆ.

**೮) ಏಳೆಯ ಮಕ್ಕಳನ್ನು ಗರ್ಭಿಣಿಯರು ಎತ್ತಿಕೊಳ್ಳಬಾರದು :**

ಎಳೆಯ ಮಕ್ಕಳು ಏನು ತಿಳಿಯದೇ ತಮ್ಮ ಕೈ ಕಾಲು ಬಡಿಯುತ್ತವೆ. ತಮ್ಮದೇ ಆದ ಆಟದಲ್ಲಿರುತ್ತವೆ. ಇಂತಹ ಆಟದಿಂದ ಹೊಟ್ಟೆಗೆ ಎಟು ಬಿದ್ದು ಗರ್ಭಪಾತವಾಗುವ ಸಂಭವ ಬರಬಹುದು. ಇಂತಹವುಗಳಿಂದ ಎಚ್ಚರವಾಗಿರುವಂತೆ ಗರ್ಭಿಣಿ ನಡುಮನೆಯಲ್ಲಿ ಕುಳಿತಿರಬಾರದು, ಕಾಲುದಾಟಬಾರದು, ಬೆನ್ನು ದಾಟಿಸಿಕೊಳ್ಳಬಾರದೆಂದು ಅನೇಕ ನಿಷೇಧಗಳು ಸೂಚಿಸುವ ನಂಬಿಕಗಳಿವೆ.

**೯) ಎದೆ ಉರಿದರೆ ಮಗುವಿನ ಕೂದಲು ಹೆಚ್ಚಾಗಿರುತ್ತವೆ :**

ಗರ್ಭಿಣಿಗೆ ಎದೆ ಉರಿಯುವುದು ಮಗುವಿನ ಕೂದಲು ಹೆಚ್ಚಾಗಿರುವುದರಿಂದ ಆಗಿರದೇ ಇದಕ್ಕೆ ಇರುವ ಕಾರಣವನ್ನು ಡಾ. ರಾಮಲಿಂಗಯ್ಯ ಉಪ್ಪಿನ ಕೆರೆ ಹೀಗೆ ಹೇಳುತ್ತಾರೆ. ಪಿಂಡ ಬೆಳೆದು ಹೊಟ್ಟೆಯನ್ನು ಕ್ರಮಿಸಿ, ಮೇಲಕ್ಕೆ ಉಬ್ಬಿ ಜಠರವನ್ನು ಮೇಲಕ್ಕಾದಂತೆ ದಬ್ಬುತ್ತದೆ. ಜಠರದ ಮೇಲೆ ಎದೆಗೂಡು ಮತ್ತು ಹೊಟ್ಟೆಯನ್ನು ಬೇರ್ಪಡಿಸುವ ವಪೆ ಇರುವುದಿಂದ ಜಠರ ಒತ್ತಲ್ಪಡುತ್ತದೆ. ಹೀಗಾಗಿರುವುದರಿಂದ ಜಠರದ ಚಲನೆಗೆ ಅಡಚಣೆ ಉಂಟಾಗಿ ಪಚನಕ್ರಿಯೆ ಸ್ಥಗಿತಕೊಂಡು ಆಹಾರ ಸ್ವಲ್ಪ ಹೆಚ್ಚು ವೇಳೆ ಜಠರದಲ್ಲಿ ಉಳಿಯುತ್ತವೆ. ಇದರಿಂದಾಗಿ ಬಸುರಿಯಲ್ಲಿ ಎದೆ ಉರಿ ಕಾಣುತ್ತದೆ. ಆದ್ದರಿಂದ ಊಟ ಮಾಡಿದ ತಕ್ಷಣ ಮಲಗಬಾರದೆಂದು ಅಡ್ಡಾಡಲು ಹೇಳುತ್ತಾರೆ. ಹೆಚ್ಚಿನ ಹುಳಿ ಉಪ್ಪ ಆಹಾರದಿಂದಲೂ ಎದೆ ಉರಿ ಉಂಟಾಗುವುದು.

**೧೦) ಗರ್ಭಿಣಿ ಮಣ್ಣು ತಿನ್ನುವ ಆಸೆಯಾದರೆ ರಾಜ್ಯವಾಳುವ ಗಂಡು ಮಗು ಹುಟ್ಟುತ್ತಾನೆ :**

ರಾಜ್ಯವಾಳುವ ಗಂಡಸರು, ಅಪರೂಪಕ್ಕೊಬ್ಬರಂತೆ ಇರುವರು, ಅದರಂತೆ ಮಣ್ಣು ತಿನ್ನುವ ಆಸೆಯೂ ಎಲ್ಲ ಗರ್ಭಿಣಿಯರಿಗೆ ಇರದೇ ಕಡಿಮೆ ಪ್ರಮಾಣದ ಗರ್ಭಿಣಿಯರ ಬಯಕೆಯಾಗಿರುತ್ತದೆ. ಎರಡೂ ವಿರಳದ ಮಾತಾಗಿರುವುದಿಂದಲೇ ಈ ನಂಬಿಕೆ ಜೋಡಿಸಿರಬೇಕು. ಹಿಂದಿನ ಅರಸೊತ್ತಿಗೆಯ ಕಾಲದಲ್ಲಿ ಬಂದಿರಬಹುದಾದ ನಂಬಿಕೆ ಇದಾಗಿರಬಹುದು. ಈ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಎಲ್ಲಾ ಪ್ರಜೆಗಳೇ ಪ್ರಭುಗಳಾಗಿರುವಾಗ ಮಣ್ಣು ತಿಂದ ತಾಯಿಯಿಂದ ಹುಟ್ಟಿದ ಮಗ ಯಾವ ಪ್ರಭುವಾಗಬೇಕು? ಅವನು ಮಣ್ಣಿನ ಮಗನೆ ಆಗಬೇಕಾಗುತ್ತಾನೆ. ಇದಕ್ಕೆ ಕಾರಣವೆಂದರೆ ಕಾಲ್ಸಿಯಂ ಅಂಶ ಕಡಿಮೆ ಇರುವ ಮಹಿಳೆಯರಿಗೆ ಈ ಬಯಕೆ ಉಂಟಾಗುತ್ತದೆ. ಇದರ ಅತಿ ಬಳಕೆ ಆರೋಗ್ಯಕ್ಕೆ ಒಳ್ಳೆಯದಲ್ಲ ಇದರಲ್ಲಿರುವ ಅತಿ ಸಣ್ಣ ಕಲ್ಲಿನ ಚೂರುಗಳು ಹೊಟ್ಟೆಯಲ್ಲಿ ಕರುಗುವುದಿಲ್ಲ. ಮಣ್ಣಿನ ಅತಿ ಬಳಕೆಯಿಂದ ಹೊಟ್ಟೆಯಲ್ಲಿ ಜಂತುಗಳು ಹುಟ್ಟಿಕೊಳ್ಳಲಾರಂಭಿಸುತ್ತವೆ.

**೧೧) ಗರ್ಭಿಣಿಯರು ತಂಗಳನ್ನು ಉಣ್ಣಬಾರದು :**

ತಂಗಳನ್ನ ಊಟ ಮಾಡುವುದರಿಂದ ಗರ್ಭಿಣಿಯರಿಗಷ್ಟೇಕೆ ಎಲ್ಲರಿಗೂ ಒಳ್ಳೆಯದಲ್ಲ. ಅಂದಾಗ ಇನ್ನೊಂದು ಬೆಳವಣಿಗೆಯಾಗುವ ಜೀವಿಯನ್ನು ಹೊತ್ತಿರುವ ಅದಕ್ಕೆ ತನ್ಮೂಲಕ ಆಹಾರ ರವಾನಿಸುತ್ತಿರುವ ಗರ್ಭಿಣಿಗೆ ಖಂಡಿತವಾಗಿ ತಂಗಳನ್ನ ಊಟ ಮಾಡುವುದು ಸರಿಯಲ್ಲ. ಇದರಿಂದಾಗಿ ಆಕೆಯ ಆರೋಗ್ಯ ಹದಗೆಡಬಹುದು. ಆಲಸ್ಯ ಹೆಚ್ಚಿಸುತ್ತದೆ. ಸರಿಯಾಗಿ ಮುಚ್ಚದೆ ಇರುವ ಸಂದರ್ಭದಲ್ಲಿ ನೊಣ ಇತರ ಕ್ರಿಮಿಗಳು ಆಹಾರದಲ್ಲಿ ಸೇರಬಹುದು. ಅಡುಗೆ ತಯಾರಿಸಿದ ದೀರ್ಘಕಾಲದಲ್ಲಿ ಆಹಾರದಲ್ಲಿ ರುಚಿಯನ್ನು ಕೆಡಿಸುವ ಕೀಟಗಳು ಉತ್ಪತ್ತಿಯಾಗುತ್ತವೆ. ಈ ಕಾರಣಗಳಿಂದಾಗಿ ತಂಗಳನ್ನು ಊಟ ಮಾಡಬಾರದೆಂಬ ನಂಬಿಕೆಯಿದೆ.

**೧೨) ಗರ್ಭಿಣಿಯರು ಪ್ರಯಾಣ ಮಾಡಬಾರದು :**

ಗರ್ಭಿಣಿಯರು ಪ್ರಯಾಣ ಮಾಡುವುದರಿಂದ ಆಯಾಸ ಹೆಚ್ಚಾಗುವುದು ಸರಿಯಾದ ಸಮಯಕ್ಕೆ ಊಟ ವಿಶ್ರಾಂತಿ ಸಿಗದೇ ಆಯಾಸದಿಂದ ಬಳಲಬೇಕಾಗುತ್ತದೆ. ಹಾಗೂ ಮುಖ್ಯವಾಗಿ ವಾಹನಗಳು ಎತ್ತರ–ತಗ್ಗುಗಳಿಂದ ಕೂಡಿದ ಕಚ್ಚಾ ರಸ್ತೆಗಳಾದರೆ ದೇಹ ಪೂರ್ತಿ ಎತ್ತಿ ಬಡಿಯುತ್ತವೆ. ಇದರಿಂದಾಗಿ ಗರ್ಭಕೋಶದ ಪದರು ತೆಳುವಾಗಿರುವುದಲ್ಲಿ ಗರ್ಭಪಾತವಾಗುವ ಸಂಭವ ಹೆಚ್ಚು ಹಾಗೂ ದೀರ್ಘಕಾಲ ಒಂದೆ ಕಡೆ ಕುಳಿತುಕೊಳ್ಳಲು ಆಗದ ಗರ್ಭಿಣಿಯರಿಗೆ ದೀರ್ಘಕಾಲದ ಪ್ರಯಾಣ ಆಯಾಸ ಹೆಚ್ಚಿಸುವುದರಿಂದ ಗರ್ಭಿಣಿಯರಿಗೆ ಒಳ್ಳೆಯದಲ್ಲ.

**೩) ಬಾಣಂತಿ :**

ಗರ್ಭಿಣಿಯು ಒಂಭತ್ತು ತಿಂಗಳ ಕಾಲ ಕೂಸನ್ನು ಹೊತ್ತಿಕೊಂಡು ಹೆರಿಗೆ ಸಮಯದಲ್ಲಿ ಗರ್ಭದಿಂದ ಮಗುವನ್ನು ಹೊರಹಾಕಿದ ನಂತರ ಆ ಸ್ತ್ರೀಯು ಬಾಣಂತಿ ಎನಿಸುಕೊಳ್ಳುತ್ತಾಳೆ. ಗರ್ಭಿಣಿಯಾದಾಗ ಈಕೆಯನ್ನು ಎಷ್ಟು ಎಚ್ಚರವಾಗಿ ನೋಡಿಕೊಳ್ಳಲಾಗುತ್ತಿತ್ತೋ, ಅದಕ್ಕಿಂತ ಎರಡರಷ್ಟೂ ಹೆಚ್ಚಿನ ಗಮನ ಈ ಸಮಯದಲ್ಲೂ ಕೊಡಬೇಕಾಗುತ್ತದೆ. ಗರ್ಭಿಣಿಯಿದ್ದಾಗ ಇನ್ನೊಬ್ಬರನ್ನೂ ಹೆಚ್ಚಾಗಿ ಅವಲಂಬಿಸಿದೆ ತಾನೆ ತನ್ನ ಕೆಲಸ ಮಾಡಿಕೊಳ್ಳಬಹುದು ಆದರೆ ಹೆರಿಗೆಯ ನೋವಿನಿಂದ ನಿಶಕ್ತಳಾದ ಬಾಣಂತಿಗೆ ಇನ್ನೊಬ್ಬರ ಸಹಾಯ ಅಗತ್ಯವಾಗಿಬೇಕು. ಬಾಣಂತಿಯ ನೋವನ್ನೂ ಅರ್ಥಮಾಡಿಕೊಂಡ ಜನಪದ ಮಹಿಳೆಯರು ಆಕೆಯ ರಕ್ಷಣೆಗಾಗಿ ಗಂಡಸರೂ ಸೇರಿದಂತೆ ಕುಟುಂಬ ತನ್ನ ಸುತ್ತಮುತ್ತಲಿನ ಜನರು ಸಹಕರಿಸುವಂತೆ ನಂಬಿಕೆಗಳು ಅನುಸರಿಸುವಂತೆ ಆಗಿರಬೇಕು.

ವೈದ್ಯಕೀಯ ಸೌಲಭ್ಯವಿರದ ಆ ಕಾಲದಲ್ಲಿ ಬಾಣಂತಿ ಮತ್ತು ಎಳೆ ಕಂದಮ್ಮಗಳಿಗೆ ಏನಾದರೂ ಆದರೆ ಮುಂದೆ ಬರುವ ಅನಾಹುತಗಳು ಎಂತಹವು ಎಂದು ಭಯ ಪೀಡಿತರಾಗಿ ಹೆಜ್ಜೆ ಹೆಜ್ಜೆಗೂ ಎಚ್ಚರಿಕೆ ವಹಿಸಿ ನಂಬಿಕೆಗಳು ಸೃಷ್ಟಿಸಿಕೊಂಡಿರಬೇಕೆನಿಸುತ್ತದೆ. ಇವುಗಳಿಂದಾಗುವ ಉಪಯೋಗ ಎಷ್ಟು ಎನ್ನುವುದಕ್ಕಿಂತಲೂ ಇಂತಹ ಅಪಾಯ ನಮ್ಮ ಬಳಿ ಸುಳಿಯಬಾರದೆಂಬ ಕಾರಣದಿಂದ ನಂಬಿಕೆಗಳು ಜಾರಿಗೊಳಿಸಿರಬೇಕು. ತಮಗೆ ಗೊತ್ತಿರುವ ಅಥವಾ ಇನ್ನೊಬ್ಬರಿಗೆ ಗೊತ್ತುಪಡಿಸಿಕೊಂಡು ಸಿಗುವ ಹೆಚ್ಚಿನ ವೈದ್ಯಕೀಯ ಸೌಲಭ್ಯದಿಂದಾಗಿ ಜನರಲ್ಲಿ ಭಯ ದೂರವಾಗಿ ಆಸ್ಪತ್ರೆಯಲ್ಲಿರುವಾಗ ನಂಬಿಕೆಗಳು ಅನುಸರಿಸದಿದ್ದರೂ ಮನೆಗೆ ಬಂದ ಬಳಿಕ ಬಾಣಂತಿ ಬಗ್ಗೆ ಇರುವ ನಿಯಮಗಳು ಪಾಲಿಸುತ್ತಾರೆ. ಈಗ ಸಿಗುತ್ತಿರುವ ಔಷಧಿ ಮತ್ತು ಚಿಕಿತ್ಸಾ ಕ್ರಮಗಳಿಂದಾಗಿ ಬಾಣಂತನದಲ್ಲಿ ಆಚರಿಸುವ ವಿಧಾನಗಳಲ್ಲಿ ಬದಲಾವಣೆಗಳು ಕಂಡುಬರುತ್ತವೆ. ಆದರೆ ಈ

ಸೌಲಭ್ಯವಿರದ ಆ ದಿನಗಳಲ್ಲಿ ಬಾಣಂತಿ ಆಹಾರ ಇರುವಿಕೆ ಬಗ್ಗೆ ಅನೇಕ ಕಟ್ಟಳೆಗಳಿದ್ದವು. ಅವುಗಳಲ್ಲಿ ಕೆಲವೊಂದು ಬಾಣಂತಿ ಮತ್ತು ಮಗುವಿನ ಆರೋಗ್ಯ ದೃಷ್ಟಿಯಿಂದ ಸರಿಯೆನಿಸುವ ನಂಬಿಕೆಗಳಿವೆ.

**೧) ಹೊರಗಿನಿಂದ ಬಂದ ತಕ್ಷಣ ಬಾಣಂತಿಯನ್ನು ನೋಡಬಾರದು :**

ಎಳೆ ಶಿಶುವಿಗೆ ಹೊರಗಿನ ಧೂಳಿನ ಸೊಂಕು ತಗಲದಂತೆ ನೋಡಿಕೊಳ್ಳಲೋ ಐದು ದಿವಸ, ಹನ್ನೆರಡರ ದಿವಸ ಮಗು-ಬಾಣಂತಿಯನ್ನು ಹೊರಗಿನವರು ಮುಟ್ಟಬಾರದೆಂದು ನಿಷೇಧವಿದೆ. ಅದರ ನಂತರವೂ ಹೊರಗಿನಿಂದ ಬಂದವರು ಬಾಣಂತಿಯನ್ನು ನೋಡುವಂತಿಲ್ಲ ಹೊರಗಿನಿಂದ ಬಂದ ವ್ಯಕ್ತಿಗಳ ಕಾಲುಗಳಿಗೆ ಮಣ್ಣಿನ ಧೂಳಿನ ಕಣಗಳು ಮತ್ತು ಕ್ರಿಮಿಗಳು ಅಂಟುಕೊಳ್ಳುವ ಸಾಧ್ಯತೆಗಳಿರುತ್ತವೆ. ಹೊರಗಿನಿಂದ ಬಂದ ತಕ್ಷಣ ಕೈಕಾಲು ಮುಖ ತೊಳೆದುಕೊಳ್ಳುವುದರಿಂದ ಶರೀರದ ಅಂಗಗಳು ಶುಚಿಯಾಗುತ್ತವೆ. ಕ್ರಿಮಿಗಳು ನೀರಿನಿಂದ ತೊಳೆದು ಹೋಗಿರುತ್ತವೆ. ಹೀಗೆ ಸ್ವಚ್ಚತೆಯಿಂದ ಮಗು-ಬಾಣಂತಿಯರನ್ನು ನೋಡುವುದರಿಂದ ಯಾವ ಅಪಾಯವು ಆಗುವುದಿಲ್ಲ.

**೨) ಬಾಣಂತಿ ಹತ್ತಿರ ಬೇವಿನ ಸೊಪ್ಪು ಇಡುವುದು :**

ಬೇವಿನ ಸೊಪ್ಪು ಕಹಿ ಗುಣವುಳ್ಳದ್ದು ಹಾಗೂ ದೆವ್ವಗಳನ್ನು ಓಡಿಸುತ್ತದೆಂಬ ನಂಬಿಕೆಯಿಂದ ಶಕ್ತಿ ದೇವತೆಗಳನ್ನು ಆರಾಧಿಸುವವರು ಬೇವಿನ ತಪ್ಪಲಿನಿಂದಲೇ ಮೈಗೆಲ್ಲಾ ಬಡಿಯುವರು. ಆದ್ದರಿಂದ ಬಾಣಂತಿಗೆ ದೆವ್ವ ಇತರ ಪೀಡೆಗಳಿಂದ ರಕ್ಷಿಸಿಕೊಳ್ಳುವ ನಂಬಿಕೆಯಿರುವುದಾದರೂ ಇದರಲ್ಲಿ ಆರೋಗ್ಯ ಕಾಪಾಡುವ ಉಪಯೋಗವು ಇದೆ. ಬೇವಿನ ಕಹಿವಾಸನೆಯಿಂದಾಗಿ ಸೊಳ್ಳೆಗಳಂತಹ ಕ್ರಿಮಿಕೀಟಗಳನ್ನು ನಾಶಪಡಿಸುತ್ತದೆ.

**೩) ಬಾಣಂತಿಯರು ಕೆಲಸ ಮಾಡಿದರೆ ಮಕ್ಕಳಿಗೆ ನೋವು ಬರುತ್ತದೆ :**

ಮೊದಲೇ ನಿಶಕ್ತರಾಗಿವುದರಿಂದ ಕೆಲಸದಲ್ಲಿ ತೊಡಗಿದರೆ ಇನ್ನು ಶಕ್ತಿ ಕಳೆದುಕೊಳ್ಳಬೇಕಾಗುತ್ತದೆ. ಇದರಿಂದಾಗಿ ಎದೆ ಹಾಲಿನ ಉತ್ಪಾದನೆ ಕಡಿಮೆಯಾಗಿ ಮಕ್ಕಳಿಗೆ ಹೊಟ್ಟೆ ತುಂಬುವುದಿಲ್ಲ. ಆಗ ಮಕ್ಕಳು ಅಳಲಾರಂಭಿಸುತ್ತವೆ. ಹಸಿವೆಯಿಂದ ಮಕ್ಕಳು ಬಾಯಿಂದ ಹೇಳುವಂತೆ ಇಲ್ಲ ಆದ್ದರಿಂದ ಕೆಲಸ ಮಾಡಿದರೆ ಮಕ್ಕಳಿಗೆ ನೋವು ಬರುತ್ತದೆಂಬ ನಂಬಿಕೆಯಿಂದಲಾರದೂ ಈ ಸಮಯದಲ್ಲಿ ವಿಶ್ರಾಂತಿ ಪಡೆದು ಮಗುವಿಗೆ ಬೇಕಾದ ವೇಳೆಯಲ್ಲಿ ಹಾಲು ಕೊಡುವುದು ಮುಖ್ಯವಾಗಿರುತ್ತದೆ. ಈ ದಿನದ ಹೊರತಾಗಿ ಉಳಿದ ದಿನಗಳಲ್ಲಿ ಸ್ತ್ರೀಗೆ ಕೆಲಸ ತಪ್ಪಿದ್ದಲ್ಲ. ಆದ್ದರಿಂದ ಇಂತಹ ಸಮಯದಲ್ಲೂ ಸುಮ್ಮನೆ ಕೂಡಲು ಆಗದ ಮಹಿಳೆಯರನ್ನು ಕೆಲಸ ಮಾಡದಂತೆ ಇರುವ ಉದ್ದೇಶದಿಂದ ಈ ನಂಬಿಕೆ ಬಂದಿರಬೇಕು.

**೪) ತಾಯಿ ಒಂದೇ ಎದೆಯ ಹಾಲು ಕುಡಿಸಬಾರದು :**

ಒಂದೇ ಎದೆಯ ಹಾಲು ಕುಡಿಸಿದರೆ ಮಗುವಿಗೆ ಪೂರ್ತಿಯಾಗಿ ಹೊಟ್ಟೆ ತುಂಬುವುದಿಲ್ಲ. ಹೀಗಾಗಿ ಮಗುವಿನ ಕಿರಿಕಿರಿ ಆರಂಭವಾಗುತ್ತದೆ. ಒಂದೇ ಬಾರಿಗೆ ಎರಡು ಎದೆಯ ಹಾಲು ಕುಡಿಸುವುದರಿಂದ ಖಾಲಿಯಾದಂತೆ ಎದೆಯಲ್ಲಿ ಹಾಲು ತುಂಬುವುದು ಸಹಜ ಪ್ರಕ್ರಿಯೆಯಾಗಿದೆ. ಆದ್ದರಿಂದ ಮಗುವಿಗೆ ಹೊಟ್ಟೆ ತುಂಬುವಂತೆ ಎರಡು ಕಡೆಯಿಂದ ಕುಡಿಸಿದರೆ ಮಗುವಿಗೆ ಹೊಟ್ಟೆ ತುಂಬಿ ಬಹಳ ಹೊತ್ತು ನಿದ್ರಿಸುತ್ತದೆ ಇದರಿಂದ ಅದರ ಬೆಳವಣಿಗೆ ಚೆನ್ನಾಗಿ ಆಗುತ್ತದೆ.

**೫) ತಾಯಿ ಹೊರಗಿನಿಂದ ಬಂದ ತಕ್ಷಣ ಮಗುವಿಗೆ ಹಾಲನ್ನು ಕುಡಿಸಬಾರದು :**

ಹೊರಗಿನಿಂದ ಬಂದ ತಾಯಿ ಎದೆ ತೊಳೆದು ಗೋಡೆಯ ಮೇಲೆ ಕರೆದು ಸ್ವಲ್ಪ ಹೊತ್ತು ಕುಳಿತು ನೀರು ಕುಡಿದು ನಂತರ ಮಗುವಿಗೆ ಹಾಲು ಕುಡಿಸುವಳು. ಇದರಲ್ಲಿ ಸ್ವಚ್ಛತೆ ಕ್ರಮವನ್ನು ಮಗುವಿನ ಆರೋಗ್ಯ ಕಾಪಾಡುವ ಕ್ರಮ ಈ ನಂಬಿಕೆಯಲ್ಲಿದೆ. ಹೊರಗಿನಿಂದ ಬಂದ ತಾಯಿ ಸ್ತನದಲ್ಲಿ ಕ್ರಿಮಿಗಳು ನೆಲೆಸಿರಬಹುದು. ಬಿಸಿಲಿನಿಂದ ಎದೆ ಹಾಲು ಬಿಸಿಯೆನಿಸುತ್ತವೆ. ಆದ್ದರಿಂದ ನೀರಿನಿಂದ ತೊಳೆದಾಗ ಕ್ರಿಮಿಗಳ ನಾಶವು ಆಗುತ್ತದೆ. ಮತ್ತು ಎದೆಯ ಹಾಲು ತಂಪುಗೊಳ್ಳುವುದು. ಇದರಿಂದ ಮಗುವಿಗೂ ಒಳ್ಳೆಯದು.

**೬) ಬಾಣಂತನ ಮುಗಿಯುವರೆಗೂ ಮಗು–ತಾಯಿಯನ್ನು ಒಟ್ಟಿಗೆ ಸ್ನಾನ ಮಾಡಿಸಿ ಧೂಪ ಹಾಕುವುದು :**

ಇಬ್ಬರಿಗೂ ಒಟ್ಟಿಗೆ ಸ್ನಾನ ಮಾಡಿಸುವುದಿಂದ ಇಬ್ಬರು ಸ್ವಚ್ಛಗೊಳ್ಳುತ್ತಾರೆ. ಇದು ದಿನದ ಒಂದು ಕೆಲಸ ಒಟ್ಟಿಗೆ ಕಡಿಮೆಯೆನಿಸುತ್ತದೆ. ಸ್ನಾನದ ನಂತರ ಬೆಂಕಿಯಲ್ಲಿ ಧೂಪ ಹಾಕಿ ಬಾಣಂತಿ ಮಗುವಿನ ಹೊರಸಿನ ಕೆಳಗೆ ಇಡುತ್ತಾರೆ. ಇದು ಇತರ ಪೀಡೆಗಳು ಬಾರದಿರಲಿ ಎಂಬ ಜನಪದರ ನಂಬಿಕೆಗೆ ವೈಜ್ಞಾನಿಕ ವಿಶ್ಲೇಷಣೆ ಹೀಗಿದೆ. ತಾಯಿ ಗರ್ಭದಲ್ಲಿ ಹೆಚ್ಚಿಗೆ ಉಸಿರಾಡಲು ಅವಕಾಶ ಸಿಗದ ಮಗುವಿಗೆ ಉಸಿರಾಟ ಆರಂಭವಾಗುತ್ತದೆ.

ಮೆದುಳಿನಲ್ಲಿರುವ ಉಸಿರಾಟದ ಕೇಂದ್ರ ಪ್ರಚೋದನೆಗೆ ಒಳಗಾಗಿ ಉಸಿರಾಟದ ಸಾಮರ್ಥ್ಯ ಹೆಚ್ಚುತ್ತದೆ. ಶ್ವಾಸಕೋಶಗಳು ಗಾಳಿ ತುಂಬಿಕೊಳ್ಳುವ ಸಾಮರ್ಥ್ಯವನ್ನು ಸ್ವಲ್ಪ ಸ್ವಲ್ಪವೆ ಹೆಚ್ಚಾಗಿಸಿಕೊಳ್ಳುತ್ತವೆ. ಮಗುವಿನಲ್ಲಿ ಹೀಗೆ ಸಹಾಯವನ್ನು ತಾಯಿ ಹಾಗೂ ಮಗು ಇಬ್ಬರಲ್ಲೂ ಶ್ವಾಸನಾಳ, ಶ್ವಾಸಕೋಶಗಳಿಗೆ ಧೂಪದ ಹೊಗೆ ನುಗ್ಗಿ ಗಾಳಿಯನ್ನು ಬಿಸಿಯಾಗಿಸುತ್ತದೆ. ಇಲ್ಲಿನ ತೇವಾಂಶ ಕಡಿಮೆಯಾಗುತ್ತದೆ. ಇದರಿಂದ ಉಸಿರಾಟದಲ್ಲಿನ ಸೊರಸೊರನೆ ಹುಮುಗುಡುವಿಕೆ ತಗ್ಗುತ್ತದೆ. ಉಸಿರಾಟ ನಿರಾಳ ಆಗುತ್ತದೆ. ಮನೆಯಲ್ಲಿ ಧೂಪದ ಹೊಗೆಯಿಂದ ನೊಣ, ಸೊಳ್ಳೆಯಂತಹ ಕ್ರಿಮಿಗಳು ಈ ಜಾಗ ಬಿಟ್ಟು ಹೋಗುತ್ತವೆ. ಸಣ್ಣ ಕ್ರಿಮಿಗಳು ಸಾಯುತ್ತವೆ.

**೭) ಬಾಣಂತಿ ಕಾಚು ಹಾಕಿದ ಎಲೆ ಅಗೆಯುವುದು :**

ಹೆರಿಗೆಯಲ್ಲಿ ರಕ್ತ ಕಡಿಮೆಯಾಗಿರುತ್ತದೆ. ಹಾಲಿನ ಮೂಲಕ ಜೀವಸತ್ವ ಸಸಾರಜನಕಗಳು ಮಗುವಿಗೆ ಪೂರೈಸಬೇಕಾಗುವುದರಿಂದ ಬಾಣಂತಿಗೆ ಹೆಚ್ಚು ಪೋಷಕಾಂಶಗಳ ಅಗತ್ಯವಿದೆ. ಎಲೆ ಹಾಕುವುದರಿಂದ ಎ ಮತ್ತು ಸಿ ಜೀವಸತ್ವ, ಕಬ್ಬಿಣ ಸುಣ್ಣಾಂಶ ಸಿಗುತ್ತದೆ. ಜೀರ್ಣಶಕ್ತಿ ಹೆಚ್ಚಿಸುತ್ತದೆ. ಎಲೆ ರಹಿತವಾಗಿ ಕಾಚು ಹೆಚ್ಚಾಗಿ ಅಗೆಯುವರು. ಇದು ಹೆರಿಗೆಯಲ್ಲಿ ಬಿಸಿ ನೀರು ಬೆಂಕಿ ಕಾಯಿಸುವಿಕೆಯಿಂದ ಉಷ್ಣ ಹೆಚ್ಚಾಗಿ ಆಗುವ ನೀರಡಿಕೆ ನಿವಾರಿಸಿ ಸೊಂಟಗಟ್ಟಿ ಗೊಳ್ಳುತ್ತದೆಂಬ ನಂಬಿಕೆ ವೈಜ್ಞಾನಿಕ ವಿಚಾರವುಳ್ಳದ್ದಾಗಿದೆ.

**೮) ಬಾಣಂತ ಮರುದಿವಸ ಕೊಯ್ಲು ಮಣಿಸುವುದು. ಐದನೇ ದಿನಕ್ಕೆ ಲಿಂಗ ಕಟ್ಟುವುದಿಲ್ಲ :**

ಬಾಣಂತನ ಮರು ದಿವಸ ಮಗುವನ್ನು ಮರದಲ್ಲಿ ಜೇಪಿನ ಎಲೆಯಿಟ್ಟು ಮಲಗಿಸಿ ತೆಗೆಯುವರು ಇದನ್ನೇ ಕೊಯ್ಲು ಮಣಿಸುವುದು ಎನ್ನುವರು. ಇದಕ್ಕೆ ಕಾರಣ ಈ ಹಿಂದೆ ಎಳೆ ಮಗುವನ್ನು ತಾಯಿ ಪಕ್ಕದಲ್ಲಿ ಮಲಗಿಸಿದಾಗ ತಾಯಿ ನಿದ್ರೆ ಸಮಯದಲ್ಲಿ ಮಗುವಿನ ಮೇಲೆ ಕೈಯೋ, ಕಾಲೋ ಹಾಕಿದರೆ ಮಗುವಿಗೆ ಭಾರವಾಗುತ್ತದೆ. ಇಲ್ಲವೆ ಉಸಿರಾಟಕ್ಕೆ ತೊಂದರೆಯಾಗಬಹುದು. ಇದರಿಂದ ಮಗುವನ್ನು ರಕ್ಷಿಸಲು ಈ ಪದ್ಧತಿ

ಅಳವಡಿಸಿಕೊಂಡಿರಬೇಕು. ಆದರೆ ಒಂದು ಕ್ಷಣ ಮಾತ್ರ ಈ ದಿನ ಮರಕ್ಕೆ ಮಗವನ್ನು ಹಚ್ಚಿ ತೆಗೆಯುವರು. ಇಂದಿನ ವೈಜ್ಞಾನಿಕ ಪ್ರಕಾರ ತಾಯಿ ಮಗುವಿನ ಸ್ಪರ್ಶ ಹೆಚ್ಚಾದಷ್ಟು ಚುರುಕಾಗಿ ಎಳೆಯುತ್ತದೆ ಎಂದು ಹೇಳುವಲ್ಲಿ ತಾಯಿ ಮಗುವಿನ ಸಂಬಂಧ ಅನ್ಯೋನ್ಯವಾಗಿ ಕಂಡುಬರುತ್ತದೆಂಬ ಭಾವನೆಯಿದೆ.

ಐದನೆ ದಿನಕ್ಕೆ ಐದೇಶಿಯಂದು ಮಗುವಿನ ಆತ್ಮ ಯಾವ ಪ್ರಾಣಿ, ಯಾವ ಜಾತಿಯದ್ದಾಗಿರುತ್ತದೆಂಬ ವಿಚಾರ ರಹಿತ ನಂಬಿಕೆಯಿಂದಾಗಿ ಅದನ್ನು ಶುದ್ಧಿಕರಿಸಲು ಲಿಂಗ ಕಟ್ಟುವ ನಂಬಿಕೆಯಿದೆ. ಇಂದಿನ ರಾತ್ರಿ ಹಣೆ ಬರಹ ಬರೆಯಲು ಸೆಟೆಗೆವ್ವ ಬರುವಳೆಂಬ ನಂಬಿಕೆಯಿದೆ. ಅದಕ್ಕಾಗಿ ಅಂದು ಕಡುಬು ಹುಳಿಪಲ್ಯೆ ಮಾಡಿ ಸೆಟ್ಟಿಗವ್ವನ ಪೂಜೆ ನೈವೇದ್ಯ ಮಾಡುವರು. ಇಂದಿನಿಂದ ಕೂಸಿನ ಜಡೆ ತೆಗೆಯುವರೆಗೆ ಮನೆಯಲ್ಲಿ ಹೋಳಿಗೆ ಮಾಡಿದ ದಿನದಂದು ಸೆಟೆಗವ್ವನ ಪೂಜೆ ನೈವೇದ್ಯ ಮಾಡಬೇಕು. ಐದೇಶಿ ದಿನ ರಾತ್ರಿ ಸೆಟೆಗವ್ವ ಬರುವಳೆಂಬ ನಂಬಿಕೆಯಿಂದ ಬಾಣಂತಿ ಕೋಣೆಯಬಾಗಿಲು ತೆಗೆದಿಡುತ್ತಾರೆ ಹಾಗೂ ಬಾಗಿಲಿಗೆ ನೇರವಾಗಿ ಯಾರು ಮಲಗುವುದಿಲ್ಲ. ಮರುದಿವಸ ಸೆಟಗೆವ್ವ ಬಂದಳೆಂದು ಬಾವಿಸಿ ಕಾಲ್ಪನಿಕ ನಂಬಿಕೆ ಮೇಲೆ ಮಗುವಿಗೆ ಸ್ನಾನ ಮಾಡಿಸುವುದಿಲ್ಲ. ಮಗುವಿನ ಮುಖ ಬಾಡಿರುತ್ತದೆಂಬ ಊಹೆಗಳು ಜನಪದರಲ್ಲಿ ನಂಬಿಕೆ ಇಂದಿಗೂ ಇವೆ.

ಸೆಟೆಗೆವ್ವ ಹನ್ನೆರಡರ ನಂತರವೇ ಬರುವಳು ಇಂತಹ ಒಂದೇ ಸಮಯಕ್ಕೆ ಹುಟ್ಟಿದ ಎಷ್ಟು ಮಕ್ಕಳಲ್ಲಿ ರಾತ್ರಿ ಹನ್ನೆರಡರ ಸಮಯದಲ್ಲಿಯೇ ಬರೆಯಲು ಸಾಧ್ಯ? ಎನ್ನುವುದರ ಬಗ್ಗೆ ವಿಚಾರಿಸುವುದಿಲ್ಲ.

**೯) ಬಾಣಂತಿ ತಲೆ ಬಾಚಬಾರದು :**

ಬಾಣಂತಿ ತಲೆ ಬಾಚಬಾರದೆನ್ನುವ ನಂಬಿಕೆಯಲ್ಲಿ ಅರ್ಥವಿದೆ. ಏಕೆಂದರೆ ಹೆರಿಗೆ ಸಮಯದಲ್ಲಿ ತಲೆಯ ತಾಳಿಗೆಯಿಂದ ಪಾದದವರೆಗೆ ನರನಾಡಿಗಳೆಲ್ಲಾ ಸಡಿಲಗೊಂಡಿರುತ್ತದೆ. ಇದರಿಂದಾಗಿ ತಲೆ ಬಾಚುವುದರಿಂದ ನೋವು ಹೆಚ್ಚಾಗಿ ಕಾಣಿಸಿಕೊಳ್ಳುವುದು. ಬಾಣಂತನ ಅವಧಿಯವರೆಗೆ ತಲೆಗೆ ಭಜಿ ತುಂಬುವ ಮೂಲಕ ತಲೆಯ ರಕ್ಷಣೆಗಾಗಿ ಬಟ್ಟೆಯನ್ನು ಕಟ್ಟಿಕೊಂಡಿರುವರು. ನಿಧಾನವಾಗಿ ಆರೋಗ್ಯ ಸುಧಾರಿಸಿದ ನಂತರ ದಿನಗಳಲ್ಲಿ ತಲೆ ಬಿಟ್ಟು ದಿನ ಬಾಚಲು ಆರಂಭಿಸಿ ಬಾಣಂತನ ಮುಗಿದ ನಂತರ ಮತ್ತೆ ಮೊದಲಿನಂತೆ ದಿನಾಲೂ ಬಾಚುವರು.

**೧೦) ಬೆಂಕಿ ಕಾಯಿಸಿಕೊಳ್ಳುವುದು:**

ಹೆರಿಗೆ ನಂತರ ಶೀತವಾಗಿರುವ ದೇಹಗಟ್ಟಿಗೊಳಿಸಲು ಕಾಯಿಸಿಕೊಳ್ಳುವುದುಂಟು ಆದರೆ ಈ ದಿನಗಳಲ್ಲಿ ಗುಳಿಗೆ ಚುಚ್ಚು ಮದ್ದುಗಳ ಉಪಯೋಗದಿಂದ ಕಾಯಿಸಿಕೊಳ್ಳುವುದು ಕಡಿಮೆಯಾಗಿದೆ. ಬಿಸಿ ಎಣ್ಣಿ, ಬಿಸಿ ನೀರು ಸ್ನಾನ, ಬೆಂಕಿ ಕುಡಿಯಲು ಬಿಸಿ ನೀರು ಬಿಸಿ ಅಡುಗೆ ಊಟ ಎಲ್ಲವೂ ಸೇರಿಸಿ ಸಂಕಟ ಸ್ಥಿತಿಯಲ್ಲಿಡುವರು. ಈ ವಿಪರೀತ ಬಿಸಿಯ ಅವಶ್ಯಕತೆ ಬೇಕು, ಬೇಡ ಎನ್ನುವುದು ಯೋಚಿಸುವುದಿಲ್ಲ, ಮೇಲಾಗಿ ಗಾಳಿ ಹತ್ತಬಾರದೆಂಬ ಕಟ್ಟಳೆಯು ಇದೆ.

**೧೧) ಬಾಣಂತಿ ಎಚ್ಚ ಯಾರ ಕಣ್ಣಿಗೆ ಬೀಳದಂತೆ ಕೊಡುವುದು :**

ಬಾಣಂತಿ ಆರೋಗ್ಯ ಕಾಪಾಡುವ ಉದ್ದೇಶವನ್ನು ಇಲ್ಲಿ ಕಂಡುಬರುತ್ತದೆ. ಜಾಜಿಕಾಯಿ, ಗಸಗಸೆ, ಕಾಚು, ಮೇಂತಿ ಬೀಜದ ಕಷಾಯ, ಖೊಬ್ರಿ, ತುಪ್ಪ, ಮುಂತಾದ ಸಿದ್ಧಪಡಿಸಿದ ಆಹಾರ ಸೇವನೆ ಮಾಡುವಾಗ ಯಾರು

ಬಾರದ ಸಂದರ್ಭ ನೋಡಿಕೊಡುವರು, ಇವೆಲ್ಲಾ ಬಾಣಂತಿ ಆರೋಗ್ಯಕ್ಕೆ ಅವಶ್ಯಕವಾಗಿ ಬೇಕಾದ ಪದಾರ್ಥಗಳೇ ಆಗಿವೆ. ಧೂಳಿನ ಕಾಲಿನಿಂದ ಬಂದರೆ ಅನಾರೋಗ್ಯಕ್ಕೆ ಎಡೆಮಾಡಿಕೊಡುವುದೆಂಬ ಭಯದಿಂದ ಯಾರೂ ಕಾಣದ ಸಂದರ್ಭಗಳಲ್ಲಿ ಕೊಡುವರು.

**೪) ಮಕ್ಕಳು :**

ಮಗುವಿನ ಹುಟ್ಟಿನಿಂದ ಅದು ಬೆಳೆದು ದೊಡ್ಡದಾಗುವವರೆಗೆ ವಿಶೇಷ ಕಾಳಜಿ ವಹಿಸಲಾಗುವುದು. ಹುಟ್ಟಿದ ಮಗು ಬೆಳೆದು ದೊಡ್ಡದಾಗಿ ಸ್ವಾವಲಂಬನೆಯಾಗುವರೆಗೆ ತಂದೆ-ತಾಯಿಯ ಜವಾಬ್ದಾರಿ ಅಷ್ಟೇ ಮುಖ್ಯವಾಗಿರುತ್ತದೆ. ಮಗು ತನ್ನ ನೋವು ನಲೀವು ಕೇಳಿಕೊಳ್ಳದೇ ಇರುವುದರಿಂದ ಹಿರಿಯರು ತಮ್ಮ ಕಲ್ಪನೆಯಲ್ಲಿ ಊಹಿಸಿಕೊಂಡು ಮಗುವನ್ನು ಕುರಿತು ಅನೇಕ ನಂಬಿಕೆಗಳನ್ನು ಸೃಷ್ಟಿಸಿಕೊಂಡರು. ಮಗು ಹುಟ್ಟುವುದಕ್ಕೆ ದೇವರ ಶಕ್ತಿಯೇ ಕಾರಣವೆಂದು ತಿಳಿದಿದ್ದ ಸಂದರ್ಭ ಅನಾಗರಿಕರಲ್ಲಿತ್ತು. ಇಂದಿನ ನಾಗರಿಕರಲ್ಲೂ ದೇವರ ಕೃಪೆಯಿದ್ದರೆ ಮಕ್ಕಳಾಗುತ್ತವೆ. ಎನ್ನುವ ಭಾವನೆ ಜನಪದರಲ್ಲಿ ಉಳಿದಿದೆ. ದೇವರ ಮುನಿಸು ಹಿರಿಯರ ಕಾಟ ಮಕ್ಕಳಾಗದಿರುವುದಕ್ಕೆ ಕಾರಣವೆಂದು ಹೇಳಿಕೊಳ್ಳುತ್ತಾರೆ.

ತಂತ್ರಜ್ಞಾನದಿಂದ ಮಗುವನ್ನು ರಚಿಸುವ ಹಂತಕ್ಕೆ ವಿಜ್ಞಾನ ಬದಲಾದರೂ ಜನರಲ್ಲಿದ್ದ ನಂಬಿಕೆಗಳು ಮಾತ್ರ ಬದಲಾವಣೆಯಾಗದೆ ಉಳಿದಿವೆ. ನಂಬಿಕೆಗಳ ಬಗೆ ಇದ್ದ ಅವುಗಳ ಉಪಯುಕ್ತತೆ. ಸತ್ಯಾಂಶಗಳು ಗೊತ್ತಾದ ಬಳಿಕೆ ಸರಿಯಾದುದನ್ನು ಅನುಸರಿಸಿಕೊಂಡು ಹೋಗಬೇಕು. ಮೂಢನಿಸಿದ, ಅರ್ಥ ವಿಲ್ಲದ ನಂಬಿಕೆಗಳನ್ನು ನಿಯಂತ್ರಣದಲ್ಲಿಡುವುದು ಸರಿಯೆನಿಸುತ್ತದೆ.

ಮಗುವಿನ ಬೆಳವಣಿಗೆ ಸುತ್ತಲು ಬೇಕಾದಷ್ಟು ನಂಬಿಕೆಗಳಿವೆ. ಈ ನಂಬಿಕೆಗಳನ್ನೆಲ್ಲಾ ಪಾಲಿಸ ಹೊರಡುವವರಿಗೆ ಇದೇ ಒಂದು ಉದ್ಯೋಗವಾಗಿ, ಮಗುವಿಗೆ ಬೌದ್ಧಿಕ ಶಾರೀರಿಕ ಬೆಳವಣಿಗೆಗೆ ಅಗತ್ಯವಾಗಿ ಪೂರೈಸಬೇಕಾದ ವಾತಾವರಣವನ್ನು ನಾವು ಸೃಷ್ಟಿಸಿಕೊಡಲು ಸಾಧ್ಯವಾಗುವುದಿಲ್ಲ.

ಏನೆಂದು ಅರಿಯದ ಮಕ್ಕಳ ಆರೋಗ್ಯ ಪಾಲನೆ ಮತ್ತು ವ್ಯಕ್ತಿತ್ವ ವಿಕಾಸಕ್ಕೆ ಅನುಕೂಲ ಎನಿಸಿದಂತಹ ನಂಬಿಕೆಗಳನ್ನು ಅರ್ಥವತ್ತಾಗಿ ಅನುಸರಿಸಿಕೊಂಡಿದ್ದಾದರೆ ಮಗುವಿಗೂ ಸಹಾಯಕ ಮತ್ತು ಪಾಲನೆಯಲ್ಲಿದ್ದ ನಂಬಿಕೆಗಳಿಗೂ ಮೌಲ್ಯಯುತ ಬೆಲೆ ಸಿಗುತ್ತದೆ.

**ಮಕ್ಕಳ ನಂಬಿಕೆ ಕುರಿತು ಈ ಕೆಳಗಿನಂತಿವೆ.**

**೧) ಮಗುವಿಗೆ ದಿನಾಲೂ ಸ್ನಾನದ ಮುಂಚೆ ಬೋಳಾ ಹಾಕುವುದು :**

ಮುಂಜಾನೆ ಮಗುವಿಗೆ ಖಾಲಿ ಹೊಟ್ಟೆಯಿರುವಾಗಲೇ ತಾಯಿ ಎದೆ ಹಾಲಿನಲ್ಲಿ ಬೋಳಾ ಮಿಶ್ರಣ ಮಾಡಿ ಮಗುವಿಗೆ ಕುಡಿಸುವುದರಿಂದ ಆರೋಗ್ಯಕ್ಕೆ ಒಳ್ಳೆಯದು. ಅದರಲ್ಲಿ ಕಹಿ ಗುಣವಿರುವುದರಿಂದ ಹೆಚ್ಚಿನ ಸೇವನೆಯಿಂದ ಹುಣ್ಣುಗಳಾಗುವುದನ್ನು ನಿಯಂತ್ರಿಸುತ್ತದೆ. ದಿನ ದಿನ ಬೆಳೆಯುವ ಮಗುವಿಗೆ ಅತ್ಯಂತ ಪರಿಣಾಮಕಾರಿಯಾಗಿ ಇದರ ಪ್ರಭಾವ ಮಗುವಿನಲ್ಲಿ ಆಗಲೆಂದು ದಿನಾ ಸ್ನಾನದ ಮುಂಚೆ ಬೋಳಾ ಹಾಕಬೇಕೆಂಬ ನಂಬುಗೆಯಿದೆ.

**೨) ಮಗುವಿಗೆ ಸ್ನಾನದ ನಂತರ ಹಾಲುಣಿಸಬಾರದು :**

ಎಳೆ ಮಗುವಿಗೆ ಬಿಸಿ ನೀರಿನಿಂದ ಸ್ನಾನ ಮಾಡಿಸಿದ ತಕ್ಷಣ ಮೈಯೆಲ್ಲಾ ಬಟ್ಟೆಯಿಂದ ವರಿಸಿ ತುಂಬಾ ಹಚ್ಚಿ ಮಲಗಿಸಿದರೆ ಚಳಿಯಾಗುವುದಿಲ್ಲ. ಹೊರತಾಗಿ ಸ್ನಾನದ ನಂತರ ಮಗುವಿಗೆ ಗಾಳಿ ಬಡಿಯುವಂತೆ ಹಾಲುಣಿಸುತ್ತಾ ಕುಳಿತರೆ ಗಾಳಿ ತಾಗಿ ಮಗುವಿಗೆ ಶೀತವಾಗುವ ಸಂಭವ ಹೆಚ್ಚು ಆದ್ದರಿಂದ ಇದನ್ನು ತಪ್ಪಿಸಲು ಸ್ನಾನದ ನಂತರ ಹಾಲುಣಿಸಬಾರದೆಂಬ ನಂಬಿಕೆಯಿದೆ.

**೩) ಮಕ್ಕಳ ಸ್ನಾನದ ನೀರಿನಲ್ಲಿ ಗೋಮುತ್ರ ಹಾಕುವುದು :**

ಮಗುವಿಗೆ ದೃಷ್ಟಿ ತಾಗದಂತೆ ಗೋವಿಗೆ ನಮಸ್ಕರಿಸುವುದು ಮತ್ತು ಅದರ ಬಾಲದಿಂದ ಮಕ್ಕಳ ಮೈಮೇಲೆ ಆಡಿಸುವರು. ಗೋ ಮೂತ್ರವು ಔಷಧಿಯಾಗಿ ಕೆಮ್ಮು, ಕ್ಯಾನ್ಸರ್ ಮುಂತಾದ ರೋಗಗಳ ನಿವಾರಕವಾಗಿಯೂ ಬಳಸಲಾಗುತ್ತದೆ. ಅದರಲ್ಲಿ ರೋಗ ನಿರೋಧಕ ಗುಣವು ಇದೆ. ಹಾಗಾಗಿ ಮಗುವಿನ ಸ್ನಾನದಲ್ಲಿ ಇದನ್ನು ಉಪಯೋಗಿಸುವುದರಿಂದ ಆರೋಗ್ಯವನ್ನು ಕಾಪಾಡುತ್ತದೆ.

**೪) ತೊಟ್ಟಿಲನ್ನು ತೊಲೆಗೆ ಕಟ್ಟಬಾರದು: ತೊಲೆ ಸವೆದ ಹಾಗೆ ಮಕ್ಕಳು ಸವೆಯುತ್ತದೆ:**

ಹಳೆಯದಾದ ಮಾಳಿಗೆ ತೊಲೆ ಯಾವಾಗ ಸವೆದು ಮುರಿದು ಬೀಳುತ್ತವೆಯೋ ಹೇಳಲಿಕ್ಕಾಗುವುದಿಲ್ಲ. ಆದ್ದರಿಂದ ತೊಲೆಗೆ ಕಟ್ಟಬಾರದೆಂಬ ನಂಬಿಕೆಯಿರಬೇಕು. ಅವು ಸವೆದೆಂತೆಲ್ಲಾ ತೊಟ್ಟಿನಲ್ಲಿರುವ ಮಗುವಿನ ಮೇಲೆ ಬಿದ್ದರೆ ಪ್ರಾಣ ಕಳೆದುಕೊಳ್ಳುವ ಅಥವಾ ಇನ್ನಾವುದೇ ಅನಾಹುತ ಜರುಗಬಹುದು ಇದನ್ನು ತಪ್ಪಿಸುವ ಉದ್ದೇಶದಿಂದ ತೊಲೆ ಸವೆದಂತೆ ಮಕ್ಕಳು ಸವೆಯುತ್ತವೆ ಎಂಬ ನಂಬಿಕೆಯಿಂದ ತೊಲೆಗೆ ತೊಟ್ಟಿಲನ್ನು ಕಟ್ಟುವುದು ಬಿಡಬಹುದು ಅಥವಾ ಇನ್ನಾವುದೇ ಸುರಕ್ಷಿತ ಕ್ರಮ ಕೈಗೊಳ್ಳುವರು.

**೫) ಮಲಗಿರುವ ಮಕ್ಕಳನ್ನು ದಾಟಿದರೆ ಬೆಳವಣೀಗೆ ನಿಲ್ಲುವುದಂತೆ :**

ಚಿಕ್ಕಮಕ್ಕಳನ್ನು ಮನೆಯಲ್ಲಿ ಓಡಾಡುವ ಸ್ಥಳದಲ್ಲಿ ಮಲಗಿಸಿದರೆ ತುಳಿತಕ್ಕೆ ಒಳಗಾಗುತ್ತವೆ. ಇದರಿಂದಾಗಿ ದೊಡ್ಡವರ ಭಾರ ಹೊರುವ ಶಕ್ತಿ ಮಕ್ಕಳಿಗಿರುವುದಿಲ್ಲ. ಓಡಾಡುವ ವ್ಯಕ್ತಿಗಳು ಯಾವುದೇ ವಿಚಾರದಲ್ಲಿದ್ದಾಗ ಮಗವನ್ನು ನೋಡದೇ ಸಹಜವಾಗಿ ತುಳಿದಿದ್ದರೆ ಮಕ್ಕಳಿಗೆ ಹೊಟ್ಟೆಯಲ್ಲಾಗಲ್ಲಿ ಅಥವಾ ಯಾವುದೇ ಅಂಗಕ್ಕೆ ನೋವಾದರೂ ತಾಳುವ ಶಕ್ತಿಯಿರುವುದಿಲ್ಲ. ಹಾಗೂ ನೋವಿನ ಅಪಾಯದಂಥ ಸಂದರ್ಭಗಳು ಬರದಂತೆ ಎಚ್ಚರವಹಿಸಲು ಈ ನಂಬಿಕೆ ಉದ್ದೇಶವಾಗಿ ಬಳಕೆಗೆ ಬಂದಿರಬೇಕು.

**೬) ಸಿಂಪಿಯಲ್ಲಿ ಹಾಲು ಕುಡಿಸುವುದು :**

ಪರಿಶುದ್ಧ ಹಾಲು ಪರಿಶುದ್ಧವಾಗಿಯೂ ಕೂಸಿನ ಉದರ ಸೇರಬೇಕೆನ್ನುವ ನಮ್ಮ ಪ್ರಾಚೀನರು ಮೇಲು ಹಾಲುಣಿಸಲು ಸಿಂಪಿಯನ್ನು ಉಪಯೋಗಿಸುತ್ತಿದ್ದರು. ಅವರ ಆರೋಗ್ಯ ಪೂರ್ಣ ಜೀವನ ಕ್ರಮಕ್ಕೆ ಬಹುಮುಖ್ಯ ಸಾಕ್ಷಿಯಾಗಿದೆ. ಶಿಶುವಿನ ಆರೋಗ್ಯಮಯ ಬದುಕಿಗೆ ಅವರು ಕಂಡಿಕೊಂಡಿರುವ ಸಾಧನ–ಸಲಕರಣೆ ಸಕ್ರಮವಾದ ಚಿಂತನೆ. ಪದ್ಧತಿ–ವಿಧಾನಗಳು ಇಂದಿಗೂ ಅನುಕರಣೀಯ.

೭)  **ಎಳೆಯ ಮಕ್ಕಳಿಗೆ ಬಾಚಣಿಗೆಯಿಂದ ಬಾಚಬಾರದು :**

ಎಳೆಯ ಮಕ್ಕಳ ತಲೆಯ ಚರ್ಮ ಮೃದುವಾಗಿರುತ್ತೆ ಮತ್ತು ಕೂದಲು ಕಡಿಮೆಯಾಗಿರುವುದರಿಂದ ತಲೆಗೆ ಬಾಚಣಿಗೆ ಚುಚ್ಚಿ ನೋವುಂಟು ಮಾಡುತ್ತದೆ ಇಂತಹ ಒಳ್ಳೆಯ ಉದ್ದೇಶ ಈ ನಂಬಿಕೆಯಲ್ಲಿರುವುದು ಕಂಡುಬರುತ್ತದೆ.

೮)  **ಮಕ್ಕಳಿಗೆ ಜಡೆ ತೆಗೆಯುವುದು :**

ಸಣ್ಣ ಮಕ್ಕಳಿಗೆ ವರ್ಷವಾಗುವ ವೇಳೆಯಲ್ಲಿ ಮಗುವಿನ ತಂದೆ ತಾಯಿಗಳ ಗಂಡು-ಹೆಣ್ಣು ದೇವರಿಗೆ ಆ ಮಕ್ಕಳ ತಲೆ ಮುಡಿಕೊಡುತ್ತಾರೆ. ಇದು ತೀರ ಅನಿವಾರ್ಯ ನಂಬಿಕೆ, ಹಸುಗೂಸಿನ ಕೂದಲು ಬಹಳ ತೆಳುವಾಗಿದ್ದು ತಲೆ ಚರ್ಮ ಕೋಳಿ ತುಪ್ಪಟದಂತೆ ಇರುತ್ತದೆ. ತಲೆ ಬೋಳಿಸಿದ ನಂತರ ಹೆಚ್ಚು ಒರಟಾಗಿ, ಸೋಂಪಾಗಿ ಬೆಳೆಯುತ್ತದೆ. ಆದ್ದರಿಂದ ಈ ಅವಧಿಯಲ್ಲಿ ಮಗುವಿನ ತಲೆ ಕೂದಲು ತೆಗೆಯುವುದು ಆರೋಗ್ಯ ದೃಷ್ಟಿಯಿಂದ ಒಳ್ಳೆಯದೇ ಇದು ಮನೆಯಲ್ಲಿ ಆಗಬಹುದು ಅಥವಾ ಎಲ್ಲವನ್ನು ಮೊದಲು ದೇವರಿಗೆ ಅರ್ಪಿತ ಎನ್ನುವ ಮನೋ ನಿರ್ಧಾರ ಇರುವುದರಿಂದ ದೇವರ ಹೆಸರಲ್ಲಿ ಮುಡಿ ತೆಗೆಯುವರು.

ಇನ್ನು ದೊಡ್ಡವರು ಕೊಡುವುದರಲ್ಲಿ ಯಾವ ಅರ್ಥವು ಇಲ್ಲ. ಅವರ ಮನಸ್ಸಿನ ನೆಮ್ಮದಿಗಷ್ಟೇ ಕೊಡಬಹುದು.

ಹೀಗೆ ಮಕ್ಕಳ ಕುರಿತು ಇರುವ ನಂಬಿಕೆಗಳು ಕೆಲವು ಆರೋಗ್ಯವನ್ನು ಕಾಪಾಡುವ ದೃಷ್ಟಿಕೋನ ಹೊಂದಿದ್ದಾದರೆ ಇನ್ನುಳಿದಂತಹವು ಯಾವುದೇ ಅರ್ಥ ಒಳಗೊಳ್ಳದೆ ಮಗುವನ್ನು ಅತಿಯಾದ ಬಂಧನದಲ್ಲಿರುವಂತಹ ಮತ್ತು ಬೆಳವಣಿಗೆಗೆ ಅಡಚಣೆಯಾದಂತಹವು ಇವೆ. ಆದ್ದರಿಂದ ಇಂತಹ ಅರ್ಥವಿಲ್ಲದ ನಂಬಿಕೆಗಳಿಂದಾಗಿ ಮಗುವಿಗೆ ಸರಿಯಾದ ಸಮಯಕ್ಕೆ ದೊರಕಿಸಬಹುದಾದಂತಹ ಸೌಲಭ್ಯಗಳಿಂದ ವಂಚಿತಗೊಳಿಸಬಾರದು.

**ಮೈನೆರೆದಾಗ :**

ತಾಯಿ ಗರ್ಭದಿಂದ ಜನಿಸಿದ ಗಂಡು ಮಗುವೇ ಆಗಲಿ ಅಥವಾ ಹೆಣ್ಣು ಮಗುವೇಯಾಗಲಿ ದಿನಗಳು ಕಳೆದಂತೆ ಅದರ ಬೆಳವಣಿಗೆಗೆ ಸಹಜವಾಗಿ ನಡೆದಿರುತ್ತದೆ. ಮಗುವಿಗೆ ಸಿಗುವ ತಂದೆ ತಾಯಿಯ ಪಾಲನೆ ಪೋಷಣೆ ಬೆಳವಣಿಗೆಗೆ ಪೂರಕವಾದ ಪೌಷ್ಟಿಕ ಆಹಾರ ಸೌಲಭ್ಯ ಕುಟುಂಬ ಹಾಗೂ ಸುತ್ತಲಿನ ಪರಿಸರವು ಮಗುವಿನ ಬೆಳವಣಿಗೆಯ ಮೇಲೆ ಅತ್ಯಂತ ಪ್ರಭಾವ ಬೀರುತ್ತವೆ. ಈ ಎಲ್ಲಾ ಪೂರಕ ಸೌಲಭ್ಯ ದೊರೆತ ಮಗು ದೈಹಿಕವಾಗಿ ಮತ್ತು ಮಾನಸಿಕವಾಗಿ ಬಲಯುತವಾಗಿ ಬೆಳೆಯುತ್ತದೆ. ಈ ಬೆಳವಣಿಗೆ ಕ್ರಮ ಹೆಣ್ಣು ಮತ್ತು ಗಂಡಿನಲ್ಲೂ ನಡೆದಿರುತ್ತದೆ.

ಮಗುವಿನಿಂದ ಪ್ರೌಢಾವಸ್ಥೆಗೆ ಬೆಳೆದು ಬಂದ ಹೆಣ್ಣಿನ ದೇಹದಲ್ಲಿ ನೈಸರ್ಗಿಕವಾಗಿ ನಡೆಯುವ ಸಹಜ ಕ್ರಿಯೆಯೇ ಋತುಮತಿಯಾಗುವುದು. ಋತುಮತಿಯಾಗುವುದನ್ನು ಬೀದರ ಜಿಲ್ಲೆಯಲ್ಲಿ ದೊಡ್ಡವಳಾಗುವುದು, ಮೈನೆರೆಯುವುದು ಎಂಬ ಶಬ್ದಗಳನ್ನು ಬಳಕೆ ಮಾಡುತ್ತಾರೆ.

ನಮ್ಮದು ಉಷ್ಣವಲಯದ ಪ್ರದೇಶವಾಗಿದ್ದು ಸಾಂಬಾರು ಪದಾರ್ಥಗಳನ್ನು ಹೆಚ್ಚು ಬಳಸುವುದರಿಂದ ಸಾಮಾನ್ಯವಾಗಿ ೧೪ರಿಂದ ೧೬ನೇ ವಯಸ್ಸಿನಲ್ಲಿ ಋತುಮತಿಯಾಗುತ್ತಾರೆ.

ಪ್ರಬುದ್ಧ ವಯಸ್ಸಾದಾಗ ಹಾರ್ಮೋನುಗಳ ಚಟುವಟಿಕೆಯಿಂದಾಗಿ ಕೆಳಹೊಟ್ಟೆಯ ಎರಡೂ ಕಡೆ ಇರುವ ಅಂಡಾಶಯಗಳು ಬಲಿಯುತ್ತವೆ. ಯಾವುದಾದರೊಂದು ಅಂಡಾಶಯದಿಂದ ಒಂದು ಅಂಡಾಣು ಬಿಡುಗಡೆ ಹೊಂದಿ ಡಿಂಬನಾಳಕ್ಕೆ ಸೇರಿ ಆ ಮೂಲಕ ಗರ್ಭ ಚೀಲವನ್ನು ತಲುಪುತ್ತದೆ. ಡಿಂಬ ನಳಿಕೆಯಲ್ಲಿ ಇಲ್ಲವೇ ಗರ್ಭಚೀಲದಲ್ಲಿ ವೀರ್ಯಾಣು ಇದ್ದಲ್ಲಿ ಅದರೊಡನೆ ಸೇರಿ ಮೊಟ್ಟೆಯಾಗುತ್ತದೆ. ಈ ಮೊಟ್ಟೆ ಪಿಂಡವಾಗಿ ಬೆಳೆಯುತ್ತದೆ. ಈ ಮೊಟ್ಟೆಯನ್ನು ತನ್ನಲ್ಲಿರಿಸಿಕೊಂಡು ಬೆಳೆಯುವ ಅವಕಾಶ ನೀಡಲೋಸ್ಕರ ಗರ್ಭಚೀಲ ಒಳಪದರಬೇಕಾದ ಹಾಸಿಗೆ ತಯಾರಿಸುತ್ತದೆ. ಮೊಟ್ಟೆ ಆಗಿ ಪಿಂಡ ಬೆಳೆದರೆ ಸರಿ ಇಲ್ಲವಾದರೆ ಈ ಹಾಸಿ ಕೆಲವು ದಿನಗಳಲ್ಲಿ ಗರ್ಭ ಚೀಲದ ಇತರೆ ಪೊರೆಗಳಿಂದ ಕಳಚಿಕೊಳ್ಳುತ್ತದೆ. ಈ ಸಂದರ್ಭದಲ್ಲಿ ರಕ್ತನಾಳಗಳು ಕಿತ್ತು ಹೋಗುವುದರಿಂದ ರಕ್ತ ಹರಿಯುತ್ತದೆ. ರಕ್ತ ಹಾಗೂ ಆ ಅಂಗಾಂಶ ಸುಮಾರು ೩ ರಿಂದ ೫ ದಿವಸಗಳ ಕಾಲ ಯೋನಿ ಮೂಲಕ ಹೊರ ಬರುತ್ತಿರುತ್ತದೆ. ಈ ಸಮಯವನ್ನೇ ಮುಟ್ಟಾಗುವುದು ಎನ್ನುವುದು.

ಮೊದಲ ಸಲ ಋತುಮತಿಯಾದಾಗ ಅನೇಕ ನಂಬಿಕೆಗಳನ್ನು ಆಚರಿಸಿಕೊಂಡು ಬರುವುದು ರೂಢಿಯಲ್ಲಿದೆ. ಇವುಗಳಲ್ಲಿ ಕೆಲವೊಂದು ಆರೋಗ್ಯ ದೃಷ್ಟಿಯಿಂದ ಉಪಯುಕ್ತವೆನಿಸಿವೆ. ಇನ್ನು ಕೆಲವು ಬದಲಾಗುತ್ತಿರುವ ಈ ಸಮಾಜದೊಂದಿಗೆ ಬದಲಾವಣೆಗೊಂಡಿರುವುದನ್ನು ಕಾಣುತ್ತೇವೆ.

**೧) ಮುಟ್ಟಾದರೆ ಮೂರು ದಿವಸ ಹೊರಗಿರಬೇಕು; ಸ್ನಾನ ಮಾಡುವ ಮುನ್ನ ಯಾರಿಗೂ ಮುಟ್ಟಿಸಿಕೊಳ್ಳಬಾರದು :**

ಸಾಮಾನ್ಯವಾಗಿ ಮುಟ್ಟಾದಾಗ ಹೆಂಗಸಿನ ಯೋನಿಯಿಂದ ಮೂರು ನಾಲ್ಕು ದಿವಸ ರಕ್ತ ಬರುತ್ತಿರುತ್ತದೆ. ಈ ಕಾರಣಕ್ಕಾಗಿ ಹಳ್ಳಿ ಹೆಂಗಸರು ಸಾಮಾನ್ಯವಾಗಿ ಮೂರು ದಿವಸಗಳ ಕಾಲ ಮನೆಯ ಮೂಲೆಯಲ್ಲಿ ಇಲ್ಲವೆ ಕೊಟ್ಟಿಗೆಯಲ್ಲಿ ಕೂರುವುದುಂಟು ಇತ್ತೀಚಿಗೆ ತಿಳಿದ ಹುಡಗಿಯರು ಹೊರಗಾಗುವ ಕಾಲದಲ್ಲಿ ಈ ರಕ್ತವನ್ನು ಹೀರಿಕೊಳ್ಳಬಲ್ಲ. ಪ್ಯಾಡಗಳನ್ನು ಮರ್ಮಸ್ಥಾನಕ್ಕೆ ಒತ್ತಿಕಟ್ಟಿಕೊಳ್ಳುತ್ತಾರೆ ಇದರಿಂದಾಗಿ ಅವರು ಕೂರುವುದಿಲ್ಲ. ಎಂದಿನಂತೆ ಅವರು ಚಟುವಟಿಕೆಯಲ್ಲಿರುತ್ತಾರೆ. ಈ ದಿನಗಳಲ್ಲಿ ಸ್ವಲ್ಪ ಮಟ್ಟಿಗೆ ಸುಸ್ತು ಸಂಕಟ ಇದ್ದೇ ಇರುತ್ತದೆ. ಈ ದಿವಸಗಳಲ್ಲಿ ಹೊರಗಾದವರಿಗೆ ವಿಶ್ರಾಂತಿ ಅಗತ್ಯ. ಈ ಕಾಲದಲ್ಲಿ ಪ್ರತಿನಿತ್ಯ ಸ್ನಾನ ಮಾಡಬೇಕು. ಸ್ನಾನ ಮಾಡದೇ ಮುಟ್ಟಿದರೆ ಏನಾಗುವುದಿಲ್ಲ. ಸ್ವಚ್ಚತೆ ದೃಷ್ಟಿಯಿಂದಾಗಿ ಈ ರೀತಿಯ ನಂಬಿಕೆ ಇರಬೇಕು.

**೨) ಮೈನೆರೆದಾಗ ಖೊಬ್ರಿ ಕೊಡುವುದು :**

ಈ ಹುಡಗಿಯನ್ನು ಬಾಣಂತಿಯಂತೆ ಭಾವಿಸಿ ಆರೈಕೆ ಮಾಡುತ್ತಾರೆ. ಹೇರಳವಾಗಿ ಕೊಬ್ಬರಿ ಬೆಲ್ಲ. ಶಾವಿಗೆ ತುಪ್ಪ ಉದ್ದಿನ ಹಪ್ಪಳ ತಿನ್ನಲು ಕೊಡುತ್ತಾರೆ. ಈ ಸಂದರ್ಭದಲ್ಲಿ ಆಕೆಗೆ ಪೋರೈಸುವ ಆ ಆಹಾರ ಮೃದು ಹಾಗೂ ಪೌಷ್ಠಿಕ ಆಹಾರವಾಗಿರುತ್ತದೆ. ಇದು ಕೊಬ್ಬು ಪ್ರೋಟೀನುಗಳನ್ನು ಹೆಚ್ಚಾಗಿ ಒದಗಿಸಿ ಹುಡಗಿ ದಷ್ಟ ಪುಷ್ಟವಾಗಿ ಮೈ ತುಂಬಿಕೊಳ್ಳಲು ಸಹಕರಿಸುತ್ತದೆ.

೩) **ಮೈನೆರೆದಾಗ ಹಾಡುವುದು :**

ಈ ಹಿಂದೇ ಋತುಮತಿಯಾಗುವುದಕ್ಕಿಂತಲೂ ಮುಂಚಿತವಾಗಿ ಹುಡುಗಿಯರನ್ನು ಮದುವೆ ಮಾಡುತ್ತಿದ್ದರು. ಈ ಸಂದರ್ಭದಲ್ಲಿ ಗಂಡನಿಗೆ ಹೆಂಡತಿ ಬಗೆಗಿನ ಆಸೆ, ಹೆಣ್ಣಿನಲ್ಲಿ ನೆರೆದ ನಂತರ ಉಂಟಾಗಬಹುದು ಕಾಮಾಭಿಲಾಷೆಯಿಂದಾಗಿ ಇಬ್ಬರ ಕೂಡುವಿಕೆ ಸುಲಭ ವಾತಾವರಣಕ್ಕೆ ಪ್ರಸ್ಥಕ್ಕೆ ಮುನ್ನವೇ ಸಿಗುವುದರಿಂದ ಹೀಗೇನಾದರೂ ಅಚಾತುರ್ಯ ಆದೀತೆಂದು ಹಿರಿಯರು ಗಂಡನಿಂದ ರಾತ್ರಿ ದೂರಾಗಿರುವಂತೆ ರಾತ್ರಿ ಬಹಳ ಹೊತ್ತಿನವರೆಗೆ ಹುಡುಗಿಯನ್ನು ಅಲಂಕಾರ ಮಾಡಿ ಕೂಡಿಸಿ ಹಾಡುತ್ತಿರುವುದು ರೂಢಿಯಾಗಿರಬೇಕು. ಆದರೆ ಇಂದಿನ ಕಾಲದಲ್ಲಿ ಶಿಕ್ಷಣ ಪಡೆಯುತ್ತಿರುವ ಹೆಣ್ಣು ಮಕ್ಕಳು ಈ ಅವಧಿಯಲ್ಲಿ ಇನ್ನು ತಮ್ಮ ತಾಯಿಂದಿರ ಮನೆಯಲ್ಲಿರುವುದರಿಂದ ಇಂತಹ ಸಂದರ್ಭಗಳು ಒದಗುವ ಸಾಧ್ಯತೆಗಳೇ ಇರುವುದಿಲ್ಲ. ಆದ್ದರಿಂದ ಕೂಡಿಸಿ ಹಾಡುವುದು ತೀರಾ ಅಪರೂಪವಾಗಿ ಕಂಡುಬರುತ್ತದೆ. ಅದಕ್ಕಾಗಿಯೇ ಹಾಡುವ ಆ ದಿನಗಳಲ್ಲಿ ೧೬ ದಿವಸಗಳು ಹೀಗೆ ಮುಂದುವರೆಸಿಕೊಂಡು ಹೋಗುತ್ತಿದ್ದರು.

೪) **ಮೈನೆರೆದ ಹುಡುಗಿ ಜೊತೆ ಗೊಂಬೆ ಇಡುವುದು :**

ಋತುಮತಿಯಾದ ಹೆಣ್ಣು ಮಕ್ಕಳನ್ನು ಪಡೆಯುವುದಕ್ಕೆ ಅರ್ಹಳಾಗಿರುತ್ತಾಳೆಂದು ಸೂಚಿಸುವುದಕ್ಕೆ ಆಕೆಯ ಜೊತೆ ಹಾಡುವ ೧೬ ದಿನಗಳ ಕಾಲದವರೆಗೂ ಗೊಂಬೆ ಇಡಲಾಗುವುದು. ತಮ್ಮ ಮಗಳಲ್ಲಿ ಮಕ್ಕಳನ್ನು ಹೆರೆವುದಕ್ಕೆ ಯಾವುದೇ ದೋಷವಿಲ್ಲ ಎಂದು ತೋರ್ಪಡಿಸಿಕೊಳ್ಳುವ ವಿಧಾನವಾಗಿರಬೇಕು. ಅಲ್ಲದೆ ಈ ಸಂದರ್ಭದಲ್ಲಿ ತಮ್ಮ ಬಂದು–ಬಳಗದವರನ್ನು ಕೂಡಾ ಕರೆಯಿಸುವ ಪದ್ಧತಿ ಇದೆ.

೫) **ಆಕಾಡ ದಿನಗಳಲ್ಲಿ ಪ್ರಾಪ್ತೆಯಾಗಬಾರದು :**

ಹೆಣ್ಣು ಮೊದಲ ಬಾರಿ ಋತುಮತಿಯಾದಾಗ ಅದು ಸೂತಕ ಎನ್ನುವ ಕಾರಣಕ್ಕೆ ಶುದ್ಧೀಕರಣ ಸಂಬಂಧಿ ಹಲವು ವಿಧಿಗಳನ್ನು ನಡೆಸುತ್ತಾರೆ. ಜೊತೆಗೆ ಋತುಮತಿಯಾದ ಹೆಣ್ಣಿಗೆ ಮದ್ದಿನ ಅಡುಗೆ (ಪೌಷ್ಟಿಕ ಆಹಾರ) ಮಾಡುವ ಕ್ರಮಗಳಿದ್ದು ಇವೆಲ್ಲ ವೆಚ್ಚದಾಯಕವಾದವುಗಳು ಆರ್ಥಿಕ ಮುಗ್ಗಟ್ಟಿನ ಈ ಆಕಾಡ (ಆಷಾಡ) ದಿನಗಳಲ್ಲಿ ಹೆಣ್ಣು ಪ್ರಾಪ್ತೆಯಾಗುವುದು ಬೇಡವಾದ ವಿಚಾರ ಮುಟ್ಟು ಹೆಣ್ಣಿನಲ್ಲಿ ದೈಹಿಕ ಹಾಗೂ ಮಾನಸಿಕ ವೈಪರೀತ್ಯಗಳನ್ನು ಹುಟ್ಟಿಸಬಲ್ಲದು. ಆಷಾಢ ವಾತಾವರಣವು ಹಿತಕರವಾಗಿರದೆ ಇದ್ದುದರಿಂದ ಋತುಚಕ್ರ ಹೆಣ್ಣನ್ನು ಇನ್ನಷ್ಟು ಕಾಡಬಹುದು ಎಂಬ ಕಾರಣಗಳಿಂದಾಗಿ ಈ ನಿಷೇಧ ನಂಬಿಕೆ ರೂಢಿಯಲ್ಲಿರಬೇಕು.

ಹೀಗೆ ಲೌಕಿಕ ಜೀವನದ ವಿವಾಹ, ಬಸುರಿ, ಬಾಣಂತಿ, ಮೈನೆರೆದಾಗ ಸೋಬಾನ ಮತ್ತು ಮಕ್ಕಳ ಕುರಿತು ಜನಪದರು ಕಂಡುಕೊಂಡ ನಂಬಿಕೆ ಮತ್ತು ಆಚರಣೆಗಳು, ಆಯಾ ಋತುಮಾನ, ಸಮಯ ಸಂದರ್ಭ, ಆಹಾರ, ವೇಷ ಭೂಷಣ ಹಾಗೂ ಅವರ ಮಾನಸಿಕ ಮತ್ತು ಕೆಲಸಗಳ ಸೌಲಭ್ಯಕ್ಕನುಗುಣವಾಗಿ ರೂಢಿಸಿಕೊಂಡು ಬಂದಿರುವುದಾಗಿದೆ. ಅವರು ಅನುಸರಿಸಿಕೊಂಡು ಬಂದ ನಂಬಿಕೆಗಳು ವ್ಯಕ್ತಿಗತವಾಗಿ ರೂಢಿಯಲ್ಲಿ ಬಂದಂತೆ ಸಮಾಜದಲ್ಲಿ ಚೌಕಟ್ಟನ್ನು ನಿರ್ಮಿಸಿಕೊಂಡವು.

ಒಂದು ರೀತಿಯಲ್ಲಿ ಸಮಾಜದ ಚೌಕಟ್ಟನ್ನು ಮೀರದಂತೆ ಜೀವನ ವ್ಯವಸ್ಥೆಯನ್ನು ನಿರೂಪಿಸಲು ನಂಬಿಕೆಗಳು ಕಾರಣಗಳಾಗಿವೆ. ಇವುಗಳನ್ನು ಮೀರಿದರೆ ಸಮಾಜ ಬಾಹೀರ ಎಂದು ಗುರುತಿಸುವ ಅಥವಾ ಸಮಾಜದಲ್ಲಿ ನಿಂದನೆಗೆ ಒಳಗಾಗುವ ಸಂದರ್ಭಗಳು ಜೀವನಕ್ಕೆ ಎಂತಹ ಸವಾಲುಗಳನ್ನು ತಂದೊಡ್ಡುತ್ತವೆ ಎನ್ನುವುದನ್ನು ಈ ನಂಬಿಕೆಗಳಿಂದ ತಿಳಿಯಬಹುದು ಹಾಗೆಯೇ ಸುಂದರವಾದ ಬದುಕಿಗೆ ಅರ್ಥವನ್ನು ಕೊಡುವ ಈ ನಂಬಿಕೆಗಳು ಆದರ್ಶಗಳಾಗಿವೆ.

## ಅಧ್ಯಾಯ-೪

## ಕೃಷಿ ನಂಬಿಕೆ ಮತ್ತು ಆಚರಣೆಗಳು

ಭೂಮಿಯ ಮೇಲೆ ಸುಮಾರು ೭೦ ಕೋಟಿ ವರ್ಷಗಳ ಹಿಂದೆ ಜೀವ ಸೃಷ್ಟಿಯಾಯಿತು. ಈ ಜೀವಿಗಳು ವಿಕಾಸಗೊಂಡಂತೆ ಅವುಗಳ ವಂಶೋತ್ಪತ್ತಿಗೆ ಸಾಗಿತ್ತು. ಮಾನವ ರೂಪ ಪಡೆಯುವುದಕ್ಕಿಂತ ಹಿಂದಿನ ಎಲ್ಲಾ ಜೀವಿಗಳು ಆಹಾರದ ಉತ್ಪಾದನೆಗಾಗಿ ತಮ್ಮ ಅಂಗಗಳನ್ನೇ ಉಪಯೋಗಿಸುತ್ತಿದ್ದವು. ಮಂಗನಿಂದ ಮಾನವನ ವಿಕಾಸದ ಹಂತದಲ್ಲಿದ್ದ ಒಂದು ವಿಶಿಷ್ಟ ಪ್ರಾಣಿ ವರ್ಗವು ಬುದ್ದಿ ವಿಕಾಸದಿಂದ ತನ್ನ ದೇಹದ ಹೊರಗಿನ ಪರಿಕರವಾದ ದೊಣ್ಣೆ, ಕಲ್ಲು ಇತ್ಯಾದಿಗಳನ್ನು ಉಪಯೋಗಿಸುವ ಚತುರ ಕಲೆಯನ್ನು ತನ್ನದಾಗಿಸಿಕೊಂಡಿತ್ತು. ಮುಂದೆ ಕಪಿ ಮಾನವರು ಆಹಾರಕ್ಕಾಗಿ ಕಾಡಿನಲ್ಲಿ ಸಿಗುವ ಗೆಡ್ಡೆ ಗೆಣಸು ಹಣ್ಣುಗಳನ್ನು ತಿನ್ನಲಾರಂಭಿಸಿದರು.

ಇವುಗಳ ಸಂಗ್ರಹಕ್ಕಾಗಿ ಅಲೆದಾಡುತ್ತ, ಅಲೆದಾಡುತ್ತ ಹೋದಂತೆಲ್ಲಾ ಹಣ್ಣು ಮತ್ತು ಗೆಡ್ಡೆ ಗೆಣಸುಗಳು ಸಿಗದಿದ್ದಾಗ ಆದಿಮಾನವ ಚಿಂತಿತನಾದ. ಈಗಾಗಲೇ ಅವನಲ್ಲಿ ಕೂಡಿ ಬಾಳುವುದರ ಅರಿವು ಉಂಟಾದ್ದರಿಂದ ಜನ ಸಂಘಟನೆ ಮಾಡಿ ಅಲೆದಾಡ ತೊಡಗಿದ. ಮಹಿಳೆಯರು ಭೂಮಿಯಲ್ಲಿ ಈ ಆಹಾರ ಪದಾರ್ಥ ಸಿಕ್ಕಂತೆ ಹಾಕಿದ ಸಸ್ಯಗಳ ಬೀಜಗಳು ಉದುರಿ ಅವುಗಳ ಬೆಳೆಯಿಂದ ಕಾಳನ್ನು ಮತ್ತೆ ಪಡೆಯಬಹುದೆನ್ನುವ ಹೊಸ ಅವಿಷ್ಕಾರದೊಂದಿಗೆ ಕಾಳನ್ನು ಹಾಕಿ ಪ್ರಯೋಗ ಮಾಡಿ ನೋಡಿದರು. ತಾವು ನಿರೀಕ್ಷಿಸಿದಂತೆ ಸಸ್ಯ ಬೆಳೆದುದನ್ನು ಕಂಡ ಜನತೆ ಈ ಕಾರ್ಯ ಮುಂದುವರೆಸಲು ತಾನಿದ್ದೆಡೆ ಇರುವ ಗಿಡ ಗಂಟೆ ಮರಗಳನ್ನು ಕಡಿದು ಸುಟ್ಟು ಬಯಲು ಮಾಡಿ ನೆಲ ಅಗೆದ ಬೀಜ ಬಿತ್ತಿ ಫಸಲು ತೆಗೆಯಲು ರೂಢಿಸಿಕೊಂಡು ಆಹಾರಕ್ಕಾಗಿ ಇರುವ ಚಿಂತೆಯಿಂದ ಮುಕ್ತನಾದನು. ಈ ಹದ ಮಾಡುವ ಕೆಲಸವನ್ನು ಕೃಷಿ ಎಂದು ಗುರುತಿಸಿಕೊಂಡನು.

ಆಹಾರ ಸಂಗ್ರಹಣೆಯನ್ನೂ, ಗೃಹಕೃತ್ಯವನ್ನೂ ನೋಡಿಕೊಳ್ಳುತ್ತಿದ್ದ ಹೆಣ್ಣು ಬೀಜವು ಗಿಡವಾಗುವ ಪವಾಡವನ್ನು ಮೊದಲು ಕಂಡಳು. ಕೈಗುದ್ದಲಿಯಿಂದ ತೋಟದ ಕೃಷಿಯನ್ನು ಆರಂಭ ಮಾಡಿದ ಹಿರಿಮೆ ಹೆಣ್ಣಿನದಾಗುತ್ತದೆ. ಪ್ರಾರಂಭದ ಕೃಷಿಕಳಾಗಿದ್ದ ಹೆಣ್ಣು ಸಮೃದ್ಧಿಗೋಸ್ಕರ ನಡೆಯುವ ಕೃಷಿಯ ಆಚರಣೆಗಳನ್ನು ನಡೆಸಿಕೊಡುವ ಹೊಣೆಗಾರಿಕೆಯನ್ನೂ ಹೊತ್ತಳು. ಹೆಣ್ಣಿನ ಗರ್ಭಧಾರಣೆ ಮತ್ತು ಭೂಮಿಯ ಸಸ್ಯಧಾರಣೆ ಇವರೆಡಕ್ಕೂ ಸಾಮ್ಯತೆಯನ್ನು ಕಂಡುಕೊಂಡ ಆದಿಮಾನವ ಹೆಣ್ಣು ಮತ್ತು ಭೂಮಿ ಪೂಜ್ಯ ವಸ್ತುಗಳೆಂದು ಭಾವಿಸಿದ.

ನವ ಶಿಲಾಯುಗದ ಘಟ್ಟವನ್ನು ಪ್ರವೇಶಿಸಿದ ಮಾನವನು ಕಲ್ಲಿನ ಉಪಕರಣಗಳನ್ನು ನಯಗೊಳಿಸಿ ಹರಿತವಾದ ಕೊಡಲಿ, ಬಾಚಿ, ಹೆರೆವ ಸಾಧನಗಳು ಸಿದ್ಧಪಡಿಸಿಕೊಂಡನು. ತಾನು ಶ್ರಮದಿಂದ ಸಿದ್ಧಪಡಿಸಿದ ಕಿರು ಜಮೀನಿಗೆ ಅವನು ಬದ್ಧನಾದ. ಅಲ್ಲೇ ನೆಲೆಸಿ ಕೃಷಿ ಕಾರ್ಯ ಆರಂಭಿಸಿದನು. ಪ್ರಾಣಿಗಳನ್ನು ಪಳಗಿಸಿ ಸಾಕಲು ಆರಂಭಿಸಿದ. ಕೃಷಿಯಿಂದ ಬೆಳೆದ ಧಾನ್ಯ ಸಂಗ್ರಹಿಸಲು ಬುಟ್ಟಿಗಳ ಹೆಣಿಕೆ ಹಾಗೂ ಮಣ್ಣಿನ ಪಾತ್ರೆಗಳ ರಚನೆ ಮೊದಲಾದವು ಮಹಿಳೆಯರ ಮುಖ್ಯ ಸಾಧನೆಗಳಾದವು.

ಪ್ರಪಂಚದ ಯಾವುದೇ ಸಂಸ್ಕೃತಿಯಲ್ಲಿ ಕೃಷಿಯ ಆರಂಭದ ಕಾಲದಲ್ಲಿ ಧರ್ಮವು ಒಂದೇ ಮೂಲ ಆಶಯವನ್ನು ಹೊಂದಿದ್ದು ಆಯಾ ಪ್ರದೇಶಕ್ಕೆ ಅನುಗುಣವಾಗಿ ವೈಲಕ್ಷಣಗಳನ್ನು ಹೊಂದಿರುತ್ತದೆ. ಕೃಷಿಯ ಆರಂಭದ ಚರಿತ್ರೆಯಲ್ಲಿ ಹೆಣ್ಣಿನ ಸ್ಥಾನಮಾನಗಳನ್ನು ಗಮನಾರ್ಹವಾಗಿ ಬದಲಾವಣೆ ಮಾಡಿತಲ್ಲದೆ ಅನೇಕ ಸ್ತ್ರೀ ದೇವತೆಗಳ ಹುಟ್ಟಿಗೆ ಕಾರಣವಾಯಿತು.

ಪ್ರಪಂಚದ ಇತಿಹಾಸದಲ್ಲಿಯೇ ಭಾರತದ ಜಾತಿ ವ್ಯವಸ್ಥೆಯು ವಿಶಿಷ್ಟವಾಗಿತ್ತು. ಇದರ ಪ್ರಭಾವದಿಂದ ಕೃಷಿಯು ಮುಕ್ತವಾಗಿರಲಿಲ್ಲ. ಭಾರತದ ಕೃಷಿ ಕಾರ್ಯ ಗೌರವಾರ್ಹಸ್ಥಾನ ಪಡೆಯಲಿಲ್ಲ. ಕೃಷಿಕರೆಲ್ಲ ಕೆಳಜಾತಿ ಮತ್ತು ಮಧ್ಯಮಜಾತಿಯವರಾಗಿದ್ದುದೇ ಇದಕ್ಕೆ ಮುಖ್ಯ ಕಾರಣವಾಗಿತ್ತು. ಹಾಗಾಗಿ ಮಧ್ಯಮ ಜಾತಿಗಳಿಗೆ ಭೂಮಿಯನ್ನು ಊಳಲು ಅವಕಾಶ ಕಲ್ಪಿಸಲಾಯಿತು. ಅಸ್ಪೃಶತೆಯ ಪರಿಣಾಮ ಮೂಲ ಕೃಷಿಕರನ್ನು ಅವರ ಕೃಷಿ ಕಾರ್ಯದಿಂದ ಸಂಪೂರ್ಣವಾಗಿ ಬೇರ್ಪಡಿಸಿದ್ದು ಅವರು ಈಗ ಬರಿ ಕೃಷಿ ವಿಧಿಯಾಚರಣೆಗಳಿಗಷ್ಟೇ ಸೀಮಿತಗೊಳ್ಳುವಂತಾದರು. ಭೂತಾರಾಧನೆ, ಊರಮ್ಮನ ಹಬ್ಬದಂಥ ಕೆಲವು ಆಚರಣೆಗಳಲ್ಲಿ ಅತ್ಯಂತ ಪ್ರಬಲ ಸ್ಥಾನಮಾನ ಉಳಿಸಿಕೊಂಡರು. ಕೃಷಿ ವೃತ್ತಿಯಿಂದ ಹೊಲೆಯ ಮಾದಿಗರನ್ನು ಪ್ರತ್ಯೇಕಿಸುವುದಕ್ಕೂ ಅಸ್ಪೃಶ್ಯತೆಗೂ ನಿಕಟ ಸಂಬಂಧವಿದೆ. ಈ ಹಿನ್ನೆಲೆಯಲ್ಲಿ ಮೇಲ್ಜಾತಿಗಳ ತಂತ್ರಜ್ಞಾನಾದಿಗಳು ಕೃಷಿ ಬೆಳವಣಿಗೆಗೆ ಎಂದಿಗೂ ಉಪಯೋಗವಿರಲಿಲ್ಲ. ಬರಿ ಮಳೆ, ನಕ್ಷತ್ರ, ಭವಿಷ್ಯ ಹೇಳುವುದಕ್ಕೆ ಇವರ ಜ್ಞಾನ ಸೀಮಿತಗೊಂಡಿತು.

> ಬೆಳಗಾಗ ನಾನೆದ್ದು ಯಾರ್‍ಯಾರ ನೆನೆಯಲಿ
> ಎಳ್ಳು ಜೀರಿಗೆ ಬೆಳೆಯೂಳ ॥ ಭೂಮಿತಾಯನ
> ಎದ್ದೊಂದು ಘಳಿಗೆ ನೆನೆದೇನು ।

ಎಂದು ಜನಪದರು ಹೇಳುವ ಈ ತ್ರಿಪದಿಯಲ್ಲಿ ಭೂಮಿತಾಯಿಯ ಬಗ್ಗೆ ಜನರಿಗೆ ಇರುವ ಗೌರವ, ಭಕ್ತಿ, ನಿಷ್ಠೆ, ಸೇವಾ ಮನೋಭಾವ ಎಷ್ಟೆಂಬುವುದು ಗೊತ್ತಾಗುವುದು.

ಹೀಗಾಗಿ ನಮ್ಮ ಜನಪದರಿಗೆ ಭೂಮಿ ಕೇವಲ ಮಣ್ಣಲ್ಲ. ಕೋಟ್ಯಾಂತರ ಜೀವಿಗಳಿಗೆ ಆಹಾರ ರಕ್ಷಣೆ ನೀಡಿ ಸಲಹುವ ಮಹಾಮಾತೆ. ಹಾಗಾಗಿ ಭೂಮಿ ತಾಯಿಯ ಆರಾಧನೆಗೆ ವಿವಿಧ ರೀತಿಯ ಕ್ರಿಯೆಗಳು ಆಚರಣೆಗಳು ಮಾರ್ಗಗಳು ಭಾರತದ ಎಲ್ಲಾ ಕಡೆ ಪ್ರಚಲಿತದಲ್ಲಿವೆ. ಪಂಚಭೂತಗಳಾದಿಯಾಗಿ ಪ್ರಕೃತಿಯ ಎಲ್ಲಾ ಘಟಕಗಳಲ್ಲೂ ನಮ್ಮ ರೈತ ಮಕ್ಕಳು ದೈವತ್ವವನ್ನು ಕಂಡು ಗೌರವಿಸುತ್ತಾರೆ. ಅದರಲ್ಲಿಯೂ ಅವರಿಗೆ ನೆಲೆ, ಅನ್ನ, ಆಶ್ರಯ ನೀಡುವ ಭೂಮಿಯ ಮೇಲೆ ಅಪಾರ ಗೌರವ ಭಕ್ತಿ ಶ್ರದ್ಧೆಗಳನಿಟ್ಟು ಕೊಂಡಿರುತ್ತಾರೆ. ಭೂಮಿ ಕುರಿತಾದ ಆಚರಣೆಗಳು ನಾಡಿನಾದ್ಯಂತ ಇರುವಂತೆ ಬೀದರ ಜಿಲ್ಲೆಯಲ್ಲೂ ಸಹ ಇವೆ. ಹಿಂದಿನಿಂದ ಬಂದ ಪದ್ಧತಿಗಳನ್ನು ಅನುಷ್ಠಾನಕ್ಕೆ ತರುವುದರ ಮೂಲಕ ಬೆಳೆಸುವುದರ ಮೂಲಕ ಅದು ಅನೇಕ ಶತಮಾನಗಳಿಂದ ವಿಕಾಸಗೊಂಡು ಬಂದಿತು. ಅದು ಬಲವಾಗಿ ಬೇರೂರಿದ ಜನರ ಪರಂಪರೆಯ ಆಚಾರ ಮತ್ತು ಸಂಸ್ಕೃತಿಗಳ ಒಂದು ಭಾಗವಾಗಿ ಬೆಳೆಯಿತು. ಅನೇಕ ಶತಮಾನಗಳಿಂದ ವರ್ಷ ವರ್ಷವೂ ಸಾಗುವಳಿ ಮಾಡಿಕೊಂಡು ಬಂದರೂ ಮಣ್ಣಿನ ಉತ್ಪಾದಕತೆಯನ್ನು ಉಳಿಸಿಕೊಂಡು ಬಂದಿರುವುದು ವಿಪತ್ಕಾಲಗಳಲ್ಲೂ ಜನ ಜಾನುವಾರುಗಳಿಗೆ ಜೀವದಿದ್ದು ಕೊಂಡಿರಲು ಸೌಲಭ್ಯ ಮಾಡಿಕೊಟ್ಟಿರುವುದು. ಯುಗ ಯುಗಾಂತರಗಳ

ಸುದೀರ್ಘಕಾಲಗಳವರೆಗೆ ಕೃಷಿಯನ್ನು ಚೈತನ್ಯಪೂರ್ಣವಾಗಿ ತಾಕಿತ್ತು ಉಳ್ಳದ್ದನ್ನಾಗಿ ಮಾಡಿರುವುದ ಕೃಷಿ ಅನುಸರಿಸಿಕೊಂಡು ಬಂದ ವ್ಯೂಹೋಪಾಯಗಳ ಮುಖ್ಯ ಅಂಶವಾಗಿದ್ದಿತು ನಿಜ. ಹೀಗೆ ಹೊಂದಿಕೊಂಡು ಹೋಗುವ ವರ್ತನೆಯೇ ಗುರಿಯಾಗಿತ್ತು. ಅಭಿವೃದ್ಧಿ ಕಲ್ಪನೆ ಆಗಿರಲಿಲ್ಲ. ಅದು ಇತ್ತೀಚಿನ ಗುರಿಯಾಗಿದೆ.

ಭಾರತಕ್ಕೆ ಕೃಷಿ ಎಂಬುದೇನು ಹೊಸತಲ್ಲ ಎಂಬುದಕ್ಕೆ ಹಲವು ನಿದರ್ಶನಗಳು ಇವೆ. ಸಿಂಧೂ ನಾಗರಿಕತೆ ಮತ್ತು ಅತೀ ಪ್ರಾಚೀನವಾದ ಋಗ್ವೇದದಲ್ಲಿ ಕೃಷಿಯ ಬಗ್ಗೆ ಹಲವಾರು ಉಲ್ಲೇಖಗಳಿವೆ. ಭೂಮಿ, ನೇಗಿಲು, ಕುಳ ಮುಂತಾದ ಪದಗಳ ಬಳಕೆ ಈ ವೇದದಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಅನಂತರ ರೂಪಿತವಾದ ಯಜುರ್ವೇದದಲ್ಲಿ ಭತ್ತ ಬಾರ್ಲಿ ಮುಂತಾದವುಗಳ ಬಗ್ಗೆ ವರ್ಣನೆ ಇದೆ. ಸಾಮವೇದದಲ್ಲಿ ಭಕ್ತಿ ಪ್ರಧಾನವಾದ ಭಾವನೆಗಳಿಗೆ ಮಹತ್ವ ಕೊಡಲಾಗಿದೆ. ಈ ಮೂರು ವೇದಗಳು ಮೂಲ ಕೃತಿಗಳಾಗಿದ್ದರೆ ಅನಂತರ ರೂಪಿಸಲಾದ ಅಥರ್ವಣ ವೇದದಲ್ಲಿ ವ್ಯವಹಾರಕ್ಕೆ ಸಂಬಂಧಪಟ್ಟ ಹಲವು ವಿಷಯಗಳು ಹಾಗೂ ಕೃಷಿಯ ಮೂಲ ಪುರುಷನೆಂದು ಪ್ರಸಿದ್ಧನಾದ ಪೃಥುವೈನನ ಉಲ್ಲೇಖಗಳು ಕಂಡು ಬರುತ್ತವೆ. ಅರ್ಥವರ್ಣ ವೇದದ ಪ್ರಾರ್ಥನಾ ಸ್ತೋತ್ರಗಳಲ್ಲಿ ಮಳೆ, ಮಿಂಚು, ಭೂಮಿಯ ಸ್ತುತಿ, ಬೀಜ, ಬಿತ್ತನೆ, ಧಾನ್ಯ ಸಮೃದ್ಧಿ ಮುಂತಾದ ಹಲವು ವಿಷಯಗಳ ಬಗ್ಗೆ ವಿವರವಾದ ವರ್ಣನೆ ಇದೆ. ಪವಿತ್ರವಾದ ಗೋವು ಫಲ ಕೊಡುವ ಹಣ್ಣಿನ ಗಿಡಗಳು ಮುಂತಾದ ವಿವರಗಳು ದೊರೆಯುತ್ತವೆ.

ಕ್ರಿ.ಶ. ೫೦೦ರ ಸುಮಾರಿನಲ್ಲಿಯೇ ರಚಿತವಾದ ಚರಕ ಸಂಹಿತ ಮತ್ತು ಸುಶ್ರುತ ಸಂಹಿತೆಗಳು ಕೃಷಿಯಲ್ಲಿ ಸಸ್ಯ ವರ್ಗೀಕರಣಕ್ಕೆ ವೈಜ್ಞಾನಿಕ ಬುನಾದಿಯನ್ನು ಹಾಕಿದವು. ಹಾಗೆಯೇ ಕೃಷಿಯಲ್ಲಿ ಅರ್ಥಶಾಸ್ತ್ರದ ಪ್ರಾಮುಖ್ಯತೆಯ ವಿಚಾರವನ್ನು ಹುಟ್ಟಿ ಹಾಕಿದವನೇ ಕೌಟಿಲ್ಯ. ಇವನು ತನ್ನ ಬೃಹತ್ ಗ್ರಂಥದಲ್ಲಿ ಕೃಷಿಯ ಸಮಗ್ರ ಚಿತ್ರಣವನ್ನು ಕೊಡುತ್ತಾ ಹಲವು ಉಪಯುಕ್ತ ವಿಷಯಗಳನ್ನು ದಾಖಲಿಸಿದ್ದಾನೆ. ಕೃಷಿಯ ಉಗಮ ಮತ್ತು ಬೆಳವಣಿಗೆಯಲ್ಲಿ ಋಷಿ ಮುನಿಗಳು ಹಾಗೂ ಇತರ ಚಿಂತಕರ ಪಾತ್ರ ಅಪಾರ. ಕೌಶಿಕ ಮುನಿಗಳ ಬರವಣಿಗೆಯಲ್ಲಿ ಉಳುಮೆಯ ಹಬ್ಬ ಬಿತ್ತುವುದು, ಮಳೆಗಾಲ ಹಾನಿಕಾರಕ ಕಿಟಗಳಿಂದ ಬೆಳೆಗಳನ್ನು ರಕ್ಷಿಸುವುದು ಮುಂತಾದವುಗಳ ಬಗ್ಗೆ ವಿವರಣೆ ಕಂಡು ಬರುತ್ತದೆ. ವರಾಹಮಿಹಿರನ ವೃಕ್ಷಾಯುರ್ವೆದ ಬೃಹತ್ ಸಂಹಿತೆ ಇಂದಿಗೂ ಅತ್ಯಂತ ಉಪಯುಕ್ತ ಗ್ರಂಥವಾಗಿ ಉಳಿದಿದೆ. ಇದರಲ್ಲಿ ಆಯುರ್ವೇಧ ಸಸ್ಯವಿಜ್ಞಾನ, ಮೋಡ, ಮಳೆ, ಗಾಳಿ, ವೃಕ್ಷಗಳ ಬೆಳವಣಿಗೆ ಕುರಿತ ವಿವರವಾದ ವರ್ಣನೆ ಇದೆ. ಇದೇ ದಿಕ್ಕಿನಲ್ಲಿ ಪರಾಶರನ ವೃಕ್ಷಾಯುರ್ವೇದ ಹೆಚ್ಚು ಪ್ರಚಲಿತದಲ್ಲಿರುವ ಗ್ರಂಥಗಳು. ಆಧುನಿಕ ವಿಧಾನದ ಕೃಷಿ ಪದ್ಧತಿ ಈ ಸಮಯದಲ್ಲಿ ರೂಢಿಯಲ್ಲಿತ್ತು. ಈ ವಿಧಾನದ ಕೃಷಿ ಪದ್ಧತಿಗೆ ಪಿತಾಮಹ ಎನಿಸಿದವನು ಪರಾಶರ. ಆತನಿಗೆ ಮಳೆ ಹಾಗೂ ಅದರಿಂದ ನಡೆಯುವ ಕೃಷಿಯ ಬಗ್ಗೆ ಸ್ಪಷ್ಟ ಕಲ್ಪನೆಯಿತ್ತು. 'ಕೃಷಿ ಹಾಗೂ ಮಳೆ ಒಂದಕ್ಕೊಂದು ಗಾಢವಾಗಿ ಬೆಸೆದುಕೊಂಡಿವೆ ಎಂದು ಅವನು ಹೇಳುತ್ತಾನೆ. ಅವನು ಮಳೆಯನ್ನು ವಿಶ್ಲೇಷಿಸುವುದು ಹೀಗೆ.

ನೀರಾವರಿ ವ್ಯವಸ್ಥೆ ಹೊಂದಿರುವ ಕೃಷಿ ಭೂಮಿಯಾದರೂ ಅಂತಿಮವಾಗಿ ಅದಕ್ಕೆ ಮಳೆಯೇ ಬೇಕು. ಬಾವಿಯೇ ಆಗಲಿ, ಕೊಳವೆ ಮಾರ್ಗವೇ ಆಗಲಿ, ಈ ನೀರಿನ ಮೂಲಗಳನ್ನು ತುಂಬಲು ಮಳೆ ಅಗತ್ಯ. ಪ್ರತಿಯೊಬ್ಬರೂ ಮಳೆಯ ಬಗ್ಗೆ ಕನಿಷ್ಠ ಜ್ಞಾನ ಹೊಂದಿರಬೇಕು. ಒಂದು ವರ್ಷದಲ್ಲಿ ಆಯಾ ಪ್ರದೇಶದಲ್ಲಿ ಬೀಳುವ ಮಳೆ, ನಕ್ಷತ್ರ ರಾಶಿಗಳ ಚಲನೆಯಿಂದ ಮಳೆಯ ಮೇಲಾಗುವ ಪರಿಣಾಮಗಳ ಬಗ್ಗೆ ಅರಿವು ಅಗತ್ಯ

ಕ್ಷಾಮ ಅಥವಾ ಅತಿವೃಷ್ಟಿ ಉಂಟಾಗುವುದಕ್ಕೂ ಅಕಾಲಿಕ ಮಳೆ ಬೀಳುವುದಕ್ಕೂ ಇವುಗಳಿಗೂ ಸಂಬಂಧವಿದೆ. ಪರಾಶರನ ಕಾಲದಲ್ಲಿ ಜ್ಯೋತಿಷ್ಯಶಾಸ್ತ್ರ, ಗ್ರಹಗಳ ಚಲನೆಯ ಬಗ್ಗೆ ಹೆಚ್ಚು ಹೆಚ್ಚು ಅಧ್ಯಯನಗಳನ್ನು ಮಾಡಿ ಹೆಚ್ಚು ಆಳವಾಗಿ ಅರ್ಥೈಸಿಕೊಳ್ಳಲಾಯಿತು. ಪರಾಶರ ಇದರಲ್ಲಿ ಇನ್ನೂ ಸಾಕಷ್ಟು ಮುಂದೆ ಸಾಗುತ್ತಾನೆ. ಗ್ರಹಗಳ ಸುತ್ತುವಿಕೆ, ಮುಖ್ಯ ಗ್ರಹದ ಚಲನೆ ಇತ್ಯಾದಿಗಳ ಮೂಲಕ ವಾರ್ಷಿಕ ಮಳೆ ಮೋಡಗಳನ್ನು ಅಂದಾಜಿಸಬಹುದು ಎಂಬುದು ಆತನ ಪ್ರತಿಪಾದನೆ. ಇದನ್ನು ಕಂಡು ಹಿಡಿಯಲು ಆತ ಅನುಸರಿಸುತ್ತಿದ್ದ ಪದ್ಧತಿಯೂ ಸರಳವಾಗಿತ್ತು. ಶಕ ವರ್ಷದಲ್ಲಿ ರಚಿಸಲಾದ ಸಂಖ್ಯಾ ಪದ್ಧತಿ ಹಾಗೂ ಕೆಲವು ಸರಳ ಗಣಿತದ ಪದ್ಧತಿಗಳನ್ನು ಆತ ಅನುಸರಿಸುತ್ತಿದ್ದ. ತಿಂಗಳಾನುಸಾರ ಮಳೆ ಸುರಿದ ಪ್ರಮಾಣವನ್ನು ಅಂದಾಜಿಸುವುದು. ಅವನ ಮಳೆಯ ಲೆಕ್ಕಾಚಾರ ಪುಷ್ಯಮಾಸ (ಜನವರಿ)ದಿಂದ ಆರಂಭವಾಗಿ ಅಗಸ್ಟ (ಶ್ರಾವಣ)ದವರೆಗೂ ಮುಂದುವರಿಯುತ್ತಿತ್ತು.

ಭತ್ತ ಬೆಳೆಯುವ ಗದ್ದೆಗಳಲ್ಲಿ ಸಣ್ಣ ಸಣ್ಣ ತೆವರುಗಳನ್ನು ನಿರ್ಮಿಸಿಕೊಂಡು ನೀರು ನಿಲ್ಲಿಸಿಕೊಳ್ಳಬೇಕೆಂದು ಆಗಲೇ ಆತ ಹೇಳಿದ್ದ. ಪ್ರವಾಹದಲ್ಲಿ ಭತ್ತದ ಗದ್ದೆ ಕೊಚ್ಚಿ ಹೋಗದಂತೆ ಸೂಕ್ತ ಕಾಲುವೆ ಮಾರ್ಗವನ್ನೂ ಆತ ಸೂಚಿಸುತ್ತಾನೆ. ಮಳೆಯನ್ನು ಆತ ಎಷ್ಟು ನಿಖರವಾಗಿ ಅಳೆದಿದ್ದ ಎಂದರೆ, ಮಳೆ ಇಂತಿಷ್ಟೇ ಪ್ರಮಾಣದಲ್ಲಿ ಹಂಚಿ ಹೋಗುತ್ತದೆ ಎಂದಿದ್ದ. ಅವನ ಪ್ರಕಾರ, ಸುರಿದ ಮಳೆಯಲ್ಲಿ ಶೇಕಡಾ ೫೦ರಷ್ಟು ಭಾಗ ಸಮುದ್ರಕ್ಕೆ, ಶೇಕಡಾ ೩೦ ರಷ್ಟು ಪರ್ವತ ಪ್ರದೇಶಕ್ಕೆ, ಶೇಕಡಾ ೨೦ ರಷ್ಟು ಭೂಮಿಗೆ ಹಂಚಿ ಹೋಗುತ್ತದೆ. ಆದ್ದರಿಂದ ಶೇಕಡಾ ೨೦ ರಷ್ಟು ಮಳೆಯಲ್ಲೇ ಕೃಷಿ ನಡೆಸಲು ಕೃಷಿಕರು ಯೋಜನೆ ಮಾಡಿಕೊಳ್ಳಬೇಕು ಎಂದು ಸಲಹೆ ನೀಡಿದ್ದ. ಈ ಸಲಹೆ ಇಂದಿಗೂ ಉಪಯುಕ್ತವಾಗಿದೆ. ಹೀಗೆ ತಲ ತಲಾಂತರದಿಂದ ಮೂಡಿ ಬಂದ ಜನಪದರ ಕೃಷಿ ನಂಬಿಕೆಗಳು ಆಚಾರ ವಿಚಾರಗಳು ಬಹು ಮಟ್ಟಿಗೆ ವೈಜ್ಞಾನಿಕ ತಳಹದಿಯ ಮೇಲೆ ನಿಂತಿವೆ.

ಜನಪದ ತಂತ್ರಜ್ಞಾನ ಕೃಷಿ ಕ್ಷೇತ್ರದಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದೆ. ಬೇಸಾಯ ಕಾರ್ಯದ ಪ್ರಾರಂಭದಲ್ಲಿ 'ಹೊನ್ನಾರು' ಹೂಡಿ ಭೂಮಿಯನ್ನು ಉಳುಮೆ ಮಾಡುವಿಕೆ, ಹರೆತ ಮಾಡುವಿಕೆ (ಗೊಬ್ಬರ ಗೋಡನ್ನು ಚೆಲ್ಲಿದ ನಂತರ) ಹದನೋಡಿ ಬಿತ್ತನೆ ಮಾಡುವಿಕೆ, ಕಳೆ ಕೀಳುವಿಕೆ, ಕಟವು ಮಾಡುವಿಕೆ, ಬಣವೆ ಹಾಕಿ ಕಣಕ್ಕೆ ಸಾಗಿಸುವಿಕೆ ಹೀಗೆ ಪ್ರತಿಯೊಂದು ಹಂತದಲ್ಲಿಯೂ ವ್ಯವಸ್ಥಿತವಾದ ರೀತಿಯಲ್ಲಿ ಕಾರ್ಯವಿಧಾನಗಳ ಅನುಸರಣೆ ಕಂಡುಬರುತ್ತದೆ. ಕೃಷಿ ಕಾರ್ಯಗಳಿಗೆ ಬೇಕಾಗುವ ಉಪಕರಣಗಳು, ಸಾಮಗ್ರಿಗಳು, ದನಕರುಗಳು ಮತ್ತು ಅವುಗಳ ಪಾಲನೆ ಪೋಷಣೆ ಮುಂತಾದ ಎಲ್ಲ ಪ್ರಮುಖ ಅಂಶಗಳಲ್ಲಿ ರೈತರ ಅನುಭವ ಪೂರ್ಣ ವಿಧಾನಗಳು ವೈಜ್ಞಾನಿಕ ಪರಿಷ್ಕರಣೆಗೆ ಉತ್ತಮ ಆಧಾರಗಳಾಗಿವೆ.

ಒಕ್ಕಲುತನ ಚೆನ್ನಾಗಿ ನಡೆದರೆ ಆ ನಾಡು ಸುಭಿಕ್ಷವಾಗುತ್ತದೆ ಹಾಗೂ ಎಲ್ಲರಿಗೂ ಅನ್ನ ದೊರಕುತ್ತದೆ ಎಂಬುದನ್ನು ಸರ್ವಜ್ಞ ಕವಿ ಅರ್ಥಪೂರ್ಣವಾಗಿ ಒತ್ತಿ ಹೇಳಿದ್ದಾನೆ.

ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು ।
ಮೇಟಿಯಿಂ ರಾಟೆ ನಡೆದುದಲ್ಲದೆ । ದೇಶ ।
ದಾಟವೇ ಕೆಡಕು ಸರ್ವಜ್ಞ ॥

ಜನಪದರು ವಾಯುಮಂಡಲದ ಸ್ಥಿತಿಗತಿಗಳು, ಮಳೆಯ ಏರು ಪೇರು ಮುಂತಾದವುಗಳನ್ನು ಮಳೆ ನಕ್ಷತ್ರದ ಆಧಾರದ ಮೇಲೆ ನಿರೂಪಿಸುತ್ತಾ ಬಂದಿದ್ದಾರೆ. ನಕ್ಷತ್ರಗಳು ಗಾಳಿ ಬೀಸುವ ದಿಕ್ಕು, ಬಿಸಿಲು, ಮೋಡ ಮುಂತಾದವುಗಳ ಆಧಾರದ ಮೇಲೆ ರೈತರು ಯಾವ ರೀತಿ ಬೇಸಾಯ ಮಾಡಬೇಕೆಂದು ನಿರ್ಧರಿಸುತ್ತಾರೆ. ಮಳೆಯ ಆಗುಹೋಗುಗಳಿಗೆ ಗಾಳಿ ಅಥವಾ ವಾಯುವಿನ ಒತ್ತಡವೇ ಕಾರಣವೆಂಬ ಸತ್ಯಾಂಶವನ್ನು ಹಿಂದಿನವರು ಕಂಡುಕೊಂಡಿದ್ದರು.

ಪುಷ್ಯ ಮತ್ತು ಮಾಘ ಮಾಸಗಳಲ್ಲಿ ದಕ್ಷಿಣ ಮಾರುತವು ಬೀಸಿದರೆ ಅದು ಶ್ರಾವಣ ಮಾಸದಲ್ಲಿ ಮಳೆಯಾಗುವ ಶುಭ ಲಕ್ಷಣವಾಗಿರುತ್ತದೆ. ಹಸ್ತ ನಕ್ಷತ್ರದಲ್ಲಿ ಮಳೆಯಾದಲ್ಲಿ ಹಾಗೂ ಚಿತ್ತ ನಕ್ಷತ್ರದಲ್ಲಿ ಮೋಡ ಮುಸುಕಿದರೆ ಮುಂದೆ ಅಧಿಕ ಮಳೆಯಾಗುವ ಭರವಸೆ ಇದೆ. ಆರಿದ್ರ ನಕ್ಷತ್ರದ ಆರಂಭದಲ್ಲಿ ಮತ್ತು ಹಸ್ತೆಯಲ್ಲಿ ಮಳೆಯಾಗದಿದ್ದರೆ ರೈತ ಮಂಕು ಕವಿದಂತಾಗುತ್ತಾನೆ.

ಗುರುವು ವೃಷಭ ರಾಶಿಗೆ ಬಂದಾಗ ಭೂಮಿಗೆ ಸಾಧರಣ ಮಳೆಯಾಗುವುದು. ಪಶುಗಳಿಗೂ ಸ್ತ್ರೀಯರಿಗೂ ಹಿತವಾಗುವುದು. ಜನರೆಲ್ಲರೂ ಆನಂದದಿಂದ ಇರುವರು. ಗುರುವು ಕರ್ಕರಾಶಿಗೆ ಬಂದಾಗ ಹಿಂಗಾರಿನ ಮಳೆ ಚೆನ್ನಾಗಿ ಆಗಿ ದೇಶದಲ್ಲಿ ಬೆಳೆ ಸಮೃದ್ಧಿಯಾಗುವುದು. ಪ್ರಜೆಗಳಿಗೆ ಧನ ಧಾನ್ಯ ಅಭಿವೃದ್ಧಿಯುಂಟಾಗುವುದು. ಹಾಗೆಯೇ ಸಿಂಹರಾಶಿಗೆ ಬಂದಾಗ ಹಿಂಗಾರಿನ ಮಳೆಯಾಗುವುದು. ಕನ್ಯಾರಾಶಿಗೆ ಬಂದಾಗ ಸಮೃದ್ಧ ಮಳೆಯಾಗುವುದು. ಹೈನು ಚೆನ್ನಾಗಿ ಆಗುವುದು. ತುಲಾರಾಶಿಗೆ ಬಂದಾಗ ಸಾಕಷ್ಟು ಮಳೆಯಾಗುವುದು. ಫಲವೂ ಧಾನ್ಯಗಳೂ ಚೆನ್ನಾಗಿ ಆಗುವುದು. ವೃಶ್ಚಿಕ ರಾಶಿಗೆ ಬಂದಾಗ ಯುದ್ಧಗಳು ಹೆಚ್ಚಾಗಿ ಫಲ ಕಡಿಮೆ. ಮಕರ ರಾಶಿಗೆ ಬಂದಾಗ ಎಲ್ಲ ಕಡೆ ಸಂಪೂರ್ಣ ಮಳೆಯಾಗುವುದು ಎಂದು ಗುರುಗ್ರಹದ ಆಧಾರದ ಮೇಲೂ ಮಳೆಯ ಬಗ್ಗೆ ನಂಬಿಕೆ ಹೊಂದಿರುವುದು ಕಂಡು ಬರುತ್ತದೆ. ಮುಂಗಾರು ಮಳೆ ಬೀಳುವುದು ಸ್ವಲ್ಪ ತಡವಾದರೂ ಹಳ್ಳಿಗಳಲ್ಲಿ ಮಳೆರಾಯನ ಮೆರವಣಿಗೆ ಮಾಡಿ ವರುಣನನ್ನು ಹೀಗೆ ಪ್ರಾರ್ಥಿಸುತ್ತಾರೆ.

ಮಳೆ ಹೋಯ್ತು ಎಂತ ಮಳೆರಾಯ್ನ ಬೈಬೇಡ ।
ಒಕ್ಕಾಳ ಹೊನ್ನ ಸೆರಗಲ್ಲಿ । ಕಟ್ಕೊಂಡು
ಸಾಲಕ್ಕೆ ಹೋಗವ್ನೆ ಮಳೆರಾಯ ॥

ಇಂದು ಕೃಷಿ ಬದುಕು ದಿಕ್ಕು ತಪ್ಪಿದೆ ಇದಕ್ಕೆ ಅನೇಕ ಕಾರಣಗಳನ್ನು ಗುರುತಿಸಬಹುದು. ಮನುಷ್ಯನ ಅತಿಯಾಸೆ ಒಂದೆಡೆಯಾದರೆ, ಕಾಡಿನ ನಾಶ ಪರಿಸರದಲ್ಲಿ ಹೆಚ್ಚುತ್ತಿರುವ ಉಷ್ಣತೆ ಹವಮಾನದಲ್ಲಿನ ಬದಲಾವಣೆ ಕ್ರಿಮಿನಾಶಕಗಳ ಬಳಕೆ ಇನ್ನೊಂದೆಡೆ ಕಾರಣಗಳಾಗಿವೆ. ಭಾರತ ಸ್ವಾತಂತ್ರ್ಯ ಪೂರ್ವದಲ್ಲಿ ವಿದೇಶಿಯರ ನಿಯಂತ್ರಣದಲ್ಲಿರುವ ಸಂದರ್ಭದಲ್ಲಿ ನಮ್ಮ ದೇಶದ ಜನತೆಗೆ ಸಾಕಾಗುವಷ್ಟು ಆಹಾರ ನಮ್ಮಲ್ಲಿ ಬೆಳೆಯದೆ ಇನ್ನೊಂದು ದೇಶದ ಮೇಲೆ ಅವಲಂಬನೆಯಾಗಿರಬೇಕಾಗಿತ್ತು. ಆದ್ದರಿಂದ ಭಾರತದ ಸ್ವಾತಂತ್ರ್ಯ ನಂತರವೂ ಇರುವ ಹಲವಾರು ಸಮಸ್ಯೆಗಳಲ್ಲಿ ಆಹಾರ ಸಮಸ್ಯೆಯೂ ಒಂದಾಗಿತ್ತು. ಇದರ ಪರಿಹಾರಾರ್ಥವಾಗಿ ಸರ್ಕಾರ ಮೊದಲನೆ ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿಗೆ ಮೊದಲ ಆದ್ಯತೆ ಕೊಟ್ಟಿತು. ಅದಕ್ಕಾಗಿಯೇ ಅನೇಕ ರೀತಿಯ ಯೋಜನೆಗಳನ್ನು ನೆಹರೂ ಸರ್ಕಾರವು ಹಾಕಿಕೊಂಡಿತು. ಅಮೇರಿಕಾದಂತಹ ಅಭಿವೃದ್ಧಿ ಹೊಂದಿದ

ರಾಷ್ಟ್ರಗಳ ನೆರವು ತೆಗೆದುಕೊಂಡಿತು. ಇದರ ಅಂಗವಾಗಿ ಭಾರತದಂತಹ ಅಭಿವೃದ್ಧಿ ಶೀಲ ರಾಷ್ಟ್ರಗಳಲ್ಲಿ ಪರಿಚಯಿಸಿದ ಅಂಶವೆಂದರೆ ಹಸಿರು ಕ್ರಾಂತಿ. ೧೯೬೦ರ ದಶಕದಲ್ಲಿ ಅಮೇರಿಕಾದ ಕೃಷಿ ವಿಜ್ಞಾನಿ ನಾರ್ಮನ್ ಬೋರ್ಲಾಂಗ್ ಅವರ ನೇತೃತ್ವದಲ್ಲಿ ಹಸಿರು ಕ್ರಾಂತಿಯು ಜನ್ಮತಾಳಿತು. ಅಭಿವೃದ್ಧಿ ಶೀಲ ರಾಷ್ಟ್ರಗಳ ಆಹಾರದ ಕೊರತೆಯನ್ನು ನೀಗಿಸುವುದೇ ತನ್ನ ಗುರಿಯೆಂದು ಇದು ಹೇಳಿಕೊಂಡಿತು. ಹೀಗಾಗಿ ಭಾರತವು ಈಗಾಗಲೇ ಎದುರಿಸುತ್ತಿರುವ ಆಹಾರದ ಕೊರತೆಯನ್ನು ಹೋಗಲಾಡಿಸುವ 'ಪರೋಪಕಾರಿ' ವೇಷ ತೊಟ್ಟು ಹಸಿರು ಕ್ರಾಂತಿಯಲ್ಲಿ ಭಾರತದಲ್ಲಿ ಪರಿಚಯಿಸಲಾಯಿತು. ಅಧಿಕ ಇಳುವರಿಯ ಬೀಜ. ರಸಗೊಬ್ಬರ, ಕೀಟನಾಶಕ ಮತ್ತು ನೀರಾವರಿ ಸೌಲಭ್ಯಗಳು ಇದರ ಮಂತ್ರಗಳಾದವು. ಈ ದೇಶ ಆಹಾರೊತ್ಪಾದನೆಯನ್ನು ವಾಣಿಜ್ಯಕರಣಗೊಳಿಸಿ ಆಹಾರವು ಸಾಕಾಗಿ ವಿಷವಾಗಿ ಮಾರ್ಪಾಡಾಯಿತು.

೧೯೪೧ರಲ್ಲಿ ರಾಕ್ಫೆಲರ್ ಪ್ರತಿಷ್ಠಾನ ಮೆಕ್ಸಿಕೋ ಬಳಿ ಸಸ್ಯ ಪೋಷಣೆಗಾಗಿ ಪ್ರಾರಂಭಿಸಿದ ಸಂಶೋಧನಾ ಕೇಂದ್ರ ೧೯೬೧ರಲ್ಲಿ ಅಂತರಾಷ್ಟ್ರೀಯ ಜೋಳ ಮತ್ತು ಗೋಧಿ ಅಭಿವೃದ್ಧಿ ಕೇಂದ್ರವಾಗಿ ಬದಲಾಯಿತು. ೧೯೫೦ರ ಅಂತ್ಯಭಾಗದಲ್ಲಿ ಈ ಕೇಂದ್ರ ಸೃಷ್ಟಿಸಿದ ಹೈಬ್ರೀಡ್ ಗೋಧಿ ನಂತರ ಭಾರತದಲ್ಲಿ ಹಸಿರು ಕ್ರಾಂತಿಗೆ ಮೂಲವಾಯಿತು.

ಪಾಶ್ಚಿಮಾತ್ಯ ಹಸಿರು ಕ್ರಾಂತಿಯ ಕ್ರಿಯಾಸರಣಿಯ ಪರಿಚಯದೊಂದಿಗೆ ಕೃಷಿಯ ಅರ್ಥವೇ ಬದಲಾಗಿ ಹೋಯಿತು. ಸಮಾಜಕ್ಕೆ ಆಹಾರ ಮತ್ತು ಪೌಷ್ಟಿಕತೆ ಪೂರೈಸುವ ಹಾಗೂ ಮಣ್ಣಿನ ಫಲವತ್ತತೆ ಕಾಪಾಡುವ ಚಟುವಟಿಕೆಯಾಗಿ ಅದು ಉಳಿಯದೆ ಲಾಭಕ್ಕಾಗಿ ಕೃಷೋತ್ಪನ್ನ ಸೃಷ್ಟಿಸುವ ಚಟುವಟಿಕೆಯಾಗಿ' ಬದಲಾಯಿತು. ಪ್ರಕೃತಿ ರೈತರು ಹಾಗೂ ಮಹಿಳೆಯರು ಆಹಾರದ ಪ್ರಾಥಮಿಕ ಉತ್ಪಾದಕರಾಗಿ ಉಳಿಯಲಿಲ್ಲ. ಪ್ರಕೃತಿ ಮತ್ತು ಉಳಿವಿನ ಆರ್ಥಿಕತೆ ಬದಲು ಹೈಬ್ರೀಡ್ ಬೀಜ, ರಸಾಯನಿಕ, ಗೊಬ್ಬರ, ಕೀಟನಾಶಕ, ಯಾಂತ್ರೀಕರಣ ಹಾಗೂ ಭಾರೀ ಪ್ರಮಾಣದ ನೀರಾವರಿಯನ್ನಾಧರಿಸಿದ ಮಾರುಕಟ್ಟೆ ಆರ್ಥಿಕತೆ ಬಂದಿತು. ಕೃಷಿಯಿಂದ ಹೆಚ್ಚು ಲಾಭಗಳಿಸುವ ಉದ್ದೇಶದಿಂದ ಬಂದ ಈ ಯಾಂತ್ರೀಕರಣ ಗುರಿ ಮಣ್ಣಿನ ಸಾರವತ್ತತೆಯ ರಕ್ಷಣೆಯಲ್ಲ. ಎಲ್ಲರಿಗೂ ಆಹಾರ ದೊರಕುವಂತೆ ಮಾಡುವುದಲ್ಲ. ತುಂಡು ತುಂಡು ಜ್ಞಾನದ ಕೃಷಿ ತಜ್ಞರ ಹೊಸ ತಳಿ ಸಾಂಪ್ರದಾಯಿಕ ಕೃಷಿ ತಜ್ಞರಾದ ಮಹಿಳೆಯರು ರೈತರನ್ನು ಸ್ಥಳಾಂತರಿಸಿ ಬಿಟ್ಟಿತು.

ಕೃಷಿ ವಾಣಿಜ್ಯಕರಣಗೊಂಡಂತೆ ಮಹಿಳೆಯರ ಮೇಲಿನ ಕೆಲಸದ ಹೊರೆ ಹೆಚ್ಚುತ್ತದೆ. ಆದರೆ ಆ ಕೆಲಸ ಲಾಭದೊಡನೆ ತಳಕು ಹಾಕಿಕೊಂಡಿರುವುದರಿಂದ ಅದರ ಮೌಲ್ಯ ಕುಗ್ಗುತ್ತದೆ. ಅವರ ಕೂಲಿ ಇಳಿಯುತ್ತದೆ. ಆಹಾರದ ಪ್ರಮಾಣ ಕುಸಿಯುತ್ತದೆ. ಹಸಿರು ಕ್ರಾಂತಿಯ ಪ್ರದೇಶಗಳಲ್ಲಿ ಮಹಿಳೆಯ ಮೇಲೆ ವರದಕ್ಷಿಣೆ ಸಂಬಂಧಿತ ದೌರ್ಜನ್ಯದ ಪ್ರಮಾಣ ಅತಿ ಹೆಚ್ಚಾಗಿದ್ದು ಪಂಜಾಬನಲ್ಲಿ ದೌರ್ಜನ್ಯ ಸಾಂಕ್ರಮಿಕವಾಗಿದೆ.

ಭಾರತದಲ್ಲಿ ಹಸಿರು ಕ್ರಾಂತಿಯ 'ಯಶಸ್ಸು' ಆಫ್ರೀಕಾದ ಕೃಷಿಯ ವಿಫಲತೆಗಿಂತ ಭಿನ್ನವೆಂದು ಹೇಳಲಾಗುತ್ತದೆ. ಹಸಿರು ಕ್ರಾಂತಿಯ ಯಶಸ್ವಿ ವಿಸ್ತರಣೆ ಮಹಿಳೆಯರ ಮೇಲಿನ ಲಿಂಗಭೇದವನ್ನು ಇನ್ನಷ್ಟು ಗಾಢವಾಗಿಸಿದೆ. ಅಮರ್ತ್ಯಸೇನ್ ಗುರುತಿಸಿದಂತೆ "ಭಾರತದಲ್ಲಿ ಅನೇಕ ದಶಕಗಳಿಂದ ಲಿಂಗ ಅನುಪಾತ ವ್ಯವಸ್ಥಿತವಾಗಿ ಇಳಿಯುತ್ತಿದ್ದು, ಆಫ್ರೀಕಾದ ಅನುಪಾತಕ್ಕಿಂತ ಕಡಿಮೆ ಇದೆ".[೬೩]

೬೩( ಅಡಿಟಿಪ್ಪಣಿ:೬೩: ಬತ್ತದ ಚಿಲುಮೆ, ಮೂಲ ಲೇಖಕರು: ವಂದನಾಶಿವ ಅನುವಾದ 'ಮಾಧವ ಐತಾಳ್ ಪುಟ ಸಂಖ್ಯೆ ೯೧)

ಹಸಿರು ಕ್ರಾಂತಿಯ ಬೀಜ ಉತ್ಪಾದನಾ ಕಾರ್ಯ ನೀತಿ ಬೀಜಗಳ ಜೈವಿಕ ವೈವಿಧ್ಯವನ್ನು, ಸ್ವಯಂ ಪುನರುತ್ಪಾದನಾ ಸಾಮರ್ಥ್ಯವನ್ನು ನಾಶಪಡಿಸುವಂತಹದ್ದು ಸಸ್ಯೋತ್ಪಾದನೆಯಲ್ಲಿ ಸ್ತ್ರೀತ್ವದ ಸಾವಿನಿಂದ ಬೀಜ ಲಾಭದಾಯಕವಾಗುವ ನಿಯಂತ್ರಣಕ್ಕೊಳಗಾಗುವ ಪದಾರ್ಥವಾಯಿತು. ಹೈಬ್ರಿಡೀಕರಣದೊಂದಿಗೆ ಬೀಜಗಳು ಸಸ್ಯ ಜೀವದ ಮೂಲವಾಗದೆ, ಖಾಸಗಿ ಲಾಭದ ಮೂಲವಾದವು.

೧೯೬೦ರಲ್ಲಿ ನೀರಾವರಿ ಇದ್ದ ಪ್ರದೇಶದಲ್ಲಿ ಹೆಚ್ಚು ಇಳುವರಿ ನೀಡುವ ಜೋಳವನ್ನು ಪರಿಚಯಿಸಲಾಯಿತು. ಇವಕ್ಕೆ ಕೀಟನಾಶಕ ಹೊಡೆಯಬೇಕಾದ್ದರಿಂದ ಪಕ್ಕದ ಜಮೀನಿನಲ್ಲಿ ಕೀಟ-ಕೀಟನಾಶಿ ಕೀಟಗಳ ಸಮತೋಲನ ತಪ್ಪಿಹೋಗಿ ದೇಶಿ ಜೋಳ ಸಣ್ಣ ನೋಣ ಕಾಟಕ್ಕೆ ತುತ್ತಾಯಿತು. ವರ್ಷ ವರ್ಷ ತಪ್ಪದೆ ಬಂದ ಸಣ್ಣ ನೊಣದಿಂದಾಗಿ ದೇಶಿ ಜೋಳ ೧೯೭೫-೭೬ರ ಹೊತ್ತಿಗೆ ಸಂಪೂರ್ಣ ನಾಶವಾಯಿತು.

ಅಂತರಾಷ್ಟ್ರೀಯ ಸಹಾಯ ಹಣದಿಂದಾಗಿ ಈ ಬೀಜಗಳನ್ನು ಸಬ್ಸಿಡಿ ಬೆಲೆಯಲ್ಲಿ ರೈತರಿಗೆ ಪೂರೈಸಿದ ಸರ್ಕಾರಗಳು, ಕೃಷಿ ಸಾಲ ಮತ್ತು ನೀರಾವರಿ ಸೇರಿದಂತೆ ಉಳಿದ ಒಳಸುರಿಗಳನ್ನು ಹೊಸ ಬೀಜಗಳೊಂದಿಗೆ ತಳಕು ಹಾಕಿದ್ದರಿಂದ ಬಲವಂತವಾಗಿಯಾದರೂ ರೈತರು ಈ ಬೀಜಗಳನ್ನು ಆಯ್ಕೆ ಮಾಡಿಕೊಳ್ಳಲಿಲ್ಲ. ಬದಲಿಗೆ ಅವರ ಮೇಲೆ ಅವುಗಳನ್ನು ಕೊಳ್ಳುವಂತೆ ಹೇರಲಾಯಿತು. ಇದರಿಂದ ಒತ್ತಾಯ ಪೂರ್ವದ ಅನಿವಾರ್ಯ ಕಾರ್ಯಗಳಿಂದ ರೈತರ ಆತ್ಮಹತ್ಯೆ ಪ್ರಕರಣಗಳು ಹೆಚ್ಚಾಗಲಾರಂಭಿಸಿದವು.

ಹಸಿರು ಕ್ರಾಂತಿಯ ಅಘಾತದಿಂದ ಆಹಾರ ಸಮತೋಲನಕ್ಕೆ ಧಾನ್ಯಕೊಳ್ಳಲಾರದಾದರು ಹಸಿರುಕ್ರಾಂತಿಯ ಅಘಾತದಿಂದ ಆಹಾರ ಸಮತೋಲನಕ್ಕೆ ಬೇಕಾದ ಬೇಳೆಕಾಳು, ಎಣ್ಣೆಬೀಜಗಳ ಉತ್ಪಾದನೆ ಕುಸಿಯಿತು. ಹಸಿರು ಕ್ರಾಂತಿಯ ಪರಿಣಾಮವಾಗಿ ಕೆಲವು ಬೆಳೆಗಳನ್ನೇ ಮಾಯಮಾಡಿ ಬಿಟ್ಟಿವೆ.

ಬೀಜ ಮೂಲವಾಗಿದ್ದ ಪ್ರಕೃತಿಯ ಸ್ಥಳದಲ್ಲಿ ಕೃಷಿ ಉದ್ಯಮ ಹಾಗೂ ಬೀಜ ಉತ್ಪಾದನಾ ಸಂಸ್ಥೆಗಳು ಬಂದವು. ಈ ಇಲ್ಲದ ಇಳುವರಿಗಾಗಿ ಪವಾಡ ಬೀಜಗಳನ್ನು ಸೃಷ್ಟಿಸಿ ಬಹುರಾಷ್ಟ್ರೀಯ ಬೀಜ ಮತ್ತು ರಾಸಾಯನಿಕ ಉತ್ಪಾದನಾ ಸಂಸ್ಥೆಗಳು ರೈತರನ್ನು ಗುಲಾಮರನ್ನಾಗಿಸಿದರು.

ಮರುಭೂಮೀಕರಣ ಹಾಗೂ ಮಣ್ಣಿನ ಸಾವಿಗೆ ಕಾರಣವಾದ ಹಸಿರುಕ್ರಾಂತಿ ಏಕ ಬೆಳೆ ಹಾಗೂ ಒಂದೇ ರೀತಿ ಬೆಳೆ ಮಾದರಿಯನ್ನು ಪರಿಚಯಿಸಿತು. ಹೈಬ್ರೀಡ್ ಬೆಳೆಗಳು ಹೆಚ್ಚು ಪೌಷ್ಟೀಕಾಂಶಗಳನ್ನು ಭೂಮಿಯಿಂದ ಪಡೆದುಕೊಳ್ಳುತ್ತವೆ. ಭೂಮಿಗೆ ಕಡಿಮೆ ಸಾವಯವ ಪದಾರ್ಥಗಳ ಪೂರೈಕೆ. ಹೈಬ್ರೀಡ್ ಮತ್ತು ವಾಣಿಜ್ಯ ಬೆಳೆಗಳ ಹೆಚ್ಚಿನ ನೀರಿನ ಬಳಕೆ ಹಾಗೂ ಕಡಿಮೆ ಜಲ ಸಂರಕ್ಷಣಾ ಗುಣದಿಂದಾಗಿ ಭೂಮಿಯ ಪೌಷ್ಟಿಕಾಂಶ ನಷ್ಟವಾಯಿತು. ಭೂಮಿ ಚೌಳು ಓಡಿಯಿತು. ಬರ ಹಾಗೂ ಮರುಭೂಮೀಕರಣಕ್ಕೆ ನಾಂದಿ ಹಾಡಿತು.

೧೯೭೦ರ ದಶಕದಲ್ಲಿ ಉಂಟಾದ ಭೀಕರ ಬರಗಾಲದ ಪರಿಣಾಮವಾಗಿ ಉತ್ತರ ಕನಾಟಕದಲ್ಲೂ ಹಸಿರುಕ್ರಾಂತಿಯ ಪ್ರಭಾವ ಕಾಣಿಸಿಕೊಂಡಿತು. ಅದರಿಂದೀಚೆಗೆ ವೈಜ್ಞಾನಿಕ ಸಾಧನ-ಸಲಕರಣೆಗಳು, ಹೈಬ್ರಿಡ್ ಬೀಜ, ರಸಾಯನಿಕ ಗೊಬ್ಬರ ಕ್ರಿಮಿನಾಶಕಗಳ ಬಳಕೆ ಕೃಷಿಯಲ್ಲಿ ಅಳವಡಿಸಿಕೊಳ್ಳಲಾಯಿತು. ಇದರಿಂದ ಈ ಭಾಗದ ಭೂಮಿಯ ಮಣ್ಣು ನಾಶವಾಗತೊಡಗಿತು. ಇಲ್ಲಿ ಹೆಚ್ಚಿನ ಆಹಾರ ಉತ್ಪಾದಿಸುವುದೇ ಮುಖ್ಯ ಗುರಿಯಾಗಿತ್ತು. ವಿನಹ ಪರಿಸರವಾಗಲಿ ಭೂಮಿನಾಶವಾಗುವ ಕಡೆಯಾಗಲಿ ಗಮನಿಸುವಂತಿರಲಿಲ್ಲ.

ಇದರಿಂದಾಗಿ ಹೆಚ್ಚಿನ ಉತ್ಪಾದನೆಗಾಗಿ ನೀರಾವರಿ ಸೌಲಭ್ಯ, ಕೃಷಿಯಲ್ಲಿ ವಿಜ್ಞಾನ ಮತ್ತು ತಾಂತ್ರಿಕತೆಯ ಅಳವಡಿಕೆ, ಟ್ರಾಕ್ಟರ್, ಟ್ರೈಲರ್, ಹಾರ್ವೆಸ್ಟರಗಳಂತಹ ಯಂತ್ರಗಳ ಬಳಕೆ, ರಸಗೊಬ್ಬರ, ಕ್ರಿಮಿನಾಶಕಗಳ ಬಳಕೆಯಿಂದ ಆಹಾರ ಉತ್ಪಾದನೆಯಲ್ಲಿ ಹಸಿರು ಕ್ರಾಂತಿಯನ್ನು ಮಾಡಲಾಯಿತು. 'ಪಾಕೇಜ್ ಕಾರ್ಯಕ್ರಮದ ಮೂಲಕ ಗರಿಷ್ಠ ಸೌಲಭ್ಯ ಒದಗಿಸಿ ಕಡಿಮೆ ಅವಧಿಯಲ್ಲಿ ಉತ್ಪಾದನೆ ಪ್ರಮಾಣ ಹೆಚ್ಚಿಸುವ ಆಧುನಿಕ ತಳಿಯ ಬೀಜಗಳ ಬಳಕೆ ಇವೆಲ್ಲವು ಈ ಹಿಂದಿನ ಕೃಷಿ ಪದ್ಧತಿಯಲ್ಲಿ ಅಗಾಧ ಕ್ರಾಂತಿಯನ್ನೇ ಮಾಡಿಬಿಟ್ಟವು. ಹೆಚ್ಚಿನ ರೀತಿಯಲ್ಲಿ ಸೌಲಭ್ಯಗಳು ಸಿಗುವುದರಿಂದಾಗಿ ಸಣ್ಣ ರೈತರಿಂದ ಮೊದಲು ಮಾಡಿ ದೊಡ್ಡ ರೈತರವರೆಗೆ ಎಲ್ಲರೂ ಆಹಾರ ಬೆಳೆಗಳ ಬದಲಾಗಿ ವಾಣಿಜ್ಯ ಬೆಳೆಗಳನ್ನೇ ಬೆಳೆಯುತ್ತಿರುವರು. ಅಧಿಕ ಇಳುವರಿಗಾಗಿ ಹೆಚ್ಚಿನ ರಸಗೊಬ್ಬರ ಕ್ರಿಮಿನಾಶಕಗಳ ಬಳಕೆ ಎಲ್ಲೆಡೆ ಹೆಚ್ಚಾಗಿ ಕಂಡುಬರುತ್ತದೆ. ಆಹಾರ ಬೆಳೆಗಿಂತಲೂ ವಾಣಿಜ್ಯ ಬೆಳೆಗಳು ಬೆಳೆದ ರೈತನು ಶ್ರೀಮಂತ ಎನ್ನುವ ಮಟ್ಟಿಗೆ ಕೃಷಿ ಪದ್ದತಿ ಬೆಳೆದುಕೊಂಡು ಬಂದಿದೆ.

ಆಧುನಿಕತೆಯ ಹೆಸರಿನಲ್ಲಿ ಭೂಮಿಯ ಮೇಲೆ ಅತ್ಯಾಚಾರ ನಡೆದಿದೆ. ಆದರೆ ನಮ್ಮ ಪೂರ್ವಿಕರು ಎಂದೂ ನಿಸರ್ಗಧರ್ಮಕ್ಕೆ ವಿರುದ್ಧವಾಗಿ ಬದುಕನ್ನು ಕಟ್ಟಿಕೊಂಡವರಲ್ಲ. ಬಿತ್ತುವ ಬೀಜ, ಬಳಸುವಗೊಬ್ಬರ, ಉಪಕರಣ, ಕೃಷಿ ಮಾಡುವ ವಿಧಾನ, ಕಾಲಮಾನ ಎಲ್ಲವೂ ಸಾವಿರಾರು ವರ್ಷಗಳ ಅನುಭವದ ಮೂಸೆಯಲ್ಲಿ ಅರಳಿದ ಅರಿವಿನ ಫಲಗಳಾಗಿರುತ್ತವೆ. ನೆಲ ಜೀವಮೂಲಜ್ಞಾನ ಇದು ಮಾತ್ರ ಜೀವ ಸಂಕುಲವನ್ನು ನಿಸರ್ಗವನ್ನು ಬಾಳಿಸುವ ಕೃಷಿ ಪದ್ದತಿ.

ಮಣ್ಣಿಲ್ಲದೆ ಬೆಳೆಯಿಲ್ಲ. ಬೆಳೆಯಿಲ್ಲದೆ ಬದುಕಿಲ್ಲ- ಬದುಕಿಲ್ಲದೆ ನಾಗರಿಕತೆಯಿಲ್ಲ ಎನ್ನುವುದು ಎಲ್ಲರಿಗೂ ತಿಳಿದಿರುವ ವಿಷಯವೆ. ರಸಾಯನಿಕ ಗೊಬ್ಬರಗಳು ಬಂದ ಪ್ರಾರಂಭದ ವರ್ಷಗಳಲ್ಲಿ ಇವುಗಳನ್ನು ಬಳಸಿದುದರ ಪರಿಣಾಮವಾಗಿ ಹಸಿರು ಕ್ರಾಂತಿಯಾದುದೇನೋ ನಿಜ. ಆದರೆ ಸಾವಯವ ಗೊಬ್ಬರಗಳ ಬಳಕೆಯನ್ನು ಕಡೆಗಣಿಸಿ ರಸಾಯನಿಕ ಗೊಬ್ಬರಗಳ ಬಳಕೆಯನ್ನು ಹೆಚ್ಚಿಸಿದುದರ ಪರಿಣಾಮವಾಗಿ ಮಣ್ಣಿನ ಫಲವತ್ತತೆ ನಾಶವಾಗುತ್ತಿದೆ.

ಮಣ್ಣಿನಲ್ಲಿ ಬೆಳೆಯ ಬೆಳವಣಿಗೆಗೆ ಸಹಕಾರಿಯಾಗುವಂತಹ ಎರೆಹುಳುಗಳು ಕಣ್ಣಿಗೆ ಕಾಣಿಸದಂತಹ ಬ್ಯಾಕ್ಟೀರಿಯಾ, ಆಕ್ಟಿನೋ ಮೈಸಿಟಿನ್, ಫಂಗೈನಂತಹ ಎಷ್ಟೋ ಬಗೆಯ ಸೂಕ್ಷ್ಮಾಣು ಜೀವಿಗಳಿರುತ್ತವೆ. ಇವುಗಳೆಲ್ಲವನ್ನೂ ನಾವು ರಸಾಯನಿಕ ಗೊಬ್ಬರಗಳನ್ನು ವಿವೇಚನೆ ಇಲ್ಲದೆ ತುಂಬಿ ನಾಶಮಾಡುತ್ತಿದ್ದೇವೆ. ಕೇವಲ ಒಂದು ವರ್ಷ ಬೆಳೆ ಬೆಳೆದರೆ ಸಾಕು ಎನ್ನುವ ಹಾಗಿದ್ದರೆ ಏನು ಬೇಕಾದರೂ ಮಾಡಬಹುದು. ಆದರೆ ಇದು ಹಾಗಲ್ಲ ಮುಂಬರುವ ವರ್ಷಗಳಲ್ಲಿಯೂ ನಾವು ಬೆಳೆ ಬೆಳೆಯಲೇಬೇಕು. ಆದ್ದರಿಂದ ನಿಸರ್ಗದತ್ತವಾದ ಮಣ್ಣನ್ನು ಸಂರಕ್ಷಿಸುವುದು ನಮ್ಮೆಲ್ಲರ ಆದ್ಯಕರ್ತವ್ಯವಾಗಿದೆ. ನಮ್ಮ ಪೂರ್ವಿಕರು ಕೀಟನಾಶಕ, ರೋಗನಾಶಕ ಮತ್ತು ರಸಾಯನಿಕಗೊಬ್ಬರಗಳನ್ನು ಬಳಸದೆ ತಮ್ಮ ಜಮೀನುಗಳಲ್ಲಿ ಹೆಚ್ಚು ಬೆಳೆ ಬೆಳೆಯುತಿದ್ದ ಉದಾಹರಣೆಗಳೂ ಇವೆ. ಹಾಗೆಯೇ ಈ ರಸಾಯನಿಕಗಳನ್ನು ಬಳಸದೆ ಉತ್ತಮ ರೀತಿಯಲ್ಲಿ ಬೆಳೆ ಬೆಳೆಯುತ್ತಿರುವುದನ್ನೂ ಸಹ ಕೇಳುತ್ತಿರುತ್ತೇವೆ.

ಹಿಂದಿನ ನೆಲದಲ್ಲೇ ಇಂದು ಹೆಚ್ಚಿನ ಧಾನ್ಯವನ್ನು ಮಾನವನು ಬೆಳೆಸಲು ಪ್ರಯತ್ನಿಸುತ್ತಿಲ್ಲವೆ ? ಈ ಬಗ್ಗೆ ಆತನು ಕೃತಕ ಗೊಬ್ಬರಗಳಿಂದ ತಕ್ಕ ಸಹಾಯವನ್ನೂ ಪಡೆಯಬಹುದು. ಆದರೆ ಕೃತಕ ಗೊಬ್ಬರಗಳು ಭೂಮಿಗೆ ನೈಸರ್ಗಿಕ ಶಕ್ತಿಯನ್ನೊದಗಿಸಬಲ್ಲುವೇ? ಹಾಗೆಂದ ಬಳಿಕ ನಮ್ಮ ಇಂದಿನ ಹೊಲಗಳ ಧಾನ್ಯಗಳೂ, ತರಕಾರಿಗಳೂ ಪ್ರತ್ಯೇಕ ಗುಣವುಳ್ಳವುಗಳು ಎಷ್ಟೆಂದರೂ ಕೃತಕವಾದವುಗಳು. ಕೃತಕ ಆಹಾರಗಳ ಸೇವನೆಯಿಂದ ಹೆಂಟೆಗಳಿಡುವ ಎರೆಹುಳು ಮತ್ತು ಸೂಕ್ಷ್ಮಾಣು ಜೀವಿಗಳಾದ ಆಕ್ಟಿನೋಮೈಸಿಟಿಸ್. ಫಂಗೈಗಳಲ್ಲಿರುವ ವ್ಯತ್ಯಾಸವನ್ನು ವಿಜ್ಞಾನಿಗಳು ಕಂಡು ಹಿಡಿದಿರುತ್ತಾರೆ. ಹಾಗೆಯೇ ದನಕರುಗಳನ್ನು ಹಟ್ಟಿಗಳಲ್ಲಿ ಕಟ್ಟಿಹಾಕಿ ಅವುಗಳಿಗೆ ನಾವು ಅತ್ಯುತ್ತಮ ಮೇವನ್ನು ತಂದು ಹಾಕಿ ಪೋಷಿಸುತ್ತ ಬಂದರೂ ಅವುಗಳ ಹಾಲಿನಲ್ಲೂ ಬೆಳವಣಿಗೆಯಲ್ಲೂ ಹೆಚ್ಚಿನ ವ್ಯತ್ಯಾಸಗಳು ಕಂಡುಬರುತ್ತವೆಂಬ ಅಂಶಗಳೂ ಪ್ರಯೋಗಗಳಿಂದ ವ್ಯಕ್ತವಾಗುತ್ತವೆ. ಹೀಗೆಯೇ ಆರೋಗ್ಯ ಶಾಸ್ತ್ರಜ್ಞನೂ, ಆರೋಗ್ಯಣೆಯ ಶಾಸ್ತ್ರಜ್ಞನೂ ಮಾನವನ ನಿತ್ಯ ಜೀವನದಲ್ಲಾದ ಮಾರ್ಪಾಟುಗಳನ್ನು ಗಮನಿಸಿ ತನ್ನ ಸೂತ್ರಗಳನ್ನೂ ಜನ ಜೀವನದ ಸಾಮಾನ್ಯ ಪ್ರಮೇಯಗಳನ್ನೂ ಪ್ರತಿಪಾದಿಸಿದರೆ ಒಳಿತಾಗುತ್ತಿತ್ತು. ಇದಕ್ಕೆ ಒಂದೆ ತಲೆಮಾರಿನ ಪ್ರಯೋಗಗಳೂ ಪರೀಕ್ಷೆಗಳೂ ನಮ್ಮ ಪ್ರಶ್ನೆಗಳಿಗೆ ಉತ್ತರಗಳನ್ನು ಸಮರ್ಪಕವಾಗಿ ಕೊಡಲಾರವು. ಹಾಗಿದ್ದ ಬಳಿಕ ಶಾಸ್ತ್ರಜ್ಞರ ಇಂದಿನ ಸೂತ್ರ ಪ್ರಮೇಯಗಳು ತಮ್ಮ ಲಕ್ಷ್ಯವನ್ನು ಮರೆತಿವೆ; ಮರೆತು ಏನನ್ನೋ ಮಾನವನ ಸುತ್ತಲೂ ಹೊಂದಿಸಿವೆ. ಈ ವಿಷಯ ಹೊಂದಿಕೆಯ ಪರಿಣಾಮಗಳೇ ಇಂದಿನ ಪತನಕ್ಕೆ ಕಾರಣಗಳೆನ್ನಬಹುದು. ಪತನಕಾರಕ ರೋಗಗಳಲ್ಲೆಲ್ಲ ದೇಹವೂ, ಮನಸ್ಸೂ ಒಟ್ಟೊಟ್ಟಿಗೇ ಇರುವ ಕಾರಣ ಶಾರೀರಕ ಹಾಗೂ ಮಾನಸಿಕ ಚಟುವಚಟಿಕೆಗಳನ್ನೂ ಒಟ್ಟೊಟ್ಟಿಗೆ ಲಕ್ಷಿಸಿಯೇ ನಾವು ಈ ರೋಗಗಳ ನಿವಾರಣೋಪಾಯಗಳನ್ನು ಹುಡಕಿ ತೆಗೆಯತಕ್ಕದ್ದು.

ಕೃಷಿಯೇತರ ಬೆಳೆಗೆ ಕೃಷಿ ಜಮೀನು ಬಳಕೆ ಮಾಡಿದಾಗ ಭೂಮಿಯ ಫಲವತ್ತತೆಗೆ ಶಾಶ್ವತ ಧಕ್ಕೆ ಉಂಟಾಗುವುದು. ಇದರ ಪರಿಣಾಮವಾಗಿ ಕೃಷಿ ಭೂಮಿಯಲ್ಲಿನ ಆಹಾರೋತ್ಪಾದನೆ ಅದರಲ್ಲೂ ಅಗತ್ಯ ಧಾನ್ಯ ಹಾಗೂ ದ್ವಿದಳ ಧಾನ್ಯ ಬೆಳೆ ಇಲ್ಲವಾಗುವುದು. ಸಮತೆಯಲ್ಲಿಯೂ ಏರುಪೇರಾಗುವುದು ಎರಡನೆ ಪ್ರಧಾನ ಪರಿಣಾಮ ವಾಣಿಜ್ಯ ಬೆಳೆಯ ಸಲುವಾಗಿ ಭೂ ಸುಧಾರಣೆ ಕಾಯ್ದೆಯನ್ನು ಸಡಿಲಿಸಲಾಗುವುದು. ವಾಣಿಜ್ಯ ಬೆಳೆಗಳು ಬಂಡವಾಳ ಬೇಡುವಂತಹವಾದ್ದರಿಂದ ಬಡ ರೈತರಿಗೆ ತೀವ್ರ ತೊಂದರೆ ಆಗುವುದು. ಸ್ಥಿತಿವಂತ ಭಾರೀ ಜಮೀನುದಾರರಿಗೆ ಇದು ಪರವಾದದ್ದು ವಿದೇಶಿ ಮಾರುಕಟ್ಟೆಯ ಸಂಪರ್ಕವಿರುವ ಭಾರಿ ರೈತರು ಶೀಘ್ರ ಲಾಭಗಳಿಸುವರು. ಅವುಗಳಿಗೆ ತೆರಿಗೆಯನ್ನು ನೀಡಬೇಕಾಗಿಲ್ಲ ! ಸಣ್ಣ ರೈತರು ನಿರ್ಗತಿಕರಾಗಿ ಜಮೀನು ಕಳೆದುಕೊಳ್ಳುವರು. ವಾಣಿಜ್ಯ ಬೆಳೆಯಲ್ಲದೆ ಇದು ಕೃಷಿ ಉತ್ಪಾದನೆ ತಗ್ಗಲು ಕಾರಣವಾಗುವುದು.

ಕೃಷಿ ಕ್ಷೇತ್ರಕ್ಕೀಗ ಮಾನವ ಚರಿತ್ರೆಯಲ್ಲೇ ಹಿಂದೆಂದೂ ಕಂಡರಿಯದ ಸಂಧಿಕಾಲ ಬಂದಿದೆ. ರೈತರನ್ನು ಗಾಢಭಿನ್ನತೆ ಆವರಿಸಿದೆ. ಬೆಳೆಗಳು ನೆಲ ಕಚ್ಚಿವೆ. ಮಣ್ಣಿನ ಫಲವತ್ತತೆ ಭರವಸೆಯೇ ಇಲ್ಲದಷ್ಟು ಕ್ಷೀಣಗೊಂಡಿದೆ. ಅಪಾರ ಶಕ್ತಿಶಾಲಿ ಪೀಡೆ ನಾಶಕಗಳು ಮುನ್ನುಗ್ಗುತ್ತಿದ್ದಾಗ್ಯೂ, ಪೀಡೆ ಮತ್ತು ರೋಗ ನಿಯಂತ್ರಣ ಮಾತ್ರ ಹತೋಟಿ ತಪ್ಪಿದೆ. ನೀರಾವರಿ ಅಧಿಕವಾದಂತೆ ಹಿಂದೆಂದಿಗಿಂತಲೂ ಹೆಚ್ಚು ಬರ ಕಲೆದೂರುತ್ತಿದೆ. ಬೀಜಗಳು ಸತ್ವ ಕಳೆದುಕೊಂಡು ನೀರಸವಾಗಿವೆ. ರಸಗೊಬ್ಬರ ಹೆಚ್ಚು ಕಮ್ಮಿ

ಸಂಪೂರ್ಣವಾಗಿ ಸಾವಯವ ಗೊಬ್ಬರ ನೆಲೆಯನ್ನು ನಾಶಪಡಿಸಿದೆ. ಏಕ ಬೆಳೆ ಮತ್ತು ಬೆಳೆ ಆವರ್ತ ಪದ್ಧತಿಗಳು ಮರೆಯಾಗಿವೆ. ಆಧುನಿಕ ಪೂರ್ವ ಕೃಷಿಯ ಭಂಡಾರಕ್ಕೆ ಜ್ಞಾನ ಸಂಪತ್ತು ತುಂಬಿದ ಸಣ್ಣ ಹಿಡುವಳಿ ಬೇಸಾಯ ಭೂತದ ಮಾತಾಗಿದೆ. ಕಂಪನಿಗಳ ದೈತ್ಯ ಬಾಹು ಕೃಷಿಯನ್ನು ಕಬಳಿಸಿ ಲಕ್ಷಾಂತರ ರೈತಾಪಿಯನ್ನು ಹೊರದಬ್ಬಿದೆ ಕೃಷಿ ತಬ್ಬಲಿಗಳಾಸಿದೆ.

ಪ್ರಾಚೀನ ಕೃಷಿಯಲ್ಲಿ ರೈತ ಮಣ್ಣು, ಮಳೆ, ಬೆಳೆಗಳನ್ನು ಯಥಾಸ್ಥಿತಿಯಲ್ಲಿ ಅಂಗೀಕರಿಸಿದ್ದು, ಲಭ್ಯವಿರುವ ಸೂರ್ಯನ ಬೆಳಕು, ತೇವಾಂಶ ಮುಂತಾದವುಗಳಿಗೆ ಅನುಸಾರವಾಗಿ ಬೇಸಾಯ ಮಾಡುತ್ತಿದ್ದನು. ಆದರೆ ವೈಜ್ಞಾನಿಕ ಕೃಷಿಯಲ್ಲಿ ಸಸ್ಯಗಳ ಬೆಳವಣಿಗೆಗೆ ಸಂಬಂಧಿಸಿದ ಎಲ್ಲ ಅಂಶಗಳ ಮೇಲೂ ರೈತ ಹತೋಟಿ ಹೊಂದಿರುತ್ತಾನೆ. ಬೆಳೆಗಳಿಗೆ ಹೆಚ್ಚುವರಿ ಗೊಬ್ಬರ, ಪೋಷಕಾಂಶಗಳನ್ನು ಕೊಟ್ಟು ಹದವರಿತು ನೀರಾವರಿ ಮಾಡಿ. ಅಗತ್ಯಕ್ಕೆ ತಕ್ಕಂತೆ ಬೆಳೆ ಪದ್ಧತಿಗಳನ್ನು ಅನುಸರಿಸಿ ರಾಸಾಯನಿಕ ಔಷಧಿಗಳನ್ನು ಸಿಂಪಡಿಸಿ ಸಸ್ಯಗಳನ್ನು ರೋಗ ಮತ್ತು ಕೀಟಗಳಿಂದ ರಕ್ಷಿಸುತ್ತಾನೆ. ಈ ಎಲ್ಲದರ ಫಲವಾಗಿ ರೈತ ವೈಜ್ಞಾನಿಕ ಕೃಷಿಯಲ್ಲಿ ಅಧಿಕ ಇಳುವರಿ ಪಡೆಯಲು ಶಕ್ತನಾಗುತ್ತಾನೆ.

ಆಧುನಿಕ ಕೃಷಿಯಲ್ಲಿ ರಾಸಾಯನಿಕ ವಸ್ತುಗಳ ಅಧಿಕವಾದ ಬಳಕೆಯಿಂದ ಮಣ್ಣಿನಲ್ಲಿ ಸೂಕ್ಷ್ಮ ಜೀವಿಗಳ ಚಟುವಟಿಕೆ ಕುಂಠಿತವಾಗಿ ಮಣ್ಣಿನ ಉತ್ಪಾದಕತೆಗೆ ಧಕ್ಕೆಯೊದಗಿತು. ಸಸ್ಯ ಸಂರಕ್ಷಣಾ ಔಷಧಿಗಳು ಹಾಗೂ ಕಳೆನಾಶಕಗಳ ವಿವೇಚನಾ ರಹಿತವಾದ ಬಳಕೆಯಿಂದ ಇಡಿ ಪರಿಸರವೇ ಕಲುಷಿತಗೊಳ್ಳುವುದು ಕಂಡು ಬಂದಿತು.

ಆಧುನಿಕ ಕೃಷಿಯಿಂದ ಉತ್ಪಾದನೆ ಹೆಚ್ಚಾಯಿತಾದರೂ ಇಂತಹ ಪ್ರೇರಕ ಕೃಷಿಗೆ ಕೆಲವು ಪಂಗಡಗಳಿಂದ ಪ್ರತಿರೋಧ ಕಂಡು ಬಂದಿತು. ಇವರ ಕೃಷಿ ಉತ್ಪಾದನೆಯನ್ನು ತ್ವರಿತವಾಗಿ ಹೆಚ್ಚಿಸಲು ಅನುಸರಿಸುವ ಆಧುನಿಕ ಕೃಷಿ ಪದ್ಧತಿಗಳನ್ನು ಸಂಶಯಾಸ್ಪದವಾಗಿ ನೋಡುತ್ತಾ ಟೀಕಿಸುತ್ತಲೇ ಬಂದರು. ಇದರಲ್ಲಿ ಮುಖ್ಯವಾಗಿ ಪರಿಸರವಾದಿಗಳಷ್ಟೇ ಅಲ್ಲದೆ ಕೃಷಿ ವಿಜ್ಞಾನಿಗಳೂ ಕಂಡು ಬರುತ್ತಾರೆ. ಜಪಾನಿನ ಹೆಸರಾಂತ ವಿಜ್ಞಾನಿ ಪುಕುವೋಕ ಹಾಗೂ ತತ್ವಜ್ಞಾನಿ ಮೊಕಚಿ ಬಕಾಡೋ ಇವರಲ್ಲಿ ಪ್ರಮುಖರು. ಇವರು ತತಕ್ಷಣ ಲಾಭದಾಯಕವೆಂದು ಕಂಡುಬರುವ ಆಧುನಿಕ ಕೃಷಿಯ ಬದಲು ದೀರ್ಘಕಾಲ ಸುಸ್ಥಿರವಾಗಿ ಉಳಿಯಬಲ್ಲ ಪರಿಸರ ಸ್ನೇಹಿ ನೈಸರ್ಗಿಕ ಕೃಷಿ ಅಥವಾ ಸಾವಯವ ಕೃಷಿಗೆ ಹೆಚ್ಚು ಒತ್ತುಕೊಟ್ಟರು. ಅಲ್ಲದೆ ಸಾವಯವ ಕೃಷಿ ಬಗ್ಗೆ ಒಂದು ಆಂದೋಲನವನ್ನು ಹುಟ್ಟು ಹಾಕಿದನು. ಇವನು ೧೯೭೨ರಲ್ಲಿ ಸಾವಯವ ಕೃಷಿಗೆ ಹೆಚ್ಚಿನ ಉತ್ತೇಜನ ಕೊಡುವುದಕ್ಕಾಗಿಯೇ ಎಂ.ಓ.ಯು ಎಂಬ ಅಂತರಾಷ್ಟ್ರೀಯ ಸಂಸ್ಥೆಯನ್ನು ಪ್ರಾರಂಭಿಸಿದನು.

ಇತ್ತೀಚಿನ ದಿನಗಳಲ್ಲಿ ಜಗತ್ತಿನಾದ್ಯಂತ ಸಾವಯವ ಕೃಷಿ ಬಗ್ಗೆ ಜನ ಜಾಗೃತಿ ಮೂಡುತ್ತಿದೆ. ಇದಕ್ಕೆ ಹಲವು ಹೆಸರುಗಳಿದ್ದರೂ ಸಹ ನಾಮ ಹಲವು ಸತ್ಯವೊಂದೇ ಎನ್ನುವಂತೆ ಎಲ್ಲವೂ ಒಂದೇ ವಿಷಯಕ್ಕೆ ಅನ್ವಯಿಸುತ್ತವೆ. ಇಲ್ಲಿ ರಸಾಯನಿಕ ವಸ್ತುಗಳಿಗಿಂತ ಹೆಚ್ಚಾಗಿ ಸಾವಯವ ಗೊಬ್ಬರ ಸಸ್ಯಮೂಲ ವಸ್ತುಗಳಿಗೆ ಅಗ್ರಸ್ಥಾನ.

ರಸಾಯನಿಕ ಗೊಬ್ಬರ, ಕಳೆನಾಶಕ, ಕೀಟನಾಶಕ ಹಾಗೂ ರೋಗನಾಶಕಗಳನ್ನು ಬಳಸದೆ ಪ್ರಕೃತಿಯಲ್ಲಿ ಸಹಜವಾಗಿ ದೊರೆಯುವ ಸಸ್ಯಜನ್ಯ ಹಾಗೂ ಪ್ರಾಣಿ ಜನ್ಯ ಪದಾರ್ಥಗಳನ್ನು ಬಳಸಿ ದೈವದತ್ತವಾದ ನಿಸರ್ಗದ

ಸಂಪನ್ಮೂಲವಾದ ಮಣ್ಣನ್ನು ಜೀವಂತವಾಗಿರಿಸಿಕೊಂಡು ಮಣ್ಣಿನ ಆರೋಗ್ಯ ಮತ್ತು ಫಲವತ್ತತೆಯನ್ನು ಕಾಪಾಡಿಕೊಂಡು ಬೆಳೆಗಳನ್ನು ಬೆಳೆಯುವ ಕ್ರಮವೇ ಸಾವಯವ ಕೃಷಿ.

ನಮ್ಮ ದೇಶದಲ್ಲಿ ರಸಾಯನಿಕ ಗೊಬ್ಬರಗಳು ಮತ್ತು ಕೀಟನಾಶಕಗಳ ಬಳಕೆ ಜಾರಿಗೆ ಬಂದದ್ದು ೨೦ನೇ ಶತಮಾನದ ಕೊನೆಯ ಭಾಗದಲ್ಲಷ್ಟೆ. ಉತ್ಪಾದನೆಯನ್ನು ಹೆಚ್ಚಿಸುವ ಉದ್ದೇಶದಿಂದ ರಾಸಾಯನಿಕ ಗೊಬ್ಬರಗಳು ಮತ್ತು ಔಷಧಗಳ ಬಳಕೆ ಅಧಿಕವಾಯಿತು. ನೀರಾವರಿ ಪ್ರದೇಶಗಳಲ್ಲಿ ನೀರು ಬಸಿಯದಿರುವಿಕೆ ಹಾಗೂ ಭೂಮಿ ಚೌಳಾಗುವ ಸಮಸ್ಯೆ ತಲೆದೋರಿದವು. ಒಂದು ಕಾಲದಲ್ಲಿ ಹೆಚ್ಚು ಧಾನ್ಯಗಳನ್ನು ಬೆಳೆಯುತ್ತಿದ್ದ ಜಮೀನು ಕಾಲಕ್ರಮೇಣ ಬೇಸಾಯಕ್ಕೆ ಸಮಸ್ಯೆಗಳನ್ನು ತಂದೊಡ್ಡಲಾರಂಭಿಸಿತು. ಜೊತೆಗೆ ಹಿಂದೆಂದೂ ಕಾಣದ ಕೀಟ ಮತ್ತು ರೋಗಗಳ ಸಮಸ್ಯೆ ಈ ಪ್ರದೇಶಗಳಲ್ಲಿ ಉಲ್ಬಣವಾಗಿ ತಲೆಯೆತ್ತಿ ನಿಂತವು. ಅವುಗಳ ಹತೋಟಿಗಾಗಿ ರಾಸಾಯನಿಕ ಔಷಧಿಗಳ ಬಳಕೆ ಹೆಚ್ಚಾಯಿತು. ಈ ಸಮಸ್ಯೆಗಳ ಪರಿಹಾರಕ್ಕಾಗಿ ನಿಸರ್ಗ ಆಧಾರಿತ ಸಹಜ ಕೃಷಿಯೊಂದೇ ಪರಿಹಾರ ಎಂದು ಗೊತ್ತುಪಡಿಸಿಕೊಳ್ಳಲಾಯಿತು. ಇದು ಮುಖ್ಯವಾಗಿ ಭೂಮಿಯ ಫಲವತ್ತತೆಯನ್ನು ಹೆಚ್ಚಿಸುವುದರ ಜೊತೆಗೆ ಫಲವತ್ತತೆ ಮತ್ತು ಇಳುವರಿಯನ್ನು ಸತತವಾಗಿ ಒಂದು ಮಟ್ಟದಲ್ಲಿ ಕಾಪಾಡಿಕೊಂಡು ಹೋಗುವ ಪದ್ಧತಿ ಆಧುನಿಕ ಕೃಷಿಯಿಂದ ಬರಬಹುದಾದ ಇಳುವರಿ ಮಟ್ಟ ಇದರಲ್ಲೂ ಬರುವಂತೆ ಮಾಡುವುದರ ಜೊತೆಗೆ ಭೂಮಿ ಕಲುಷಿತಗೊಳ್ಳದಂತೆ ನೋಡಿಕೊಳ್ಳುವ ವಿಧಾನ.

ಸಹಜ ಕೃಷಿಯು ಹಲವಾರು ವೈಜ್ಞಾನಿಕ ತಳಹದಿಗಳನ್ನು ಆಧರಿಸಿದೆ. ಮಣ್ಣಿನ ಫಲವತ್ತತೆಯನ್ನು ಕಾಪಾಡಿಕೊಂಡು ಸತತವಾಗಿ ಅಧಿಕ ಇಳುವರಿ ತೆಗೆಯುವುದೇ ಈ ಕೃಷಿಯ ಮುಖ್ಯ ಉದ್ದೇಶವಾಗಿದೆ. ಇದಕ್ಕಾಗಿ ರೈತ ಮಣ್ಣು, ನೀರು, ಬೀಜ ಮತ್ತು ಗೊಬ್ಬರಗಳೆಂಬ ನಾಲ್ಕು ಸಂಪನ್ಮೂಲಗಳನ್ನು ಯಶಸ್ವಿಯಾಗಿ ಬಳಸಿಕೊಂಡು ಬೆಳೆಯನ್ನು ಸಂರಕ್ಷಿಸಬೇಕು.

ನೈಸರ್ಗಿಕ ಕೃಷಿ ಅಥವಾ ಸ್ವಾಭಾವಿಕ ಕೃಷಿ ನಿಸರ್ಗಕ್ಕೆ ಹತ್ತಿರವಾಗಿದ್ದು ಬೇಸಾಯ ಕ್ರಮಗಳೇ ಇಲ್ಲದಿರುವುದನ್ನು ಸೂಚಿಸುತ್ತದೆ. ಬೆಳೆಯುವ ಪೈರನ್ನು ನಿಸರ್ಗದ ಆಸರೆಗೆ ಬಿಟ್ಟರೆ ಅದು ತನ್ನನ್ನು ತಾನೇ ಪೋಷಿಸಿಕೊಳ್ಳುತ್ತದೆ. ಆದರೆ ವ್ಯವಸ್ಥಿತವಾದ ಕೃಷಿಯಲ್ಲಿ ರೈತ ಮಧ್ಯ ಪ್ರವೇಶಿಸಿ ಭೂಮಿಯನ್ನು ಉತ್ತಿ ಬಿತ್ತಿ ತನಗೆ ಲಭ್ಯವಿರುವ ಸಂಪನ್ಮೂಲಗಳನ್ನು ಬಳಸಿ, ಸಸ್ಯಗಳ ಸ್ವಾಭಾವಿಕ ವಾತಾವರಣವನ್ನು ಏರುಪೇರು ಮಾಡುತ್ತಾನೆ. ಈ ಕಾರಣಗಳಿಂದಾಗಿ ನಿಸರ್ಗದ ಸಂಪನ್ಮೂಲಗಳಾದ ನೆಲ, ಜಲ, ಅವನತಿ ಹೊಂದುತ್ತವೆ. ಇಂತಹ ಅವನತಿಯನ್ನು ತಪ್ಪಿಸಲು ಸಹಜ ಕೃಷಿ ನಿಸರ್ಗದತ್ತವಾಗಿ ಮಾಡುವುದು ಅಗತ್ಯವಾಗಿದೆ. ಆದ್ದರಿಂದ ಮುಖ್ಯವಾಗಿ ಕೆಲವು ಅಂಶಗಳು ಕೃಷಿಯಲ್ಲಿ ಕೈಗೊಳ್ಳಲೇಬೇಕಾಗಿದೆ. ಅವುಗಳೆಂದರೆ,

೧. ಜಮೀನನ್ನು ಉಳುಮೆ ಮಾಡದೆ ಹಾಗೆಯೇ ಬಿಡುವುದು. ಭೂಮಿಯಲ್ಲಿರುವ ಸೂಕ್ಷ್ಮ ಜೀವಿಗಳು ಹಾಗೂ ಎರೆಹುಳು ಮುಂತಾದ ಜೀವ ಜಂತುಗಳ ಸಹಾಯದಿಂದ ಮಣ್ಣಿನಲ್ಲಿ ಸ್ವಾಭಾವಿಕ ಉಳುಮೆ ನಡೆಯುತ್ತದೆ. ನೇಗಿಲು ಟ್ರ್ಯಾಕ್ಟರ್ ಮುಂತಾದ ಸಾಧನಗಳಿಂದ ಮಣ್ಣನ್ನು ತಿರುವಿ ಹಾಕುವುದರಿಂದ ಹೆಚ್ಚಿನ ಪ್ರಯೋಜನವೇನೂ ದೊರೆಯುವುದಿಲ್ಲ.

೨. ರಾಸಾನಿಯಕ ಗೊಬ್ಬರ ಅಥವಾ ಕಾಂಪೋಸ್ಟ್ ಅನ್ನು ಬಳಕೆ ಮಾಡದೆ ಇರುವುದು. ಭೂಮಿಯನ್ನು ತನ್ನಷ್ಟಕ್ಕೆ ತಾನೇ ಬಿಟ್ಟರೆ ಅದು ಸ್ವಾಭಾವಿಕವಾಗಿ ಅರಣ್ಯಗಳಲ್ಲಿರುವಂತೆ ತನ್ನ ಫಲವತ್ತತೆಯನ್ನು ತಾನೆ ರಕ್ಷಿಸಿಕೊಳ್ಳುತ್ತದೆ.

೩. ಕಳೆಗಳ ಹತೋಟಿಗೆ ರಾಸಾಯನಿಕ ಕಳೆನಾಶಕಗಳನ್ನು ಬಳಸದೇ ಇರುವುದು ಬೆಳೆಯುವ ಪೈರೇ ಇತರ ಕಳೆಗಿಡಗಳನ್ನು ಹತೋಟಿಯಲ್ಲಿಡುತ್ತದೆಂದು ಇಲ್ಲಿ ನಂಬಲಾಗುತ್ತದೆ.

೪. ರೋಗ ಮತ್ತು ಕೀಟಗಳ ಹತೋಟಿಗೆ ಯಾವುದೇ ರಾಸಾಯನಿಕ ಪದಾರ್ಥಗಳನ್ನು ಬಳಸದೇ ಇರುವುದು.

ಸಾವಯವ ಕೃಷಿಯಲ್ಲಿ ಯಾವುದೇ ರೀತಿಯ ನಿರೀಂದ್ರಿಯ ರಸಾಯನಿಕಗಳನ್ನು ಬಳಸುವಂತಿಲ್ಲ. ಬೆಳೆಗಳಿಗೆ ಕೇವಲ ನೈಸರ್ಗಿಕವಾಗಿ ದೊರೆಯುವ ಪೋಷಕಾಂಶಗಳನ್ನು ಒದಗಿಸುವುದು ಅಥವಾ ಕೀಟ ಹಾಗೂ ರೋಗಗಳ ಹತೋಟಿ ಎಲ್ಲವೂ ನೈಸರ್ಗಿಕವಾಗಿ ದೊರೆಯುವ ಪದಾರ್ಥಗಳಿಂದಲೇ ಆಗಬೇಕು. ಕೊಟ್ಟಿಗೆ ಗೊಬ್ಬರ, ಹಸುರೆಲೆ ಗೊಬ್ಬರ ಮತ್ತು ಕಾಂಪೊಸ್ಟ್‌ಗಳಿಗೆ ಆದ್ಯತೆ ಪ್ರಕೃತಿಯ ವ್ಯವಸ್ಥೆಯೊಂದಿಗೆ ಹೊಂದಿ ನಡೆಯುವಂತಹ ಪಿಡುಗು ನಾಶಕಗಳ ಬಳಕೆಗೆ ಇಲ್ಲಿ ಹೆಚ್ಚಿನ ಮಹತ್ವ.

ಕಳೆದುಕೊಂಡಿರುವ ಮಣ್ಣಿನ ಸಾರವನ್ನು ಮತ್ತೆ ಪಡೆಯಲು ಇವು ಅಗತ್ಯದ ಕ್ರಮಗಳು. ಉದಾಹರಣೆಗೆ: "ಸಗಣಿ ಸಾವಯವ ಗೊಬ್ಬರದ ಮುಖ್ಯ ಘಟಕ ನಮ್ಮ ದೇಶದಲ್ಲಿ ಉತ್ಪತ್ತಿಯಾಗುವ ಎಲ್ಲ ಸಗಣಿಯನ್ನೂ ನಾವು ಗೊಬ್ಬರವಾಗಿ ಬಳಸಿದ್ದೇಯಾದರೆ ೯೦ ಲಕ್ಷ ಟನ್ನಗಳಷ್ಟು ಸಾರಜನಕ ೪೦ ಲಕ್ಷ ಟನ್ನಗಳಷ್ಟು ರಂಜಕ ಮತ್ತು ೬೦ ಲಕ್ಷ ಟನ್ನಗಳಷ್ಟು ಪೊಟಾಷ್ ದೊರೆಯುತ್ತದೆ. ಸಗಣಿಯನ್ನು ನೇರವಾಗಿ ಗೊಬ್ಬರವಾಗಿ ಬಳಸಿದರೆ ಶೇಕಡಾ ೦.೭೫ರಷ್ಟು ಸಾರಜನಕ ಮಾತ್ರ ಭೂಮಿಗೆ ದೊರೆಯುತ್ತದೆಂದು" ಲೇಖಕರಾದ ಎಚ್.ಆರ್.ಕೃಷ್ಣಮೂರ್ತಿಯರು ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.[೬೪] ಸಗಣಿ ಉತ್ತಮವಾಗಿ ಮಣ್ಣಿನೊಂದಿಗೆ ಬೆರೆಯುವುದಿಲ್ಲ. ಆದರೆ ಇದೇ ಸಗಣಿಯನ್ನು ಜೈವಿಕ ಅನಿಲ ಸ್ಥಾವರದಲ್ಲಿ ಬಳಸಿದ ನಂತರ ಗೊಬ್ಬರವಾಗಿ ಉಪಯೋಗಿಸಬಹುದು. ಆಗ ಮಣ್ಣಿಗೆ ದೊರೆಯುವ ಸಾರಜನಕದ ಪ್ರಮಾಣ ಶೇಕಡಾ ೩ರಷ್ಟಾಗುತ್ತದೆ. ಮಣ್ಣಿನೊಡನೆ ಉತ್ತಮವಾಗಿ ಬೆರೆಯುತ್ತದೆ. ಈ ರೀತಿಯ ಬಳಕೆಯಿಂದ ಇಂಧನವೂ ದೊರೆಯುತ್ತದೆ. ಹೀಗೆ ಒಂದು ವಸ್ತುವಿನಿಂದ ಇಂಧನ ಮತ್ತು ಗೊಬ್ಬರಗಳೆರಡನ್ನೂ ಪಡೆಯುವುದು ಜಾಣತನ ಪ್ರಕೃತಿಯ ಸೀಮಿತ ಸಂಪತ್ತನ್ನು ಬಳಸಿಕೊಳ್ಳುವುದರಲ್ಲಿ ಈ ರೀತಿಯ ಜಾಣ್ಮೆ ಇಂದು ಬಹು ಅವಶ್ಯಕ.

ಸಾವಯವ ಕೃಷಿಯಲ್ಲಿ ಎರೆ ಹುಳುಗಳಿಗೂ ಮುಖ್ಯ ಪಾತ್ರವುಂಟು. ಮಣ್ಣು ಕಸ ಕಡ್ಡಿಗಳನ್ನು ತಿನ್ನುವ ಎರೆಹುಳುಗಳು ಸಾವಯವ ಪದಾರ್ಥಗಳನ್ನು ಜೀರ್ಣಿಸಿ ಉಳಿದವನ್ನು ವಿಸರ್ಜಿಸುತ್ತವೆ. ಹೀಗೆ ಹೊರ ಬರುವ 'ಎರೆಗೊಬ್ಬರ' ಅತಿ ಉತ್ಕೃಷ್ಟವಾದ ಪೋಷಕಾಂಶಗಳ ಆಗರ. ಎರೆ ಹುಳುಗಳಿಂದ ಮಣ್ಣು ಅಳಕವಾಗುತ್ತದೆ. ಸಸ್ಯಗಳು ಬೇರು ಬಿಡುವುದಕ್ಕೆ ಗಾಳಿ ನೀರು ಸುಗಮವಾಗಿ ಹರಿದಾಡುವುದಕ್ಕೆ ಅನುಕೂಲವಾಗುತ್ತದೆ. ಎರೆಹುಳು ಮೇಲೆತ್ತುವ ಮಣ್ಣಿನಲ್ಲಿ ಖನಿಜಾಂಶಗಳಿರುವುದರಿಂದ ನೆಲ ಅತ್ಯಂತ ಫಲವತ್ತಾಗುತ್ತದೆ. ಈ ಎರೆಗೊಬ್ಬರದಲ್ಲಿ

---

೬೪(ಅಡಿಟಿಪ್ಪಣಿ:೬೪: ಪರಿಸರ ವಿಜ್ಞಾನ ಎಚ್.ಆರ್. ಕೃಷ್ಣಮೂರ್ತಿ ಪುಟ ಸಂಖ್ಯೆ ೬೪)

ಹೊರಗಿರುವ ಮಣ್ಣಿಗಿಂತ ಎರಡರಷ್ಟು ಸಾರಜನಕ ಏಳಪಟ್ಟು ಹೆಚ್ಚು ರಂಜಕ, ಹನ್ನೊಂದು ಪಟ್ಟ ಪೊಟ್ಯಾಷಗಳಿರುವುದು ಕಂಡು ಬಂದಿದೆ. ಇವುಗಳ ಜೊತೆಗೆ ಎರೆಹುಳು ರೋಗಕಾರಕ ಜೀವಿಗಳನ್ನು ಕೊಲ್ಲುತ್ತವೆ. ಗಿಡಗಳ ಬೆಳವಣಿಗೆಗೆ ಅಗತ್ಯವಾದ ಬೋಧಕ ಒದಗಿಸುತ್ತವೆ. ರೋಗ ನಿರೋಧಕ ಸಾಮರ್ಥ್ಯ ಹೆಚ್ಚಿಸುತ್ತವೆ.

ಎರೆಹುಳು ಬದುಕಿರೋ ಸಸ್ಯದ ತಂಟೆಗೆ ಹೋಗುವುದಿಲ್ಲ. ಗೆದ್ದಲು ಕೂಡಾ ಅಷ್ಟೇ ಹುಳಕ್ಕೆ ನ್ಯಾಯ ಅನ್ಯಾಯಗೊತ್ತಿದೆ. ನೀರು ಕೊಟ್ಟರೂ ಇನ್ನು ಬದುಕುವುದಿಲ್ಲನ್ನೋ ಗಿಡಕ್ಕೆ ಮಾತ್ರ ಗೆದ್ದಲು ಹಿಡಿಯುತ್ತೆ. ಮನುಷ್ಯನಿಗೆ ನ್ಯಾಯದ ಪ್ರಜ್ಞೆ ಇಲ್ಲವೇ ಹೊರತು ಪ್ರಾಣಿಗಳಿಗೆ ನ್ಯಾಯದ ಪ್ರಜ್ಞೆ ಜಾಸ್ತಿ ಇದೆ. ಎರೆಹುಳುಗಳು ಭೂಮೀನ ಹೇಗೆ ಫಲವತ್ತು ಮಾಡುತ್ತವೋ ಹಾಗೆ ಗೆದ್ದಲು ಒಣಗಿದ್ದನ್ನು ತಿಂದು ಬೇಗ ಕಾಂಪೋಸ್ಟ್ ಮಾಡಿ ಹೋಗ್ತವೆ. ಮನೆಯಲ್ಲಾದರೆ ಬಟ್ಟೆ ಪುಸ್ತಕ ತಿನ್ನಬಹುದು. ಆದರೆ ತೋಟದಲ್ಲಿ ಅದು ಕೆಡಕು ಮಾಡುವುದಿಲ್ಲ. ಕೀಟ ಬಾಧೆಗಳನ್ನು ನಾಶಪಡಿಸಲು ಕೃಷಿಯು ಮನುಷ್ಯನ ಅತ್ಯಂತ ಪ್ರಾಚೀನ ವೃತ್ತಿ. ಅದರಂತೆ ಕೀಟನಾಶಕವು ಅಷ್ಟೇ ಹಳೆಯದಾಗಿರುವುದು ಇದಕ್ಕಾಗಿ ರೈತರು ಸ್ಥಳೀಯವ್ಯಾದ ಪರಿಹಾರ ಕಂಡು ಕೊಳ್ಳುತ್ತಿದ್ದರು. ಹತ್ತಿಯ ಗಿಡದ ರೆಂಬೆಕೊಂಬೆಗಳಿಗೆ ಜಿಡ್ಡನ್ನು ಸವರುತ್ತಾರೆ. ಇದರಿಂದ ಹತ್ತಿಗೆ ತಗಲುವ ಬಿಳಿನೋಣದ ಪ್ರಮಾಣ ಎದ್ದು ಕಾಣವುದನ್ನು ಕಡಿಮೆ ಮಾಡುತ್ತದೆ. ತೆಂಗಿನ ಮರಕ್ಕೆ ಬಿಳಿ ನೊಣದ ಹಾವಳಿ ತಪ್ಪಿಸಲು ಮರದ ಕಾಂಡದಲ್ಲಿರವ ರಂಧ್ರ, ಸೀಳು, ಪೊಳ್ಳು ಭಾಗದಲ್ಲಿ ತಿಳಿಯಾದ ಬೆಲ್ಲದ ನೀರನ್ನು ಹಾಕುತ್ತಾರೆ. ತೀವ್ರ ಸ್ವರೂಪದ ಗೆದ್ದಲಿನ ಹರಿವಳಿಗೆ ಒಳಗಾಗಿರುವ ನೆಲದಲ್ಲಿ ಒಂದು ವರ್ಷ ಹರಳಿನ ಗಿಡಗಳನ್ನು ಮುಂದಿನ ವರ್ಷ ಇಡಿ ಜಮೀನು ಈ ತೊಂದರೆಯಿಂದ ಮುಕ್ತವಾಗಿರುವುದು. ಮಾರುಕಟ್ಟೆಯಲ್ಲಿ ಯಾವ ಶ್ರಮ ಇಲ್ಲದೆ ಬಳಸಬಹುದಾದ ಪಿಡುಗು ನಾಶಕಗಳು ದೊರೆಯಲು ಪ್ರಾರಂಭವಾದಾಗ ಈ ಸ್ಥಳೀಯ ತಂತ್ರಗಳು ಮೂಲೆಗುಂಪಾದವು. ಆದರೆ ಈಗ ಮತ್ತೊಮ್ಮೆ ಗಮನಹರಿಸಲಾಗಿದೆ.

ಕೃಷಿ ಮಾನವನ ಬದುಕಿನೊಂದಿಗೇ ಬೆಳೆದು ಬಂದಿರುವ ಒಂದು ಜೀವನ ವೃತ್ತಿ. ರೈತರ ಬದುಕಿನ ನೆಲೆ ನಮ್ಮ ಪೂರ್ವಿಕರು ಸಾಕಷ್ಟು ಪ್ರಾಧಾನ್ಯತೆ ಕೊಟ್ಟು ಬೆಳೆಸಿದ ಈ ವೃತ್ತಿ ಇತ್ತೀಚಿನ ದಿನಗಳಲ್ಲಿ ಹೆಚ್ಚಿನ ಬದಲಾವಣೆ ಕಂಡಿದೆ. ಕೃಷಿ ಇಂದು ಕೇವಲ ಜೀವನಾಧಾರವೆಂದು ಪರಿಗಣಿಸಲ್ಪಡದೆ ಒಂದು ಲಾಭದಾಯಕ ಉದ್ದಿಮೆಯಾಗಿ ಬೆಳೆಯುತ್ತಿದೆ. ಈ ಎಲ್ಲ ಬದಲಾವಣೆಗಳಿಗೆ ಮುಖ್ಯ ಕಾರಣ ೧೯ನೇ ಶತಮಾನದಲ್ಲಿ ಕೃಷಿ ವಿಜ್ಞಾನದಲ್ಲಾದ ಮಹತ್ತರವಾದ ಆವಿಷ್ಕಾರಗಳು ಮಾನವನ ಧೋರಣೆ ಮತ್ತು ವೈಜ್ಞಾನಿಕ ಮನೋಭಾವ.

ಹಳೆಯ ಪದ್ಧತಿಗಳು ಬೇಸಾಯದ ವೃತ್ತಿಗೆ ಬೇರುಗಳಿದ್ದಂತೆ ಕೃಷಿಯಲ್ಲಿ ಏನೇ ಬದಲಾವಣೆಗಳಾಗಿದ್ದರೂ ಅದರ ಮೂಲ ಉದ್ದೇಶ ಮತ್ತು ಧ್ಯೇಯ ಜನರಿಗೆ ಸಾಕಷ್ಟು ಆಹಾರ ಒದಗಿಸುವುದು. ಬಟ್ಟೆ ಬರೆ, ವಸತಿ ಮುಂತಾದ ಮೂಲಭೂತ ಸೌಲಭ್ಯಗಳನ್ನು ನಿರ್ಮಾಣ ಮಾಡುವುದು. ವ್ಯವಸಾಯ ಪಾರಂಪರಿಕವಾಗಿ ಬೆಳೆದು ಬಂದ ಒಂದು ವೃತ್ತಿಯಾಗಿದೆ. ಇದರ ಬೇರುಗಳು ಆಳವಾಗಿ, ವಿಸ್ತಾರವಾಗಿ, ನೆಲೆಯಾಗಿ ನಿಂತಿವೆ. ವ್ಯವಸಾಯದಲ್ಲಿ ಬಿತ್ತನೆಯಿಂದ ಹಿಡಿದು ಕಟಾವಿನವರೆಗೆ ರೈತರೆಲ್ಲರೂ ಅನುಸರಿಸುವ ಕೆಲವು ದೇಶಿಯವಾದ ಪದ್ಧತಿಗಳು ಯಾವ ಬದಲಾವಣೆಯನ್ನೂ ಹೊಂದದೆ ಗಟ್ಟಿಯಾಗಿ ನಿಂತಿವೆ. ಈ ಪದ್ಧತಿಗಳು ರೈತರ ಅನುಭವಗಳ ಆಧಾರದ ಮೇಲೆ ಮೂಡಿಬಂದು ವಿಕಾಸವಾಗಿ

ಉಳಿದುಕೊಂಡು ಬಂದಿವೆ. ಗ್ರಾಮೀಣ ಪ್ರದೇಶಗಳಲ್ಲಿ ಬಹು ಸಂಖ್ಯಾತ ರೈತರು ಅನುಸರಿಸುವ ಬೇಸಾಯದಲ್ಲಿ ಬೆಳೆ, ಬಿತ್ತನೆ, ಪದ್ಧತಿ, ಸಾವಯವ ಗೊಬ್ಬರಗಳ ಬಳಕೆ ರೋಗರುಜಿನಗಳ ಹತೋಟಿ ಮುಂತಾದ ಹಲವು ವಿಷಯಗಳು ಸೇರಿವೆ. ಇವುಗಳು ಹಳೆಯ ಬೇರುಗಳೋಪಾದಿಯಲ್ಲಿ ಕೃಷಿ ಲೋಕದಲ್ಲೆಲ್ಲ ಹರಡಿ ಬೆಳೆದು ನಿಂತಿವೆ. ಇಂತಹ ಹಲವು ಪದ್ಧತಿಗಳನ್ನು ಪ್ರಕೃತಿದತ್ತವಾದ ಕೃಷಿಯಡಿಯಲ್ಲಿ ಸಾವಯವ ಕೃಷಿ, ಸಹಜಕೃಷಿ, ನೈಸರ್ಗಿಕ ಕೃಷಿ, ಸಮತೋಲನ ಕೃಷಿ ಎಂಬ ಹೆಸರಿನಿಂದ ಕರೆಯಲಾಗುವುದು.

ಬೆಳೆ ಉತ್ಪಾದನೆ ಹೆಚ್ಚಿಸಲು ರೈತ ಸಾವಯವ ಗೊಬ್ಬರಗಳ ಜೊತೆಗೆ ಅಧಿಕ ಪೌಷ್ಟಿಕಾಂಶಗಳುಳ್ಳ ರಾಸಾಯನಿಕ ಗೊಬ್ಬರಗಳನ್ನು ಬಳಸಲು ಪ್ರಾರಂಭಿಸಿದನು. ಕೀಟರೋಗಗಳ ಹತೋಟಿಗೆ ಪ್ರಭಾವಶಾಲಿಯಾದ ಪೀಡೆನಾಶಕಗಳನ್ನು ಬಳಸಿ ಉತ್ಪಾದನೆಯನ್ನು ಹೆಚ್ಚಿಸಲಾಯಿತು.

ಆದರೆ ವೈಜ್ಞಾನಿಕ ಕೃಷಿ ಅನುಕೂಲಗಳನ್ನಷ್ಟೇ ಮಾಡದೆ ಅನಾನುಕೂಲಗಳನ್ನು ಸಹ ಉಂಟುಮಾಡಿತು. ರಾಸಾಯನಿಕ ಗೊಬ್ಬರಗಳ ಬಳಕೆ ಪ್ರಕೃತಿಯ ಸಮತೋಲನವನ್ನು ಕೆಡಿಸಿ ಹೊಸ ಸಮಸ್ಯೆಗಳ ಸೃಷ್ಟಿಗೆ ಕಾರಣವಾಯಿತು. ಭೂಮಿಯ ಫಲವತ್ತತೆ ಕುಗ್ಗಲಾರಂಭಿಸಿತು. ಮಣ್ಣಿನಲ್ಲಿ ಸೂಕ್ಷ್ಮ ಜೀವಿಗಳ ಸಂಖ್ಯೆ ಕಡಿಮೆಯಾಗಿ ಮಣ್ಣು ಬರಡಾಗಲಾರಂಭಿಸಿತು. ಸತತವಾದ ಪೀಡೆನಾಶಕಗಳ ಬಳಕೆಯಿಂದ ಹೊಸ ಸಮಸ್ಯೆಗಳು ಉದ್ಭವಿಸಿದವು. ಕೀಟಗಳು ಔಷಧಿಗಳಿಗೆ ನಿರೋಧಕ ಸಾಮರ್ಥ್ಯವನ್ನು ಬೆಳೆಸಿಕೊಂಡು ನಿಯಂತ್ರಣ ತಪ್ಪಿ ವೃದ್ಧಿಯಾದವು. ಹೊಸರೋಗ ರುಜಿನಗಳು ಕಾಣಿಸಿಕೊಂಡವು. ಈ ಎಲ್ಲ ಸಮಸ್ಯೆಗಳು ವೈಜ್ಞಾನಿಕ ಕೃಷಿಯ ತತ್ಫಲವೆಂದು ಮನಗಾಣಲಾಯಿತು.

ಅನಂತರದ ವರ್ಷಗಳಲ್ಲಿ ಇಂತಹ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ಉದ್ದೇಶದಿಂದ ಕೃಷಿ ವಿಜ್ಞಾನಿಗಳು, ಪ್ರಗತಿಪರ ರೈತರು ಜೊತೆಯಾಗಿ ಚಿಂತನೆ, ಚರ್ಚೆಗಳಲ್ಲಿ ತೊಡಗಿದರು. ಇದರ ಪರಿಣಾಮವೇ ವೈಜ್ಞಾನಿಕ ಬುನಾದಿಯುಳ್ಳ ಹಳೆಯ ಕೃಷಿ ಪದ್ಧತಿಗಳೊಂದಿಗೆ ಅಪಾಯಕಾರಿಯಲ್ಲದ ಅಥವಾ ಹೆಚ್ಚು ಸುರಕ್ಷಿತವಾದ ಆಧುನಿಕ ಪದ್ಧತಿಗಳನ್ನು ಒಟ್ಟುಗೂಡಿಸಿ ಸಾವಯವ ಕೃಷಿಯನ್ನು ಅನುಸರಿಸಲಾಗುತ್ತಿದೆ.

ಹಸಿರು ಕ್ರಾಂತಿಯಿಂದ ಸಂಭವಿಸಿದ ಪ್ರತಿಕೂಲ ಪರಿಣಾಮಗಳಿಂದಾಗಿ ಇಂದು ರೈತ ಒಂದು ಸಂದಿಗ್ಧ ಸನ್ನಿವೇಶದಲ್ಲಿ ಸಿಕ್ಕಿಕೊಂಡಿದ್ದಾನೆ. ಕೈ ತುಂಬಾ ಲಾಭಗಳಿಸಿ ಯಶಸ್ಸಿನ ತುದಿಗೇರಿದವನ್ನು ಒಮ್ಮೆಲೆ ಪ್ರಪಾತಕ್ಕೆ ತಳ್ಳಿದಂತಹ ಅನಿರಿಕ್ಷಿತ ಘಟನೆ ಅವನನ್ನು ಕಳವಳಕ್ಕಿಡು ಮಾಡಿದೆ. ರಾಸಾಯನಿಕಗಳ ತೀವ್ರ ಬಳಕೆಯಲ್ಲಿ ಮುಂದೆ ಹೋದವನನ್ನು ಮತ್ತೆ ಹಿಂದಿನ ಪದ್ಧತಿಗಳಿಗೆ ಮರಳಿಸುವುದು ಪ್ರಗತಿಪರ ಚಾಲನೆಯಲ್ಲಿ ಆಘಾತಕರವಾಗಿದೆ. ರೈತರನ್ನು ಮಾನಸಿಕವಾಗಿ ಇದಕ್ಕೆ ತಕ್ಕಂತೆ ಸಿದ್ಧತೆ ಮಾಡಬೇಕಾಗಿದೆ. ದೇಶಿಯ ಪದ್ಧತಿಗಳಿಗೆ ಮರಳಿ ಮೊರೆ ಹೋಗುವುದು ಕೇವಲ ಕೃಷಿ ಕ್ಷೇತ್ರದಲ್ಲಿ ಮಾತ್ರವಲ್ಲ. ಮನುಷ್ಯನ ಜೀವನದ ಇತರ ಎಲ್ಲ ಅಂಗಗಳಲ್ಲೂ ನೇರವಾಗಿ ಸಂಭವಿಸುತ್ತಿದೆ. ಪ್ರಕೃತಿಯ ಎಲ್ಲ ಪರಿಸರ ದೃಷ್ಟಿಗಳಿಂದ ಸಮಂಜವಾಗಿರುವುದನ್ನು ರೈತ ಮನಗಾಣಬೇಕಾಗಿದೆ. ನಾಗರಿಕ ಸೌಲಭ್ಯಗಳು ಮನುಷ್ಯನ ನಿರೀಕ್ಷೆಗೂ ಮೀರಿ ಬೆಳೆದು ಒಂದೆಡೆ ಮನುಷ್ಯನನ್ನು ಯಂತ್ರ ಮಾನವನನ್ನಾಗಿ ಮಾಡುತ್ತಿದ್ದರೆ. ಮತ್ತೊಂದೆಡೆ ಯಾಂತ್ರೀಕರಣದ ದುಷ್ಪರಿಣಾಮಗಳು ಮನುಷ್ಯನ ಸಹಜೀವನ ಕ್ರಮದಲ್ಲಿ ತರುತ್ತಿರುವ ಅಸಾಮರಸ್ಯ ಮನುಷ್ಯನ ಬದುಕನ್ನು

ಮಾನಸಿಕವಾಗಿ ಶೂನ್ಯಗೊಳಿಸುತ್ತಿವೆ. ಮನುಷ್ಯ ಕೇವಲ ಬುದ್ಧಿ ಮನಸ್ಸುಗಳ ಕಸರತ್ತಿನ ಒಂದು ಸ್ಥಾವರವಾಗಿ ನಿರೂಪಿತವಾಗಲಾರನು. ಬುದ್ಧಿ ಮನಸ್ಸುಗಳನ್ನು ಮೀರಿದ ಆತ್ಮದ ಮಿಡಿತಕ್ಕೆ ಅವನು ಕಿವುಡನಾಗಲಾರನು. ಯಂತ್ರಗಳ ಒಡನಾಟದಲ್ಲಿ ಆತ್ಮಕ್ಕೆ ಸಾಂಗತ್ಯವಿಲ್ಲ. ಪರಿಪೂರ್ಣತೆಯ ಬದುಕಿಗೆ ಆತ್ಮದ ತೃಪ್ತಿ ಅಗತ್ಯವಾಗಿರುವಂತೆ, ರೈತ ಮಾಡುವ ಎಲ್ಲ ಕಾರ್ಯಗಳಲ್ಲೂ ಬುದ್ಧಿ ಮನಸ್ಸಿನ ಲೌಕಿಕತೆಗೆ ಮೀರಿದ ಸಾಮಾಜಿಕ, ಧಾರ್ಮಿಕ, ಆಧ್ಯಾತ್ಮಿಕ ಚಿಂತನೆಗಳು ಹಾಗೂ ಹೊಣೆಗಾರಿಕೆಗಳು ಅವನ ಆತ್ಮ ತೃಪ್ತಿಯನ್ನು ಸೂಚಿಸುತ್ತವೆ. ಕರ್ಮಯೋಗಿ ಎನಿಸಿರುವ ರೈತ ತನ್ನ ಸುತ್ತ ಮುತ್ತಲಿನ ಪರಿಸರ, ಜೀವಿ ವೈವಿಧ್ಯತೆಯನ್ನು ಹಾಳು ಮಾಡಿ ತಾನು ನೆಮ್ಮದಿಯ ಬದುಕನ್ನು ಬಾಳಲಾರನು. ಆದ್ದರಿಂದ ಸಹಜ ಕೃಷಿಯೊಂದೇ ಸಹಜೀವನದ ಸೂತ್ರವಾಗಿ ಇಂದು ಭೂಮಿಯ ಮೇಲೆ ಬದುಕನ್ನು ಉಳಿಸುವ ಸಾಮರ್ಥ್ಯ ಪಡೆದಿದೆ.

ಪ್ರಚಲಿತವಿರುವ ದೇಶಿಯ ಪದ್ಧತಿಗಳಿಗೆ ವೈಜ್ಞಾನಿಕವಾದ ದೃಷ್ಟಿಕೋನದ ಸಮರ್ಥನೆ ಕೊಟ್ಟು ಹೆಚ್ಚಿನ ಪುಷ್ಟಿ ನೀಡುವುದರಿಂದ ಪಾರಂಪರಿಕವಾದ ಕೃಷಿ ಚಿಂತನೆಗಳ ವಿಶಿಷ್ಟತೆಯನ್ನು ಅರಿಯಬಹುದಾಗಿದೆ. ಪ್ರಗತಿಯನ್ನು ಬಯಸುವ ರೈತರು ತಾವು ಅನುಸರಿಸುವ ಪ್ರಾಚೀನ ಕೃಷಿ ಪದ್ಧತಿಗಳಲ್ಲಿನ ಸತ್ವಪೂರ್ಣ ಚಿಂತನೆಗಳನ್ನು ಉಳಿಸಿಕೊಂಡು ಅವುಗಳನ್ನು ವೈಜ್ಞಾನಿಕ ಪದ್ಧತಿಗಳೊಂದಿಗೆ ಹೊಂದಿಸಿಕೊಂಡು ಅನುಸರಿಸಬೇಕು. ಸಕಲ ಪ್ರಾಣಿಗಳಲ್ಲಿ ದಯೆ, ಸಹಾನುಭೂತಿ ಅನುಕಂಪಗಳು ಮೂಡಿ ಬರುವಂತಹ ಮಾನವ ಧರ್ಮದ ಭಾವನೆಗಳು ಸಚರಾಚರ ವಸ್ತುಗಳಲ್ಲಿ ಪರತತ್ವವನ್ನು ಕಾಣುವ ವಿಶ್ವಧರ್ಮದ. ಪರಿಕಲ್ಪನೆಗಳು ಮನುಷ್ಯನನ್ನು ಮಾನಸಿಕವಾಗಿ ಉನ್ನತ ಮಟ್ಟಕ್ಕೇರಿಸಲು ಸಹಕರಿಸಿ ಅವನ ನೈತಿಕ ಹೊಣೆಗಾರಿಕೆಯ ಪ್ರಜ್ಞೆಯನ್ನು ಬೆಳೆಸುತ್ತವೆ. ಕರ್ತವ್ಯ ಪ್ರಜ್ಞೆಯ ಮೌಲ್ಯಯುತ ಜೀವನ ನಡೆಸಿದ ಆತ್ಮ ತೃಪ್ತಿಯೊಂದಿಗೆ ಮಾನವ ಭೂಮಿಯ ಮೇಲಿನ ಸಹಜೀವನಕ್ಕೆ ಉತ್ತಮ ಮಾದರಿ ಜೀವಿಯಾಗುತ್ತಾನೆ. ಆಗ ರೈತ ಮಣ್ಣು, ನೀರು, ಬೆಳೆ, ಸಂರಕ್ಷಣೆಗಳೊಂದಿಗೆ ಮಾನವತೆಯ ರಕ್ಷಕನಾಗುತ್ತಾನೆ. ಸಂರಕ್ಷಣೆಯ ಸಮಗ್ರ ಸೃಷ್ಟಿಯ ಕರ್ತಾರನಾಗುತ್ತಾನೆ.

ಜಾಗತೀಕರಣದ ಮಾಯಾಜಾಲಕ್ಕೆ ಒಳಗಾಗುತ್ತಿರುವ ಇಂದಿನ ಜೀವನ ಗತಿಯಲ್ಲಿ ಕೃಷಿಯೆಂಬುದು ಕೈಸುಟ್ಟುಕೊಳ್ಳುವ ಕರ್ಮಕಾಂಡವಾಗಿದೆ. ಕೃಷಿ ಕಾಯಕವನ್ನೂ ಬಿಡಲೂ ಆಗದ ಕಟ್ಟಿಕೊಳ್ಳಲೂ ಆಗದ ಸಂದಿಗ್ಧದಲ್ಲಿ ರೈತನ ಬದುಕು ಡೋಲಾಯಮಾನವಾಗಿದೆ. ಇದಕ್ಕೆ ಕೇವಲ ಜಾಗತೀಕರಣದ ವಿದ್ಯಮಾನಗಳು ಮಾತ್ರ ಕಾರಣವಲ್ಲ; ಇದಕ್ಕೂ ಮುನ್ನ ಹಸಿರು ಕ್ರಾಂತಿಯ ಯೋಜನೆ ಕೃಷಿ ನೆಲವನ್ನು ಬಂಜೆಯಾಗಿಸುವಲ್ಲಿ ಸಾಕಷ್ಟು ಪಾತ್ರವಹಿಸಿದೆ. ಅಧಿಕ ಇಳುವರಿಯ ಮೋಹಕ್ಕೆ ಬಿದ್ದು ಕೃಷಿಯನ್ನು ಕೈಗಾರಿಕೊದ್ಯಮಿಗಳ ಕೈಗೊಂಬೆಯಾಗಿಸುವಲ್ಲಿ ನಮ್ಮ ಆಧುನಿಕ ಕೃಷಿ ಪಂಡಿತರು ತುಂಬಾ ಯಶಸ್ವಿಯಾಗಿದ್ದಾರೆ. ಆಧುನಿಕ ಕೃಷಿಯ ಪರಿಣಾಮವಾಗಿ ಪಶುಪಾಲನೆ ನಾಶವಾಯಿತು. ನೆಲದ ಜೀವಸತ್ವ ಹಾಳಾಯಿತು. ನಿಸರ್ಗ ಜೀವ ಸರಪಳಿ ಸಾಕಷ್ಟು ಹಾನಿಗೀಡಾಯಿತು. ಅದಲ್ಲದೆ ಇಂದು ಭಾರತದಲ್ಲಿ ವರ್ಷವೂ ಒಂದೊಂದು ಕಾರಣಗಳಿಂದಾಗಿ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದು. ಅದರಲ್ಲಿ ಶೇಕಡಾ ೮೦ರಷ್ಟು ರೈತರು ಸಾಲದ ಸುಳಿಯಲ್ಲಿರುವುದು. ವಿವಿಧ ಕಾಯಿಲೆಗಳಿಗೆ ತುತ್ತಾಗಿರುವುದು. ಆಸ್ಪತ್ರೆಗಳ ಸಂಖ್ಯೆ ಹೆಚ್ಚಾಗುತ್ತಿರುವುದು ಮುಂತಾದವನ್ನು ಗಮನಿಸಿದರೆ ನಮ್ಮ ಸಮಾಜವು ಹೇಗೆ ಸಾಗುತ್ತಿದೆ ಎಂಬುದು ಅರ್ಥವಾಗುತ್ತದೆ. ೧೯೬೬ರ ಬಳಿಕವೇ ಕೃಷಿಯಲ್ಲಿ ವಿಷ ರಾಸಾಯನಿಕಗಳ ಬಳಕೆ ಶುರುವಾಯಿತು. ಬೇಸಾಯ ಕ್ಷೇತ್ರದಲ್ಲಿ ಇಂದು

ವಿಷಗಳಿಂದ ಆವಾಂತರಗಳು ಆಗುತ್ತಿವೆ. ಸಾವಿರಾರು ಜನ ಬೆಳೆಗಳಿಗೆ ಬಳಸುವ ವಿಷಗಳನ್ನು ತಾವೇ ಕುಡಿದು ಸಾವಿಗೆ ಶರಣಾಗುತ್ತಿದ್ದಾರೆ.

ನಮ್ಮ ಕೃಷಿಗೆ ೧೦,೦೦೦ ವರ್ಷಗಳ ಇತಿಹಾಸ ಇದೆ. ಕೃಷಿಯಲ್ಲಿ ರಾಸಾಯನಿಕಗಳು, ವಿಷಗಳು ಪ್ರವೇಶ ಮಾಡಿದ್ದು ೧೯ನೇ ಶತಮಾನದ ಮಧ್ಯಭಾಗದಿಂದ. ಹೀಗಿರುವಾಗ ನಮ್ಮ ಪೂರ್ವಿಕರು ತಮಗೆ ಬೇಕಾದ ಬೆಳೆಗಳನ್ನು ವಿಷಗಳಿಲ್ಲದೇ, ರಾಸಾಯನಿಕಗಳಿಲ್ಲದೇ ಬೆಳೆಯುತ್ತಿದ್ದರು ಎಂಬುದನ್ನು ನಾವು ಒಪ್ಪಲೇಬೇಕು. ತಾವು ಬೆಳೆಯುವ ಬೆಳೆಗಳನ್ನು ಯಾವ ಸಮಯದಲ್ಲಿ ಬಿತ್ತಬೇಕು. ಅವುಗಳ ಸಂರಕ್ಷಣೆ, ಸ್ವಚ್ಛತೆ, ಇಳುವರಿ ಹೆಚ್ಚಿಸುವ ವಿಧಾನ ಅವುಗಳಿಗೆ ಒದಗಿಸುವ ಗೊಬ್ಬರ ಹಾಗೂ ತಮ್ಮ ಸುತ್ತ ಮುತ್ತಲೂ ಸಿಗುವ ವಸ್ತುಗಳಿಂದಲೇ ಬೆಳೆಗಳ ರಕ್ಷಣೆ ಮಾಡುವುದು ಇವೆಲ್ಲಾ ತಮ್ಮ ಅನುಭವದ ಮೂಲಕ ಹೊಸದಾಗಿ ಗುರುತಿಸುತ್ತಾ ಬಂದರು. ಹೀಗೆ ಅವರು ಕಂಡುಕೊಂಡ ಈ ಹೊಸ ಅವಿಷ್ಕಾರಗಳು ಸಫಲತೆಯನ್ನು ತಂದುಕೊಟ್ಟವು. ಇವುಗಳ ಆಧಾರದ ಮೇಲೆ ಪುನಃ ಪುನಃ ಅದೇ ಪದ್ಧತಿ ಕ್ರಮಗಳನ್ನು ನಂಬಿಕೊಂಡು ಬಂದರು. ಅವರ ಕೃಷಿ ನಂಬಿಕೆಗಳು ಆಧುನಿಕ ಕೃಷಿ ಪದ್ಧತಿಯನ್ನು ಮೀರಿಸಬಲ್ಲಂತಹ ನಂಬಿಕೆಗಳಾಗಿವೆ ಎಂದೂ ಹೇಳಬಹುದು. ಆಧುನಿಕ ಕೃಷಿ ವಿಧಾನದಿಂದ ಉತ್ಪಾದನೆ ಪ್ರಮಾಣ ಹೆಚ್ಚಾದರೂ ರಸಾಯನಿಕ ಗೊಬ್ಬರ, ಕ್ರಿಮಿನಾಶಕ ಹೈಬ್ರೀಡ್ ತಳಿಗಳಿಂದ ಉತ್ಪಾದಿತವಾದ ಆಹಾರ ಧಾನ್ಯಗಳಲ್ಲಿರುವ ಜೀವಸತ್ವಕ್ಕಿಂತಲೂ ರಸಾಯನಿಕ ವಸ್ತುಗಳ ಪ್ರಮಾಣವೇ ಹೆಚ್ಚಾಗಿರುತ್ತದೆ. ಇದರಿಂದಾಗಿ ಮಾನವನ ಆರೋಗ್ಯದ ಮೇಲೂ ಪರಿಣಾಮವನ್ನುಂಟುಮಾಡುತ್ತಿದೆ. ಈ ಹಿಂದಿನ ಕೃಷಿಕರು ಹೆಚ್ಚಿನ ಹಣಗಳಿಸುವ ಉದ್ದೇಶದಿಂದ ಕೃಷಿ ಮಾಡುವ ಉದ್ದೇಶವಿರಲಿಲ್ಲ. ಅವರು ಬೆಳೆಯುವ ಆಹಾರ ಧಾನ್ಯಗಳು ತಮ್ಮ ಹೊಟ್ಟೆ ತುಂಬಿಸಿಕೊಳ್ಳಲು ಸಾಕಾಗುವಷ್ಟು ಬೆಳೆದರೆ ಸಾಕು. ಎನ್ನುವ ಮನೋಭಾವ ಉಳ್ಳವರಾಗಿದ್ದರು. ಆದ್ದರಿಂದ ಕಸ ತಿನ್ನುವುದಕ್ಕಿಂತ ತುಸು ತಿನ್ನುವುದು ಲೇಸು ಎನ್ನುವ ನಂಬಿಕೆಯುಳ್ಳವರಾಗಿದ್ದರು. ಅವರು ಕೃಷಿಯಲ್ಲಿಟ್ಟ ನಂಬಿಕೆಗಳು ಮತ್ತು ಆಚರಣೆಗಳು ಇಂದಿಗೂ ಉಪಯುಕ್ತವಾಗಿವೆಂಬುದನ್ನು ನಂಬಿಕೆ ಮತ್ತು ಆಚರಣೆಗಳ ವಿವರಣೆಯಿಂದ ತಿಳಿಯಬಹುದು.

ಕೃಷಿ ಪ್ರಧಾನ ಸಮಾಜಗಳಲ್ಲಿ ಮಾನವರ ಮತ್ತು ಭೂಮಿಯ ಫಲವಂತಿಕೆಯನ್ನು ಹೆಚ್ಚಿಸುವ ಉದ್ದೇಶದಿಂದ ರೂಪಗೊಂಡ ಅನೇಕ ಬಗೆಯ ಧಾರ್ಮಿಕ ನಂಬಿಕೆಗಳು, ಆಚರಣೆಗಳು, ಮಾಂತ್ರಿಕ ಕ್ರಿಯಾವಿಧಿಗಳನ್ನೆಲ್ಲಾ ಒಳಗೊಂಡಿದ್ದ ಧಾರ್ಮಿಕ ಅಭಿವ್ಯಕ್ತಿಯೇ ಮಾತೃ ಆರಾಧನೆ. ಇಂದಿನ ನಮ್ಮ ಜನಪದ ಜೀವನ ಕ್ರಮಗಳನ್ನು ನಿಯಂತ್ರಿಸುತ್ತಿರುವ ಪ್ರಧಾನ ಪ್ರೇರಕ ಶಕ್ತಿಗಳಲ್ಲಿ ಮಾತೃದೇವತೆಗಳು ಮುಖ್ಯರು.

ಜನಪದರ ಬದುಕು ನಿಂತಿರುವುದೇ ಕೃಷಿಯ ನೆಲೆಗಟ್ಟಿನ ಮೇಲೆ. ಜನಪದರಲ್ಲಿ ಇಂದೂ ಅಸ್ತಿತ್ವದಲ್ಲಿರುವ ಯುಗಾದಿ, ಬಸವಜಯಂತಿ, ಕಾರಹುಣ್ಣಿಮೆ, ಮಣ್ಣೇತ್ತಿನ ಅಮವಾಸ್ಯೆ, ದೀಪಾವಳಿ, ಎಳ್ಳ ಅಮವಾಸ್ಯೆ ಮುಂತಾದ ಹಬ್ಬಗಳ ಆಚರಣೆಗಳು ಮೂಲಭೂತವಾಗಿ ಫಲವಂತಿಕೆಯನ್ನು ಬೇಡುವ ಕೃಷಿಯ ವಿಧಿಗಳೇ ಆಗಿವೆ. ಜನಪದರ ಆಚರಣೆಗಳು ದೈವಗಳು ಆಧುನಿಕತೆಯ ಪ್ರಭಾವದಿಂದ ಬಹಳಷ್ಟು ಬದಲಾವಣೆಗೆ ಗುರಿಯಾದರೂ ಜೀವನಾಧಾರವಾದ ಕೃಷಿಯನ್ನು ಆಧರಿಸಿದ ಫಲವಂತಿಕೆಯ ಆಚರಣೆಗಳು ಮಾತ್ರ ತಮ್ಮ ಪ್ರಾಮುಖ್ಯತೆಯನ್ನು ಉಳಿಸಿಕೊಂಡಿವೆ. ಅದರಂತೆ ಬೀದರ ಜಿಲ್ಲೆಯಲ್ಲಿ ಇಂದಿಗೂ ಹೆಚ್ಚಿನ ಜನರು ವ್ಯವಸಾಯವನ್ನೇ ಅವಲಂಬಿಸಿದ್ದಾರೆ ಹಾಗೆಯೇ ಕೃಷಿಗೆ ಸಂಬಂಧಿಸಿದ ನಂಬಿಕೆ ಮತ್ತು ಆಚರಣೆಗಳು ಇಂದಿಗೂ ರೂಢಿಯಲ್ಲಿವೆ.

ಕೃಷಿ ಪ್ರಧಾನವಾದ ಬೀದರ ಜಿಲ್ಲೆ ಸಮುದ್ರ ಮಟ್ಟದಿಂದ ೯೧೪ ಮೀಟರ್ ಎತ್ತರದಲ್ಲಿದೆ ಇಲ್ಲಿಯ ಹವಮಾನ ಆರೋಗ್ಯಕರ ಹಾಗೂ ಹಿತಕವಾಗಿರುತ್ತದೆ. ಇಲ್ಲಿಯ ಮಣ್ಣು ಕಪ್ಪು ಮಣ್ಣು ಹಾಗೂ ಜಂಬುಕಲ್ಲಿನ ಮಿಶ್ರಣವಿರುವ ಪ್ರದೇಶ. ಔರಾದ ಮತ್ತು ಭಾಲ್ಕಿ ತಾಲೂಕಗಳಲ್ಲಿ ದಟ್ಟವಾದ ಕಪ್ಪು ಮಣ್ಣಿನ ಪ್ರದೇಶಗಳಿವೆ. ಬಸವಕಲ್ಯಾಣ ತಾಲ್ಲೂಕಿನ ಅರ್ಧದಷ್ಟು ಕಪ್ಪು ಮಣ್ಣು ಉಳಿದ ಭಾಗವೆಲ್ಲ ಜಂಬುಮಣ್ಣಿನ ಭೂಮಿ. ಇದೆ ಮಣ್ಣು ಹೊಂದಿರುವುದನ್ನು ಬೀದರ ತಾಲೂಕಿನ ಕೆಲವು ಭಾಗಗಳಲ್ಲಿ ಕಾಣುತ್ತೇವೆ. ಹುಮನಾಬಾದ ತಾಲೂಕಿನ ಬಹಳಷ್ಟು ಪ್ರದೇಶ ಜಂಬಿಟ್ಟಿಗೆಯದು. ಉಳಿದ ಭಾಗವೆಲ್ಲ ಮಧ್ಯಮ ದರ್ಜೆಯ ಕಪ್ಪು ಮಣ್ಣಿನಿಂದಾವೃತ್ತವಾಗಿರುತ್ತದೆ.

ನೈರುತ್ಯ ಹಾಗೂ ಈಶಾನ್ಯ ಮಾರುತಗಳಿಂದ ಒದಗುವ ಮಳೆ ವ್ಯವಸಾಯಕ್ಕೆ ಸಹಾಯಕವಾಗಿದೆ. ಅಲ್ಲದೆ ಮಳೆಯ ನಕ್ಷತ್ರಗಳನ್ನು ನಂಬಿಕೊಂಡಿಯೇ ತಮ್ಮ ಬಿತ್ತನೆ ಕಾರ್ಯ ಹಾಗೂ ಕೃಷಿಯ ಇತರ ಕೆಲಸಗಳನ್ನು ಮಾಡುವರು. ಕೃಷಿಯ ಹಂಗಾಮುಗಳನ್ನು ಗುರುತಿಸಿಕೊಳ್ಳಲು ಮಳೆ ನಕ್ಷತ್ರಗಳನ್ನು ಆಧಾರವಾಗಿ ಇಟ್ಟುಕೊಳ್ಳುತ್ತಾರೆ. ಮೃಗ ಪಂಚಕ ಮಳೆಗಳಾದ ಮೃಗಶಿರಾ, ಆರಿದ್ರ, ಪುನರ್ವಸು, ಪುಷ್ಯ ಮತ್ತು ಆಶ್ಲೇಷಾ ಈ ಐದು ಮಳೆಗಳ ಅವಧಿಗೆ ಮುಂಗಾರು ಹಂಗಾಮು ಎಂದು ಕರೆಯುತ್ತಾರೆ. ಮಘ ಪಂಚಕ ಮಳೆಗಳಾದ ಮಘಾ, ಉತ್ತರ, ಹಸ್ತ, ಚಿತ್ರ ಮತ್ತು ಸ್ವಾತಿ ಈ ಐದು ಮಳೆಗಳ ಅವಧಿಗೆ ಹಿಂಗಾರು ಹಂಗಾಮು ಎಂದು ಕರೆಯುತ್ತಾರೆ.

ಮಳೆಯಲ್ಲದೆ ಬಾವಿ ನೀರಾವರಿಯೂ ರೂಢಿಯಲ್ಲಿದೆ ಹಾಗೂ ಮುಲ್ಲಾಮಾರಿ, ಕಾರಂಜಾ ಮಾಂಜ್ರಾ ನದಿಗಳ ಮೂಲದಿಂದ ಕಾಲುವೆ ವ್ಯವಸ್ಥೆಯಿಂದಲೂ ಕೃಷಿ ಕ್ಷೇತ್ರದಲ್ಲಿ ಬೀದರ ಜಿಲ್ಲೆಯ ಭಾಗ್ಯವನ್ನು ಹೆಚ್ಚಿಸುತ್ತವೆ. ನೆಲ ಜಲವನ್ನು ಸಂಪತ್ಭರಿತವಾಗಿ ಹೊಂದಿರುವ ಬೀದರ ಜಿಲ್ಲೆಯ ಜನಪದರು ಕೃಷಿಗೆ ತಮ್ಮದೆ ಆದ ಒಲವು ತುಂಬಿಸಿಕೊಂಡು ಬಂದಿರುವ ನಂಬಿಕೆ ಮತ್ತು ಆಚರಣೆಗಳು ಅಸ್ತಿತ್ವದಲ್ಲಿವೆಂಬುದನ್ನು ಈ ಕೆಳಗಿನ ಆಚರಣೆ ಮತ್ತು ನಂಬಿಕೆಗಳ ಸಹಾಯದಿಂದ ತಿಳಿದುಬರುತ್ತದೆ.

ಪ್ರಾಚೀನರ ಜೀವನಕ್ಕೆ ಮೂಲ ಆಧಾರ ಕೃಷಿ, ಇಲ್ಲಿ ಬೆಳೆಯುವ ಆಹಾರದ ಬೆಳೆಗಳೆಲ್ಲಾ ದೇವರ ಅನುಗ್ರಹದಿಂದ ಬೆಳೆದವು ಎನ್ನುವ ನಂಬಿಕೆ ಹೊಂದಿದರು. ಹಬ್ಬದಾಚರಣೆಗಳ ಹಿಂದೆ ಆಯಾ ಋತುಗಳಲ್ಲಿ ಸಿಗುವ ವಸ್ತುಗಳನ್ನು ಆಹಾರಗಳನ್ನು ಮತ್ತು ಇನ್ನಿತರ ಮೂಲಗಳನ್ನು ಬಳಸಿಕೊಂಡು ತನ್ನ ಇಚ್ಛೆಗೆ ಅನುಕೂಲವಾಗುವಂತೆ ಮಾಡಿಕೊಂಡರು.

ಹಬ್ಬಗಳ ಆಚರಣೆಯಲ್ಲಿ ಹೆಚ್ಚಾಗಿ ಕೃಷಿ ಮೂಲಕ ಆಚರಣೆಯ ಹಬ್ಬಗಳೇ ಹೆಚ್ಚು. ಇವುಗಳಲ್ಲಿ ರೈತನ ಸಂಭ್ರಮ. ತನ್ನ ಕೆಲಸದ ಆರಂಭ ಅಂತ್ಯ ಬೆಳೆ ಬೆಳೆಯುವ ವಿಧಾನ. ಸುಗ್ಗಿ ಸಂಭ್ರಮ, ದನಕರುಗಳಿಗೆ ವೈಭವಿಕರಣ, ಸ್ವಚ್ಛತೆ, ಮಾನವಿಯತೆ ಅನುಕಂಪ ತೋರಿಸುವ ಆಚರಣೆಗಳಾಗಿವೆ. ಋತುಮಾನಕ್ಕನುಗುಣವಾಗಿ ಬರುವ ಹಬ್ಬಗಳು ರೈತರ ಜೀವನದಲ್ಲಿ ಹರ್ಷ, ಉಲ್ಲಾಸ ಮೂಡಿಸುವ ಆಚರಣೆಗಳಾಗಿವೆ. ವರ್ಷದಲ್ಲಿ ಕೃಷಿ ಆಚರಣೆಗೆ ಸಂಬಂಧಿಸಿದ ಹಬ್ಬಗಳ ಆಚರಣೆ ಮತ್ತು ನಂಬಿಕೆಗಳನ್ನು ಈ ರೀತಿಯಾಗಿವೆ.

**ಯುಗಾದಿ :**

ಯುಗಾದಿಯ ಆದಿಯಾದ ಯುಗಾದಿಯು ವಸಂತ ಋತುವಿನ ಚೈತ್ರಮಾಸದ ಆರಂಭದ ಹಬ್ಬವಾಗಿದೆ. ಯುಗಾದಿ ರೈತರ ಸಂಪೂರ್ಣ ಬಿಡುವಿನ ಕಾಲದಲ್ಲಿ ಬರುವಂಥದ್ದು. ಈ ವರ್ಷದ ಕೃಷಿಯ ಕೆಲಸದ ಅಂತ್ಯವಾಗಿದ್ದು ಮತ್ತು ಮುಂದೆ ಬರುವ ವರ್ಷದ ಆರಂಭ ಇವೆರಡರ ನಡುವಣ ಹಬ್ಬ. ಆದ್ದರಿಂದಲೇ ಈ ಹಬ್ಬದಲ್ಲಿ ಬೇವು ಬೆಲ್ಲದ ಮಿಶ್ರಣವಿರುತ್ತದೆ. ಯುಗಾದಿ ದಿವಸ ಯಾವುದೇ ದೇವ-ದೇವತೆಗಳ ವಿಶೇಷ ಪೂಜೆಗಳು ಇರದಿದ್ದರೂ ರೈತನು ದೇವತೆ ಎಂದು ನಂಬಿದ್ದ ಭೂಮಿಯನ್ನು ಪೂಜಿಸುವುದು ತನಗೆ ಸಹಾಯಕವಾಗಿರುವ ಎತ್ತುಗಳನ್ನು ಕೃಷಿ ಸಾಮಗ್ರಿಗಳ ಸಲಕರಣೆಗಳನ್ನು ಪೂಜಿಸುತ್ತಾನೆ. ಹಾಗೂ ಕೃಷಿಗೆ ಸಂಬಂಧಿಸಿದ ಹೊಸ ಕೆಲಸಗಳನ್ನು ಈ ಹೊಸ ವರ್ಷದ ಹೊಸ ದಿನದಂದು ಆರಂಭಿಸುತ್ತಾರೆ.

ಯುಗಾದಿ ಹಬ್ಬವನ್ನು ಮೂರು ದಿವಸ ಆಚರಿಸುತ್ತಾರೆ. ಒಂದು ದಿವಸ ಅಮವಾಸ್ಯೆ. ಎರಡನೆ ದಿವಸ ಯುಗಾದಿ ಮೂರನೇ ದಿವಸ ತಗಾದಿ ಎಂದು ಆಚರಿಸುತ್ತಾರೆ.

ಅಮವಾಸ್ಯೆ ದಿವಸ ಮನೆಯನ್ನು ಸ್ವಚ್ಛಗೊಳಿಸುತ್ತಾರೆ. ಅಂದು ಮುಂಜಾನೆ ಕೂರ್ಗಿ ಸರಿಪಡಿಸಲು ಬಡಿಗೇರ ಮನೆಗೆ ಒಯ್ಯುತ್ತಾನೆ, ಜೊತೆಗೆ ತೂರಾ (ಬಿದಿರಿನಿಂದ ಮಾಡಿದ ಅಗಲವಾದ) ಬುಟ್ಟಿಯಲ್ಲಿ ಜೋಳ ಬಡಿಗೆಯವನಿಗೆ ಕೊಡಲು ಹಾಗೂ ಕಡಲೆಬೇಳೆ ಬೆಲ್ಲಾ ನೈವೈದ್ಯ ತೋರಲು, ತುಂಬಿದ ತಂಬಿಗೆ ಕಳಸದ ಪ್ರತೀಕವಾಗಿ ಒಯ್ದಿರುತ್ತಾರೆ. ಬಡಿಗ್ಯಾನು ಕೂರ್ಗಿ ಸರಿಪಡಿಸಿದ ನಂತರ ರೈತನು ಅದನ್ನು ಪೂಜಿಸಿದ ನಂತರ ನೇರವಾಗಿ ಹೊಲಕ್ಕೆ ಒಯ್ಯುತ್ತಾನೆ. ಅಂದು ಭೂಮಿ ತಾಯಿಗೆ ನೈವೇದ್ಯಕ್ಕಾಗಿ ಜೋಳದ ಅನ್ನ, ಅಂಬಲಿ, ಬೇವು, ಹೊಸ ಶಾವಿಗೆ ಹುಗ್ಗಿ, ಅನ್ನ ಮುಂತಾದ ಅಡುಗೆ ಪದಾರ್ಥಗಳು ನೈವೇದ್ಯಕ್ಕೆ ಒಯ್ಯುವರು. ರೈತರು ಈ ದಿನದಂದು ಮುಂದಿನ ಭವಿಷ್ಯ ಕುರಿತು ಪಂಚಾಂಗ ನೋಡುವ ಆಚರಣೆಗಳು ಈ ಹಬ್ಬದಲ್ಲಿ ಕಂಡು ಬರುತ್ತವೆ. ಹಾಗೆಯೇ ನಂಬಿಕೆಗಳು ಕೂಡಾ ಹೀಗಿವೆ.

**೧. ಯುಗಾದಿಯಂದು ಎರಡು ಸುತ್ತಾದರೂ ಹೊಲ ಊಳುವರು :**

ಭೂಮಿ ನಮ್ಮೆಲ್ಲರನ್ನು ಸಾಕಿ ಸಲುಹುತ್ತಿರುವ ತಾಯಿ. "ಜನನಿ ಜನ್ಮಭೂಮಿ ಸ್ವರ್ಗಸೇ ಮಹಾನ್ ಹೈ" ಎನ್ನುವಂತೆ ಸ್ವರ್ಗ ಎನ್ನುವುದು ಕಲ್ಪನಾ ಲೋಕವಾದರೆ ಭೂಮಿ ವಾಸ್ತವಿಕ. ನಾವು ಆಕೆಯ ಋಣ ಭಾರದಲ್ಲಿದ್ದೇವೆ. ಇದನ್ನು ತೀರಿಸಲು ನಮ್ಮಿಂದ ಸಾಧ್ಯವೇ ಇಲ್ಲ. ಆದರೂ ಪ್ರಾಚೀನರು ಯಾವುದು ವಿಚಿತ್ರವೆನಿಸಿದ ಘಟನೆಗೆ ಕಾರಣ. ಚೈತನ್ಯ ಶಕ್ತಿ ಎಂದು ತಿಳಿದು ಪೂಜಿಸಿದರು. ಹಾಗೆಯೇ ಭೂಮಿಗೆ ಪೂಜೆ ಸಲ್ಲಿಸುವ ಮೂಲಕ ತಮ್ಮ ಋಣ ತೀರಿಸಬಹುದೆಂಬ ನಂಬಿಕೆ. ಅದರಂತೆ ರೈತರು ಯುಗಾದಿಯ ದಿನದಂದು ಭೂಮಿಯನ್ನು ಪೂಜಿಸಿ ನೇಗಿಲಗೆ ಬಂಗಾರವನ್ನು ಸ್ಪರ್ಶಿಸಿ ಹೊನ್ನಾರು (ಹೊನ್ನಿನ ಆರು)ನಿಂದ ಹೊಲ ಊಳುಮೆ ಮಾಡುವರು. ಪಂಚಾಂಗದಲ್ಲಿ ತೋರಿಸಿಕೊಟ್ಟಂತೆ ಯಾವ ಬಣ್ಣದೆತ್ತು ಹಾಗೂ ಊರ ಪ್ರಮುಖರ ಹೆಸರಿನಲ್ಲೊಬ್ಬನ ಹೆಸರನ್ನು ಗುರುತಿಸಿ ಹೇಳುವುದರಿಂದ ಆ ವ್ಯಕ್ತಿ ಮತ್ತು ಆ ಎತ್ತು ಉಪಯೋಗಿಸಿ ತಲೆಯ ಮೇಲೆ ಪೇಟಧರಿಸಿ ನೇಗಿಲು ಹೂಡಿ ಊರ ಸುತ್ತ ಒಂದು ಬಾರಿ ಊಳಬೇಕು. ಆದರೆ ಇಂದು ಅವರವರ ಹೊಲದಲ್ಲಿ ಅವರವರು ಮಾತ್ರ ನೇಗಿಲು ಹೊಡೆಯುವ ಪದ್ಧತಿ ಬೀದರ ಜಿಲ್ಲೆಯಲ್ಲಿ ಕಂಡು ಬರುವುದು.

ಎತ್ತುಗಳು ಇರದೇ ಇರುವವರು ಟ್ರಾಕ್ಟರ್ ಮೊರೆ ಹೋಗಿದ್ದಾರೆ. ಉತ್ತರಾಭಿಮುಖವಾಗಿ ಉಳುಮೆ ಮಾಡುತ್ತಾರೆ. ಮುಂಗಾರು ಮಳೆ ಬಿದ್ದ ನಂತರ ಬಿತ್ತನೆ ಆರಂಭಿಸುವ ರೈತರು ಯುಗಾದಿ ಹೊಸದಿನವೆಂದು ಎರಡು ಸುತ್ತಾದರೂ ಹೊಲ ಊಳುವರು.

**ಹೊಸ ಪಂಚಾಂಗ ನೋಡುವುದು :**

ಹೊಸ ಪಂಚಾಂಗ ನೋಡುವುದಕ್ಕೆ ಒಂದು ಪದ್ಧತಿ ಅನುಸರಿಸುತ್ತಿದ್ದರು. ಊರಿನ ಪ್ರಮುಖರು ಬಾಜಿ ಭಜಂತ್ರಿಯೊಂದಿಗೆ ಸಾರ್ವಜನಿಕ ಪಂಚಾಯತಿ ಕಟ್ಟೆ ಅಥವಾ ಹನುಮಂತ ದೇವರ ಗುಡಿಯಲ್ಲಿ ಊರಿನ ಜನರೊಟ್ಟಿಗೆ ಸೇರುವುದು ರೂಢಿಯಾಗಿತ್ತು. "ಯುಗಾದಿ ದಿನ ಯಾವ ವಾರವಾಗಿರುವದೋ ಆ ವಾರಾಧಿಪತಿ ಆ ವರ್ಷದ ರಾಜ. ಉದಾಹರಣೆಗೆ: ಯುಗಾದಿ ಮಂಗಳವಾರವಾದರೆ ಮಂಗಳ ಈ ವರ್ಷದ ರಾಜ ಹಾಗೂ ಗ್ರಹ. ನಕ್ಷತ್ರ, ರಾಶಿ ಕುರಿತು ಹೇಳುತ್ತಿದ್ದರು.[೬೫] ಬರುವ ವರ್ಷದ ಮಳೆ ಯಾವ ಪ್ರಮಾಣದಲ್ಲಿ ಯಾವ ನಕ್ಷತ್ರದಲ್ಲಿ ಮಳೆ ಬರುತ್ತದೆ. ಇತ್ತಿಚೀನ ಬಣ್ಣ ಮತ್ತು ಯಾವ ವ್ಯಕ್ತಿ ಹೆಸರಿನಲ್ಲಿ ಬಲವಿರುತ್ತದೆಯೋ ಅಂತಹವರಿಂದಲೇ ಕೃಷಿ ಕಾರ್ಯ ಆರಂಭಿಸುವರು. ಈ ವರ್ಷದಲ್ಲಿನ ಯಾವ ಬೆಳೆಗೆ ಮಾರುಕಟ್ಟೆಯಲ್ಲಿ ಬೆಲೆಯಿರಬಹುದು. ಇಂತಹ ಹಲವಾರು ವಿಚಾರ ಕುರಿತು ಪಂಚಾಂಗ ಹೇಳುತ್ತಿದ್ದರು. ಇದಕ್ಕೆ ಕಾರಣ ಈಗ ಸಿಗುತ್ತಿರುವ ಕ್ಯಾಲೆಂಡರ್, ವೃತ್ತಪತ್ರಿಕೆ, ದೂರದರ್ಶನ, ಇಂತಹ ಸಂಪರ್ಕ ಮಾಧ್ಯಮಗಳ ವ್ಯವಸ್ಥೆ ಇರಲಿಲ್ಲ. ಏನೇ ಆಗು ಹೋಗುಗಳು ತಿಳಿಯಬೇಕಾದರೆ ಅಕ್ಷರ ಜ್ಞಾನದಿಂದ ದೂರಾಗಿದ್ದ ಆ ಜನಪದರು ಯುಗಾದಿಯಂತಹ ವಿಶೇಷ ದಿನಗಳಲ್ಲಿ ಹೇಳುವ ಕೃಷಿಗೆ ಸಂಬಂಧಿಸಿದ ಮುಂದಿನ ವಿಚಾರ ತಿಳಿದುಕೊಳ್ಳುವುದು ವಿಶೇಷ ಅವಕಾಶಗಳೆನಿಸಿದವು. ಅದಕ್ಕಾಗಿ ಪಂಡಿತ ಪಾಮರರಿಂದ ವರ್ಷದ ಪಂಚಾಂಗ ಬಹಿರಂಗ ಪಡಿಸುತ್ತಿರಬೇಕು. ಊರಿನ ವಂಶಪರಂಪರೆಯ ಪ್ರಮುಖನ್ನೊಳಗೊಂಡು ಒಟ್ಟಿಗೆ ಸೇರುವ ವ್ಯವಸ್ಥೆ ಬಹಳಷ್ಟು ಕಡಿಮೆಯಾಗಿದೆ. ಏಕೆಂದರೆ ಇಂದಿನ ಬದಲಾದ ಆಡಳಿತ ವ್ಯವಸ್ಥೆ ಸ್ಥಳೀಯ ಸರ್ಕಾರದಲ್ಲಿ ಪಂಚಾಯತ್ ವ್ಯವಸ್ಥೆಯಿದೆ. ಇಲ್ಲಿ ಪ್ರಜೆಗಳಿಂದ ಆಯ್ಕೆಯಾದ ಪ್ರತಿನಿಧಿಗಳು ಎಲ್ಲಾ ಮತವರ್ಗದವರಾಗಿರುತ್ತಾರೆ ಹಾಗೂ ಶಿಕ್ಷಣ ಪಡೆಯುತ್ತಿರುವ ಇಂದಿನ ಜನರು ಪ್ರಕಟಿತವಾಗಿರುವ ಪಂಚಾಂಗ, ಧಾರ್ಮಿಕ ಗ್ರಂಥ ಓದಿ ಸಾಕಷ್ಟು ವಿಷಯ ತಿಳಿದುಕೊಳ್ಳುತ್ತಿರುವದರಿಂದ ಸಾಮೂಹಿಕ ಪಂಚಾಂಗ ಕೇಳುವ ಆಸಕ್ತಿ ತೋರಿಸುತ್ತಿಲ್ಲ. ಆಧುನಿಕ ಕಾಲದ ವ್ಯವಸ್ಥೆಗಳಿಂದಾಗಿ ನಂಬಿಕೆಯಲ್ಲಿ ಬದಲಾವಣೆಯಾಗಿರುವುದು ಕಾಣುತ್ತೇವೆ.

**೬. ಯುಗಾದಿಯ ಹಿಂದಿನ ಮೂರು ದಿನ ಅಥವಾ ನಂತರದ ಮೂರು ದಿನಗಳಲ್ಲಿ ಮಳೆ ಬರುತ್ತದೆ :**

ಈ ಅವಧಿಯಲ್ಲಾಗುವ ವಾತಾವರಣದ ಬದಲಾವಣೆ ಕಂಡ ಜನರು ಈ ನಂಬಿಕೆಯನ್ನು ಹೊಂದಿರುವುದು ಸರಿಯೆನಿಸುತ್ತದೆ. ಏಕೆಂದರೆ ಮುಂಗಾರು ಮಳೆಯ ಮುನ್ನಾ ದಿನಗಳಾದ ಈ ಸಮಯದಲ್ಲಿ ಪರಿಸರಣ ಮಳೆಯಾಗುವ ಸಾಧ್ಯತೆಗಳಿರುತ್ತವೆ. ಖಚಿತವಾದ ದಿನಗಳೆಂದು ಅಲ್ಲದಿದ್ದರೂ ಇದರ ಸುತ್ತಲಿನ ದಿನಗಳ್ಳಲಾದರೂ ಮಳೆ ಬರುವುದು ನಿಜವೆನಿಸುತ್ತದೆ.

---

೬೫(ಅಡಿಟಿಪ್ಪಣಿ:೬೫: ವಿಜಯ ಕರ್ನಾಟಕ ದಿನಪತ್ರಿಕೆ ದಿ.೧೬.೦೩.೨೦೧೦)

**ಬಸವ ಜಯಂತಿ :**

ಬಸವಣ್ಣ ಎನ್ನುವುದು ಎತ್ತುಗಳಿಗೆ ಸಂಕೇತಿಸುವ ಪದ. ರೈತನ ಕೃಷಿ ಕಾರ್ಯದಲ್ಲಿ ಸಹಭಾಗಿಗಳಾಗಿ ದುಡಿಯುವ ಮೂಕ ಪ್ರಾಣಿಗಳು. ತನಗೆ ದುಡಿಮೆ ಬೇಸರವಾಗಿದೆ ಎಂದು ಯಾರ ಮುಂದೆ ಎಂದೂ ಹೇಳಿಕೊಳ್ಳುವುದಿಲ್ಲ. ತನ್ನ ಯಜಮಾನ ಕೊರಳಿನ ಹಗ್ಗಬಿಟ್ಟರೆ ಮತ್ತೆ ಕೊರಳಿಗೆ ಕಟ್ಟಿ ಕೊಟ್ಟಿಗೆಯಲ್ಲಿ ತಂದು ನಿಲ್ಲಿಸುವವರೆಗೆ ಬೇಸರ ಪಡದೆ ನಿರಂತರ ಕೆಲಸದಲ್ಲಿರುತ್ತವೆ. ಇಲ್ಲಿ ಅದರ ತಾಳ್ಮೆ ಗುಣ ಗೊತ್ತಾಗುವುದು. ಆಯಾಸವೆಂದು ಹೇಳಿಕೊಳ್ಳದೆ ತಮ್ಮ ಮೂಕ ವೇದನೆಯಲ್ಲಿ ಸಂಕಟಪಡುವ ಆ ಪ್ರಾಣಿಯ ಮನಸ್ಸು, ನೋವು ಅರ್ಥ ಮಾಡಿಕೊಳ್ಳಬಲ್ಲ ಬುದ್ಧಿಶಕ್ತಿ ರೈತನಲ್ಲಿರುವುದು. ಆದ್ದರಿಂದ ಎತ್ತುಗಳಿಗೆ ದೀಪಾವಳಿ, ಕಾರಹುಣ್ಣಿಮೆ, ಮಣ್ಣೆತ್ತಿನ ಅಮವಾಸ್ಯೆ, ಬಸವ ಜಯಂತಿಗಳಲ್ಲಿ ಇವುಗಳಿಗೆ ವಿಶೇಷ ಪೂಜೆ, ಅಲಂಕಾರ ಹಾಗೂ ವಿಶ್ರಾಂತಿಯನ್ನು ನೀಡುವುದರ ಮೂಲಕ ರೈತ ಈ ಪ್ರಾಣಿಗಳಲ್ಲಿ ದಯೆ ತೋರುವನು. ಅಲ್ಲದೆ ಸೋಮುವಾರ, ಅಮವಾಸ್ಯೆ, ಇನ್ನಿತರ ಹಬ್ಬಗಳಲ್ಲು ಗೋವು ಮತ್ತು ಎತ್ತುಗಳನ್ನು ಪೂಜಿಸುತ್ತಾರೆ. ಜನಪದರು ಐತಿಹಾಸಿಕ ಪುರಾಣಗಳ ಹಿನ್ನಲೆಯಲ್ಲಿ ಎತ್ತು ಶಿವನಲ್ಲಿ 'ನಂದಿ' ಎನ್ನುವ ಹೆಸರಿನ ವಾಹನವಾಗಿತ್ತು. ಇದು ಭೂಲೋಕಕ್ಕೆ ಬರಲು ಕಥೆಯೊಂದು ಹೀಗೆ ಹೇಳುತ್ತಾರೆ. ಮನುಷ್ಯರು ಗೆಡ್ಡೆ ಗೆಣಸು ತಿಂದು ಬದುಕುತ್ತಿದ್ದ ಕಾಲದಲ್ಲಿ ಮಾನವನ ಸಂಕಷ್ಟವನ್ನು ನೋಡಲಾರದೆ ಸ್ವರ್ಗದಲ್ಲಿದ್ದ ಈಶ್ವರ ಬಸವಣ್ಣನಿಗೆ 'ಹೋಗು ಭೂಲೋಕಕ್ಕೆ ಹೋಗಿ ಒಪ್ಪೊತ್ತಿನ ಊಟವೆಂದು ಸಾರಿಬಾ' ಎನ್ನುತ್ತಾನೆ. ಭೂಲೋಕಕ್ಕೆ ಬಂದ ಬಸವಣ್ಣನಿಗೆ ಜನತೆಯ ಕಷ್ಟ ಕಂಡು ಕರುಣೆ ಉಕ್ಕಿ ಬರುತ್ತದೆ. 'ದೊಡ್ಡವರಿಗೆ ಮೂರು ಹೊತ್ತಿನ ಊಟ; ಮಕ್ಕಳಿಗೆ ಹಾಸಿದ ತಣಿಗೆ ಹಾಸಿದಂತಿರಬೇಕು ಎಂದು ಸಾರುತ್ತಾನೆ. ಈಶ್ವರನ ಬಳಿಗೆ ಹೋದನಂತರ ಈಶ್ವರ ಕೇಳಲು ಭೂಲೋಕದಲ್ಲಿ ಇದ್ದ ಸ್ಥಿತಿ ಹಾಗೂ ತಾನು ಹೇಳಿರುವುದನ್ನು ಚಾಚೂ ತಪ್ಪದೆ ಹೇಳುತ್ತಾನೆ. ನಾನು ಹೇಳಿರುವುದನ್ನು ಬಿಟ್ಟು ನೀನು ನಿನ್ನದೆ ಅಭಿಪ್ರಾಯವನ್ನು ಹೇಳಿ ನೀನು ಕಷ್ಟಕ್ಕೆ ಸಿಲುಕಿಕೊಂಡಿರುವಿ. ಬಸವಣ್ಣ ದೇವರೆ ಭೂಲೋಕಕ್ಕೆ ಹೋಗಿ ಅವರಿಗೆಲ್ಲಾ ನೀನೇ ದುಡಿದು ಹಾಕು ಎನ್ನುತ್ತಾನೆ. ಶಿವನ ಆಣತಿಯಂತೆ ಬಸವಣ್ಣ ಭೂಲೋಕ್ಕೆ ಬಂದು ಮೂರು ಹೊತ್ತು ದುಡಿದು ಹಾಕುತ್ತಿದ್ದಾನೆ" ಎಂದು ನಂಬಿದ್ದಾರೆ.

**ಎತ್ತಗಳಿಗೆ ಮೊದಲು ಮಾತು ಬರುತ್ತಿದ್ದವು ಮೂಕನಾಗಲು ಇನ್ನೊಂದು ಕಥೆ ಹೀಗಿದೆ.**

"ನೀನು ಬಸವನಿಗೆ ಹೊತ್ತು ಹೊತ್ತಿಗೆ ಹುಲ್ಲು ಹಾಕಿ ನೀರು ಕುಡಿಸು ಎಂದು ಮಾವ ಸೊಸೆಗೆ ಹೇಳಿಹೋದ. ಆದರೆ ಸೊಸೆ ಮಾವ ಹೇಳಿದ ಹಾಗೆ ಏನು ಮಾಡುವುದಿಲ್ಲ. ಆದರೆ ಮನೆಗೆ ಬಂದ ಮಾವ ಸೊಸೆಯನ್ನು ಕೇಳಲು ಸೊಸೆ ಬಸವನಿಗೆ ಉಪಚರಿಸಿದಾಗಿ ಸುಳ್ಳು ಹೇಳುತ್ತಾಳೆ. ಬಸವನ ಸಮೀಪಕ್ಕೆ ಬಂದು ಮಾವ ನೋಡಲು ಅದರ ಕಣ್ಣಿನಲ್ಲಿ ನೀರು ಬರುತ್ತಿರುತ್ತವೆ. ಯಜಮಾನ ಇದಕ್ಕೆ ಕಾರಣ ಕೇಳಲು ಸೊಸೆ ಸುಳ್ಳು ಹೇಳಿರುವುದಾಗಿ ಹೇಳುತ್ತಾನೆ. ಇದರಿಂದ ಕೋಪಗೊಂಡ ಮಾವ ಸೊಸೆಯನ್ನು ಹೊಡೆಯುತ್ತಾನೆ. ನಿನ್ನಿಂದಾಗಿ ನಾನು ಹೊಡೆಸಿಕೊಳ್ಳಬೇಕಾಯಿತೆಂದು ಸೊಸೆ, ಮಾವ ಇಲ್ಲದ ಸಮಯದಲ್ಲಿ ಬಸವನಿಗೆ ಹೊಡೆದು ಸೋಮುವಾರ ನಿನ್ನ ಸೊಲ್ಲು ಅಡಗ ಎಂದು ಶಪಿಸಿ ಗೋಟನಿಂದ ಬಸವನ ಮುಖದ ಮೇಲೆ ಹೊಡೆದಳು ಅಂದಿನಿಂದ ಬಸವನಿಗೆ ಮಾತು ಬರದಾಗಿ ಮೂಕನಾದನು" ಎಂಬ ಕಥೆಯುಂಟು.[೬೬] ಆದರೆ ಜೀವಿಗಳ

೬೬(ಅಡಿ ಟಿಪ್ಪಣಿ:೬೬: ನಮ್ಮ ಜನಪದ ನಂಬಿಕೆಗಳು ಡಾ.ಪಿ.ಜಿ.ದಾಸೆಗೌಡ ಪುಟ ಸಂಖ್ಯೆ ೫೬)

ಸೃಷ್ಟಿಯಲ್ಲಿಯೇ ಯೋಚನಾ ಶಕ್ತಿ ಮತ್ತು ಮಾತಾನಾಡುವ ಜೀವಿಯೆಂದರೆ ಮಾನವ ಮಾತ್ರ. ಎತ್ತಿಗೆ ಹೊಡೆದಿದ್ದರಿಂದಾಗಿ ಅದೊಂದು ಪ್ರಾಣಿ ಅಥವಾ ಈ ಜಾತಿಗೆ ಸೇರಿದ ಎತ್ತುಗಳು ಮಾತ್ರ ಮೂಕವಾಗಿರಬಹುದಿತ್ತು. ಆದರೆ ಸಕಲ ಜೀವಿಗಳ ಕುಲವೆ ಮೂಕವಾಗಿವೆ ಅಂದಾಗ ಈ ಕಥೆ ಈ ವಿಚಾರಿಸಿದವರಿಗೆ ಸತ್ಯ ಎನಿಸುವುದಿಲ್ಲ.

ರೈತರು ಎತ್ತು (ಬಸವಣ್ಣ) ಹುಟ್ಟಿದ ದಿನವೆಂದು ಕಾಲ ಕಾಲದಿಂದಲೂ ಆಚರಿಸುತ್ತಾ ಬಂದಿರುವುದಾಗಿದೆ. ಆಧುನಿಕ ಸಮಾಜದ ಸಮಾನತೆಗಾಗಿ ಹೋರಾಟ ಮಾಡಿದ ವಿಶ್ವಗುರು ಬಸವೇಶ್ವರರ ಹುಟ್ಟು ಹಬ್ಬವೆಂದು ಆಚರಿಸುತ್ತಾರೆ.

**ಕಾರಹುಣ್ಣಿಮೆ :**

ಜೇಷ್ಠ ಶುದ್ಧ ಪೌರ್ಣಿಮೆಯು 'ಕಾರಹುಣ್ಣಿಮೆ' ಎಂದು ಕರೆಯುತ್ತಾರೆ. ವ್ಯವಸಾಯ ಸಂಬಂಧಿತವಾದ ಉತ್ತರ ಕರ್ನಾಟಕದ ಜನರಿಗೆ ವಿಶೇಷವಾದ ಹಬ್ಬವಾಗಿದೆ. 'ಕಾರ್' ಎಂದರೆ ಮಳೆ ಆದ್ದರಿಂದ ಮಳೆಗಾಲದ ಆರಂಭದ ಹುಣ್ಣಿಮೆಯೆಂದೇ ಇದಕ್ಕೆ 'ಕಾರಹುಣ್ಣಿಮೆ' ಎಂಬ ಹೆಸರು ಬಂದಿದೆ.

ಈ ಹುಣ್ಣಿಮೆ ಹೆಣ್ಣಿನ ಪ್ರತೀಕವಾಗಿ ಆಚರಿಸುತ್ತಾರೆ. ಭೂದೇವಿಯ ಗರ್ಭದಲ್ಲಿ ಬೀಜ ಬಿತ್ತುವ ಕೆಲಸ ಹುಣ್ಣಿಮೆಯ ನಂತರದ ದಿನಗಳಿಂದ ಆರಂಭಿಸುತ್ತಾರೆ. ಕೆಲಸಕ್ಕೆ ಅಣಿಯಾಗುವ ಎತ್ತುಗಳನ್ನು ಪೂಜಿಸುತ್ತಾರೆ. ಹೊನ್ನುಗ್ಗಿ, ಹುಣ್ಣಿಮೆ ಮತ್ತು ಕರಿ ಎಂದು ಮೂರು ದಿನಗಳ ಕಾಲ ಆಚರಿಸುವರು. ಕಾರ ಹುಣ್ಣಿಮೆ ಬೀದರ ಜಿಲ್ಲೆಯ ಹುಮನಾಬಾದ ಮತ್ತು ಬೀದರ ತಾಲ್ಲೂಕಿನ ಹಳ್ಳಿಗಳಲ್ಲಿ ಆಚರಿಸಿದರೆ, ಔರಾದ, ಭಾಲ್ಕಿ, ಬಸವಕಲ್ಯಾಣ ತಾಲ್ಲೂಕುಗಳಲ್ಲಿ ಇದರಂತೆ ಆಚರಿಸುವ ಹ್ವಾಳ ಮಾಡುತ್ತಾರೆ. (ಹ್ವಾಳ ಆಚರಣೆಯಲ್ಲಿ ವಿವರಣೆಯಿದೆ) ಹೊನ್ನುಗ್ಗಿ ದಿವಸ ಮುಂಜಾನೆ ಮನೆಯಲ್ಲಿ ಸಾರಿಸಿ, ತಲೆಸ್ನಾನ ಮಾಡಿ ಅಡುಗೆಗೆ ಬೇಕಾಗುವ ಸಕಲ ಸಿದ್ಧತೆಯಲ್ಲಿ ತೊಡಗುವರು.

**ಕಾರಹುಣ್ಣಿಮೆ ಕುರಿತ ನಂಬಿಕೆಗಳು ಹೀಗಿವೆ :**

**೧. ಕಾರ ಹುಣ್ಣಿಮೆಯ ಮುನ್ನಾದಿನ ಹೊನ್ನುಗ್ಗಿಯ ಆಚರಣೆ :**

ಕಾರಹುಣ್ಣಿಮೆ ಮುನ್ನಾ ದಿನಕ್ಕೆ ಹೊನ್ನುಗ್ಗಿ ಎಂದು ಕರೆಯುತ್ತಾರೆ. ಇದಕ್ಕೆ ಪೌರಾಣಿಕ ಹಿನ್ನಲೆಯ ಪ್ರಸಂಗ ಹೀಗಿದೆ. "ಒಮ್ಮೆ ಶಿವನಿಗೆ ತನ್ನ ಭಕ್ತನ ನೆರವಿಗೆ ತ್ವರಿತಗತಿಯಿಂದ ಹೋಗಬೇಕಿತ್ತು. ಆದರೆ ಸರಿಯಾದ ವೇಳೆಗೆ ಅಲ್ಲಿಗೆ ಹೋಗುವ ಶಿವನ ಸಂಕಟ ನಂದಿಗೆ ಗೊತ್ತಾಗಿ, ನಂದಿಯು ಶಿವನನ್ನು ಮಿಂಚಿನ ವೇಗದಲ್ಲಿ ಹೋಗಬೇಕಾದ ಸ್ಥಳಕ್ಕೆ ತಲುಪಿಸಿದನಂತೆ. ಅದಕ್ಕೆ ಮೆಚ್ಚಿದ ಶಿವನು ನಂದಿಯನ್ನು ಪೂಜಿಸುವಂತೆ ಪಾರ್ವತಿಗೆ ಹೇಳುತ್ತಾನೆ. ಪೂಜೆಯಲ್ಲಿ ಪಾಲ್ಗೊಳ್ಳಲು ನಂದಿ ಜೊತೆ ಪಶುಪತಿ ಇನ್ನುಳಿದ ಪ್ರಾಣಿಗಳನ್ನು ಆಮಂತ್ರಿಸುತ್ತಾನೆ. ಪ್ರಸಾದಕ್ಕಾಗಿ ಪಾರ್ವತಿ ಹುಗ್ಗಿ ತಯಾರಪಡಿಸುವಾಗ ಹುಟ್ಟಿನಿಂದ ತಿರುವುತ್ತಿರುವಾಗ ಅವಳ ಕೈ ಬೆರಳಿನ ಉಂಗುರ ಜಾರಿ ಹುಗ್ಗಿಯಲ್ಲಿ ಬೀಳುತ್ತದೆ. ಕುದಿಯುವ ಬಿಸಿ ಹುಗ್ಗಿಯಿಂದ ಉಂಗುರ ತೆಗೆಯುವುದು ಯಾರಿಂದಲೂ ಸಾಧ್ಯವಾಗದಿದ್ದಾಗ ಮತ್ತೆ ನಂದಿಯು ಮುಂದೆ ಬಂದು ತನ್ನ ಕೋಡಿನಿಂದ ಹೊನ್ನಿನ ಉಂಗುರ ಹೊರ ತೆಗೆದನಂತೆ! ಹುಗ್ಗಿಯಲ್ಲಿ ಹೊನ್ನು (ಬಂಗಾರ)" ಬಿದ್ದಿದ್ದ ಆ ದಿನವನ್ನು

'ಹೊನ್ನುಗ್ಗಿ' ದಿನ ಎಂದಾಯಿತು.[೬೭] ಈ ಕಥೆ ಜನಪದರಲ್ಲೂ ಇದೆ. ಇಂದಿನ ದಿವಸ ಗೋಧಿ ಹುಗ್ಗಿ, ಕಿಚಡಿ, ದಪ್ಪಾಟಿ ಅಡುಗೆ ತಯಾರಿಸಿ ಸಂಜೆ ವೇಳೆಗೆ ಎತ್ತು ದನಕರುಗಳನ್ನು ಪೂಜಿಸಿ ತಿನ್ನಲು ಎಡೆಯಿಡುವರು.

**೨. ಕಾರಹುಣ್ಣಿಮೆ ದಿನ ಎತ್ತುಗಳಿಗೆ ಸ್ನಾನ ಮಾಡಿಸುವರು :**

ವಿವಿಧ ನಮೂನೆಯಲ್ಲಿ ಸಣ್ಣ ಸಣ್ಣ ಕನ್ನಡಿ ತುಂಡು ಹಚ್ಚಿ ಹೊಲಸಿದ ಬಣ್ಣ ಬಣ್ಣದ ಬಟ್ಟೆಗಳು ಇಲ್ಲವೆ ಹೊಸ ಸೀರೆಗಳು ಬೆನ್ನಿನ ಮೇಲೆ ಹಾಕಿ ಕೊಂಬಿಗೆ ಕೋಡುಬಳೆ, ಹಾಗೂ ಬಣ್ಣ ಹಚ್ಚಿರುತ್ತಾರೆ. ಎತ್ತಿನ ಮೈ ತುಂಬಾ ಬಣ್ಣದ ಹಸ್ತ ಮುದ್ರೆ ಹಾಕುವರು. ಹಣೆ ಮೇಲೆ ಬಾಸಿಂಗ ಕಟ್ಟುವರು. ಕೊರಳಲ್ಲಿ ಕವಡೆ ಸರ ಗಂಟೆ ಸರ ಹಾಕುವರು. ನವ ವಧುವಿಗೆ ಶೃಂಗರಿಸಿದಂತೆ ಎತ್ತುಗಳಿಗೆ ಶೃಂಗರಿಸುವರು. ಇವು ರೈತರ ಉತ್ಸಾಹದ ನಡುವೆ ಯಾರ ಎತ್ತುಗಳು ಹೆಚ್ಚಿನ ರೀತಿಯಲ್ಲಿ ಶೃಂಗರಿಸಲ್ಪಟ್ಟಿವೆ ಎನ್ನುವ ಪೈಪೋಟಿಯು ಕಾಣುತ್ತದೆ. ಅಲಂಕಾರಗೊಳಿಸಿದ ಎತ್ತುಗಳನ್ನು ಮಧ್ಯಾಹ್ನದಿಂದ ವಿವಿಧ ಭಾವ ಭಂಗಿಯ ದೃಶಗಳೊಂದಿಗೆ ಬಾಜ ಭಜಂತ್ರಿಯೊಂದಿಗೆ ಮೆರವಣಿಗೆ ಮಾಡುತ್ತಾರೆ. ಎತ್ತುಗಳೊಂದಿಗೆ ಗಂಡಸರು ಸೀರೆ ಉಟ್ಟು ಬಿತ್ತುವ ಭಂಗಿಯಲ್ಲಿ ನೇಗಿಲು ಹಿಡಿದು ಬರುವುದು. ಬಂಡಿಗಳಿಗೆ ಸುತ್ತಲು ವಿವಿಧ ಸಸ್ಯಗಳನ್ನು ಹಚ್ಚಿಕೊಂಡು ಬರುವುದು. ಹೀಗೆ ಕೃಷಿಗೆ ಸಂಬಂಧಿಸಿದ ದೃಶ್ಯಗಳಾಗಿರುತ್ತವೆ. ಮೆರವಣಿಗೆಯುದ್ದಕ್ಕೂ ಎತ್ತುಗಳಿಗೆ, ರಾಜನಿಗೆ ಸಿಂಹಾಸನ ಮಾರ್ಗದಲ್ಲಿ ಹೂ ಮಳೆ ಸುರಿಸಿದಂತೆ ಅಳ್ಳನ್ನು ಹಾಕುವರು. ಇದನ್ನು ನೋಡಲು ಹಳ್ಳಿಯ ಜನರು ಕಾಯ್ದು ಕುಳಿತಿರುತ್ತಾರೆ. ಈ ವೈಭವದ ಮೆರವಣಿಗೆ ಕಳೆದ ಹತ್ತು ಹದಿನೈದು ವರ್ಷಗಳ ಹಿಂದ ಇದ್ದಷ್ಟು ಇಚೀನ ವರ್ಷಗಳಲ್ಲಿ ಕಾಣುತ್ತಿಲ್ಲ. ಇದಕ್ಕೆ ಕಾರಣಗಳೆಂದರೆ ಯಂತ್ರೋಪಕರಣಗಳ ಬಳಕೆಯ ಹೆಚ್ಚಳ ಮತ್ತು ಎತ್ತುಗಳು ಹೆಚ್ಚಿನ ರೈತರು ಹೊಂದದೆ ಇರುವುದು ಹಾಗೂ ರೈತರಲ್ಲಿ ಆಗಿರುವ ಬದಲಾವಣೆಗಳು ಮುಂತಾದವು.

**೩. ಎತ್ತುಗಳಿಗೆ ಎಣ್ಣೆ ಕುಡಿಸುವುದು ಮತ್ತು ಉಳ್ಳಾಗಡ್ಡಿ, ಬೆಲ್ಲ ಕಡಲೆಬೇಳೆ ತಿನ್ನಿಸುವುದು:**

ಕಾರ ಹುಣ್ಣಿಮೆ ದಿವಸ ಎತ್ತುಗಳಿಗೆ ಸ್ನಾನದ ನಂತರ ಎಣ್ಣೆ ಕುಡಿಸಿ ಕೆಲವೊಂದು ತಿಂಡಿಗಳನ್ನು ತಿನ್ನಿಸುವ ನಂಬಿಕೆಯಿದೆ. ಉಳ್ಳಾಗಡ್ಡಿ, ಬೆಲ್ಲ, ಕಡಲೆಬೇಳೆ ಮಿಶ್ರಣಮಾಡಿ ತಿನ್ನಿಸುತ್ತಾರೆ. ಇದರಿಂದಾಗಿ ಕಫ, ಪಿತ್ತದೋಷ ಮುಂತಾದ ಖಾಯಿಲೆ ನಿವಾರಣೆಯಾಗುತ್ತವೆಂದು ರೈತರ ನಂಬಿಕೆ.[೬೮] ಮಳೆಗಾಲ ಆರಂಭ ಕಾಲವಾದ್ದರಿಂದ ದುಡಿಯಲು ಸಿದ್ಧವಾಗಿರುವ ಜೀವಿಗಳಿಗೆ ಪೌಷ್ಠಿಕತೆ ಸಿಗಲಿ ಎನ್ನುವ ಉದ್ದೇಶವಾಗಿರುವುದು.

**೪. ಎತ್ತುಗಳ ಬಾಲದ ಕೂದಲು (ಜವೆ) ಕತ್ತರಿಸುವುದು :**

ಕಾರಹುಣ್ಣಿಮೆ ದಿವಸ ಹಜಾಮರು ಮನೆ ಮನೆಗೆ ಬಂದು ಎತ್ತುಗಳ ಬಾಲದ ಕೂದಲನ್ನು ಕತ್ತರಿಸುವರು. ಇಲ್ಲದಿದ್ದರೆ ಮನೆಯಲ್ಲಿಯೇ ಕತ್ತರಿಸುವರು. ಕೂದಲು ನಡೆಯುವಾಗ ತೊಂದರೆಯಾಗಬಾರದೆಂದು ಕತ್ತರಿಸುತ್ತಾರೆ. ಕತ್ತರಿಸಿದ ಕೂದಲು ಉದ್ದವಾಗಿರುವುದರಿಂದ ಕಾಯ್ದಿರಿಸಿ ಹಗ್ಗ ಮಾಡುವಾಗ ಉಪಯೋಗಿಸಿಕೊಳ್ಳುವರು. ಇದನ್ನು ಹಾಕಿ ಮಾಡಿದ ಹಗ್ಗಕ್ಕೆ 'ಜವೆಹಗ್ಗ' ಎನ್ನುವರು. ಇದನ್ನು ಕೃಷಿ ಕೆಲಸಕ್ಕಾಗಿ ಬಳಸುವರು.

---

೬೭(ಅಡಿ ಟಿಪ್ಪಣಿ :೬೭: ಬೆಳೆ-೧ ಲೇಖಕರು ಡಾ.ಎಂ.ಜಿ.ಬಿರಾದರ್ ಪುಟ ಸಂಖ್ಯೆ ೨೦೨)
೬೮(ಅಡಿ ಟಿಪ್ಪಣಿ:೬೮: ಕೃಷಿ ಆಚರಣೆ ಮಲ್ಲಿಕಾರ್ಜುನ ಹೊಸಪಾಳ್ಯ, ಪುಟ ಸಂಖ್ಯೆ ೧೦೦)

**೫. ಊರಿನ ಗೌಡರ ಮನೆಯ ಎತ್ತುಗಳನ್ನು ಕರಿ ಹರಿಯುವುದು (ಕಡಿಯುವುದು) :**

ಹಳ್ಳಿಗಳಲ್ಲಿ ಈ ಹಿಂದೆ ಗೌಡರೆ ಊರಿನ ಪ್ರಮುಖರಾಗಿದ್ದು ಊರಿನ ಆಗು ಹೋಗುಗಳ ಜವಾಬ್ದಾರಿ ಅವರಿಗಿತ್ತು. ಹೀಗಾಗಿ ಪ್ರಮುಖರೆನ್ನುವ ಗೌರವಕ್ಕೆ ಮಾನ್ಯತೆ ಕೊಟ್ಟು ಅವರ ಎತ್ತುಗಳಿಗೆ ಕರಿ ಹರಿಯುವ ಪದ್ಧತಿ ರೂಢಿಯಾಗಿರಬೇಕು.

ಬೇವಿನ ಚಿಕ್ಕ ಚಿಕ್ಕ ತೊಂಗಲು, ಮೆದೆಯ ನುಲಿಗೆ ಕಟ್ಟಿ ಉದ್ದವಾದ ತೋರಣ ಮಾಡಿರುತ್ತಾರೆ. ಅದನ್ನು ಊರ ಅಗಸೆ ಬಾಗಿಲಲ್ಲಿ ಅಡ್ಡವಾಗಿ ಎತ್ತುಗಳ ಎತ್ತರಕ್ಕೆ ಸರಿಯಾಗಿ ನೋಡಿಕಟ್ಟುವರು. ಕರಿ ಹರಿಯಲು ಗೊತ್ತು ಮಾಡಿದ ಒಂದು ಕರಿ (ಕಂದು, ಕೆಂಪು) ಇನ್ನೊಂದು ಬಿಳಿ ಎತ್ತುಗಳನ್ನು ವಾದ್ಯ ವೈಭವಗಳೊಂದಿಗೆ ಮೆರವಣಿಗೆಯಲ್ಲಿ ತಂದು ಅಗಸೆಯ ಬಳಿಯಲ್ಲಿ ನಿಲ್ಲಿಸುವರು. ಕಟ್ಟಿದ ತೋರಣ ಬಾರಕೋಲಿನಿಂದ ಜೋರಾಗಿ ತೋರಣ ಹರಿಯುವಂತೆ ಬಾರಿಸುವರು. ಇದರ ಶಬ್ದಕ್ಕೆ ಎತ್ತುಗಳೆರಡು ಓಡಲು ಪ್ರಾರಂಭಿಸುವುವು. ಇದೇ ಕರಿ ಹರಿಯುವುದು. ಆಗ ಕರಿ ಎತ್ತು ಓಡಿ ಮುಂದಾದರೆ ಮುಂಗಾರು ಬೆಳೆಗಳಾದ ಕೆಂಪು ಧಾನ್ಯಗಳು ಉತ್ತಮವಾಗಿ ಬರುತ್ತವೆಂದು ಬಿಳಿ ಎತ್ತು ಮುಂದಾದರೆ ಹಿಂಗಾರಿನ ಬೆಳೆಯಾದ ಬಿಳಿಧಾನ್ಯ ಚೆನ್ನಾಗಿ ಬರುವುದೆಂಬ ನಂಬಿಕೆ ಜನಪದರದ್ದು. ಎತ್ತು ಓಡಿ ಗೌಡರ ಮನೆಯೇ ಸೇರಬೇಕು. ಮುಂದೆ ಓಡುವ ಎತ್ತು ಬೇರೆಯವರ ಮನೆಗೆ ಹೋದರೆ ಕರಿ ಹರಿಯುವ ಪದ್ಧತಿ ಅವರು ಮುಂದುವರಿಸಬೇಕಾಗುತ್ತದೆ. ಆದ್ದರಿಂದ ಬೇರೆ ಕಡೆ ಹೋಗದಂತೆ ಓಡುವ ಎತ್ತಿನ ಹಿಂದೆ ವ್ಯಕ್ತಿಯೊಬ್ಬನು ಓಡಿ ಗೌಡರ ಮನೆಗೆ ತಲುಪುವಂತೆ ಮಾಡುತ್ತಾನೆ.

**೬. ಕಾರ ಹುಣ್ಣಿಮೆಗೆ ಅಗಸೆ ದಾಟಿದ ಎತ್ತುಗಳು ಹ್ವಾಳಕ್ಕೆ ಊರನ್ನು ಪ್ರವೇಶಿಸುತ್ತವೆ :**

ಈ ನಂಬಿಕೆಯ ಉದ್ದೇಶವೆಂದರೆ ಕಾರಹುಣ್ಣಿಮೆ ನಂತರ ಬಿತ್ತನೆ ಕೆಲಸ ಆರಂಭವಾಗುವುದರಿಂದ ಊರಿನ ಎಲ್ಲಾ ಎತ್ತುಗಳು ಅಗಸೆ ಹೊರಗಿನ ಹೊಲಗಳಲ್ಲಿಯೇ ಕೆಲಸದಲ್ಲಿ ನಿರತವಾಗಿರುತ್ತವೆ. ಬಿತ್ತನೆ ನಂತರ ಸಣ್ಣಕುಂಟೆ ಬೆಳೆಗಳ ನಡುವೆ ನೇಗಿಲು ಹೀಗೆ ಒಂದಿಲ್ಲಾ ಒಂದು ಕೆಲಸದಲ್ಲಿ ಸುಮಾರು ತಿಂಗಳಿಂದ ಎರಡು ತಿಂಗಳ ಕಾಲ ಕಳೆಯುತ್ತವೆ. ಬೆಳೆಗಳು ಎತ್ತರಕ್ಕೆ ಬಂದಾಗ ಎತ್ತುಗಳಿಗೆ ಕೆಲವು ದಿನಗಳ ಕಾಲ ಬಿಡುವು ಸಿಗುತ್ತದೆ. ಈ ಸಮಯದಲ್ಲಿ ಊರಿನ ಮುಖ ಕಾಣುವ ಎತ್ತುಗಳಿಗೆ ಹ್ವಾಳ ಆಚರಣೆ ಮುಖಾಂತರ ಪ್ರವೇಶಮಾಡಿ ಕೊಳ್ಳುತ್ತಾರೆ. ಹ್ವಾಳ ಆಚರಣೆ ಕಾರಹುಣ್ಣಿಮೆಯಂತೆಯೇ ಎಲ್ಲಾ ಆಚರಣೆ ಒಂದೇ ಆಗಿರುವುದರಿಂದ, ಕಾರಹುಣ್ಣಿಮೆ ಮಾಡಿದಲ್ಲಿ ಹ್ವಾಳ ಮಾಡುವುದಿಲ್ಲ. ಹ್ವಾಳ ಮಾಡುವಲ್ಲಿ ಕಾರಹುಣ್ಣಿಮೆ ಮಾಡುವುದಿಲ್ಲ. ಹ್ವಾಳ ಆಚರಣೆ ಜೆನಕನ ಅಮವಾಸ್ಯೆ ದಿವಸ ಆಚರಿಸಲಾಗುವುದು.

**ಮಣ್ಣೆತ್ತಿನ ಅಮವಾಸ್ಯೆ :**

ಮಣ್ಣಿನಿಂದ ಮಾಡಿದ ಎತ್ತುಗಳನ್ನು ಪೂಜೆ ಮಾಡುವುದರಿಂದ ಮಣ್ಣೆತ್ತಿನ ಅಮವಾಸ್ಯೆ ಎಂದು ಕರೆಯುತ್ತಾರೆ. ಕಾರ ಹುಣ್ಣಿಮೆಯಲ್ಲಿ ಜೀವಂತ ಎತ್ತುಗಳನ್ನು ಪೂಜಿಸಿದರೆ ಮಣ್ಣೆತ್ತಿನ ಅಮವಾಸ್ಯೆಯಂದು ಮನೆಯಲ್ಲಿ ಮಣ್ಣಿನಿಂದ ತಯಾರಿಸಿದ ಎತ್ತುಗಳನ್ನು ಪೂಜಿಸುತ್ತಾರೆ. ಮಣ್ಣಿನಿಂದ ತಯಾರಿಸಿದ ಎತ್ತಿಗೆ ಕಣ್ಣೆಂದು ಗುಲಗುಂಜಿ ಅಥವಾ ಜೋಳದ ಕಾಳು ಹಚ್ಚಿ ಜೀವಂತ ಎತ್ತುಗಳಂತೆ ಜೀವಕಳೆ ತುಂಬಿ ತಯಾರಿಸಿದ

ಎತ್ತುಗಳನ್ನು ನೋಡಿದರೆ ಜನಪದರ ಕಲಾ ಕೌಶಲ್ಯ ಎಂಥದ್ದೆಂದು ಗೊತ್ತಾಗುವುದು. ಇದರ ಜೊತೆ ಎತ್ತುಗಳಿಗೆ ನೀರು ಕುಡಿಯುವ ಮಂತಣಿ (ದನಗಳಿಗೆ ನೀರು ಕುಡಿಯಲು ಮಾಡಿದ ಸಣ್ಣ ಹೌಜು) ತಯಾರಿಸಿ ಪೂಜಿಸುವರು. "ಪಂಚಾಂಗಗಳಲ್ಲಿ ಇದನ್ನು 'ಮೃತ್ತಿಕಾವೃಷಭ ಪೂಜಾ' ಎಂದು ಸಂಸ್ಕೃತದಲ್ಲಿ ಬರೆದಿರುವುದಾದರೂ ಈ ಮಣ್ಣಿನ ಎತ್ತಿನ ಪೂಜೆ ಜಾನಪದ ಸಂಪ್ರದಾಯವೇ ಹೊರತು ಇದಕ್ಕೆ ಪೌರಾಣಿಕ ಪ್ರಮಾಣದ ಪ್ರಮಾಣಗಳಾವವೂ ಸಿಗುವುದಿಲ್ಲ. ಎಂದು ದಿ.ಡಾ.ಬೆಟಗೇರಿ ಕೃಷ್ಣಶರ್ಮರ ಅಭಿಪ್ರಾಯವಾಗಿದೆ.[೬೯] ಪೂಜಿಸಿದ ಎತ್ತುಗಳನ್ನು ಮರುದಿವಸ ಸಣ್ಣ ಸಣ್ಣ ಮಕ್ಕಳು ಕಾರ ಹುಣ್ಣಿಮೆಯಂತೆ ಮೆರವಣಿಗೆಯನ್ನು ಅನುಕರಿಸುತ್ತಾರೆ. ಮಣ್ಣಿನಿಂದ ಮಾಡಿದ್ದರಿಂದ ಹಾಳಾಗುವುದರಿಂದ ಆಟವಾಡಲು ಬಿಡುವುದು ಅಪರೂಪವಾಗಿದೆ. ಏಕೆಂದರೆ ಪೂಜಿಸಿದ ಎತ್ತು ಮುಕ್ಕಾಗ (ಹಾಳಾಗ) ಬಾರದೆಂಬ ಕಾರಣದಿಂದ ತಕ್ಷಣ ಬಾವಿಗಳಲ್ಲಿ ಎಸೆಯುತ್ತಾರೆ. ಈ ಆಚರಣೆ ಕುರಿತು ಜನಪದರು ಹೇಳುವ ಕಥೆಯೊಂದು ಹೀಗಿದೆ. ಕಾರ ಹುಣ್ಣಿಮೆಗೆ ರೈತರು ಮೆರೆಸುವ ಎತ್ತುಗಳನ್ನು ನೋಡಿದ ಹಿರಿಯ ಬಡ ವೃದ್ದೆಯೊಬ್ಬಳು ತನ್ನಲ್ಲಿ ಇಂತಹ ಎತ್ತುಗಳಿಲ್ಲವೆಂದು ಚಿಂತಿಸುತ್ತಾಳೆ. ಮುಂದೆ ಬರುವ ಅಮವಾಸ್ಯೆಯೆಂದು ಮಣ್ಣಿನ ಎತ್ತು ಮಾಡಿ ತನ್ನ ಮನೆಯಲ್ಲಿ ಅವೇ ಜೀವಂತ ಎತ್ತುಗಳೆಂದು ಭಾವಿಸಿ ಪೂಜಿಸಿರುತ್ತಾಳೆ. ಈ ನಂಬಿಕೆಯಿಂದಾಗಿ ಆಕೆಗೆ ಕಾರಹುಣ್ಣಿಮೆ ಬರುವುದರೊಳಗಾಗಿ ಎತ್ತುಗಳನ್ನು ಖರೀದಿಸುವ ಅವಕಾಶ ಒದಗಿ ಬರುತ್ತದೆ. ಮಣ್ಣಿನ ಎತ್ತಿನ ಕಾಲಗುಣದಿಂದ ಈ ಜೀವಂತ ಎತ್ತುಗಳು ಬರುವಂತಾಯಿತು ಎನ್ನುವ ನಂಬಿಕೆಯಿದೆ. ಈ ಅಮವಾಸ್ಯೆಗೂ ಮಣ್ಣಿನ ಎತ್ತು ಮಾಡುವುದು ಬಿಡದೆ ಮುಂದುವರಿಸಿಕೊಂಡು ಬರಲು ಕಾರಣವಾಗಿದೆ ಎಂದು ಹೇಳುವರು. ಅಲ್ಲದೆ ಈ ಅಮವಾಸ್ಯೆ ಆಷಾಡ ತಿಂಗಳಲ್ಲಿ ಬರುವುದರಿಂದ ಅದರ ಕುರಿತು ನಂಬಿಕೆಗಳು ಹೀಗಿವೆ.

**ಆಷಾಡದಲ್ಲಿ ಬಿತ್ತಬಾರದು :**

ಈಗಾಗಲೇ ಈ ಸಮಯದಲ್ಲಿ ಬಿತ್ತಿದ ಬೀಜ ಮೊಳಕೆ ಒಡೆದು ಭೂಮಿಯ ಮೇಲೆ ಹಸುರಿನ ಹಾಸಿಗೆ ಹಾಸಿರುತ್ತವೆ. ಬೆಳೆ ಫಲ ಭರಿತವಾಗುವ ಹಂತದಲ್ಲಿರುತ್ತವೆ. ಆಷಾಡ ಬಿತ್ತುವುದಕ್ಕೆ ತಡವಾದ ಅವಧಿಯಾಗುತ್ತದೆ. ಅಲ್ಲದೆ ಧಾರಕಾರವಾಗಿ ಸುರಿಯುವ ಮಳೆಯ ರಭಸದಿಂದ ಬೀಜ ಮೊಳಕೆ ಒಡೆಯುವ ಬದಲು ಕೊಳೆತು ಹೋಗುವ ಸಾಧ್ಯತೆಗಳೆ ಹೆಚ್ಚು ಹಾಗೂ ಮುಂದಿನ ಬೆಳೆಯು ಬಿತ್ತಲು ತಡವಾಗುತ್ತದೆ. ಆದ್ದರಿಂದ ಆಷಾಡದಲ್ಲಿ ಬಿತ್ತಬಾರದು ಎನ್ನುವ ನಂಬಿಕೆ ಬೆಳೆದು ಬಂದಿರುತ್ತದೆ.

**ಆಷಾಡದಲ್ಲಿ ರೈತರಿಗೆ ಕಷ್ಟದ ದಿನಗಳು ಹೆಚ್ಚು :**

ಹಳ್ಳಿಯ ಜನರು ಆಷಾಡ ಮಾಸದ ದಿನಗಳನ್ನು 'ಆಕಾಡ' ದಿನಗಳೆಂದೂ ಕರೆಯುತ್ತಾರೆ. ಅಂದರೆ ರೈತ ತನಗೆ ಬಿತ್ತನೆ, ಬೀಜ, ಗೊಬ್ಬರ ಇವುಗಳಿಗೆ ತನ್ನಲ್ಲಿರುವ ಹಣವನ್ನು ಖರ್ಚು ಮಾಡಿ ಖಾಲಿಯಾಗಿರುತ್ತಾನೆ. ಬಿತ್ತನೆ ಕೆಲಸ ಮುಗಿದಿರುತ್ತದೆ. ಬೇರೆ ಕೆಲಸ ಮಾಡುವ ಅವಕಾಶಗಳಿರುವುದಿಲ್ಲ. ಮೇಲೆ ಧಾರಕಾರವಾಗಿ ಸುರಿಯುವ ಮಳೆ, ಜೋರಾಗಿ ಬೀಸುವ ಗಾಳಿಯಿಂದ ಮೈಯೆಲ್ಲಾ ಭಾರವಾಗಿರುತ್ತದೆ. ಹವಮಾನದ ಬದಲಾವಣೆಯಿಂದ ಹಸಿವೆ ಹೆಚ್ಚಾಗುತ್ತದೆ. ಹಾಗೂ ಆರ್ಥಿಕ ಕೊರತೆಯಿಂದಾಗಿ ರಾಶಿ ಬರುವವರೆಗೆ ಕಷ್ಟವೆನಿಸುವುದು. ಈ ನಂಬಿಕೆಯು ನಿಜವಾದ ಮಾತಾಗಿರುವುದು.

---

೬೯(ಅಡಿ ಟಿಪ್ಪಣಿ೬೯: ಕನ್ನಡ ದಿನ ಪತ್ರಿಕೆ ಸಂಯುಕ್ತ ಕರ್ನಾಟಕ ದಿ.೦೭.೦೬.೨೦೦೯)

**ಕಡ್ಲಿಗಡಬ ಹುಣ್ಣಿಮೆ :**

ಕಡ್ಲಿ ಗಡಬ ಹುಣ್ಣಿಮೆಯು ವ್ಯವಸಾಯಕ್ಕೆ ಸಂಬಂಧಿಸಿದ ಆಚರಣೆಯಾಗಿದೆ. ಎಲ್ಲಾ ವಿಶೇಷ ದಿನಗಳಂತೆ ಮನೆ ಶುಚಿ ಮಾಡುವುದರೊಂದಿಗೆ ದನಗಳ ಕೊಟ್ಟಿಗೆಯನ್ನು ಸಾರಣೆ ಮಾಡಿ ಸ್ವಚ್ಛಗೊಳಿಸುವರು. ಈ ಹುಣ್ಣಿಮೆಯನ್ನು ಕೊಟ್ಟಿಗೆ ಹುಣ್ಣಿಮೆ ಎಂದು ಕರೆಯುತ್ತಾರೆ. ಕೊಟ್ಟಿಗೆಯಲ್ಲಿ ದನಗಳ ಸಗಣಿ, ಮೂತ್ರದಿಂದಾಗಿ ಹೊಲಸಾಗಿರುವುದನ್ನು ತಿಳಿಪಡಿಸಲಾಗುತ್ತದೆ. ಇದರಿಂದ ದನಗಳ ಆರೋಗಕ್ಕೆ ಒಳ್ಳೆಯದಾಗುತ್ತದೆ. ಹಾಗೂ ದನಗಳು ಕಟ್ಟುವ 'ಗೂಟು'ಗಳಿಗೆ ಪೂಜಿಸಿ ನೈವೇದ್ಯ ಮುಟ್ಟಿಗಿ ಪಲ್ಯಹಾಕಿ ಮಾಡಿದ ಜೋಳದ ಕಡಬು ಮತ್ತು ಆಳಿ (ಗೋಧಿ ಹಿಟ್ಟು ಮತ್ತು ಬೆಲ್ಲ ಮಿಶ್ರಿತ ತಿಳಿಸಾರು) ಮಾಡುವರು. ಈ ಹುಣ್ಣಿಮೆಗೆ ಸಿಹಿ ತಿಂಡಿ ಮತ್ತು ಗೋಧಿ ಹುಗ್ಗಿ ಮಾಡುವುದಿಲ್ಲ. ಏಕೆಂದರೆ ಗೋಧಿ ಹುಗ್ಗಿ ಮಾಡಿದರೆ ದನಗಳಿಗೆ ಉನ್ನಿ ಎನ್ನುವ ಹುಳು ಮೆತ್ತಿಕೊಳ್ಳುವವು ಎನ್ನುವ ನಂಬಿಕೆಯಿಂದ. ಈ ಹುಣ್ಣಿಮೆ ಮಳೆಗಾಲದಲ್ಲಿ ಬರುವುದು ಹಾಗೂ ಕೊಟ್ಟಿಗೆಯಲ್ಲಿ ಕೆಸರಾಗುವ ಕಾರಣದಿಂದ ಉನ್ನಿ ದನಗಳಿಗೆ ಹತ್ತಬಹುದು ಮತ್ತು ದನಗಳಿಗೆ ಸಿಹಿ ಈ ದಿನದಲ್ಲಿ ತಿನ್ನಿಸಿದರೆ ಯಾವುದೇ ರೋಗಕ್ಕೆ ತುತ್ತಾಗಬಹುದೆನ್ನುವ ಉದ್ದೇಶದಿಂದ ಸಿಹಿ ನಿಷೇಧಮಾಡಿರಬೇಕು. ಮುಟ್ಟಿಗೆ ಪಲ್ಯ ಇದು ಮಳೆಗಾಲದಲ್ಲಿ ಹೊಲದಲ್ಲಿ ಸಿಗುವದರಿಂದ ಆರೋಗ್ಯದ ಹಿತದೃಷ್ಟಿಯಿಂದ ಒಳ್ಳೆಯದು. ಉಳಿದ ದಿನಗಳಲ್ಲಿ ಮಾಡಿಲ್ಲವೆಂದರೂ ಈ ಆಚರಣೆಯ ನಿಮಿತ್ಯ ಈ ಪಲ್ಯ ಊಟಮಾಡುವ ಉದ್ದೇಶವಾಗಿದೆ. ಇಂತಹ ತಪ್ಪಲು ಪಲ್ಯಗಳು ಆರೋಗ್ಯಕ್ಕೆ ಒಳ್ಳೆ ಪೌಷ್ಠಿಕತೆ ಕೊಡುತ್ತವೆ.

**ಅಳ್ಳಬಳ್ಳ:**

ಅನಂತನ ಹುಣ್ಣಿಮೆಯ ಮರುದಿವಸದಿಂದ ಹನ್ನೆರಡು ದಿವಸಗಳ ಕಾಲ ಪಾಲಿಸುತ್ತಾರೆ. ಈ ದಿನಗಳಲ್ಲಿ ಮೊದಲ ಶುಕ್ರವಾರ ಸುಳ್ಳು ಶುಕ್ರವಾರ ಹಾಗೂ ಒಂದು ಮಂಗಳವಾರ ಮಳ್ಳ ಮಂಗಳವಾರ ಆದ ಬಳಿಕ ಬರುವ ಶುಕ್ರವಾರದವರೆಗೆ ಕೃಷಿಕರು ಮನೆಯಲ್ಲಿ ಸ್ನಾನ ಮಾಡುವುದಿಲ್ಲ. ಈ ರೀತಿಯ ಆಚರಣೆಯಲ್ಲಿ ಸ್ನಾನ ಮಾಡದೆ ಇರುವುದು ಸ್ವಚ್ಛತೆ ತೋರಿಸಿಕೊಡುವುದಿಲ್ಲವಾದರೂ ಅದಕ್ಕಿಂತಲೂ ಹೆಚ್ಚಿನದಾಗಿ ಗಮನಿಸಬೇಕಾದುದೆಂದರೆ ಅಳ್ಳಬಳ್ಳವು ಸುಗ್ಗಿ ದಿನಗಳಲ್ಲಿ ಬರುವುದರಿಂದ ರೈತರಿಗೆ ಬಿಡುವು ಇಲ್ಲದ ಕೆಲಸ. ಆದ್ದರಿಂದ ಇಲ್ಲಿ ಕೃಷಿಕರು ತಮ್ಮ ಆರೋಗ್ಯದ ಕಡೆಯೂ ಗಮನಿಸದೆ ಸದಾ ಕಾಲ ಕೆಲಸದಲ್ಲಿ ನಿರತರಾಗಿರುತ್ತಿದ್ದರು. ಇದರಿಂದ ಈ ಹಿಂದಿನ ಕೃಷಿಕರು ಸುಗ್ಗಿ ದಿನಗಳಲ್ಲಿ ಎಷ್ಟು ಶ್ರಮಪಡುತ್ತಿದ್ದರು ಎನ್ನುವುದು ಅರಿಯಬೇಕಾಗಿದೆ. ಆದರೆ ಇಂದಿನ ದಿನಗಳಲ್ಲಿ ಈ ನಂಬಿಕೆ ಮತ್ತು ಆಚರಣೆಯು ಸಂಪೂರ್ಣವಾಗಿ ಬದಲಾವಣೆಯಾಗಿದೆ ಎಂದು ಹೇಳಬಹುದು.

**ದಸರಾ :**

ದಸರಾ ಹಬ್ಬದ ಆಚರಣೆಯಲ್ಲಿ ಕೃಷಿಗೆ ಸಂಬಂಧಿಸಿದ ನಂಬಿಕೆ ಮತ್ತು ಆಚರಣೆಗಳು ಇವೆ.

**ಒಂಭತ್ತು ದಿವಸ ಘಟ ಹಾಕುವುದು :**

ಮಹಾಲಯ ಅಮವಾಸ್ಯೆ ಮರುದಿವಸದಿಂದ ಘಟ ಹಾಕಿ ಅದರಲ್ಲಿ ಅಂಭಾಭವಾನಿ ರೂಪವಿಟ್ಟು ಪೂಜಿಸಲಾಗುವುದು. ವಿಜಯದಶಮಿಯವರೆಗೆ ಘಟವಿರುವುದು. ದೇವರ ಜಗುಲಿಯ ಮೇಲೆ ಬಾಳೆ, ಇಲ್ಲವೆ

ಶ್ರೀಗಂಧ ಎಲೆ ಹಾಕಿ ಹೊಲದಲ್ಲಿರುವ ಹದವಾದ ಮಣ್ಣನ್ನು ಮದನಾ ತಂದು ಹಾಕುವರು. ಇದರಲ್ಲಿ ಮುಂಗಾರಿನ ಬೆಳೆ ಮತ್ತು ಹಿಂಗಾರಿನಲ್ಲಿ ಬಿತ್ತುವ ಗೋಧಿ, ಬಿಳಿಜೋಳ, ಕಡ್ಲಿ, ಮುಂತಾದವುಗಳು ಸೇರಿಸಿ ಒಟ್ಟು ನವರಾತ್ರಿಯ ಪ್ರತೀಕವಾಗಿ ಒಂಭತ್ತು ದವಸಧಾನ್ಯ ಮಿಶ್ರಣ ಮಾಡಿ ಹಾಕುವರು. ಇಲ್ಲಿ ಸಸ್ಯ ಉತ್ಪಾದನೆ ಹೇಗಾಗುತ್ತದೆಂಬುದನ್ನು ವೈಜ್ಞಾನಿಕ ಪ್ರಯೋಗ ಮಾಡುವುದು ಕಂಡು ಬರುತ್ತದೆ. ತಾವು ಹಾಕಿದ ಬೀಜಗಳಲ್ಲಿ ಯಾವುದು ದಟ್ಟವಾಗಿ ಎತ್ತರವಾಗಿ ಬೆಳೆಯುತ್ತದೆಯೊ ಆ ಧಾನ್ಯಗಳನ್ನು ಬಿತ್ತಬೇಕೆಂದು ಗೊತ್ತು ಮಾಡಿಕೊಳ್ಳುತ್ತಾರೆ. ಒಂದು ವೇಳೆ ಚೆನ್ನಾಗಿ ನಾಟಲಿಲ್ಲವೆಂದರೆ ಹೊಲದಲ್ಲಿ ಬಿತ್ತಿದರೂ ಬೆಳೆಯುವುದಿಲ್ಲವೆಂದು ತಿಳಿದು ಬೇರೆ ಬೀಜಗಳನ್ನು ಸಿದ್ಧಪಡಿಸಿಕೊಳ್ಳುವರು. ಒಂಭತ್ತು ದಿವಸ ಘಟ ಹಾಕಲು ಆಗದವರು ಐದು ಇಲ್ಲವೆ ಎರಡು ದಿನಗಳಾದರು ಘಟ ಹಾಕುವುದುಂಟು.

ಈ ಘಟಹಾಕಿರುವುದರಲ್ಲಿ ಸಸಿಗಳು ಹೇಗೆ ಬೆಳೆಯುತ್ತವೆ ಎಂದು ನೋಡುವುದಕ್ಕಾಗಿ ಮನೆ ಕೆಲಸ ಬಿಟ್ಟು ಹೋಗಲು ಪುರಸೊತ್ತಾಗುವುದಿಲ್ಲ. ಆದ್ದರಿಂದ ದೇವತೆ ಹೆಸರಲ್ಲಿ "ಜೋಗ" ಬೇಡುವ ನೆಪದಿಂದ ಬೇರೆಯವರ ಮನೆ ಮನೆಗೆ ಹೋಗಲೇಬೇಕಾಗುತ್ತದೆ ಹಾಗೂ ಘಟ ನೋಡುವ ಅವಕಾಶ ಸಿಗುತ್ತದೆ ಆದ್ದರಿಂದ 'ಜೋಗ' ಬೇಡುವ ನಂಬಿಕೆ ಬೆಳೆದಿರಬೇಕು.

**ದೀಪಾವಳಿ :**

ಕಾರ್ತಿಕ ಮಾಸದಲ್ಲಿ ಬರುವ ದೀಪಾವಳಿ ಬೆಳಕಿನ ಪ್ರತೀಕವಾಗಿದೆ. ಕೃಷಿಗೆ ಸಂಬಂಧಿಸಿದಂತೆ ಈ ಹಬ್ಬದಲ್ಲಿ ಕಂಡು ಬರುವ ನಂಬಿಕೆ ಮತ್ತು ಆಚರಣೆಗಳು ಸಹಕಾರಿಯ ಅಂಶಗಳನ್ನು ಹೊಂದಿವೆ. ಹೊಲದಲ್ಲಿ ಮುಂಗಾರಿನ ಬಿತ್ತನೆಯ ರಾಶಿ ಮುಗಿದು ಖಾಲಿಯಾಗಿರುವ ಇಲಿಗಳು ಮನೆಯಲ್ಲಿ ಸಂಗ್ರಹಿಸಿಟ್ಟ ಕಾಳುಗಾಗಿ ಮನೆ ಸೇರುತ್ತವೆ. ಆದ್ದರಿಂದ ಬಹುತೇಕ ಹಬ್ಬದಿಂದ ಒಂದು ತಿಂಗಳವರೆಗೂ ದೀಪ ಹಚ್ಚುವುದುಂಟು.

ಕೃಷಿಗೆ ಸಂಬಂಧಪಟ್ಟಂತೆ ದೀಪಾವಳಿಯಲ್ಲಿ ಈ ನಂಬಿಕೆ ಮತ್ತು ಆಚರಣೆಗಳು ರೂಢಿಯಲ್ಲಿವೆ.

೧. ದೀಪಾವಳಿಯ ಮೂರು ದಿವಸಗಳಲ್ಲಿ ಮೊಸರು – ಕುಂಕುಮ ಮಿಶ್ರಮ ಮಾಡಿ ದನಗಳಿಗೆ ಪೂಜಿಸುವುದು ಮತ್ತು ಬೆಂಕಿಯನ್ನು ದಾಟಿಸುವರು:

ಕೃಷ್ಣನು ನರಕಾಸುರನಿಂದ ಗೋವುಗಳನ್ನು ಬಿಡಿಸಿದ ಪ್ರತೀಕವಾಗಿ ಗೋವುಗಳನ್ನು ಪೂಜಿಸುವ ನಂಬಿಕೆಯಿದೆ. ದೀಪಾವಳಿ ಚಳಿಗಾಲದ ಆಗಮನಕ್ಕೆ ಸ್ವಾಗತಿಸುತ್ತದೆ. ಮೈಕೊರೆಯುವ ಚಳಿಯಿಂದಾಗಿ ಶೀತವಾಗುತ್ತದೆ. ಮತ್ತು ಚರ್ಮ ಎಣ್ಣೆ ಅಂಶ ಕಡಿಮೆಯಾಗಿರುವುದರಿಂದ ಒಣಗುತ್ತದೆ. ಹಾಗೆಯೇ ಪ್ರಾಣಿಗಳ ಆರೋಗ್ಯವನ್ನು ಕಾಪಾಡಲು ಜಿಡ್ಡಿನ ಅಂಶದ ಮೊಸರು ಶೀತವನ್ನು ಎಳೆಯುವ ಕುಂಕುಮ ಮಿಶ್ರಣದಿಂದ ಪೂಜಿಸಿ ದೇಹದ ಇತರ ಭಾಗಗಳಿಗೆ ಹಚ್ಚುವರು. ಹಾಗೂ ಶೀತದಿಂದ ಮುಕ್ತವಾಗಿಸಲು ಎಳ್ಳಿನ ಕೊಡ್ಲಿಯ (ಕಟ್ಟಿಗೆ) ಹಗುರ ಉರಿಯಲ್ಲಿ ಬೆಂಕಿಯನ್ನು ದಾಟಿಸುವರು. ಬಯಲು ಜಾಗದಲ್ಲಿದ್ದರೆ ' ಬೆಂಕಿ ಕಂಡು ದನಕರುಗಳು ದೂರ ಓಡಲು ಪ್ರಯತ್ನಿಸುತ್ತವೆ. ಕೈಗೆ ಸಿಗುವುದಿಲ್ಲ. ಆದ್ದರಿಂದ ಮನೆಯ ಹೊರಬಾಗಿಲ ಮುಂದೆ ಹಚ್ಚಿದರೆ ಯಾವ ಕಡೆ ದಾರಿ ಸಿಗದೆ ಬಾಗಿಲ ಮುಂದೆ ಹಚ್ಚಿದ ಉರಿ ದಾಟಿ ಹೋಗುತ್ತವೆ. ಮೈಗೆ ಕಾವು ಬಡಿಯುತ್ತದೆ. ಅವುಗಳಿಗೆ ಮೆತ್ತಿಕೊಂಡ ಉಣ್ಣಿಯಂಥಹ ಸಣ್ಣ ಕ್ರಿಮಿಗಳು ಸುಟ್ಟುಹೋಗುತ್ತವೆ.

೧. ದೀಪಾವಳಿಯಲ್ಲಿ ದನಕರುಗಳಿಗೆ ರಾತ್ರಿ ದೀವಟಿಗೆ ಬೆಳಗುವುದು:

ಸಹೋದರಿಯರು ವಿಜಯದ ಸಂಕೇತವಾಗಿ ಸಹೋದರರಿಗೆ ಆರತಿ ಬೆಳಗಿದಂತೆ, ದನಕರುಗಳಿಗೂ ಆರತಿ ಬೆಳಗುವ ಸಂಪ್ರದಾಯವಿದೆ. ದನಕಾಯುವ ಹುಡಗರು ಸೇರಿ ಇಡಿ ದಿನ ದನ ಕಾಯುವುದರ ಜೊತೆಗೆ ಈ ಪೀಡೆಯನ್ನು ಮಾಡುತ್ತಾರೆ. ಉದ್ದನೆಯ ಹಸಿರು ಹುಲ್ಲನ್ನು ಕೊಯ್ದು ಅದನ್ನು ನಾಗರ ಹೆಡೆಯಂತೆ ಮಾಡಿ ಅದರಲ್ಲಿ ಹಣತೆ ಇಡುತ್ತಾರೆ. ಅಡವಿಯ ಹೂಗಳಿಂದ ಅಲಂಕರಿಸಿ ಕೆಳಗೆ ಅದನ್ನು ಹಿಡಿಯಲು ಉದ್ದವಾಗಿ ಹಿಡಿಕೆ ಬಿಟ್ಟಿರುತ್ತಾರೆ. ಮುಸ್ಸಂಜೆಯಲ್ಲಿ ಹುಡುಗರು ಗುಂಪಿನೊಡನೆ ಮನೆ ಮನೆಗೆ ಹೋಗುತ್ತಾರೆ. ದೀವಟಿಗೆ ಹಿಡಿದವನು ಪ್ರತಿ ಮನೆ ಪ್ರತಿ ದನಕ್ಕೂ ಪೀಡೆ ಬೆಳಗುತ್ತಾನೆ. ಆಗ ಅವನು ಮತ್ತು ಜೊತೆಗಾರರು ಸೇರಿ ಹಾಡನ್ನು ಹಾಡುತ್ತಾರೆ. ಎತ್ತು, ಎಮ್ಮೆ, ಆಕಳು, ಆಡು ಹೀಗೆ ಆಯಾ ದನಗಳ ಮೇಲೆ ಬೇರೆ ಬೇರೆ ಹಾಡುಗಳನ್ನು ಹಾಡುತ್ತಾರೆ.

೨. ಕುಳ್ಳು (ಬೆರಣಿ) ತಟ್ಟಿ ಪೂಜಿಸುವುದು:

ಗೋವನ್ನು ದೇವರೆಂದು ಪೂಜಿಸುವುದರಿಂದ ಅದರ ಮೂತ್ರ ಮತ್ತು ಸಗಣಿಯಲ್ಲಿ ಪೂಜ್ಯ ಭಾವನೆ ತುಂಬಿರುವುದು ಕಂಡು ಬರುತ್ತದೆ. ಹಾಗೆಯೇ ಅದರಲ್ಲಿ ಅಷ್ಟೇ ಉಪಯುಕ್ತ ಗುಣಗಳಿವೆ. ಆಕಳ ಸಗಣಿಯನ್ನು ನೊಸಲಿಗೆ ಹಚ್ಚುವ ವಿಭೂತಿ ತಯಾರಿಸುವಲ್ಲಿ ಬಳಸುವರು. ಗೊಬ್ಬರಕ್ಕೆ ಉಪಯುಕ್ತ, ಗೋಮೂತ್ರ ಮನೆ ಮೈಲಿಗೆ ಕಳೆಯುತ್ತದೆ. ಎನ್ನುವ ನಂಬಿಕೆಯ ಹಿಂದೆ ರೋಗ ನಿರೋಧಕ ಮತ್ತು ಕ್ರಿಮಿನಾಶಕವೂ ಆಗಿದೆ. ಅದರಂತೆ ಸಗಣಿಯಿಂದ ಬೆರಣಿ ಉರುವಲುಕ್ಕಾಗಿ ಬಳಸುತ್ತಾರೆ. ದೀಪಾವಳಿಯ ಹಿಂದಿನ ದಿನಗಳಲ್ಲಿ ಮಳೆಯಿರುವುದರಿಂದ ಬೆರಣಿಯನ್ನು ತಟ್ಟಲು ಬರುವುದಿಲ್ಲ. ಮುಂದೆ ಬೇಸಿಗೆಯಲ್ಲಿ ಹುಲ್ಲಿನ ಅಭಾವದಿಂದಾಗಿ ಸಗಣಿ ಸಿಗುವ ಪ್ರಮಾಣ ಕಡಿಮೆ ಹಾಗೂ ಜಿಗುಟಾದ ಮೆತ್ತನೆಯ ಸೆಗಣಿ ಸಿಗುವುದಿಲ್ಲ. ಚಳಿಗಾಲದ ದೀಪಾವಳಿ ಹಬ್ಬದಲ್ಲಿ ಹಾಗೂ ನಂತರದ ಕೆಲವು ದಿನಗಳವರೆಗೆ ಹದವಾದ ಸಗಣಿ ಸಿಗುವುದರಿಂದ ಇಂದು ಕುಳ್ಳು ತಟ್ಟಿ ಪೂಜಿಸಿದ ನಂತರ ಮುಂದಿನ ದಿನಗಳಲ್ಲಿ ಬೆರಣಿ ತಟ್ಟಿ ಸಂಗ್ರಹಿಸಿಟ್ಟುಕೊಳ್ಳುವರು.

ಎಳ್ಳ ಅಮವಾಸ್ಯೆ :

ಮಾಘಮಾಸದಲ್ಲಿ ಬರುವ ಎಳ್ಳ ಅಮವಾಸ್ಯೆ ಉತ್ತರ ಕರ್ನಾಟಕದಲ್ಲಿ ಆಚರಿಸುವ ಕೃಷಿ ಹಬ್ಬವಾಗಿದೆ. ಕಾಯಿಪಲ್ಲೆಯ ದಿನ, ಅಮವಾಸ್ಯೆ ಮತ್ತು ಕರಿ ಎಂದು ಮೂರು ದಿನಗಳಲ್ಲಿ ಆಚರಿಸಲಾಗುವುದು. ಈ ದಿನಗಳಲ್ಲಿ ಕೃಷಿಕರಿಗೆ ಬಿಡುವಿಲ್ಲದೆ ಕೆಲಸಗಳಿರುತ್ತವೆ. ಇಂತಹ ಸಮಯದಲ್ಲಿ ಆಗಮಿಸುವ ಈ ಹಬ್ಬವನ್ನು ಅತ್ಯಂತ ಸಂಭ್ರಮದಿಂದ ಆಚರಿಸುತ್ತಾರೆ. ಇದಕ್ಕೆ ಕಾರಣವೆಂದರೆ ಅವರಿಗಾಗಿರುವ ಸಂತೋಷ. ಮುಂಗಾರಿನ ರಾಶಿಯೆಲ್ಲಾ ಮನೆ ತುಂಬಿರುವುದು. ಹಾಗೆಯೇ ಹಿಂಗಾರಿನಲ್ಲಿ ಬಿತ್ತಿದ್ದ ಬಿಳಿಜೋಳ, ಶೇಂಗಾ ಸೂರ್ಯಕಾಂತಿ, ಬೇಸಿಗೆ ಸಜ್ಜೆ ಮುಂತಾದ ಪೈರಿನಿಂದ ಭೂತಾಯಿ ತನ್ನ ಮಡಿಲನ್ನು ತುಂಬಿಸಿಕೊಂಡಿರುತ್ತಾಳೆ. ಹೀಗೆ ಹೊಲ ಹಸಿರು ರೈತರ ಕಣ್ಮನ ಸೆಳೆಯುತ್ತವೆ. ಇಂತಹ ದೃಶ್ಯ ಕಂಡ ರೈತರು ಈ ಸಂತೋಷವನ್ನು ಕೊಡುವ ಭೂಮಿತಾಯಿಗೆ ತಾನು ಬೆಳೆದ ಆಹಾರ ಧಾನ್ಯಗಳಿಂದಲೇ ವಿವಿಧ ನಮೂನೆಯ ಬಯಕೆ ಊಟಗಳನ್ನು

ತಯಾರಿಸಿ ನೈವೆದ್ಯ ಅರ್ಪಿಸುವುದರ ಮೂಲಕ ಕೃತಜ್ಞತೆಗಳನ್ನು ಸಲ್ಲಿಸುತ್ತಾನೆ. ಮನಸ್ಸಿಗೆ ನೆಮ್ಮದಿಯನ್ನು ತೃಪ್ತಿಯನ್ನು ಕಂಡುಕೊಳ್ಳುತ್ತಾನೆ.

ಇಲ್ಲಿ ಕೃಷಿ, ಆರೋಗ್ಯ, ಕೌಟುಂಬಿಕ, ಸಾಮಾಜಿಕ ಸಂಬಂಧಗಳ ನೆಲೆಯನ್ನು ಗುರುತಿಸುವ ಈ ಹಬ್ಬದ ನಂಬಿಕೆಗಳು ವೈಜ್ಞಾನಿಕ ಮನೋಭಾವ ಹೊಂದಿವೆ. ಈ ಹಬ್ಬದ ಆಚರಣೆಯ ಕುರಿತು ನಂಬಿಕೆಗಳು ಈ ಕೆಳಗಿನಂತಿವೆ.

**೧. ಕಾಯಿಪಲ್ಯೆ ದಿನ ಎಂದು ಹೇಳುವುದು :**

ಎಳ್ಳ ಅಮವಾಸ್ಯೆ ಮುಂಜಾನೆ ಸಿದ್ಧ ಪಡಿಸಿದ ಅಡುಗೆಯೊಂದಿಗೆ ಹೊಲಗಳಿಗೆ ಹೊಗಬೇಕಾಗಿರುತ್ತದೆ. ಬಗೆಬಗೆಯ ಅಡುಗೆ ಎಲ್ಲ ಅಂದೆ ಮಾಡಿಕೊಳ್ಳಲು ಆಗದ ಕಾರಣ ಹಿಂದಿನ ದಿವಸ ಅಡುಗೆಗೆ ಬೇಕಾದ ಕಾಳುಗಳು, ತರಕಾರಿ, ಕಾಯಿಪಲ್ಯೆ ಎಲ್ಲವುಗಳು ಮಾರುಕಟ್ಟೆಯಿಂದಾಗಲಿ, ಹೊಲಗದ್ದೆಗಳಿಂದಾಗಲಿ ತಂದು ಸ್ವಚ್ಛಪಡಿಸಿ ತಯಾರಿಸುವ ದಿನವಾದ್ದರಿಂದ , 'ಕಾಯಿಪಲ್ಯೆ' ದಿನವೆಂದೇ ಕರೆಯಲಾಗುವುದು. ಅಂದಿನ ಮುಂಜಾನೆ ಮನೆಯಲ್ಲಿ ಸಾರಣೆ ಮಾಡಿ ಸ್ವಚ್ಛಗೊಳಿಸಿ ತಲೆಸ್ನಾನ ಮಾಡಿ ತಾಜವಾದ ನೀರನ್ನು ತಂದು ಅಡುಗೆ ಮಾಡಲು ಅಣಿಯಾಗುವರು. ರೊಟ್ಟಿ, ಎಳ್ಳು ಹಚ್ಚಿದ ಸಜ್ಜೆ ರೊಟ್ಟಿ, ಬಜಿ, ಹುಗ್ಗಿ ವಿವಿಧ ಕಾಯಿಪಲ್ಯೆ ಮಿಶ್ರಿತ ಹಿಂಡಿ ಪಲ್ಯ, ಹೋಳಿಗೆ, ಅಂಬಲಿ ಮುಂತಾದವುಗಳು ಸಿದ್ಧ ಪಡಿಸುವರು. ಇವುಗಳಲ್ಲಿ ಬಳಸುವ ಎಲ್ಲಾ ಕಾಯಿಪಲ್ಯೆಗಳು ಹೊಲದಲ್ಲಿಯೇ ಸಿಗುವಂತಹವು. ಅವರೆಕಾಳು, ತೊಗರಿಕಾಳು, ಹಸಿರು ತರಕಾರಿ ಇವೆಲ್ಲವು ಆರೋಗ್ಯಕ್ಕೆ ಅತ್ಯವಶ್ಯಕವಾದ ಪೌಷ್ಠಿಕಾಂಶವನ್ನು ಒದಗಿಸಿಕೊಡುತ್ತವೆ. ಈ ಋತುಮಾನದಲ್ಲಿ ಸಿಗುವ ಇವೆಲ್ಲವುಗಳು ಇಂತಹ ಹಬ್ಬದ ನೆಪದಿಂದಲಾದರೂ ಸೇವಿಸುವ ಅವಕಾಶ ದೊರಕಿಸಿಕೊಳ್ಳಲು ಈ ಎಳ್ಳ ಅಮವಾಸ್ಯೆ ಜಾರಿಗೆ ಬಂದಿರುವುದರ ಉದ್ದೇಶ ಕಂಡು ಬರುತ್ತದೆ.

**೨. ಅಂಬಲಿ ಕೊಡ ಮೊದಲು ಊರಿನ ಗೌಡರು ಒಯ್ಯುವುದು :**

ಜೋಳದ ಹಿಟ್ಟು, ಮಜ್ಜಿಗೆ, ಜಿರಿಗೆ, ಕೊತ್ತಂಬರಿ, ಅಲ್ಲಾ (ಹಸಿ ಶುಂಠಿ) ಉಪ್ಪು ಹಾಕಿ ತಿಳಿಯಾಗಿ ತಯಾರಿಸಿದ ಪಾನೀಯವನ್ನು ಅಂಬಲಿ ಎನ್ನುವರು. ಇದು ಕುಡಿಯುವುದರಿಂದ ಹೊಟ್ಟೆಯಲ್ಲಿ ತಣ್ಣಗಾಗಿರುತ್ತದೆ. ಅಮವಾಸ್ಯೆ ಮುಂಜಾನೆ ಹೊಸ ಗಡಿಗೆ ಮುಚ್ಚಳ ತರಿಸಿ ಅದರಲ್ಲಿ ತುಂಬುವರು. ಇದನ್ನು ಹಿರಿಯರಾದವರು ಚೆಲ್ಲದಂತೆ ಎಚ್ಚರವಹಿಸಿ ತಲೆ ಮೆಲ್ಲಿಟ್ಟುಕೊಂಡು ಒಯ್ಯುತ್ತಾರೆ. ಅಂಬಲಿ ಕೊಡ ಬೀಳಬಾರದೆಂಬ ನಂಬಿಕೆಯು ಇದೆ. ಇದಕ್ಕೆ ಕಾರಣವೆಂದರೆ ಅಂಬಲಿ ತಯಾರಿಸಲು ಮುಖ್ಯವಾಗಿ ಬೇಕಾಗಿದ್ದ ಮೊಸರು, ಮಜ್ಜಿಗೆ ತಕ್ಷಣ ಸಿಗುವುದಿಲ್ಲ. ಅಂತಹದ್ದರಲ್ಲಿ ಬಿದ್ದು ಹಾಳಾದರೆ ಇಂದಿನ ಈ ಅವಸರದಲ್ಲಿ ಮತ್ತೆ ಮಾಡುವುದು ಕಷ್ಟವಾಗುತ್ತದೆ. ಎಲ್ಲವನ್ನು ಸಂಗ್ರಹಿಸಿ ಮಾಡಿದ್ದು ಉಪಯೋಗಕ್ಕೆ ಬಾರದಂತಾಗುತ್ತದೆ ಎನ್ನುವ ಉದ್ದೇಶದಿಂದ ಇದು ಬೀಳಬಾರದೆಂಬ ನಂಬಿಕೆ ಇದ್ದಿರಬೇಕು.

ಈ ಹಿಂದೆ ಗೌಡರ ಮನೆಯ ಅಂಬಲಿ ಕೊಡವೆ ಮೊದಲು ವಾದ್ಯ ಸಮೇತ ಹೋಗುವ ಪದ್ಧತಿ ಇರುವುದಾಗಿ ಹೇಳುತ್ತಾರೆ. ಗೌಡರಿಗೆ ಊರಿನ ಮುಖಂಡನೆಂಬ ಗೌರವವಿದ್ದುದರಿಂದ ಈ ಪದ್ಧತಿ ರೂಢಿಸಿಕೊಂಡಿರಬೇಕು ಹಾಗೂ ವಾದ್ಯದ ಶಬ್ದದಿಂದಾಗಿ ಬಿಸಿಲು ಹೆಚ್ಚಾಗುವ ಮುನ್ನ ನಾವು ಹೊಲ ಸೇರಬೇಕು

ಎನ್ನುವುದು ಸೂಚಿಸಲು ಗೌಡ ಊರಿನ ಜನತೆ ಪರವಾಗಿ ಎಚ್ಚರಿಸಲು ಕರೆಗಂಟೆಯಾಗಿದ್ದರಿಬೇಕು. ಆದರೆ ಈ ವ್ಯವಸ್ಥೆಯಲ್ಲಿ ಬದಲಾವಣೆಯಾಗಿದೆ. ಇಂದು ಸಾಮಾನ್ಯವಾಗಿ ಎಲ್ಲರು ತಮ್ಮ ತಮ್ಮ ಅನುಕೂಲದಂತೆ ಹೊರಡುವರು.

**೩. ಬನ್ನಿಗಿಡದ ಕೆಳಗೆ ಗುಡಿಸಲು ಹಾಕಿ ಪಾಂಡವರನ್ನು ಮತ್ತು ಲಕ್ಷ್ಮಿಯನ್ನು ಪೂಜಿಸುವುದು:**

ಹೊಲಗಳಲ್ಲಿ ಯಾವುದೇ ಗುಡಿಗಳು ಇಲ್ಲದಿದ್ದರೂ ಪ್ರತಿ ಹೊಲದಲ್ಲಿ ಪಾಂಡವರೆಂದು ಐದು ಕಲ್ಲುಗಳನ್ನಿಟ್ಟು ಪೂಜಿಸುವ ನಂಬಿಕೆಯಿದೆ. ಆದ್ದರಿಂದ ಬನ್ನಿಗಿಡಕ್ಕೆ ಜೋಳದ ಕಳಿಕೆಯ ಸೂಡುಗಳನ್ನು ಜೋಡಿಸಿ ಗುಡಿಸಲು ಹಾಕಿ ಅಲ್ಲಿರುವ ಪಾಂಡವರನ್ನು ಪೂಜಿಸುವರು.

ಭೂದೇವಿಯನ್ನು ಲಕ್ಷ್ಮಿಯೆಂದು ಪೂಜಿಸುವರು. ಹಾಗೂ ಹಸಿರು ಇಲ್ಲವೆ ಕೆಂಪು ಕುಬ್ಬಸವಿಟ್ಟು ಉಡಿ ತುಂಬವರು ಇದಕ್ಕೆ ಕಾರಣವೆಂದರೆ, ಭೂದೇವಿಯು ಹಸಿರಿನ ಪೈರಿನಿಂದ ತನ್ನ ಮಡಿಲನ್ನು ತುಂಬಿಸಿಕೊಂಡಿದ್ದರಿಂದ ಗರ್ಭಿಣಿಯೆಂಬ ನಂಬಿಕೆ. ಆದ್ದರಿಂದಲೇ ಭೂದೇವಿಯ ಬಯಕೆ ಊಟ ಎಂದು ವಿವಿಧ ನಮೂನೆಯ ಅಡುಗೆ ಮಾಡಿದ್ದನ್ನು ನೈವೇದ್ಯವಾಗಿ ಭೂದೇವಿಗೆ ಅರ್ಪಿಸುವರು. ಹಾಗೂ ವ್ಯವಸಾಯಕ್ಕೆ ಸಹಾಯಕವಾಗಿರುವ ನೀರಿನ ಮೂಲಗಳಿಗೂ ಮತ್ತು ಎತ್ತುಗಳಿಗೂ ಪೂಜಿಸುವರು.

**೪. ಹೊಸ ಮುಚ್ಚಳದಲ್ಲಿ ಅಡುಗೆಯ ಪದಾರ್ಥಗಳೆಲ್ಲವು ಕಲಸಿ ಮೇಲೆ ಸಿಂಪಡಿಸುವುದು:**

ಹೊಸ ಮುಚ್ಚಳದಲ್ಲಿ ಆಹಾರ ಪದಾರ್ಥಗಳನ್ನು ಕಲಿಸುವುದು. ಪಂಚಲೋಹಗಳ ಮಿಶ್ರಣದ ಬಳಕೆ ಒಳ್ಳೆಯದೆಂಬ ನಂಬಿಕೆಯಿದೆ. ತಾಮ್ರ ತಂಬಿಗೆಯ ನೀರಲ್ಲಿ ಬಂಗಾರ ಒಡವೆ ಹಾಕುವರು. ಇಬ್ಬರು ಜೋಡಿಯಾಗಿ 'ಚರಗ' ಚೆಲ್ಲಲು ತಲೆಗೆ ರುಮಾಲು ಸುತ್ತಿಕೊಂಡು, ಆಹಾರ ಕಲಿಸಿದ ಮುಚ್ಚಳ ಹಿಡಿದವನು 'ಓಲಿಗೆ ಓಲಿಗೇ (ಸಾಲು ಸಾಲಿಗೆ) ಎನ್ನುವನು. ಅದಕ್ಕೆ ಪ್ರತಿಯಾಗಿ ಹಿಂದಿರುವವನು ಕಬ್ಬಿನ ಇಲ್ಲವೆ ಜೋಳದ ದಂಟಿನಿಂದ ನೀರು ಬೆಳೆಗಳಿಗೆ ಸಿಂಪಡಿಸುತ್ತಾ 'ಚೆಲಂಪೋಳಿಗೆ' (ಹೋಳಿಗೆ ಚೆಲ್ಲು) ಎಂದು ಹೇಳುವನು. ಬೆಳೆಗಳ ಸುತ್ತಲು ಮತ್ತು ನಡುವಿನ ಸಾಲುಗಳಿಗೂ ಓಡಾಡಿ ಚರಗ ಸಿಂಪಡಿಸುವರು. ಇದರಿಂದ ಭೂ ದೇವಿಗೆ ಊಟ ಮಾಡಿಸಿದೇವು ಎಂಬ ಸಂತೋಷ ಕೃಷಿಕರಿಗಾಗಿರುತ್ತದೆ. ಇದರಿಂದ ಸಂತೃಪ್ತಳಾದ ಭೂದೇವಿ ಹೆಚ್ಚಿನ ಇಳುವರಿ ಕೊಡುವಳೆಂಬ ನಂಬಿಕೆ.

ಈ ನಂಬಿಕೆಯಲ್ಲಿ ಕಂಡು ಬರುವ ವೈಜ್ಞಾನಿಕ ಮನೋಭಾವನೆಯೆಂದರೆ, ಆಹಾರವೆಲ್ಲಾ ಪುಡಿ ಪುಡಿಯಾಗಿ ಹೊಲದ ತುಂಬೆಲ್ಲಾ ಸಿಂಪಡಿಸುವುದರಿಂದ ಬೆಳೆಗಳಿಗೆ ಅಂಟಿಕೊಂಡಿದ್ದ ಕ್ರಿಮಿಗಳೆಲ್ಲವು ದೂರವಾಗಿ ಆಹಾರ ಕಣ ತಿನ್ನಲು ಬರುವವು ಹಾಗೂ ರೋಗ ನಿರೋಧಕ ತಾಮ್ರದ ಪಾತ್ರೆಯ ನೀರಿನಿಂದಾಗಿಯೂ ಸಣ್ಣ ಕ್ರಿಮಿಗಳು ನಾಶವಾಗಿ ಬೆಳೆಗಳಿಗೆ ಕಬ್ಬಿಣಾಂಶದ ಪ್ರಭಾವ ಸಿಗುತ್ತದೆ.

**೫. ಸಾಮೂಹಿಕ ಊಟದ ಆಚರಣೆ :**

ಈ ಒಂದೆ ದೊಡ್ಡ ಕೃಷಿಕರು ಹಾಗೂ ಹೆಚ್ಚಾಗಿ ಬಿಳಿ ಜೋಳದ ಬಿತ್ತಿದವರಷ್ಟೇ ಹೊಲಗಳಿಗೆ ಸಾಮೂಹಿಕವಾಗಿ ಮತ್ತು ಊಟವೆಲ್ಲಾ ಒಯ್ಯುವುದು ರೂಢಿಯಾಗಿತ್ತು. ಆದ್ದರಿಂದ ಇತರರನ್ನು ಹೆಚ್ಚಿನ

ಸಂಖ್ಯೆಯಲ್ಲಿ ಕರೆಯುತ್ತಿದ್ದರು. ಆದರೆ ಇಂದು ಯಾವುದೆ ಜೆಳೆ ಇದ್ದರೂ ಎಲ್ಲರು ಹೋಗುವುದನ್ನು ಕಂಡು ಬರುತ್ತದೆ. ದಿನ ನಿತ್ಯದ ಬಿಡುವಿಲ್ಲದ ಕೆಲಸದಿಂದಾಗಿ ಅವರವರಿಗೆ ಅನುಕೂಲವಾಗುವಂತೆ ಊಟ ಮಾಡುವುದು ಸಹಜವಾಗಿರುತ್ತದೆ.

ಚರಗ ಚೆಲ್ಲುವವರೆಗೆ ಯಾರು ಊಟ ಮಾಡಲಾರರು. ಇದಾದ ನಂತರ ಉಳಿದಿರುವ ಕೆಲಸ ಊಟ ಮಾಡುವುದೊಂದೆ, ಅಲ್ಲದೆ ಕುಟುಂಬದ ಸದಸ್ಯರು ಹಾಗೂ ಆಹ್ವಾನಿತರು ಬಂದರೆ ಎಲ್ಲರು ಸೇರಿಕೊಂಡು ಊಟಕ್ಕೆ ಕೂಡುವರು. ಇಂದಿನ ವಿಶೇಷವಾದ ಎಲ್ಲಾ ಆಹಾರ ಪದಾರ್ಥಗಳು ಸೇವಿಸಲು ಎಳ್ಳಿನಷ್ಟಾದರೂ ಹೊಟ್ಟೆ ದೊಡ್ಡದಾಗುತ್ತದೆ ಎನ್ನುವ ನಂಬಿಕೆಯು ಮತ್ತು ಎಳ್ಳಿನ ಕಾಳಿನಷ್ಟು ಹೊತ್ತು ನಿಲ್ಲುತ್ತದೆಂಬ ನಂಬಿಕೆಯು ಇದೆ. ಎಲ್ಲರೂ ಒಟ್ಟಾಗಿ ಕುಳಿತು ವಿವಿಧ ಆಹಾರ ಸೇವಿಸುವುದರಿಂದ ಹೊಟ್ಟೆ ಭಾರವಾಗುವುದು. ಆದ್ದರಿಂದಲೇ ಇದನ್ನು ಜೀರ್ಣಿಸಿಕೊಳ್ಳಲು ಸಿಗುವ ಸಿಹಿ ಪದಾರ್ಥವೆಂದರೆ ನಿಸರ್ಗ ಮೂಲದ ಜೇನು ತುಪ್ಪ ಇಂದಿನ ದಿವಸ ತಿನ್ನಬೇಕೆಂಬ ನಂಬಿಕೆ ಉಪಯುಕ್ತವಾದುದಾಗಿದೆ.

ಇಂತಹ ಸಮಯದಲ್ಲಿ ಜೇನು ಸಿಗುವುದು ಸರಿಯಾಗಿಯೇ ಇದೆ. ತಾಜ ಜೇನು ತಿನ್ನುವದರಿಂದ ಆರೋಗ್ಯಕ್ಕೆ ಒಳ್ಳೆಯದು. ರಕ್ತ ಶುದ್ಧಿಕರಿಸುವ, ಕೆಮ್ಮು ನಾಶಪಡಿಸುವ, ಜೀರ್ಣಶಕ್ತಿ ವೃದ್ದಿಸುವ ರುಚಿಯ ಅಂಶ ಅದರಲ್ಲಿರುವುದು. ಆದ್ದರಿಂದ ಭರ್ಜರಿ ಊಟಕ್ಕೆ ಒಂದು ಹನಿ ಜೇನುತುಪ್ಪ ರಾಮಬಾಣದಂತೆ ಹಾಗೂ ಊಟದ ನಂತರ ಕಬ್ಬು ಕೂಡಾ ತಿನ್ನುತ್ತಾರೆ.

**೬. ಎಳ್ಳ ಅಮಾವಾಸ್ಯೆ ಮರುದಿವಸದಿಂದ ಅವರಾತ್ರಿಯವರೆಗೆ ಸೋನೆಮಾಸ ಎಂದು ಆಚರಿಸುವರು :**

ಸೋನೆ (ಸೊನ್ನೆ) ಮಾಸದಲ್ಲಿ ಯಾವುದೇ ಶುಭಕಾರ್ಯಗಳನ್ನು ಮಾಡಬಾರದೆಂಬ ನಂಬಿಕೆಯಿದೆ. ಈ ನಂಬಿಕೆಯ ಉದ್ದೇಶವೆಂದರೆ ರೈತರು ಸಂಪೂರ್ಣವಾಗಿ ಜೋಳಕ್ಕೆ ಹಕ್ಕಿ ಬಂದು ಕುಳಿತುಕೊಳ್ಳುವುದರಿಂದ ಹಕ್ಕಿ ಹೊಡೆಯುವುದು ಕಡ್ಲಿ ಕಾಯುವುದು ಹೀಗೆ ಕೃಷಿ ಕೆಲಸಗಳಲ್ಲಿ ನಿರತರಾಗಿರುವುದರಿಂದ ಇತರೆ ಬೇರೆ ಕಾರ್ಯಗಳು ಮಾಡಲು ಸಮಯ ಸಿಗುವುದಿಲ್ಲ. ಮತ್ತು ಇನ್ನಿತರರಲ್ಲಿಯೂ ಹೋಗಲು ಅವಕಾಶಗಳಿರುವುದಿಲ್ಲ. ಕೃಷಿಯಲ್ಲಿ ವರ್ಷ ಪೂರ್ತಿ ಉದ್ಯೋಗವು ಇರುವುದಿಲ್ಲ ಹಾಗೂ ಆದಾಯವು ಇರುವುದಿಲ್ಲ. ಸುಗ್ಗಿ ದಿನಗಳಲ್ಲಿ ಮಾತ್ರ ಅವರು ವರ್ಷಪೂರ್ತಿಗೆ ಬೇಕಾಗುವ ಆಹಾರ ಸಂಗ್ರಹಣೆ, ಹೆಚ್ಚಿನ ಉದ್ಯೋಗವಕಾಶಗಳಿಂದಾಗಿ ಹಣ ಹೊಂದಿಸಿಕೊಳ್ಳುವದು. ಇಂತಹ ಅವಕಾಶಗಳು ಬಿಟ್ಟು ಶುಭ ಕಾರ್ಯ ಮಾಡುತ್ತಾ ಹೋದರೆ ಕೆಲಸ, ಆದಾಯ ಎಲ್ಲವು ಕೈತಪ್ಪಿ ಹೋಗುತ್ತವೆ. ಆದ್ದರಿಂದ ಸೋನೆ ಮಾಸದ ಆಚರಣೆ ದೇವರ ಹೆಸರಿನಲ್ಲಿ ಪಾಲನೆಗೆ ತಂದರೆ ಎಲ್ಲರು ಅನಿವಾರ್ಯವಾಗಿ ಪಾಲಿಸಿಕೊಂಡು ಬರುತ್ತಾರೆ ಎನ್ನುವ ಉದ್ದೇಶವಾಗಿರುವ ಕೃಷಿಕರು ಸಮಯ ಪರಿಪಾಲನೆಗೂ ಮತ್ತು ಕೆಲಸಕ್ಕೂ ಮಹತ್ವಕೊಟ್ಟಿರುವುದು ಕಂಡು ಬರುವುದು.

**ಭಾರತ (ತೆನೆಕಟ್ಟುವ) ಹುಣ್ಣಿಮೆ :**

ವರ್ಷದಲ್ಲಿ ಬರುವ ಕೆಲವೊಂದು ಹುಣ್ಣಿಮೆಗಳು ವಿಶೇಷವಾದ ಆಚರಣೆಗಳನ್ನು ಹೊಂದಿದಂತೆ ತೆನೆಕಟ್ಟುವ ಹುಣ್ಣಿಮೆ ತನ್ನದೆ ಆದ ವಿಶಿಷ್ಟತೆಯನ್ನು ಹೊಂದಿದೆ. ಹಿಂಗಾರಿನಲ್ಲಿ ಬಿತ್ತಿದ ಎಲ್ಲಾ ಜೋಳ, ಗೋಧಿ, ಅಗಸೆ, ಕುಂಡಿ, ಕಡ್ಲಿ ಇತ್ಯಾದಿ ಬೆಳೆಗಳ ತೆನೆಗಳು ಕಾಳು ತುಂಬಿಕೊಂಡು ಫಲಭರಿತವಾಗಿರುತ್ತವೆ. ಜನಗಳು

ಒಡೆದು ಚಿಗುರುವ ಸಮಯವಾಗಿರುತ್ತದೆ. ಹಾಗೂ ಹೊಲದ ಕೃಷಿ ಕಾರ್ಯಗಳು ವರ್ಷದ ಅಂತ್ಯಕ್ಕೆ ಬಂದಿರುತ್ತವೆ. ಕಾರಹುಣ್ಣಿಮೆ ವರ್ಷಾರಂಭದ ಬಿತ್ತನೆ ಅವಧಿಯಾಗಿದ್ದು ಬಿತ್ತಲು ಆರಂಭಿಸುವುದಕ್ಕೆ ಮೊದಲು ಬಸವನ ಪೂಜೆ ಮಾಡುವುದು. ಬಸವನೆಂದು ಕರೆಯಿಸಿ ಕೊಳ್ಳುವ ಎತ್ತುಗಳ ವರ್ಷ ಪೂರ್ತಿಯ ಕೆಲಸ ಮುಗಿಸಿ ಬೇಸಿಗೆ ಆರಂಭವಾಗುವುದರಲ್ಲಿ ಮನೆ ಸೇರಿಕೊಳ್ಳುತ್ತವೆ. ಆದ್ದರಿಂದಲೇ ಈ ಹುಣ್ಣಿಮೆ ಹಿಂದಿನ ದಿನ ಸಂಜೆ ಹೊತ್ತಿನ ವೇಳೆಗೆ ಚಂದ್ರೋದಯದ ನಂತರ ಬಾಗಿಲುಗಳಿಗೆ ತೆನೆಕಟ್ಟಿ ಬಸವನನ್ನು ಪೂಜಿಸುವುದರ ಮೂಲಕ ದೇವರನ್ನು ಸ್ವಾಗತ ಮಾಡಿಕೊಳ್ಳಲಾಗುತ್ತದೆ. ಚಂದ್ರನ ಕಡೆ ದೇವರ ಜಗಲಿಯ ಮೇಲಿನ ಹಿತ್ತಾಳೆ ಬಸವನನ್ನು ಕೂಡಿಸಿ ಪೂಜೆ ಮಾಡಿ ಶಾವಿಗೆ ಪಾಯಸ ನೈವೇದ್ಯ ಮಾಡಿ ಆರತಿ ಬೆಳಗುವರು. ಆರತಿ, ಬಸವನ ಸಮೇತವಾಗಿ "ಒಳಗಿನ ದೇವರು ಹೊರಗೆ, ಹೊರಗಿನ ದೇವರು ಒಳಗೆ" ಎಂದು ಹೇಳುತ್ತಾ ಗಂಗಳನ್ನು ಕಟ್ಟಿಗೆಯಿಂದ ಬಾರಿಸುತ್ತಾ ಮನೆಯ ಹೊರಬಾಗಿಲಿಗೆ ಒಯ್ಯುವರು. ಹೊರಬಾಗಿಲು ಪೂಜೆ ಮುಗಿಸಿ ಮತ್ತೆ "ಹೊರಗಿನ ದೇವರು ಒಳಗೆ, ಒಳಗಿನ ದೇವರು ಹೊರಗೆ" ಎಂದು ಹೇಳಿ ಬಾರಿಸುತ್ತಾ ನೇರವಾಗಿ ದೇವರ ಕೋಣೆಯ ಜಗಲಿ ಮೇಲಿಟ್ಟು ನಮಸ್ಕರಿಸುವರು. ಇದು ಹೊಲದ ಫಸಲು ಮನೆಗೆ ತರುವ ಕಾಲವಾದ್ದರಿಂದ ಲಕ್ಷ್ಮಿಯನ್ನು ಬರಮಾಡಿಕೊಂಡಂತೆಯೆಂದೂ ಹೇಳಲಾಗುತ್ತದೆ. ಇಲ್ಲಿ ಋತುಮಾನಕ್ಕೆ ಸ್ವಾಗತಿಸುವುದನ್ನು ಕಂಡು ಬರುವುದು.

ಈ ಹುಣ್ಣಿಮೆ ಸಮಯದಲ್ಲಿ ಬಂದ ಗೋಧಿಯಿಂದ ಹುಗ್ಗಿ ಮಾಡಿ ಊರಿನ ಎಲ್ಲಾ ದೇವತೆಗಳಿಗೂ ನೈವೇದ್ಯ ತಪ್ಪದೆ ಕೊಡುವರು. ಇದನ್ನು 'ಗೋಧಿ ಏರಿಸುವುದು' ಎಂದು ಕರೆಯುತ್ತಾರೆ. ಹೊಸ ಗೋಧಿ ತಾವು ಊಟ ಮಾಡುವುದಕ್ಕಿಂತ ಮುಂಚೆ ದೇವರಿಗೆ ಅರ್ಪಿಸುವ ಪದ್ಧತಿ ರೂಢಿಯಲ್ಲಿದೆ. ಪ್ರಾಚೀನರಿಂದಲೂ ತಾವು ಬೆಳೆದ ಮೊದಲು ಆಹಾರಧಾನ್ಯಗಳಾಗಲಿ, ಆಹಾರವಾಗಲಿ ಮೊದಲು ನೈವೇದ್ಯವಾಗಿ ದೇವರಿಗೆ ಅರ್ಪಿಸುವ ನಂಬಿಕೆಯಿಂದ ಈ ಸಾಮಾನ್ಯ ಆಚರಣೆ ಇಂದಿಗೂ ರೂಢಿಯಲ್ಲಿದ್ದಿರಬೇಕು.

**ಭಣಮಿ ಹಬ್ಬ :**

ಕೃಷಿ ಮೂಲದ ಇತರ ಹಬ್ಬಗಳು ಸಾಮಾನ್ಯವಾಗಿ ಸಾರ್ವಜನಿಕವಾಗಿ ಆಚರಿಸಲ್ಪಡುತ್ತವೆ. ಆದರೆ ಭಣಮಿ ಹಬ್ಬ ಸಾರ್ವತ್ರಿಕವಾಗಿ ಆಚರಿಸುವ ಹಬ್ಬವಲ್ಲ. ಇದು ಕೃಷಿಯಲ್ಲಿ ಆಚರಿಸಲ್ಪಡುವ ಒಂದು ವಿಶೇಷ ಆಚರಣೆಯಾಗಿದೆ. ಗೋಧಿ, ಜವೆ, ತೊಗರಿ ಇತರ ರಾಶಿ ಸಂದರ್ಭದಲ್ಲಿ ಖಳ ಹಾಕಿದಾಗ ಈ ಭಣಮಿ ಹಬ್ಬದ ಆಚರಣೆ ಸ್ವಲ್ಪದರದಲ್ಲಿ ಕಂಡು ಬಂದರೆ ಬೀದರ ಜಿಲ್ಲೆಯ ವಿಶೇಷ ಬೆಳೆಯಾದ ಬಿಳಿಜೋಳ ರಾಶಿ ಸಮಯ ವಿಶೇಷತೆಯಿಂದ ಕೂಡಿರುತ್ತದೆ. ಅದಕ್ಕಾಗಿಯೇ ಬಿಳಿ ಜೋಳಕ್ಕೆ ಈ ಭಾಗದಲ್ಲಿ 'ಮೊಷ್ಟ ಜೋಳ' ಎಂದು ಕರೆಯುತ್ತಾರೆ. ಭಣಮಿ ಹಬ್ಬಕ್ಕೆ ಔರಾದ, ಭಾಲ್ಕಿ, ಬಸವಕಲ್ಯಾಣ ತಾಲೂಕಗಳು ಮಹರಾಷ್ಟ್ರದ ಗಡಿ ಭಾಗಗಳಲ್ಲಿ ಕೆಲವೊಂದು ಊರುಗಳು ಹೊಂದಿರುವುದರಿಂದ ಮರಾಠಿ ಭಾಷೆಯ ಪ್ರಭಾವದಿಂದಾಗಿ ಈ ಭಣಮಿ ಹಬ್ಬಕ್ಕೆ ಧವಾರಿ ಎಂದು ಕರೆಯುತ್ತಾರೆ. ಆಚರಣೆಯ ವಿಧಾನ ಮಾತ್ರ ಒಂದೇ ಆಗಿರುತ್ತದೆ.

ಜೋಳ ತೆನೆ ಸಹಿತವಾಗಿ ದಂಟನ್ನು ಬುಡಸಮೇತ ಕಿತ್ತು ನೆಲಕ್ಕೆ ಹಾಕುವರು. ಎರಡು ದಿನ ಬಿಸಿಲು ತಿಂದ ಮೇಲೆ ಅವುಗಳ ಚಿಕ್ಕ ಚಿಕ್ಕ ಸೂಡುಗಳನ್ನು ಕಟ್ಟಿ ಆ ಸೂಡುಗಳನ್ನು ಗೋಪುರಾಕಾರದಲ್ಲಿ ಬಣವಿಯನ್ನು

ಒಟ್ಟುತ್ತಾರೆ. ಕೆಲವು ದಿನದ ನಂತರ ಬಣವಿಯಿಂದ ಒಂದೊಂದು ಸೂಡು ತೆಗೆದು ತೆನಿಗಳನ್ನು ಖಳ ಮಾಡಿ ಅದರಲ್ಲಿ ಮುರಿದು ಹಾಕುತ್ತಾರೆ. ಇದಕ್ಕೆ ಗೂಡು ಮುರಿಯುವುದೆಂದು ಕರೆಯುತ್ತಾರೆ. ಈ ಗೂಡು ಮುರಿಯುವದನ್ನು ಆರಂಭಿಸಲು ಐದು ಜನ ಮುತ್ತೈದಯರು ಜೋಳದ ತೆನೆಗೆ ಹಾಲು ತುಪ್ಪ ಸುರಿದು ಗೂಡು ಮುರಿಯುತ್ತಾರೆ. ತೆನೆಗಳಿಂದ ಜೋಳವನ್ನು ಬೇರ್ಪಡಿಸಲು ಎತ್ತುಗಳಿಂದ ಹಂತಿ ಇಡಿ ರಾತ್ರಿ ಕಟ್ಟುತ್ತಾರೆ. ಇಂದಿನ ರಾತ್ರಿಯೇ ಭಣಮಿ ಹಬ್ಬ ಆಚರಿಸುವರು. ಹುಗ್ಗಿ, ಅನ್ನ, ಕಡಬು, ಹುಳಿಪಲ್ಯೆ ವಿವಿಧ ಅಡುಗೆ ಮಾಡಿ ತಮಗೆ ಬೇಕಾದ ನಾಲ್ಕಾರು ಜನಕ್ಕೆ ಹಾಗೂ ಕೆಲಸಗಾರರಿಗೆ ಊಟಕ್ಕೆ ಕರೆಯುವರು.

ಇಡಿ ರಾತ್ರಿಯೆಲ್ಲಾ ಕೆಲಸ ಸುಲಭವಾಗಿ ಸಾಗಲು ರೈತನು ಕೆಲಸಗಾರರ ಜೊತೆ ಊಟ ಮಾಡಿದ ನಂತರ ಹಾಡುಗಳನ್ನು ಹೇಳುತ್ತಾ ಹಂತಿ ಕಟ್ಟುತ್ತಾರೆ. ಹಂತಿ ಎಂದರೆ ಖಳದ ಮಧ್ಯ ಮೇಟಿನೆಟ್ಟಿ ಮೇಟಿಗೆ ಎರಡು ಅಥವಾ ಮೂರು ಜೋಡಿ ಎತ್ತುಗಳನ್ನು ಕಟ್ಟಿ ಬೆಳಗಾಗುವರೆಗೂ ತಮ್ಮ ಕೆಲಸ ಮಾಡಿಕೊಳ್ಳುವರು.

ಕಾಸಿದ ಕಬ್ಬಿಣ ಚಂದ ಸೋಸಿದ ಬಂಗಾರ ಚಂದ
ರಾಸ್ಯಗ ಚಂದ ಬಿಳಿಜ್ವಾಳಿ॥
ಖಳ ಮಾಡ್ಬೇಕೊ ಖಳಾ ಹ್ಯಾಂಗ ಮಾಡ್ಬೇಕೊ
ಸೂರ್ಯ ಚಂದ್ರಮನ್ಹಾಂಗ ಖಳಾ ಮಾಡ್ಬೇಕೊ ॥
ಭಣಮಿ ಒಟ್ಬೇಕೊ ಭಣಮಿ ಹ್ಯಾಂಗ ಒಟ್ಬೇಕೊ
ಗಾಡಿ ಚಾಕಿನ್ಹಾಂಗ ಭಣಮಿ ಒಟ್ಬೇಕೊ ॥

ಎನ್ನುವಂತಹ ಮುಂತಾದ ಪದಗಳನ್ನು ರೈತ ಎತ್ತು, ಕೃಷಿ ಪದ್ಧತಿಗಳ ವಿಧಾನಗಳನ್ನೊಳಗಂಡ ವಿಷಯಗಳ ಮೇಲೆ ಹಾಡುತ್ತಾರೆ. ಅಲ್ಲದೆ ಭೂಮಿ ತಾಯಿ, ಮಳೆರಾಯನ ಸ್ತುತಿಗಳು ವಿಶೇಷವಾಗಿ ಕಂಡು ಬರುತ್ತವೆ. ಇಡಿ ರಾತ್ರಿ ದನಗಳ ತುಳಿತದಿಂದ ತೆನೆಗಳಿಂದ ಕಾಳು ಪೂರ್ತಿಯಾಗಿ ಉದುರಿ ಬೇರೆಡೆಯಾಗುವವರೆಗೂ ಹಂತಿ ಕೆಲಸ ನಡೆಯುವಾಗ ಶ್ರಮ ಪರಿಹಾರಕ್ಕಾಗಿ ಹಾಡುಗಳನ್ನು ಹಾಡುತ್ತಾರೆ. ಕಾಲಕ್ಕೆ ಸರಿಯಾಗಿ ಮಳೆ ಬಾರದಿದ್ದಾಗ ರೈತ ಬಲು ಕಂಗಾಲು ಆಗುತ್ತಿದ್ದ. ಆದರೆ ಅಂತಹ ಸಂದರ್ಭದಲ್ಲಿ ಆತ ಕೇವಲ ಮುಗಿಲು ನೋಡುತ್ತಾ ಕೂರುವುದಿಲ್ಲ. ತನ್ನ ಸುತ್ತ-ಮುತ್ತಲ ಪಶು-ಪಕ್ಷಿ ಪ್ರಾಣಿಗಳನ್ನು ಗಮನಿಸ ತೊಡಗುತ್ತಾನೆ. ಇಡೀ ದಿನ ಹೊಲಗದ್ದೆಗಳಲ್ಲಿ ಸುತ್ತಾಡಿ ಗಿಡ ಮರ, ಪ್ರಾಣಿ ಪಕ್ಷಿ ಮತ್ತು ಕೀಟಗಳ ನಡವಳಿಕೆಗಳನ್ನು ಅಭ್ಯಸಿಸಿ, ಆ ಅನುಭವದ ಆಧಾರದ ಮೇಲೆ ಮಳೆಯ ಆಗು-ಹೋಗುಗಳನ್ನು ನಿರ್ಧರಿಸುತ್ತಾನೆ. ಏಕೆಂದರೆ ನೆಲದ ಜೊತೆ ಅವಿನಾಭಾವ ಸಂಬಂಧ ಹೊಂದಿದ ಕ್ರಿಮಿಕೀಟಗಳಿಗೆ ಮಳೆ ಬರುವ ಹಾದಿಯ ಖಚಿತತೆ ತಿಳಿದಿರುತ್ತದೆ. ಪಕ್ಷಿಗಳ ವರ್ತನೆ ಇರುವೆಗಳ ತರಾತುರಿ, ಜಾನುವಾರುಗಳ ದಿನಚರಿಗಳು ಒಂದು ನಿರ್ದಿಷ್ಟ ರೀತಿಯಲ್ಲಿ ಬದಲಾಗುವುದಕ್ಕೂ ಮಳೆ ಬರುವುದಕ್ಕೂ ಅಂತರ ಸಂಬಂಧವಿದೆ. ಈ ಅಂತರ ಸಂಬಂಧದ ವರ್ತಮಾನವನು ನಮ್ಮ ರೈತ ವರ್ಗ ಶತ-ಶತಮಾನಗಳಿಂದ ಗಮನಿಸಿ ಅನುಭವಿಸಿದೆ. ಆ ಅನುಭವದ ನೆಲೆಯಲ್ಲಿ ಈ ಮಳೆ ನಂಬಿಕೆಗಳು ರೂಢಿಯಲ್ಲಿ ಬಂದಿವೆ. ಮನುಷ್ಯರಿಗಿಂತ ಪ್ರಾಣಿಗಳು ಹೆಚ್ಚು ಸೂಕ್ಷ್ಮ ಮತ್ತು ಸಂವೇದನೆಯುಳ್ಳವಾಗಿರುತ್ತವೆ. ಹಾಗಾಗಿ ಅವು ಪ್ರಕೃತಿ ಮತ್ತು

ವಾತಾವರಣದಲ್ಲಾಗುವ ಬದಲಾವಣೆಯನ್ನು ಬಹು ಬೇಗ ಗುರುತಿಸುತ್ತವೆ. ಮತ್ತು ಅದನ್ನು ತಮ್ಮ ಹಾವ ಭಾವಗಳಿಂದ ವ್ಯಕ್ತಪಡಿಸುತ್ತವೆ. ಆಧುನಿಕ ವಿಜ್ಞಾನದ ಅಳತೆಗೋಲಿಗೆ ಸಿಕ್ಕದ, ತಲೆ-ತಲೆಮಾರುಗಳ ಮೂಲಕ ಹಾದು ಬಂದ ಹಳ್ಳಿಗರ ಮಳೆ ನಂಬಿಕೆಗಳು ಇಂದಿಗೂ ಅಷ್ಟೇ ಮಹತ್ವವನ್ನು ಉಳಿಸಿಕೊಂಡಿವೆ.

ಒಟ್ಟು ಮಳೆ ನಕ್ಷತ್ರಗಳು ಇಪ್ಪತ್ತೇಳು. ಇವುಗಳಲ್ಲಿ ಹನ್ನೆರಡು ಮಳೆಗಳು ಮಾತ್ರ ಮಳೆ ತರುತ್ತವೆ. ಎಲ್ಲ ಪ್ರದೇಶಗಳ ಕೃಷಿ ಚಟುವಟಿಕೆಗಳು ಈ ಅವಧಿಯಲ್ಲೇ ನಡೆಯುತ್ತವೆ. ಈ ಮಳೆಗಳ ಅವಧಿ ಸಾಮಾನ್ಯವಾಗಿ ಹದಿನೈದು ದಿವಸಗಳಾಗಿರುತ್ತವೆ. ಉಳಿದ ಮಳೆ ಅವಧಿಯಲ್ಲಿ ಅಲ್ಪ-ಸ್ವಲ್ಪ ಮಳೆ ಬಂದರೂ ಸಹ ಅದು ನಿಶ್ಚಿತವಲ್ಲ ಹಾಗಾಗಿ ಮಳೆ ತರುವ ೧೨ ಮಳೆಗಳನ್ನು ಕಾಲ ಮೇಘಗಳೆಂತಲೂ ಉಳಿದವುಗಳನ್ನು ಅಕಾಲ ಮೇಘಗಳೆಂತಲೂ ಕರೆಯುತ್ತಾರೆ. ಈ ಮಳೆಗಳಲ್ಲಿ ಒಂದೊಂದಕ್ಕೂ ರೈತರು ತಮ್ಮದೇ ಆದ ವ್ಯಾಖ್ಯಾನ ನೀಡುತ್ತಾರೆ ಕೆಲವು ಮಳೆ ಬಂದರೆ ಒಳ್ಳೆಯದು ಮತ್ತೆ ಕೆಲವು ಕೇಡು ಎಂಬ ನಂಬಿಕೆಯೂ ಇದೆ. ಹಾಗೆಯೇ ಕೃಷಿ ಆಚರಣೆ ಕುರಿತು ಇನ್ನೂ ಅನೇಕ ನಂಬಿಕೆಗಳು ಇಂತಿವೆ.

**೧. ಕೊಡತಿಹುಳು (ಡ್ರಾಗನ್ ಫ್ಲೈ) ಹೆಚ್ಚಾದರೆ ಮಳೆ ಬರುತ್ತದೆ:**

ಕೊಡತಿ ಹುಳು ಗುಂಪಾಗಿ ನೆಲ ಕಚ್ಚಿದರೆ ಅಥವಾ ನೆಲ ಮೂಸುತ್ತಿದ್ದರೆ ಹಾಗೂ ಹೆಚ್ಚಾಗಿ ಹಾರಾಡುತ್ತಿದ್ರೆ ಮಳೆ ಬರುತ್ತದೆಂಬ ನಂಬಿಕೆಯಿದೆ.

**೨. ಕಪ್ಪೆ ವಟಗುಟ್ಟುತ್ತಿದ್ದರೆ ಮಳೆ ಬರುತ್ತದೆ :**

ಕಪ್ಪೆ ತೇವಾಂಶ ಇರುವ ಕಡೆ ಹೆಚ್ಚಾಗಿರುವವು. ಇವು ಹೆಚ್ಚಾಗಿ ಮಳೆಗಾಲದ ಸಂದರ್ಭದಲ್ಲಿ ಕಾಣಿಸಿಕೊಳ್ಳುತ್ತವೆ. ಇವು ಒಂದೇ ಸಮನಾಗಿ ವಟಗುಟ್ಟುತ್ತಿದ್ದರೆ ಅಷ್ಟೇ ಹೆಚ್ಚಾಗಿ ಮಳೆ ಬರುವ ನಿರೀಕ್ಷೆಯಿರುತ್ತದೆ.

**೩. ಸೂರ್ಯ-ಚಂದ್ರ ಸಮೀಪಕ್ಕೆ ಗುಡಿ ಕಟ್ಟಿದರೆ ಮಳೆ ಬರುತ್ತದೆ :**

ಆಕಾಶದ ಮೋಡ ಚಲಿಸುವಾಗ ಸೂರ್ಯ-ಚಂದ್ರರ ಸುತ್ತಲು ವೃತ್ತಾಕಾರದ ಉಂಗುರುಗಳು ಮೂಡುತ್ತವೆ. ಇವು ಸೂರ್ಯ-ಚಂದ್ರನಿಗೆ ಸಮೀಪದಲ್ಲಿದ್ದರೆ ಬೇಗ ಮಳೆ ಬರುತ್ತದೆ. ಉಂಗುರ ದೂರದಲ್ಲಿದ್ದರೆ ತಡವಾಗಿ ಮಳೆ ಬರುತ್ತದೆ. ಇದನ್ನು ಕೆಲವು ಕಡೆ ಸೂರ್ಯ ಅಥವಾ ಚಂದ್ರರಿಗೆ ಗುಡಿ ಇಲ್ಲವೆ ಗೂಡು ಕಟ್ಟುವುದು ಎನ್ನುತ್ತಾರೆ. ಸೂರ್ಯನ ಸುತ್ತ ಈ, ವೃತ್ತಕಾರವಾಗುವುದು ಬೆಳಕಿನಲ್ಲಿ ಅಷ್ಟು ತಕ್ಷಣ ಕಾಣಿಸುವುದಿಲ್ಲ. ಆದರೆ ಚಂದ್ರನ ಸುತ್ತ ಕಟ್ಟುವುದು ರಾತ್ರಿ ಸಮಯವಾದ್ದರಿಂದ ಬಹುಬೇಗ ಕಾಣಿಸುವುದು.

**೪. ರೋಹಿಣಿ ಭರಣಿಗೆ ಬೀಜ ಭೂಮಿಗೆ ಹಚ್ಚಿದ್ರೆ ರೋಗವಿಲ್ಲ :**

ಈ ನಂಬಿಕೆಯು ಜನಪದರು ವ್ಯವಸಾಯದಲ್ಲಿ ನಂಬಿಕೊಂಡು ಬಂದಿರುವುದಾಗಿದೆ. ಈ ಮಳೆಯು ಮುಂಗಾರು ಮಳೆಯಾಗಿರುವುದರಿಂದ ಸಕಾಲಕ್ಕೆ ಮಳೆ ಬಂದರೆ ಬಿತ್ತನೆ ಕೆಲಸವು ಸರಿಯಾದ ಸಮಯದಲ್ಲಿ ಮುಗಿಯುತ್ತದೆ ಹಾಗೂ ಮುಂದೆ ಸರಿಯಾದ ಸಮಯದಲ್ಲಿ ರಾಶಿಯಾಗಿ ಮುಂದಿನ ಬಿತ್ತನೆಗೂ ಸಮಯ ಸಿಗುತ್ತದೆ. ಆದ್ದರಿಂದ ರೈತನ ಕೆಲಸವು ಸಮಯಕ್ಕನುಗುಣವಾಗಿ ವ್ಯವಸ್ಥಿತವಾಗಿ ನಡೆಯುತ್ತದೆ. ಈ ಸಮಯದ

ಮಳೆಯಲ್ಲಿ ಯಾವುದೇ ಕೀಟಗಳ ಭಾದೆಯೂ ಇರುವುದಿಲ್ಲ. ಹೀಗಾಗಿ ಈ ಮಳೆಗೆ ಬಿತ್ತಿದರೆ ಬೆಳೆಗಳಿಗೆ ಯಾವ ರೋಗದ ಭಯವು ಇರುವುದಿಲ್ಲ. ಹಾಗೂ ರೋಹಿಣಿ ಮಳೆಯಾದರೆ ಓಣಿಯೆಲ್ಲಾ ಜೋಳ ಎನ್ನುವ ಮಾತು ಜನರಲ್ಲಿದೆ.

**೫. ಮಿರ್ಗಾ ಮಿಂಚುವ ದಿವಸ ಮಳೆ ಬರಬಾರದು :**

ಜೂನ್ ಆರಂಭದ ಏಳು ಅಥವಾ ಎಂಟನೆ ತಾರೀಖದಂದು ಮುಂಗಾರು ಮಳೆ ಆರಂಭದ ದಿನ ಮಿರ್ಗಾ ಮಿಂಚುವ ದಿನ ಎಂದು ಕರೆಯುವರು. ಈ ಮಳೆಯಲ್ಲಿ ಗುಡುಗು, ಮಿಂಚು, ಸಿಡಿಲು ಹೆಚ್ಚಾಗಿರುವವು. ಇವುಗಳ ಜೋರಾದ ಶಬ್ಧ ಕಿವಿಗೆ ಕರ್ಕಶವುಂಟು ಮಾಡುವುದು. ಮಳೆಯು ರಭಸವಾಗಿ ಬೀಳುವ ಕಾರಣದಿಂದಾಗಿ ಆರಂಭದ ದಿನ ಜೋರಾಗಿ ಬಂದರೆ ಮುಂದಿನ ಮಳೆ ಕಡಿಮೆ ಬೀಳುವ ಸಾಧ್ಯತೆಗಳಿರುತ್ತವೆಂಬ ನಂಬಿಕೆಯಿದೆ. ಈ ಆರಂಭಿಕ ಮಳೆ ಜೋರಾಗಿ ಬಿದ್ದರೂ ಭೂಮಿಯನ್ನು ತಂಪಾಗಿಸುವುದಿಲ್ಲ. ಏಕೆಂದರೆ ಬೇಸಿಗೆಯ ಬಿಸಿಲಿಗೆ ಬಹಳಷ್ಟು ಕಾಯ್ದಿರುವ ಭೂಮಿಗೆ ಈ ಮಳೆ ಬಂದು ಭೂಮಿಯಲ್ಲಿ ನೀರು ಇಂಗದೆ ಉಷ್ಣತೆಯಿಂದಾಗಿ ಆವಿಯಾಗಿ ಹೋಗುವುದೆ ಹೆಚ್ಚು. ಬಿಸಿಲಿನ ನಿರ್ಗಮನ ಮಳೆಯ ಆಗಮನದ ಈ ಮಧ್ಯಂತರ ಸಮಯ ಧಗೆಯ ತಾಪ ಮತ್ತಷ್ಟು ಹೆಚ್ಚಾಗುತ್ತದೆ. ಆ ಕಾರಣಕ್ಕಾಗಿ ಮಿರ್ಗ ಮಿಂಚುವ ಈ ದಿನ ಮಳೆ ಬರಬಾರದು ಎಂಬ ನಂಬಿಕೆ ರೂಢಿಯಲ್ಲಿರಬೇಕು. ಮೃಗಶಿರಾ ನಕ್ಷತ್ರ ಮಳೆಯು ಆಡು ಮಾತಿನಲ್ಲಿ ಮಿರ್ಗಾ ಎಂದೇ ಹೇಳುತ್ತಾರೆ.

**೬. ಕೃತ್ತಿಕೇಲಿ ಬಿತ್ತಿದ್ರೆ ಕೋರಿದಷ್ಟು ಎಳ್ಳು :**

ಕೃತಿಕಾ ಮಳೆ ಆರಂಭಿಕ ಮಳೆಯಾಗಿದೆ. ಆದ್ದರಿಂದ ನಿಗಧಿತ ಸಮಯದಲ್ಲಿ ಬಂದರೆ ಖರೀಫ್ ಬೆಳೆಗಳಾದ ಹೆಸರು, ಉದ್ದು, ಎಳ್ಳು, ತೊಗರಿ ಮುಂತಾದವುಗಳ ಬಿತ್ತನೆ ಕೆಲಸ ರೈತರು ಆರಂಭಿಸುವರು. ಈ ಮಳೆಯು ಎಳ್ಳಿನ ಬೆಳೆಗೆ ಅನುಕೂಲವಾಗಿರುವುದರಿಂದ ಇಳುವರಿ ಬರುವ ಅವಕಾಶಗಳಿರುತ್ತವೆ. ಎಳ್ಳಿನ ಕಾಳು ಅತಿ ಚಿಕ್ಕದಾಗಿದ್ದರಿಂದ ಕೋರಿಯಲ್ಲಿ ಸಾಕಷ್ಟು ಪ್ರಮಾಣದ ಕಾಳು ತುಂಬಿಸಿಕೊಳ್ಳುತ್ತದೆ. ಆದ್ದರಿಂದ ಕೃತ್ತಿಕೇಲಿ ಬಿತ್ತಿದ್ರೆ ಕೋರಿದಷ್ಟು ಎಳ್ಳು ಎನ್ನುವ ನಂಬಿಕೆ ಜನಪದರಲ್ಲಿವೆ.

**೭. ಆರಿದ್ರ ಮಳೆ ಬಿರುಸಿನ ಮಳೆ :**

ಆರಿದ್ರ ಮಳೆ ಆರಂಭವಾಗುವ ಹೊತ್ತಿಗೆ ರೋಹಿಣಿ, ಭರಣಿ, ಮೃಗಶಿರಾ ನಕ್ಷತ್ರದ ಮಳೆಯಿಂದಾಗಿ ಭೂಮಿಯು ತಂಪಾಗಿರುತ್ತದೆ. ಈ ಮಳೆಯು ಅತಿ ರಭಸವಾಗಿ ಬೀಳುತ್ತದೆ ಮತ್ತು ಗಾಳಿಯು ಜೋರಾಗಿ ಬೀಸುವುದು. ಒಟ್ಟಾರೆ ಇದರ ಆರ್ಭಟ ವಿಪರೀತವಾಗಿರುತ್ತದೆ. ಬೆಳೆಗೆ ಸಾಕಷ್ಟು ಪ್ರಮಾಣದಲ್ಲಿ ನೀರನ್ನು ಒದಗಿಸುತ್ತದೆ. ಈ ಸಮಯದಲ್ಲಿ ಹೊಲದಲ್ಲಿ ಬಿತ್ತನೆಯಾದ ಬೀಜ ಮೊಳಕೆಯೊಡೆದು ಸಸಿಯಾಗಿರುತ್ತವೆ. ಬೆಳೆಗಳಿಗೆ ಬೇಕಾದ ನೀರಿನ ಅವಶ್ಯಕತೆಯು ಈ ಮಳೆಯು ಪೂರೈಸುತ್ತದೆ. ರೈತನ ಮುಖದಲ್ಲಿ ಸಂತೋಷ ಕಳೆ ಮೂಡಿಸುತ್ತದೆ.

**೮. ಮಗಿ ಮಳೆ ಮಗಿಯಿಂದ ಸುರಿದಂತಿರುತ್ತದೆ :**

ಮಗಿ ಮಳೆಯು ಮಗಿ (ಸಣ್ಣ ಗಡಿಗೆ)ಯಿಂದ ನೀರು ಅತಿ ವೇಗವಾಗಿ ಮತ್ತು ದಪ್ಪವಾಗಿ ಸುರಿದಂತೆ ಅತಿವೇಗದ ಜೋರಿನಲ್ಲಿ ತಕ್ಷಣವೆ ಬರುವುದು. ಯಾವುದೇ ಗುಡುಗು, ಮಿಂಚುಗಳ ಸುಳಿವಿಲ್ಲದೆ

ಆಕಸ್ಮಿಕವಾಗಿಯೇ ಬರುವುದು. ಈ ಮಳೆಯ ಸಂದರ್ಭದಲ್ಲಿ ಧಗೆಯು ಹೆಚ್ಚಾಗಿರುವುದು. ಭೂಮಿಯ ಆಳದ ಉಷ್ಣತೆಯಲ್ಲಾ ಹೊರಹಾಕುವುದು ಹಾಗಾಗಿ ಭೂಮಿಯಲ್ಲಿ ಹುದುಗಿಕೊಳ್ಳುವ ಜೀವಿಗಳೆಲ್ಲಾ ಭೂಮಿ ಮೇಲ್ಭಾಗದಲ್ಲಿ ಬರುತ್ತಿರುತ್ತವೆ. ಈ ಹಿಂದಿನ ಆರಂಭಿಕ ಮಳೆಯು ಗಡಸು ನೀರಾಗಿರುವುದು ಮಗಿ ಮಳೆಯ ನೀರು ರುಚಿಯಾಗಿರುವುದರಿಂದ ಈ ಮಗಿ ಮಳೆ ಬಿದ್ದನಂತರ ಕಬ್ಬು ರುಚಿಯಾಗುತ್ತವೆ. ಎನ್ನುವ ಹೇಳಿಕೆಯುಂಟು ಇದರಂತೆ ಇತರ ಬೆಳೆಗಳಿಗೆ ಒಳ್ಳೆ ಪೋಷಕಾಂಶಗಳು ಸಿಗುತ್ತವೆ. ಮಗಿ ಮಳೆಬಿದ್ದರೆ ಬೆಳೆ ಚೆನ್ನಾಗಿ ಆಗುತ್ತವೆ. ಎನ್ನುವ ಧೈರ್ಯ ರೈತರಲ್ಲಿ ಬರುತ್ತದೆ. ಆದ್ದರಿಂದ ಮಗಿ ಮಳೆ ಬಂದರೆ ರೈತನಿಗೆ ಉಡಿದಾರ ಕಟ್ಟಿದಾಂಗ ಎಂದೂ ಹೇಳುತ್ತಾರೆ.

**೯. ಹುಬ್ಬೆ ಮಳೆ ಗುಬ್ಬಿ ಮೈ ತೋಯಿಸುತ್ತದೆ :**

ಹುಬ್ಬೆ ಮಳೆಯ ಪ್ರಮಾಣ ಕಡಿಮೆಯಾಗಿರುವುದರಿಂದ ಚಿಕ್ಕ ಜೀವಿ ಗುಬ್ಬಿ ಮೈ ತೋಯಿಸಿಕೊಳ್ಳುವಷ್ಟೇ ಮಳೆ ಬರುತ್ತದೆಂಬ ನಂಬಿಕೆ. ಇದು ಬೆಳೆಗಳಿಗೆ ಅಲ್ಪ ಪ್ರಮಾಣದಲ್ಲಿ ನೀರು ಒದಗುವಂತೆ ಮಾಡುತ್ತದೆ. ಈ ಮಳೆಯು ಅಗಸ್ಟ್ ತಿಂಗಳಲ್ಲಿ ಬರುವುದರಿಂದ ಗೌರಿ ಹಬ್ಬದ ಸುತ್ತಲು ಬರುವಂತಹದ್ದು. ಆದ್ದರಿಂದ ಜನಪದರು ಈ ಮಳೆ ಕುರಿತು ಇರುವ ಇನ್ನೊಂದು ನಂಬಿಕೆಯೆಂದರೆ ಗೌರಿ ಹಬ್ಬಕ್ಕೂ ಮಗಿ-ಉಬ್ಬೆ ಮಳೆಗಳಿಗೂ ಹತ್ತಿರದ ನಂಟು. ತವರು ಮನೆಗೆ ಅರ್ಥಾತ್ ಭೂಮಿಗೆ ಬರುವ ಗೌರಮ್ಮ ಮಗೆ ಹೊತ್ತುಕೊಂಡು ಹುಬ್ಬೆ ತುಳುಕೊಂಡು ಬರುತ್ತಾಳೆ ಎಂದು ರೈತಾಪಿ ಹೆಣ್ಣು ಮಕ್ಕಳು ಹೇಳುತ್ತಾರೆ. ಗೌರಿಹಬ್ಬದ ಸಂದರ್ಭದಲ್ಲಿ ಒಂದೆರಡು ಹನಿಯಾದರೂ ಮಳೆ ಬೀಳಬೇಕು. ಇದು ಗೌರಮ್ಮ ತವರಿನಿಂದ ಹೋಗುವಾಗ ಕಣ್ಣೀರಿಡುವುದರ ಸಂಕೇತ. ಮಳೆ ಬರದಿದ್ದರೆ ಗೌರಮ್ಮ ತವರಿನ ಮೇಲೆ ಸಿಟ್ಟು ಮಾಡಿಕೊಂಡು ಹೋಗುತ್ತಿದ್ದಾಳೆ ಎಂದು ನಂಬಿಕೆಯಿದೆ.

**೧೦. ಉತ್ತರೆ ಒಕ್ಕಲಿಗನಿಗೆ ಭಾಷೆ ಕೊಟ್ಟ ಮಳೆ :**

ಬಿತ್ತನೆಯಾದ ಎಲ್ಲಾ ಬೆಳೆಗಳು ತೆನೆ ತುಂಬುವ ಕಾಲಾವಧಿಯಾಗಿದ್ದರಿಂದ ಮಳೆ ಅವಶ್ಯಕವಾಗಿ ಬೇಕು. ಇದು ಬರದಿದ್ದರೆ ಬೆಳೆಯೆಲ್ಲಾ ಬಾಡಿಹೋಗಿ ರಾಶಿ ಕೈಗೆ ದಕ್ಕುವುದಿಲ್ಲ ಆ ಕಾರಣಕ್ಕಾಗಿ ಉತ್ತರೆ ಮಳೆ ಬರದಿದ್ದರೆ ಮಕ್ಕಳು ಹೆತ್ತ ತಾಯಿಗೆ ಓಟ್ಟಿಕ್ಕುವುದಿಲ್ಲ ಎನ್ನುವ ಮಾತು ಜನಪದರಲ್ಲಿದೆ. ಹಾಗಾಗಿ ಈ ಮಳೆ ಬಂದೇ ಬರುತ್ತದೆ ಎಂಬ ನಂಬಿಕೆ ರೈತರಲ್ಲಿದೆ. ನಂಬಿಕಸ್ತ ಮಳೆ, ಬಿಸಿಲಿನ ಝಳ ಜಾಸ್ತಿ. ಹಾಗೆಯೇ ಮಳೆಯ ಆರ್ಭಟವೂ ಹೆಚ್ಚು ಈ ಮಳೆಯ ಬಗೆಗೆ ಪ್ರಚಲಿವಿರುವ ಕಥೆ ಕುತೂಹಲಕರ.

ಉತ್ತರಾದೇವಿ ಎಂಬ ಹೆಣ್ಣು ಮಗಳಿಗೆ ಆಕೆಯ ಅತ್ತೆ ವಿಪರೀತ ಕಾಟ ಕೊಡುತ್ತಿರುತ್ತಾಳೆ. ಆಕೆ ಕುಂತರೂ ತಪ್ಪು. ನಿಂತರೂ ತಪ್ಪು. ಆಕೆಯ ಗಂಡ ಮುತ್ತಿನ ವ್ಯಾಪಾರಿ ಸದಾ ವ್ಯಾಪಾರದ ಓಡಾಟದಲ್ಲಿ ನಿರತ. ಹಾಗಾಗಿ ಹೆಂಡತಿಯ ಕಡೆ ಗಮನ ಹರಿಸಲು ಪುರುಸೊತ್ತಿಲ್ಲ. ಒಂದು ದಿನ ಅತ್ತೆಯು ಸೊಸೆಗೆ ಮೊಂಡು ಮಚ್ಚು, ಗಂಟು ಹಗ್ಗ ಕೊಟ್ಟು ಕಾಡಿಗೆ ಕಟ್ಟಿಗೆ ತರಲು ಕಳುಹಿಸುತ್ತಾಳೆ. ಮನೆಗೆ ಬಂದ ಮಗನಿಗೆ ಸೊಸೆಯ ಕುರಿತು ಚಾಡಿ ಹೇಳುತ್ತಾಳೆ. ತಾಯಿಯ ಚಾಡಿ ಮಾತಿನಿಂದ ಸಿಟ್ಟಾದ ಗಂಡ ಕಾಡಿಗೆ ಕಟ್ಟಿಗೆ ತರಲು ಕಳುಹಿಸುತ್ತಾಳೆ. ಹೋಗಿ ಇನ್ನೇನು ಹೆಂಡತಿಗೆ ಹೊಡೆಯಬೇಕೆನ್ನುವಷ್ಟರಲ್ಲಿ ಆತನೇ ಜೀವ ಕಳೆದುಕೊಳ್ಳುತ್ತಾನೆ.

ಇದನ್ನು ಕಂಡು ದಿಗ್ಭ್ರಮೆಗೊಂಡ ಉತ್ತರಾದೇವಿ ಗಂಡನ ಶವವನ್ನು ಇಟ್ಟುಕೊಂಡು ಶೋಕಿಸುವಾಗ ಶಿವ ಪಾರ್ವತಿಯರು ಬಂದು ಜೀವಗಾಳಿಯನ್ನು ನೀಡಿ ಆತನನ್ನು ಬದುಕಿಸುತ್ತಾರೆ. ಉತ್ತರೆಯು ತನ್ನ ಕಷ್ಟವನ್ನೆಲ್ಲಾ ಶಿವ-ಪಾರ್ವತಿಯರಿಗೆ ಹೇಳಿದಾಗ ಅವರು ಅತ್ತೆಯ ಕಾಟದಿಂದ ರೋಸಿ ಹೋದ ನೀನು ಮಳೆಯಾಗಿ ರೂಪತಾಳು ಎನ್ನುತ್ತಾರೆ. ಉತ್ತರಾದೇವಿ ಉತ್ತರೆ ಮಳೆಯಾಗುತ್ತಾಳೆ. ವಿಷಯ ತಿಳಿದ ಅತ್ತೆ ಸುಮ್ಮನಾಗುವುದಿಲ್ಲ. ಆಕೆಯೂ ಇನ್ನೊಂದು ಮಳೆಯಾಗಿ ರೂಪತಾಳಿ ಅತ್ತೆಯ ಬೆನ್ನು ಹತ್ತುತ್ತಾಳೆ. ಅದೇ ಹಸ್ತ ಅಥವಾ ಅತ್ತೆ ಮಳೆ ಉತ್ತರೆ ನಂತರ ಅತ್ತೆ ಮಳೆ ಬರುತ್ತದೆ. ಈ ಕಥೆ ಹಳ್ಳಿಗರಲ್ಲಿ ತುಂಬಾ ಜನಪ್ರಿಯವಾಗಿದೆ.

**೧೧. ಮುತ್ತುಗದ ಹೂ ಹೆಚ್ಚಾಗಿದ್ದರೆ ಮಳೆ ಹೆಚ್ಚು ಬರುತ್ತದೆ :**

ಮುತ್ತುಗದ ಮರ ಜಗತ್ತಿನಲ್ಲಿರುವ ಮರ ಮಟ್ಟುಗಳಲ್ಲಿ ಅತ್ಯಂತ ಹಿರಿಯದು ಎನ್ನುವ ನಂಬಿಕೆ ನಮ್ಮ ರೈತರಲ್ಲಿದೆ. ಅದಕ್ಕೆ ಅವರು ನೀಡುವ ಕಾರಣ ಅದರ ಹೆಸರೇ ಮುದುಕದ ಮರ ಎಂಬುದು. ಈ ಮರ ಚೆನ್ನಾಗಿ ಹೂ ಕಾಯುದು ಕಾಯಿ ಜೋತಾಡಿದರೆ ಆ ವರ್ಷ ಹಿಂಗಾರು ಮತ್ತು ಮುಂಗಾರು ಎರಡೂ ಸಹ ಸಮೃದ್ಧವಾಗಿರುತ್ತದೆ. ಅದರಲ್ಲಿಯೂ ಕಾಯಿಯಲ್ಲಿರುವ ರೂಪಾಯಿಯಗಲದ ಬೀಜ ಕಾಯಿಯ ತೊಟ್ಟಿನ ಭಾಗದಲ್ಲಿದ್ದರೆ ಹಿಂಗಾರು ಉತ್ತಮ, ತುದಿಯ ಭಾಗದಲ್ಲಿದ್ದರೆ ಮುಂಗಾರು ಉತ್ತಮ ಮತ್ತು ಸರಿಯಾಗಿ ಕಾಯಿಯ ಮಧ್ಯ ಭಾಗದಲ್ಲಿದ್ದರೆ ಹಿಂಗಾರು-ಮುಂಗಾರು ಎರಡೂ ಉತ್ತಮ ಎಂಬುದು ರೈತರ ನಂಬಿಕೆ. ಫೆಬ್ರುವರಿ-ಮಾರ್ಚ ತಿಂಗಳಲ್ಲಿ ಅಂದರೆ ಇನ್ನೇನು ಮುಂಗಾರು ಆರಂಭವಾಗುತ್ತದೆನ್ನುವಾಗ ಕೆಂಪು ವರ್ಣದ ಹೂ ಬಿಡುವ ಮುತ್ತುಗ ರೈತರಿಗೆ ಆ ವರ್ಷದ ಏರು-ಪೇರುಗಳನ್ನು ತಿಳಿಸುವ ಭವಿಷ್ಯಕಜಾರ ಎನ್ನುವ ನಂಬಿಕೆಯಿದೆ.

**೧೨. ಕಿರ್ ಕತ್ತನಲ್ಲಿ ಮೂರು ದಿವಸ ನೇಗಿಲು ಕಟ್ಟಬಾರದು :**

ಬೇಸಿಗೆ ಸಮಯವಾದ್ದರಿಂದ ವಿಪರೀತ ಬಿಸಿಲಿನಲ್ಲಿ ಹೊಲ ಊಳುಮೆ ಮಾಡುವುದರಿಂದ ಎತ್ತುಗಳಿಗೆ ಆಯಾಸವಾಗುವುದು. ಆದ್ದರಿಂದ ಎತ್ತುಗಳಿಗೆ ವಿಶ್ರಾಂತಿ ಸಿಗಲಿ ಎತ್ತುಗಳನ್ನು ಬಿಸಿಲಿನಿಂದ ರಕ್ಷಿಸುವ ಉದ್ದೇಶದಿಂದ ಹೀಗೆ ಹೇಳಿರಬೇಕು. ಹಾಗೂ ಈ ಮೂರು ದಿನಗಳ ಕಾಲ ಭೂಮಿ ತಾಯಿ ಮುಟ್ಟಾಗಿರುವಳೆಂಬ ನಂಬಿಕೆಯಿಂದಲೂ ಈ ನಿಷೇಧ ನಂಬಿಕೆ ರೂಢಿಯಲ್ಲಿದೆ. ಈ ಬಿಸಿಲಿನ ತಾಪದಿಂದ ಭೂಮಿಯು ಹದವಾಗುವುದಿಲ್ಲ ಭೂಮಿಯನ್ನು ಊಳುವಾಗ ಮೇಲೆ ಬಂದ ಮಣ್ಣಿನಲ್ಲಿರುವ ಜೈವಿಕ ಪೋಷಕಾಂಶಗಳು ಸತ್ತು ಹೋಗಬಾರದೆಂಬ ವೈಜ್ಞಾನಿಕ ನಂಬಿಕೆ ಆಳವಾದ ಊಳುವಿಕೆಯನ್ನು ಇಂದಿನ ಸಾವಯವ ವಿಜ್ಞಾನಿಗಳು ಸರಿಯಲ್ಲವೆಂದು ಗುರುತಿಸಿದ್ದಾರೆ.

**೧೩. ಸೋಮವಾರ ಅಥವಾ ಅಮವಾಸ್ಯೆ ದಿನ ಏರು ಕಟ್ಟಬಾರದು :**

ಸೋಮವಾರ ಬಸವಣ್ಣ ಹುಟ್ಟಿದ ದಿನವೆಂದು ಹೊಲ ಊಳುಮೆ ಮಾಡುವುದಿಲ್ಲ ಎಂಬುದು ಜನಪದರ ನಂಬಿಕೆಯಾಗಿದೆ. ಬಸವಣ್ಣನಿಗೆ ಆ ದಿನ ವಿರಾಮ. ಬಸವಣ್ಣ ದೇವರು ಭೂಲೋಕಕ್ಕೆ ಬಂದು ಮೂರು ಹೊತ್ತು ದುಡಿದು ಹಾಕುತ್ತಿದ್ದಾನೆ. ಅವನ ದುಡಿಮೆಯ ಆಯಾಸ ಪರಿಹಾರಕ್ಕಾಗಿ ಸೋಮವಾರ ಏರು ಕಟ್ಟಬಾರದೆಂದು ಈಶ್ವರನ ಆಜ್ಞೆ ಎಂದು ಜನರ ನಂಬಿಕೆ. ಸಾಮಾನ್ಯವಾಗಿ ಜನರ ಮಾತು ಎಂದಾಕ್ಷಣ ಜಗ

ಒಪ್ಪುತ್ತಿತ್ತೋ ಇಲ್ಲವೋ ಆದರೆ ಈಶ್ವರ ಹೇಳಿರುವನು ಎನ್ನುವ ದೇವರ ಭಯ ಹಾಗೂ ಭಕ್ತಿಯಿಂದ ಮೂಕ ಪ್ರಾಣಿಗೂ ಮಾನವೀಯ ಕರುಣೆ ತೋರಿ ವಿರಾಮ ಕೊಡುವುದು ಜನಪದರ ಔದಾರ್ಯವಾಗಿದೆ. ಅದರಂತೆ ತಿಂಗಳಿಗೊಂದಾರ್ವತಿ ಬರುವ ಅಮವಾಸ್ಯೆ ದಿನದಂದು ರೈತ ಏರು ಕಟ್ಟುವುದಾಗಲಿ ಅಥವಾ ಹೊಲದ ಇನ್ನಿತರ ಕೆಲಸಗಳು ಆರಂಭಿಸುವುದಿಲ್ಲ. ಇಲ್ಲಿ ತಿಂಗಳಿಗೊಂದು ಸಲವಾದರೂ ರೈತರಿಗೆ ವಿರಾಮ ಮಾಡಿಕೊಳ್ಳವುದಾಗಿಯೋ ಹಾಗೂ ಅಮವಾಸ್ಯೆಯ ರಾತ್ರಿಯಲ್ಲಿ ಕತ್ತಲು ಬಹಳವಿರುವುದರಿಂದ ತನ್ನ ಕೆಲಸ ಉಳಿದುಕೊಂಡರೂ ಮಾಡಲಾಗುವುದಿಲ್ಲವೆಂದೋ ಈ ದಿನದಲ್ಲಿ ಸ್ಥಗಿತಗೊಳಿಸಬಹುದು.

ಆದರೆ ಅಮವಾಸ್ಯೆಯ ದಿವಸ ಕಳೆ ಕಿಳಿಸೋದು, ಮಣ್ಣಿನ ಏರಿಮಾಡುವದಾಗಲಿ ಮಾಡಿದರೆ ರೋಗಗಳನ್ನು ನೆಲಕ್ಕೆ ತಗೊಂಡು ಹೋಗುತ್ತೆ ಅಂತಾರೆ ಜರ್ಮನಿಯ ವಿಜ್ಞಾನಿ ರುಡಾಲ್ ಸ್ಟೀನರು ಕತ್ತಲಲ್ಲಿ ಉಳುಮೆ ಮಾಡಿದರೆ ಕಳೆ ಕಡಿಮೆ ಆಗುತ್ತೆ. ಟ್ರಾಕ್ಟರಿನ ಹಿಂಬದಿ ದೀಪ ಕೂಡ ಆರಿಸುತ್ತಾರಂತೆ. ಪಕ್ಕದ ಜಮೀನಿಗೆ ಹೋಲಿಸಿದಾಗ ಶೇಕಡಾ ೮೦ರಷ್ಟು ಕಳೆ ಕಡಿಮೆ ಬಂದಿತ್ತಂತೆ. ನಾಲ್ಕೈದು ವರ್ಷ ನಿರಂತರ ಪ್ರಯೋಗದ ನಂತರ ಪ್ರಕಟಿಸಿದ ಫಲಿತಾಂಶ ಇದು.

ಅದೇ ರೀತಿಯಾಗಿ "ಇಂಗ್ಲೆಂಡಿನಲ್ಲಿ ಜೈನಿ ಹೆಣ್ಣು ಮಗಳು – ಮರಿಯಾಪ್ಸಿಸ್ ಪ್ರತಿ ವರ್ಷಕ್ಕೆ ಪ್ರತಿ ದಿವಸಕ್ಕೆ ಕೃಷೀಲಿ ಏನೇನು ಮಾಡಬೇಕು ಅಂತ ಕ್ಯಾಲೆಂಡರ್ ಮಾಡಿದ್ದಾರೆ. ಯಾವತ್ತು ಬಿತ್ತಬೇಕು. ಯಾವಾಗ ಕಳೆ ತೆಗೆಯಬೇಕು ಅಂತಿದೆ. ಅಮವಾಸ್ಯೆ ದಿನ ಕಲೆ ತೆಗೆಯೋದು ಏರಿಹಾಕೋದು ಮುಂತಾದವು ಮಾಡಿದರೆ ರೋಗದ ಹಾವಳಿ ಕಮ್ಮಿ ಆಗುತ್ತದೆ. ಕಸ ಎಲ್ಲವು ಭೂಮಿ ಒಳಗೆ ತೆಗೆದುಕೊಂಡು ಹೋಗುತ್ತೆ. ಅಮವಾಸ್ಯೆ ಹಿಂದೆ ಮುಂದೆ ರಡು ದಿವಸವೂ ಪರವಾಗಿಲ್ಲ[೭೦] ಎಂದು ಹೇಳುತ್ತಾರೆ.

**೧೪. ಬೆಳೆಗಳ ಮಧ್ಯ ಬೆದರು ಬೊಂಬೆ ನಿಲ್ಲಿಸುವುದು :**

ಹೊಲದಲ್ಲಿ ಬೆಳೆ ಬಂದಾಗ ತಮ್ಮ ಬೆಳೆಗೆ ಯಾರ ದೃಷ್ಟಿ ತಾಗದಿರಲಿ ಮತ್ತು ಹಕ್ಕಿಗಳು ಭಯದಿಂದ ಹೊಗಲಿ ಎಂದು ಬೆದರು ಬೊಂಬೆ ನಿಲ್ಲಿಸುವುದು. ಪಕ್ಷಿಗಳು ಹೊಲದಲ್ಲಿ ಜೋಳ. ಸೂರ್ಯಕಾಂತಿಗಳಂತೆ ಮುಂತಾದ ಬೆಳೆಗಳು ತೆನೆ ತುಂಬಿ ಬಂದಾಗ ಹೊಟ್ಟೆ ತುಂಬಿಸಿಕೊಳ್ಳಲು ಬರುತ್ತವೆ. ಪಕ್ಷಿಗಳ ಉಪಟಳ ಹೆಚ್ಚಾಗದಂತೆ ತಡೆಯಲು ಕಟ್ಟಿಗೆಯನ್ನು ಜೋಡಿಸಿ ಬಿಳಿಯ ಬಟ್ಟೆಯಾಗಲಿ ಅಥವಾ ಸುಣ್ಣ ಹಚ್ಚಿದ ಗಡಿಗೆಯಾಗಲಿ ಹಾಕಿರುತ್ತಾರೆ. ಈ ರೀತಿ ವಿಕಾರವಾದ ಬೆದರು ಬೊಂಬೆ ಹೊಲದ ಬೆಳೆಗಳ ಮಧ್ಯ ಭಾಗದಲ್ಲಿ ಅಲ್ಲಲ್ಲಿ ನಿಲ್ಲಿಸಿರುತ್ತಾರೆ. ಬೆಳೆಗಳಿಗಿಂತಲೂ ತಕ್ಷಣ ಕಾಣುವದು ಆ ಬೆದರು ಬೊಂಬೆಯೇ ಪಕ್ಷಿಗಳು ಇದರ ಮೇಲೆ ಕುಳಿತು ಕ್ರಿಮಿಗಳನ್ನು ತಿನ್ನುತ್ತವೆ ಹಾಗೂ ಹೆದರಿಕೊಂಡು ಕಾಳು ತಿನ್ನುವುದನ್ನು ತಪ್ಪಿಸುವ ಮಾರ್ಗೋಪಾಯವಾಗಿದೆ.

**೧೫. ಹೊಲವನ್ನು ಬೆಳಗುವುದು :**

ವಾರ್ಷಿಕ ಬೆಳೆಯ ರಾಶಿಯೆಲ್ಲಾ ಮುಗಿದ ಬಳಿಕ ಉರಿ ಹಚ್ಚಿ ಎಲ್ಲಾ ಕಸವನ್ನು ಸುಡುವುದು ಮತ್ತು ಹೊಲವನ್ನು ಸ್ವಚ್ಛಗೊಳಿಸುವ ಉದ್ದೇಶವಿರುವುದು. ಇದರಿಂದಾಗುವ ಜಮೀನಿನಲ್ಲಿ ಪ್ರಕಾಶಮಾನವಾದ

೭೦ (ಅಡಿ ಟಿಪ್ಪಣಿ: ೭೦: ಈ ಭೂಮಿ ಈ ಸಸ್ಯ ಡಾ॥ ಎಲ್ ನಾರಾಯಣರೆಡ್ಡಿ ವಿಚಾರಗಳು ಪುಟ ಸಂಖ್ಯೆ ೧೨)"

ದೀಪಗಳನ್ನು ಬೆಳಗಿಸುವುದರಿಂದ ಕೀಟಗಳನ್ನು ಆಕರ್ಷಿಸಿ ಅವು ಮೊಟ್ಟೆ ಇಡುವ ಮೊದಲೇ ನಾಶಗೊಳ್ಳುತ್ತವೆ. ಹೊಲದ ಸುತ್ತಲೂ ಅಲ್ಲಲ್ಲಿ ಬೆಂಕಿ ಹಾಕುವುದರಿಂದಲೂ ಪತಂಗಗಳು ಬೆಂಕಿಯಲ್ಲಿ ಬಿದ್ದು ನಾಶವಾಗುತ್ತವೆ. ಭೂಮಿ ಸ್ವಚ್ಛವಾಗುತ್ತದೆ. ಎನ್ನುವ ನಂಬಿಕೆಯಿದೆ. ಆದರೂ ಉರಿ ಹಚ್ಚುವುದನ್ನು ಅವೈಜ್ಞಾನಿಕವೆಂದೇ ಹೇಳಲಾಗುತ್ತದೆ. ಆದ್ದರಿಂದ ಪಶುಗಳಿಗೆ ಆಹಾರ ವಾಗಬಹುದಾದ ಮತ್ತು ಭೂಮಿಗೆ ಉತ್ತಮಗೊಬ್ಬರವಾಗಬಹುದಾದ ಈ ತ್ಯಾಜ್ಯವಸ್ತುಗಳ ನಾಶದಿಂದ ರೈತ ತನ್ನ ಪಾಲಿಗೆ ತಾನೆ ಬೆಂಕಿ ಹಚ್ಚಿಕೊಂಡಂತಾಗುತ್ತದೆ.

**೧೬. ತಿಪ್ಪೆಯ ಗೊಬ್ಬರು ಹೊಲಕ್ಕೆ ಒಯ್ಯುವ ಸಮಯದಲ್ಲಿ ತಿಪ್ಪೆಯನ್ನು ಪೂಜಿಸುವುದು :**

ಹಿರಿಯ ರೈತರಿಗೆ ಸಗಣಿ ಎಂದರೆ ಮಹಾಗೌರವ. ಎಲ್ಲಿಯಾದರೂ ಒಂದು ಗುಡ್ಡೆ ಸಗಣಿ ಕಂಡರೂ ತಂದು ತಿಪ್ಪೆಗೆ ಹಾಕುತ್ತಾರೆ. ಮನೆ ಹತ್ತಿರದಲ್ಲಿ ಇಲ್ಲವೆ ಊರಿಗೆ ಸಮೀಪದಲ್ಲಿಯೇ ತಿಪ್ಪೆ ಇರುತ್ತದೆ. ವರ್ಷಕ್ಕೆರಡು ಬಾರಿಯಾದರೂ ಮಗುಚಿ ಹಾಕುವುದರಿಂದ ಗೊಬ್ಬರು ಫಲವತ್ತತೆ ಹೆಚ್ಚಿಸಿಕೊಳ್ಳುತ್ತದೆ. ಮೇಲಿನ ಭಾಗ ಕೆಳಗೆ ಹೋಗಿ ಪರಿಪೂರ್ಣವಾಗಿ ಮಾಗಲು ಅನುಕೂಲವಾಗುತ್ತದೆ. ನೈವೇದ್ಯ ಮಾಡುವಾಗ ಬಿಡುವ ಹಾಲು, ತುಪ್ಪ, ಎಳೆ ನೀರು ಮುಂತಾದವು ಅಪಾರ ಸೂಕ್ಷ್ಮಾಣು ಜೀವಿಗಳನ್ನು ಆಕರ್ಷಿಸಿ ದ್ವಿಗುಣಗೊಳಿಸಿ ಅವುಗಳ ಕಾರ್ಯ ಚಟುವಟಿಕೆಯನ್ನು ಹೆಚ್ಚಿಸುತ್ತವೆ. ಭೂಮಿ, ನೀರು, ಗಾಳಿಯನ್ನು ದೈವವೆಂದು ಪೂಜಿಸುವ ನಮ್ಮ ರೈತರು ತಿಪ್ಪೆಗೂ ಅಷ್ಟೇ ಗೌರವ ನೀಡಿರುವುದು ಅವರ ಶ್ರೀಮಂತ ಸಂಸ್ಕೃತಿಗೆ ಸಾಕ್ಷಿ ಎನ್ನುವ ಉದ್ದೇಶವಾದರೂ ಗೊಬ್ಬರ ಹದಗೊಳಿಸುವ ವೈಜ್ಞಾನಿಕ ಕೆಲಸ ಈ ನಂಬಿಕೆ ಒಳಗೊಂಡಿದೆ.

**೧೭. ಮಡಿಗಳನ್ನು ಮಾಡುವುದು :**

ಮಡಿಗಳನ್ನು ಮಾಡುವ ಪದ್ಧತಿ ಹೆಚ್ಚು ಪ್ರಚಲಿತದಲ್ಲಿರುವ ಪದ್ಧತಿ. ಜಮೀನನ್ನು ಸಣ್ಣ ಆಕಾರದ ಮಡಿಗಳನ್ನಾಗಿ ಪರಿವರ್ತಿಸಿ, ಪ್ರತಿ ಮಡಿಯ ಸುತ್ತಲೂ ಸಣ್ಣ ಬದುಗಳನ್ನು ನಿರ್ಮಿಸಬೇಕು. ಮಡಿಯೊಳಗಿನ ನೆಲವನ್ನು ಸರಿಯಾಗಿ ಮಟ್ಟ ಮಾಡಬೇಕು. ಮಡಿಗಳಿಗೆ ನೀರನ್ನು ಪೂರೈಸುವ ಎರಡು ಸಾಲಗಳಿಗೆ ಒಂದರಂತೆ ಕಾಲುವೆಗಳನ್ನು ನಿರ್ಮಿಸಬೇಕು. ಪ್ರತಿ ಮಡಿಯ ಕ್ಷೇತ್ರವನ್ನು ನಿರ್ಧರಿಸಲು ಹರಿಯುವ ನೀರಿನ ವೇಗ, ನೀರಾವರಿಗೆ ಲಭ್ಯವಿರುವ ಭೂಮಿ, ಬೆಳೆಯಬೇಕೆಂದಿರುವ ಬೆಳೆ ಮುಂತಾದವುಗಳನ್ನು ಗಣನೆಗೆ ತೆಗೆದುಕೊಳ್ಳಬೇಕು. ಮೇಲೆ ಹೇಳಿದ ಎರಡು ವಿಧಾನಗಳು ಬೆಳೆ ಸಾಲುಗಳ ಅಂತರ ಕಡಿಮೆ ಇರುವ ಭತ್ತ, ಗೋಧಿ, ಕಡಲೆ ಕಾಯಿ, ಈರುಳ್ಳಿ ಬೆಳ್ಳೊಳ್ಳಿ ಮುಂತಾದ ತರಕಾರಿ ಬೆಳೆಗಳಿಗೆ ಯೋಗ್ಯವಾದ ನೀರಾವರಿ ಪದ್ಧತಿಗಳಾಗಿ ರೂಢಿಯಲ್ಲಿವೆ.

**೧೮. ಬೋದು ಸಾಲ ಅನುಸರಿಸುವುದು :**

ಬೋದುಸಾಲ ಪದ್ಧತಿ ಈ ಹಿಂದಿನಿಂದಲೂ ಕೃಷಿಕರು ಅನಸರಿಸಿಕೊಂಡು ಬಂದಿರುವುದಾಗಿದೆ. ಈ ಸಾಲುಗಳಲ್ಲಿ ಬೆಳೆಯುವ ಸಾಧಾರಣ ಅಂತರವಿರುವ ಬೆಳೆಗಳಿಗೆ ಇದು ಸೂಕ್ತವಾದ ಪದ್ಧತಿ. ಈ ಕಾಲುವೆಗಳ ಇಳಿಜಾರು ಹೆಚ್ಚು ಇರಬಾರದು. ಇಳಿ ಜಾರು ಹೆಚ್ಚು ಇದ್ದರೆ ಹರಿಯುವ ನೀರು ಮಣ್ಣನ್ನು ಕೊಚ್ಚಿಕೊಂಡು ಹೋಗುತ್ತದೆ. ಈ ಪದ್ಧತಿಯ ದಿಂಡಿನ ಮೇಲೆ ಬೆಳೆಯುವ ಬೆಳೆಗಳಾದ ಮೂಲಂಗಿ, ಗೆಣಸು, ಕಬ್ಬು ಮುಂತಾದ ಬೆಳೆಗಳಿಗೆ ಹೆಚ್ಚು ಸೂಕ್ತ.

**೧೯. ಬೀಜವನ್ನು ಹಿಂದಿರುಗಿಸಬೇಕು :**

ಯಾವುದೇ ಬೆಳೆಯ ಬೀಜವನ್ನು ತಮ್ಮಲ್ಲಿ ಇರದಿದ್ದರೆ ಇನ್ನೊಬ್ಬರ ಹತ್ತಿರ ಬೀಜಗಳನ್ನು ತಂದು ಬಿತ್ತುವರು. ಆ ಬೆಳೆಯ ರಾಶಿಯಾದ ಬಳಿಕ ತಂದಿರುವ ಬೀಜಕ್ಕೆ ಅರ್ಧದಷ್ಟು ಹೆಚ್ಚಿನ ಧಾನ್ಯ ಸೇರಿಸಿ ಹಿಂದಿರುಗಿಸಿ ಕೊಡಬೇಕು. ಈ ತಂದಿರುವ ಬೀಜ ಮುಳಗಿಸಿಕೊಂಡರೆ ಒಳ್ಳೆಯದಾಗುವುದಿಲ್ಲ. ಎಂಬುದು ಜನಪದರ ನಂಬಿಕೆ. ಬೀಜ ಬೆಳವಣಿಗೆ ಸಂಕೇತ ಅದು ದ್ವಿಗುಣವಾಗಬಲ್ಲದು. ಆದ್ದರಿಂದ ಬೀಜ ಹಿಂದಿರುಗಿಸದೆ ಮುಳುಗಿಸಿಕೊಂಡರೆ ತಮಗೆ ಕೇಡಾಗುವುದು ಎಂಬ ನಂಬಿಕೆ. ಸಮಯಕ್ಕೆ ಸರಿಯಾಗಿ ಬಿತ್ತಲು ಸಹಾಯ ಮಾಡಿದವರಿಗೆ ಮರಳಿಸಬೇಕೆಂಬುದೇ ಈ ನಂಬಿಕೆಯ ಉದ್ದೇಶ.

**೨೦. ಬೀಜವನ್ನು ಚೆಲ್ಲುವುದು ಅಥವಾ ಎರಚುವುದು :**

ಬೀಜವನ್ನು ಜಮೀನಿನ ಮೇಲ್ಭಾಗದಲ್ಲಿ ಸಮಾನವಾಗಿ ಬೀಳುವಂತೆ ಕೈಯಿಂದ ಎರಚಿ ನೇಗಿಲು ಅಥವಾ ಕುಂಟೆಗಳಿಂದ ಬಿತ್ತಲಾಗುವುದು. ಈ ವಿಧಾನದಲ್ಲಿ ಎಷ್ಟೇ ಜಾಗ್ರತೆ ವಹಿಸಿದರೂ ಕೆಲವು ಭಾಗಗಳಲ್ಲಿ ಹೆಚ್ಚು ಗುಂಪಾಗಿ ಅಥವಾ ಕಡಿಮೆಯಾಗಿ ಬೀಜ ಬೀಳಬಹುದು. ಕೆಲವೊಂದು ಭಾಗಗಳಲ್ಲಿ ಸಸ್ಯ ಸಂಖ್ಯೆ ಕಡಿಮೆಯಾಗಿ ಬೀಳು ಬೀಳಾಗಬಹುದು. ಆದರೆ ಇದೊಂದು ತ್ವರಿತವಾಗಿ ಮಾಡಬಲ್ಲ ಕಡಿಮೆ ಖರ್ಚಿನ ಪದ್ಧತಿ.

**೨೧. ಒಡ್ಡುಗಳನ್ನು ಹಾಕುವುದು :**

ಹೊಲವು ತಗ್ಗು, ತೆವರಾಗಿ ಹಳ್ಳನಾಗಲಿ, ಕೋರಿ ಬೇರಲುಗಳು ಇದ್ದರೆ ಅಂಥ ಹೊಲಗಳ ಬೆಳೆಯು ಹೊಲದಲ್ಲೆಲ್ಲ ಒಂದೇ ಸಮವಾಗಿ ಬೆಳೆಯುವುದಿಲ್ಲ. ಆದ್ದರಿಂದ ಒಡ್ಡುಗಳನ್ನು ಹಾಕುವುದು ಈ ಹಿಂದಿನಿಂದಲೂ ರೂಢಿಯಲ್ಲಿ ಬಂದಿದೆ. ಮಳೆಯಾದರೆ ತವರು ಭೂಮಿಯಲ್ಲಿ ನೀರು ಸ್ವಲ್ಪವಾದರೂ ನಿಲ್ಲದೆ ಮಳೆ ಬಡಿದಾಕ್ಷಣವೆ ತಗ್ಗಿನ ಕಡೆಗೆ ಹರಿಯುವುದರಿಂದ ಬೇಗನೆ ಹಸಿಯಾಗುವುದಿಲ್ಲ. ಮತ್ತು ತಗ್ಗು ಭೂಮಿಯು ಹಸಿಯಾಗಿ ತೆವರು ಭೂಮಿಯು ಹಸಿಯಾಗದೇ ಇದ್ದದರಿಂದ ಅಂಥ ಹೊಲಗಳಲ್ಲಿ ಬಿತ್ತಿದ ನಾಟಿಕೆಗಳು ಕೆಲವು ಸ್ಥಳಗಳಲ್ಲಿ ಒಣಗಿದ ಹಾಗೆ ಅಥವಾ ರೋಗದ ಸಸಿಗಳ ಹಾಗೆ ಆಗಿ, ಕೆಟ್ಟು ಹೋಗಿ ಆ ಹೊಲದ ಅರ್ಧ ಬೆಳೆಯು ಕಡಿಮೆಯಾಗುವುದು. ಹೊಲದ ಮಣ್ಣು ಮತ್ತೊಂದು ಹೊಲಕ್ಕೆ ಹೋಗದೆ ಹಾಗೆ ಹೊಲದ ಬಾಂದಿನ ಹದ್ದು ಹಿಡಿದು ಒಂದು ಮೊಳ ಅಥವಾ ಎರಡು ಮೊಳ ಎತ್ತರ ನಾಲ್ಕು ಕಡೆಗೂ ಸುತ್ತಲು ಒಡ್ಡು ಹಾಕಿಸುವುದು ಉತ್ತಮವಾಗಿದೆ.

**೨೨. ಬಿಳಿ ಜೋಳಕ್ಕೆ ಭೂಮಿ ಕಾಯ್ದಿಡುವುದು :**

ಬಿಳಿ ಜೋಳ ಬೆಳೆಯಬೇಕಾದರೆ ಭೂಮಿಯ ಫಲವತ್ತತೆ ಹೆಚ್ಚಾಗಿರಬೇಕು. ಆ ಕಾರಣಕ್ಕಾಗಿ ಖರೀಫ್ ಬಿತ್ತನೆಯಲ್ಲಿಯೇ ಬಿಳಿಜೋಳ ಹಾಕುವುದಿದ್ದರೆ ಆ ಭೂಮಿಯನ್ನು ಹಾಗೆ ಬಿಡುತ್ತಾರೆ. ಖರೀಫ್ ಬೆಳೆಯು ಬಿತ್ತನೆಯಿಂದ ಮುಂದಿನ ಜೋಳದ ಬಿತ್ತನೆಗೆ ತಡವಾಗುವುದು ಅಲ್ಲದೆ ನಿರಂತರ ಬೆಳೆಯಿಂದಾಗಿ ಭೂಮಿಯ ಫಲವತ್ತತೆ ಕಡಿಮೆಯಾಗುವುದು. ಕಾಯ್ದಿಡುವುದರಿಂದ ಮಣ್ಣನ್ನು ಹದಮಾಡುವ ಸೂಕ್ಷ್ಮಾಣು ಜೀವಿಗಳು ಮತ್ತು ಎರೆಹುಳುಗಳು ಭೂಮಿಯ ಫಲವತ್ತನ್ನು ಹೆಚ್ಚಿಸುತ್ತವೆ. ಈ ಕ್ರಿಯೆಯಿಂದಾಗಿ ಕಾಯ್ದಿಟ್ಟ ಭೂಮಿಯಲ್ಲಿ

ಪೋಷಕಾಂಶಗಳ ಪ್ರಮಾಣ ಹೆಚ್ಚಾಗುವುದು. ಆದ್ದರಿಂದ ಬಿಳಿಜೋಳದ ಬೆಳೆಗಾಗಿ ಬೇಕಾದ ಸನ್ನಿವೇಶ, ಭೌಗೋಳಿಕ ಪರಿಸರ, ಕಪ್ಪುಮಣ್ಣು ಇದ್ದಲ್ಲಿ ಉತ್ತಮ ಇಳುವರಿ ಬರುತ್ತದೆ. ಆದ್ದರಿಂದ ಭೂಮಿಯನ್ನು ಕಾಯ್ದಿಡುವ ನಂಬಿಕೆಯಿದೆ.

**೨೩. ಬಿಳಿ ಜೋಳ ಬಿತ್ತಿದ ಬಳಿಕ ಮೊಳಕೆ ಕಾಣುವವರೆಗೆ ಸ್ನಾನ ಮಾಡಬಾರದು :**

ರೈತ ತನ್ನ ಬಿತ್ತುವ ದಿನಗಳಲ್ಲಿ ಕೆಲಸಕ್ಕೆ ಮಹತ್ವ ಕೊಟ್ಟು ಸಮಯ ಹಾಳಾಗಬಾರದೆಂದು ತನ್ನ ಆರೋಗ್ಯವನ್ನು ಗಮನಿಸದೆ ಸೂರ್ಯೋದಯದೊಂದಿಗೆ ತನ್ನ ಕೆಲಸ ಆರಂಭಿಸುವ ಆತ ಎಂತಹ ಶ್ರಮಜೀವಿ ಎಂದು ತೋರಿಸುವುದು ಹಾಗೂ ಸ್ನಾನ ಮಾಡಿದರೂ ಮತ್ತೇ ಹೊಲದಲ್ಲಿ ಶ್ರಮಪಡಲು ಬೆವರು ತಪ್ಪಿದ್ದಲ್ಲ. ಮಣ್ಣಿನ ಮಗನಾಗಿರುವ ರೈತ ತನ್ನ ದೇಹದ ಸ್ವಚ್ಛತೆಗೂ ಕೂಡಾ ಅಲಕ್ಷಿಸಿಕೊಂಡು ಬಿತ್ತುವ ಕಾರ್ಯವನ್ನು ಪರಿಪೂರ್ಣಗೊಳಿಸುತ್ತಿದ್ದ ಎಂಬುದು ಈ ನಂಬಿಕೆಯ ಉದ್ದೇಶವಾಗಿದೆ.

**೨೪. ಕೂರಿಗೆ ಪೂಜೆ ಮಾಡುವುದು :**

ಕೂರಿಗೆಯು ಬೀಜ ಬಿತ್ತನೆಗೆ ಬಳಸುವ ಒಂದು ಪ್ರಮುಖ ಉಪಕರಣ. ಬಿಳಿ ಜೋಳ ಬಿತ್ತುವಾಗ ಇದನ್ನು ಪೂಜಿಸುವ ನಂಬಿಕೆಯಿದೆ. ಇದರ ಹಿಂದಿರುವ ಉಪಯುಕ್ತತೆ, ಪ್ರಾಯೋಗಿಕತೆಯ ಉದ್ದೇಶಗಳು ಹೀಗಿವೆ. ಜೋಳ, ರಾಗಿ ಮುಂತಾದವನ್ನು ಅಕ್ಕಡಿ ಸಾಲು ಬಿತ್ತನೆ ಮಾಡಲು ಕೂರಿಗೆಯನ್ನು ಬಳಸುತ್ತಾರೆ. ಐದು ಮತ್ತು ಏಳು ತಾಳುಗಳುಳ್ಳ ಅಂದರೆ ಐದು ಮತ್ತು ಏಳು ಸಾಲು ಬಿತ್ತುವ ಕೂರಿಗೆಗಳಿವೆ. ಕೂರಿಗೆಯ ದಿಂಡನ್ನು ಗಟ್ಟಿ ಮರದಲ್ಲಿ ಮಾಡಿದರೆ ಕೊಳುವೆಗಳನ್ನು ಬಿದಿರಿನಲ್ಲಿ ಮಾಡಿರುತ್ತಾರೆ.

ಸಾಮಾನ್ಯವಾಗಿ ಬೀದರ ಜಿಲ್ಲೆ ಒಳಗೊಂಡಂತೆ ಉತ್ತರ ಕರ್ನಾಟಕದಲ್ಲಿ ಬಿಳಿ ಜೋಳ ಬಿತ್ತುವ ದಿವಸ ಕೂರಿಗೆ ಪೂಜೆ ಮಾಡುವುದು ರೂಢಿ. ಕೂರಿಗೆಯನ್ನು ಮನೆಯಲ್ಲಿಯೇ ಇಟ್ಟು ಪೂಜಿಸಿ ನಂತರ ಹೊಲಕ್ಕೆ ತೆಗೆದುಕೊಂಡು ಹೋಗಿ ಬಿತ್ತಲು ಪ್ರಾರಂಭಿಸುತ್ತಾರೆ. ಅಲ್ಲದೆ ಈ ಪೂಜೆಗೆ ವಿಶೇಷ ಅಡುಗೆಗಳನ್ನು ಮಾಡಿ ತಮಗೆ ಬೇಕಾದವರನ್ನು ಊಟಕ್ಕೆ ಕರೆಯುತ್ತಾರೆ.

ಬೆಳೆ ಉತ್ತಮವಾಗಿ ಬರಬೇಕಾದರೆ ಬೀಜ ಬಿತ್ತನೆ ಸಾವಕಾಶವಾಗಿ ಸಮರ್ಪಕವಾಗಿ ಹೊಲದ ನಾಲ್ಕು ಮೂಲೆಗೆ ಒಂದೇ ಪ್ರಮಾಣದಲ್ಲಿ ಬೀಳಬೇಕು. ಹಾಗೆ ಬೀಜ ಬೀಳಬೇಕಾದರೆ ಬಿತ್ತುವ ಹತಾರ ಅಂದರೆ ಕೂರಿಗೆ ಸರಿಯಾಗಿರಬೇಕು. ಹೀಗಾಗಿ ಕೂರಿಗೆ ಸರಿಯಾಗಿದೆಯೊ ಇಲ್ಲವೋ ಎಂದು ಪರೀಕ್ಷಿಸುವ ಸಲುವಾಗಿ ಕೂರಿಗೆ ಪೂಜೆಯನ್ನು ಮಾಡುತ್ತಾರೆ. ಪೂಜೆಯ ನೆಪದಲ್ಲಿ ಕೂರಿಗೆಯನ್ನು ಬಿಚ್ಚಿ ಅದರ ಕೊಳವೆಗಳು, ಕೊಳವೆಯ ರಂಧ್ರಗಳು ಸರಿಯಾಗಿವೆಯೊ ಸದೃಢವಾಗಿವೆಯೊ ಎಂದು ನೋಡಲಾಗುತ್ತದೆ. ಒಂದು ವೇಳೆ ದೋಷವೇನಾದರೂ ಕಂಡು ಬಂದರೆ ಬಡಿಗೆಯವನ್ನನ್ನು ಕರೆಯಿಸಿ ಸರಿಪಡಿಸಲಾಗುತ್ತದೆ ಅಥವಾ ಮನೆಯವರೇ ಸರಿಪಡಿಸುತ್ತಾರೆ. ನಂತರ ಕೊರಿಗೆ ಪೂಜೆಗೆ ಅಣಿಯಾಗುತ್ತಾರೆ.

ಉತ್ತಮ ಫಸಲಿಗೆ ಉತ್ತಮ ಬಿತ್ತನೆಯೇ ಮೂಲ ಎಂಬುದನ್ನು ಅನುಭವದಿಂದ ತಿಳಿದಿರುವ ರೈತರು ಈ ಆಚರಣೆಯ ಮೂಲಕ ವಿಧಿವತ್ತಾಗಿ ಅದನ್ನು ನೆರವೇರಿಸುತ್ತಾರೆ.

**೨೫. ಖಳಕ್ಕೆ ಪೂಜಿಸುವುದು :**

ಕಣ ಅಥವಾ ಖಳ ಎಂದರೆ ಧಾನ್ಯವನ್ನು ಒಕ್ಕುವ ಸ್ಥಳ. ರೈತರು ದೇವರ ಮನೆಯಂದೇ ನಂಬಿ ಅದನ್ನು ಪೂಜಿಸಿ ತಮ್ಮದೆ ಆದ ನಿಯಮಗಳನ್ನು ರೂಢಿಗೆ ತಂದಿರುವರು. ಕಣಗಾಲದಲ್ಲಿ ತಿಂಗಳಾವಧಿಯವರೆಗೂ ರೈತರು ಮನೆಯಲ್ಲಿ ಸಿಗುವುದಕ್ಕಿಂತಲೂ ಕಣದಲ್ಲಿ ಸಿಗುವುದೇ ಹೆಚ್ಚು ಅವರಿಗೆ ಆ ಕಾಲದಲ್ಲಿ ಕಣವೇ ಮನೆ ಕಣವೇ ಸರ್ವಸ್ವ ರೈತರು ಭೂಮಿಗೆ ಅನುಗುಣವಾಗಿ ಬೇರೆ ಬೇರೆ ವ್ಯಾಸದ ದೊಡ್ಡ-ಸಣ್ಣ ಕಣಗಳನ್ನು ಮಾಡಿಕೊಳ್ಳುತ್ತಾರೆ.

ಇದಕ್ಕೆ ಒಳ್ಳೆ ದಿನ ಶುಭ ಸಮಯ ದಿಕ್ಕು ನೋಡಿ ಕೆಲಸ ಆರಂಭಿಸುವುರು. ಚೆನ್ನಾಗಿ ನೀರು ಚಿಮುಕಿಸಿ ಧಮಸ್ ಮಾಡಿ ಕಣದ ಮಧ್ಯಭಾಗದಲ್ಲಿ ಮೇಟಿ ಕಂಬ ಭದ್ರವಾಗಿರಬೇಕೆಂಬ ನಂಬಿಕೆಯಿಂದ ಆಯ್ದು (ಬನ್ನಿ ಮರ) ಮರವನ್ನೇ ಉಪಯೋಗಿಸಿಕೊಳ್ಳುತ್ತಾರೆ. ಇಲ್ಲದಿದ್ದರೆ ಭರ್ತಿ ಕೆಲಸ ನಡೆದಾಗ ಕಂಬ ಮುರಿದರೆ ಕೆಲಸ ಹಾಳಾಗುವುದು. ಆದ್ದರಿಂದ ಗಟ್ಟಿ ಕಟ್ಟಿಗೆಯನ್ನು ಆರಿಸಿಕೊಳ್ಳುವ ಉದ್ದೇಶವಿದೆ.

ಕಣ ರೈತರಿಗೆ ಅತ್ಯಂತ ಪವಿತ್ರವಾದುದು ಚಪ್ಪಲಿಗೆ ಹೊಲಸು ಹತ್ತುವುದರಿಂದ ಅದು ಆಹಾರ ಧಾನ್ಯಕ್ಕೂ ತಗುಲಬಾರದೆಂಬ ಕಾರಣಕ್ಕಾಗಿ ಚಪ್ಪಲಿ ಮೆಟ್ಟಿಕೊಂಡು ಅಲ್ಲಿಗೆ ಬರುವಂತಿಲ್ಲ. ಕಣದಲ್ಲಿ ಕೆಲಸ ಮಾಡುವಾಗ ಎಲೆ-ಅಡಿಕೆ ಹಾಕುವಂತಿಲ್ಲ. ರಾಶಿ ತೂರುವಾಗ ಮಾತಾನಾಡಿದರೆ ಬಾಯೊಳಗೆ ಧೂಳು-ದುಂಬು ಹೋಗಿ ಉಸಿರಾಟಕ್ಕೆ ತೊಂದರೆಯಾಗುವುದನ್ನು ತಪ್ಪಿಸುವ ಹಾಗೂ ಆರೋಗ್ಯ ಮತ್ತು ಸ್ವಚ್ಛತೆ ಕಾಪಾಡುವ ಉದ್ದೇಶಗಳು ಈ ನಂಬಿಕೆಯಲ್ಲಿ ಕಂಡು ಬರುತ್ತದೆ.

ಆದರೆ ಇಂದಿನ ದಿನಗಳಲ್ಲಿ ರಾಶಿ ಮಾಡಲು ಬಳಸುವ ಮಸೀನಗಳಿಂದಾಗಿ ಇಂತಹ ಪೂಜಾ ಪದ್ದತಿ. ಈ ನಿಯಮಗಳೆಲ್ಲವೂ ಆಚರಣೆಯಿಂದ ಮರೆಯಾಗುತ್ತಿವೆ. ಅಷ್ಟಕ್ಕೆ ಡಾಂಬರೀಕರಣದ ರಸ್ತೆಯ ಮೇಲೆ ಓಡಾಡುವ ಮೋಟಾರು ವಾಹನಗಳ ಕೆಳಗೆ ಧಾನ್ಯಗಳನ್ನು ಹಾಕಿ ರಾಶಿ ಮಾಡುತ್ತಿರುವುದು ಕಾಣುತ್ತಿದ್ದೇವೆ. ಇಂತಹ ಈ ಪದ್ದತಿಗಳಲ್ಲಿ ಸ್ವಚ್ಛತೆಯಾಗಲಿ, ನಿಯಮಗಳಾಗಲಿ ಇಲ್ಲವಾಗಿವೆ.

**೨೬. ಖಳದಲ್ಲಿ ರಾಶಿ ಮೊದಲು ಮನೆಯ ಸ್ವಾಮಿಗಳಿಗೆ ಕೊಡುವುದು :**

ರೈತನು ಬಿತ್ತುವ ಕೆಲಸದಿಂದ ಮೊದಲಗೊಂಡು ಕಳೆ ತೆಗೆಯುವುದು ಬೆಳೆಗಳ ಸ್ವಚ್ಛತೆ ಮಾಡುವುದು. ಯಾವುದೇ ಕ್ರಿಮಿನಾಶಕಗಳು ಬಾಧೆಯಾಗದಂತೆ ಎಚ್ಚರ ಇರುವುದು ಇವೆಲ್ಲಾ ಜಾಗರೂಕವಾಗಿ ಮಾಡಿಕೊಂಡು ಬಂದಿರುತ್ತಾನೆ. ತಾನು ಬೆಳದುದ್ದನ್ನು ಮೊದಲು ಉಪಯೋಗಿಸದೇ ಅದರಲ್ಲಿ ಸ್ವಲ್ಪವಾದರೂ ದಾನಮಾಡಿ ತಾನು ಬಳಸಿಕೊಳ್ಳಬೇಕೆಂದು ತಾನು ಯಾರಲ್ಲಿ ನಂಬಿಕೆಯಿಟ್ಟಿರುತ್ತಾನೆಯೊ ಅಂತಹ ಜಂಗಮರನ್ನು ತನ್ನ ಮನೆಯ ಸ್ವಾಮಿಗಳೆಂದು ರಾಶಿ ಖಳಕ್ಕೆ ಬಂದರೆ ಅಲ್ಲೇ ಕೊಡುವುದು ಅಥವಾ ಬಾರದಿದ್ದರೆ. ಅವರ ಹೆಸರಿನಲ್ಲಿ ಧಾನ್ಯ ಮೀಸಲಿಟ್ಟು ಚೀಲ ತುಂಬುವನು. ಇಲ್ಲಿ ಇನ್ನೊಂದು ಗಮನಿಸುವ ಅಂಶವೆಂದರೆ ಬಡತನದಲ್ಲಿರುವ ಜಂಗಮರಿಗೆ ರೈತರು ಕೊಡುವ ಇಂತಹ ಧಾನ್ಯಗಳಿಂದ ಅವರ ಬದುಕಿಗೆ ಸ್ವಲ್ಪವಾದರೂ ಸಹಾಯವಾಗುತ್ತವೆ. ಆದರೆ ಇಂದಿನ ಆಧುನಿಕ ಕಾಲದಲ್ಲಿ ಜಂಗಮರು ತಮ್ಮ ಸಂಪ್ರದಾಯಗಳಿಂದ ಹೊರಬಂದು ಇಂದು ಸಿಗುವ ಹೆಚ್ಚಿನ ಕೆಲಸದ ಅವಕಾಶದಿಂದ ರೈತರನ್ನು ಅವಲಂಬಿಸಿರುವವರ ಸಂಖ್ಯೆ ಕಡಿಮೆಯಾಗಿದೆ.

**೨೭. ಕೃಷಿಯಲ್ಲಿ ಬೇವಿನ ಎಲೆ ಮತ್ತು ರಸ ಉಪಯೋಗಿಸುವುದು :**

ಬೇವಿನ ಮರವನ್ನು ಶಕ್ತಿಯ ಪ್ರತಿರೂಪ ಎಂದು ಪೂಜಿಸಿ ಗೌರವಿಸುವುದುಂಟು. ಬೇವಿನಲ್ಲಿ ಕಹಿ ಗುಣ ಇರುವುದರಿಂದ ಸಾಮಾನ್ಯವಾಗಿ ಹಿಂದಿನಿಂದಲೂ ಕೃಷಿಕರು ಇದರ ಮೇಲೆ ನಂಬಿಕೆ ಇಟ್ಟುಕೊಂಡು ಉಪಯೋಗಿಸುವುದು ವೈಜ್ಞಾನಿಕವಾಗಿಯೂ ನಿಜವಾಗಿದೆ.

ಬಿತ್ತನೆಗಾಗಿ ತೆಗೆದಿರುವ ಬೀಜದಲ್ಲೂ ಬೇವಿನ ತಪ್ಪಲೂ ಮಿಶ್ರಣ ಮಾಡುವುದರಿಂದ ಯಾವುದೇ ಹುಳು, ಕ್ರಿಮಿಗಳಾಗುವ ಸಾಧ್ಯತೆ ಕಡಿಮೆ ಬೇವಿನ ಕಹಿವಾಸನೆಯಿಂದ ವಿಷವಾಗಿರಬಹುದು. ಸ್ಪರ್ಶದಿಂದ ಕಹಿ ಇರಬಹುದು. ಈ ರೀತಿ ಬೇವಿನ ರಸಕ್ಕೆ ಹುಳುಗಳನ್ನು ಸಾಯಿಸೋ ಶಕ್ತಿಯಿದೆ. ಹನ್ನೊಂದು ಜಾತಿ ಬೇರು ಗಂಟು ಹುಳುಗಳಿಗೆ ಬೇವಿನ ಹಿಂಡಿ ಭೂಮಿಗೆ ಸೇರಿಸಿದರೆ ಬೇರೆ ಹುಳುಗಳನ್ನು ನಿಯಂತ್ರಿಸುತ್ತೆ. ನಾಲ್ಕು ಜಾತಿ ರೋಗಗಳು – ಸೊರಗು, ಚುಕ್ಕೆ ಬೂದಿ ಬರೋದು ಮುಂತಾಗಿ ನಿಯಂತ್ರಿಸುತ್ತೆ. ಬೇವನ್ನು ಔಷಧಿಯಾಗಿ ಪ್ರಯೋಜನ ಪಡೆಯಲು ಬೀಜಗಳನ್ನು ಬೂಜು ಬರದ ಹಾಗೆ ಕೊಳೆಯದ ಹಾಗೆ ಒಣಗಿಸಿಟ್ಟಿಕೊಳ್ಳಬೇಕು. ಕೀಟನಾಶಕವಾಗಿ ಅಂದರೆ ಹೇನು, ನುಸಿ ಮುಂತಾದ ಎಳೆಯ ವಯಸ್ಸಿನ ಕೀಟಗಳಿದ್ದರೆ ಅದನ್ನು ಸಾಯುವಂತೆ ಮಾಡುತ್ತದೆ.

ಬೇವಿನ ಬೀಜದ ಕಷಾಯವನ್ನು ಸಿಂಪಡಿಸುವುದರಿಂದ ಕೀಟದ ಮೊಟ್ಟೆಯಲ್ಲಿರುವ ಭ್ರೂಣವು ಏರುಪೇರಾಗುತ್ತದೆ. ಒಂದು ವೇಳೆ ಮೊಟ್ಟೆಯಿಂದ ಮರಿ ಹೊರಬಂದರೂ ಸಹ ಅದರ ರೂಪ ಪರಿವರ್ತನೆಯಲ್ಲಿ ಏರುಪೇರಾಗುತ್ತದೆ. ಸಂತಾನ ನಿಯಂತ್ರಣಕ್ಕೆ ಬೇವಿನ ಬೀಜದ ಕಷಾಯ ಒಂದು ರಾಮಬಾಣವಿದ್ದಂತೆ.

ಬೇವಿನ ಎಣ್ಣೆಯಲ್ಲಿ 'ಲಿಮೋನಾಯ್ಡ್' ಎಂಬ ಗುಂಪಿನ ರಸಾಯನಿಕ ವಸ್ತುಗಳಿವೆ. ಇವು ಕೀಟಗಳ ಹಸಿವೆಯನ್ನು ಮುಚ್ಚಿ ಅವು ಆಹಾರ ಸೇವಿಸಿದಂತೆ ಬೆಳೆಯದಂತೆ ಮಾಡುತ್ತವೆ. ರಾಸಾಯನಿಕ ಪಿಡುಗು ನಾಶಕಗಳಂತೆ ಇವು ಹಾಕಿದ ಕೂಡಲೇ ಕೀಟಗಳನ್ನು ಕೊಲ್ಲುವುದಿಲ್ಲ. ಆದರೆ ಕೀಟಗಳು ಬೆಳೆಯದಂತೆ ಪ್ರಬುದ್ಧಾವಸ್ಥೆಗೆ ಬರದಂತೆ ಸಂತಾನೋತ್ಪಾದನೆ ಮಾಡದಂತೆ ಅವುಗಳ ಸಾಮರ್ಥ್ಯವನ್ನು ಕುಂಠಿತಗೊಳಿಸಿ ಕೀಟಗಳ ಸಂತತಿಯನ್ನೇ ಹೇಳಿ ಹೆಸರಿಲ್ಲದಂತೆ ಅಳಿಸಿಹಾಕುತ್ತವೆ. ಬೇವಿನಿಂದ ಪಡೆದ ಜೈವಿಕ ಪಿಡುಗು ನಾಶಕಗಳಿಂದ ಸುಮಾರು ೩೦೦ ಕೀಟ ಪ್ರಬೇಧಗಳ ಹಾವಳಿಯನ್ನು ಯಶಸ್ವಿಯಾಗಿ ತಡೆಯಬಹುದು. ಹತ್ತಿ, ಕಬ್ಬು, ಜೋಳ, ನೆಲಗಡಲೆ, ಟಮೋಟೋಗೆ ಬರುವ ರೋಗಗಳ ವಿರುದ್ಧ ಬೇವು ಬಹಳ ಪ್ರಭಾವಕಾರಿಯಾಗಿದೆ.

ಗ್ರಾಮಾಂತರ ಪ್ರದೇಶದಲ್ಲಿ ಗಾಣದಿಂದ ತೆಗೆದ ಬೇವಿನ ಎಣ್ಣೆ ಮತ್ತು ಬೀಜದಿಂದ ತೆಗೆದ ಸಾರದ ಪುಡಿಯನ್ನು ಬಳಸಿಕೊಂಡು ಮನೆಯಲ್ಲಿಯೇ ಕೀಟನಾಶಕ ದ್ರಾವಣಗಳನ್ನು ತಯಾರಿಸುವ ಅವಕಾಶಗಳು ಇವೆ.

**೨೮. ಕೀಟಗಳ ನಾಶಕ್ಕೆ ಪಂಚಗವ್ಯಗಳನ್ನು ಬಳಸುವದು :**

ಹಸುವಿನ ಗಂಜಲ, ಹಾಲು, ಮೊಸರು, ತುಪ್ಪ, ಜೇನುತುಪ್ಪ ಸೇರಿಸಿ ಪಂಚಾಮೃತವನ್ನು ದೇವರ ಅಭಿಷೇಕಕ್ಕಾಗಿ ಬಳಸಿದ್ದನ್ನು ಕಾಲಲ್ಲಿ ಚೆಲ್ಲಬಾರದು ಎನ್ನುವ ನಂಬಿಕೆಯಿಂದ ಅದನ್ನು ಮನೆಯಲ್ಲಿರುವ ಗಿಡಗಳಿಗಾಗಲಿ ಅಥವಾ ಹೊಲದಲ್ಲಿರುವ ಬೆಳೆಗಳ ಮೇಲೆ ವಿಶೇಷ ಪೂಜಾ ದಿನಗಳಲ್ಲಿ ಸಿಕ್ಕಾಗ ಹಾಕುವ

ನಂಬಿಕೆ ಈ ಹಿಂದಿನಿಂದಲೂ ಕೃಷಿಕರಲ್ಲಿ ಇದೆ. ಹಾಗೂ ಎಳ್ಳ ಅಮವಾಸ್ಯೆಗಳಂತಹ ಕೃಷಿಗೆ ಸಂಬಂಧಿಸಿದ ಆಚರಣೆಯ ದಿವಸಗಳಲ್ಲಿ ಈ ಪಂಚಾಮೃತವನ್ನು ಬೆಳೆಗಳ ಮೇಲೆ ಸಿಂಪಡಿಸುವ ನಂಬಿಕೆ ವೈಜ್ಞಾನಿಕ ಉಪಯುಕ್ತತೆಯನ್ನೇ ಹೊಂದಿದೆ. ಇದರ ಬಳಕೆಯಿಂದ ಶಿಲೀಂಧ್ರಗಳನ್ನು ನಿಯಂತ್ರಿಸಬಹುದಾಗಿದೆ.

ಅದನ್ನೇ ಇಂದಿನ ಸಾವಯವ ಕೃಷಿ ಪದ್ಧತಿಯಲ್ಲಿ ಇನ್ನೂ ಹೆಚ್ಚಿನ ಆದ್ಯತೆ ಕೊಟ್ಟು ಅದರ ಬಳಕೆಯ ವಿಧಾನವನ್ನು ಈ ರೀತಿಯಾಗಿ ವಿವರಿಸಲಾಗುತ್ತದೆ. ಟೊಮಾಟೋ ಬೆಳೆಯನ್ನು ಬಾಧಿಸುವ ಸೊರಗು ರೋಗಕ್ಕೆ ಕಾರಣವಾಗುವ 'ಪುಸೇರಿಯಂ' ಎಂಬ ಶಿಲೀಂಧ್ರವನ್ನು ನಿಯಂತ್ರಿಸಲು 'ಪಂಚಗವ್ಯ' ಹೆಚ್ಚು ಪರಿಣಾಮಕಾರಿಯೆಂದು ತಿಳಿದು ಬಂದಿದೆ. 'ಪಂಚಗವ್ಯ' ವನ್ನು ತಯಾರಿಸುವುದು ಹಸುವಿನ ಸಗಣಿ, ಗಂಜಲ, ಹಾಲು, ಮೊಸರು, ತುಪ್ಪ, ಕಾಳು, ಉಪ್ಪು ಹಾಗೂ ಈಸ್ಟ್ ಎನ್ನುವ ಶೀಲೀಂಧ್ರವನ್ನು ಸ್ವಲ್ಪವೇ ಸೇರಿಸಿ ಹದಿನೈದು ದಿವಸಗಳ ಕಾಲ ಪ್ರತಿದಿನ ಅಲುಗಾಡಿಸುತ್ತಿದ್ದು ಶೋಧಿಸಿದ ನಂತರ ಬರುವ ದ್ರಾವಣವೇ ಪಂಚಗವ್ಯವೆನ್ನುವ ಜೀವ ಜಲದಲ್ಲಿ ಅನೇಕ ಸೂಕ್ಷ್ಮ ಜೀವಿಗಳಿದ್ದು ಈ ಜೀವಿಗಳು ಸೊರಗು ರೋಗಕ್ಕೆ ಕಾರಣವಾಗುವ ರೋಗಾಣುಗಳಿಗೆ ಅಲ್ಲದೇ ಇನ್ನೂ ಅನೇಕ ಬಗೆಯ ರೋಗಾಣುಗಳಿಗೆ ಪ್ರತಿಸ್ಪಂದಿಗಳಾಗಿ ರೋಗಾಣು ನಾಶವಾಗಿ ಅವುಗಳ ಬೆಳವಣಿಗೆಗೆ ಅಡಚಣೆಯುಂಟು ಮಾಡುವುದರಿಂದ ರೋಗದ ತೀವ್ರತೆ ಕಡಿಮೆಯಾಗುತ್ತದೆ.

**೨೯. ಬನ್ನಿ ಮರ ಪೂಜಿಸುವುದು :**

ಬನ್ನಿ ಮರವನ್ನು ಮಹಾಕಾಳಿಯ ಅವತಾರವೆಂದು ಪರಿಗಣಿಸಲಾಗುತ್ತದೆ. ಪಾಂಡವರು ಬನ್ನಿಯ ಎಲೆಯ 'ಪತ್ರೋಳಿ' ಮಾಡಿ ಉಂಡು ವನವಾಸಕ್ಕೆ ಹೋದರೆಂದು ಜನರ ನಂಬಿಕೆ. ಪಾಂಡವರು ವನವಾಸಕ್ಕೆ ಹೋಗುವಾಗ ತಮ್ಮ ಆಯುಧಗಳನ್ನು ಈ ಶಮಿ ತಾಯಿಯ ಬಸಿರಲ್ಲಿ ಬಚ್ಚಿಟ್ಟು ಹೋದರಂತೆ. ಮರಳಿ ಬಂದು ತಮ್ಮ ವಿಜಯೋತ್ಸವವನ್ನು ಈ ಮರದ ಪೂಜೆಮಾಡಿ ಆಚರಿಸಿದರಂತೆ. ಅದರ ಸಂಕೇತವಾಗಿ ವಿಜಯದಶಮಿಯಂದು ಈ ಬನ್ನಿಗಿಡಕ್ಕೆ ವಿಶೇಷ ಪೂಜೆ ಸಲ್ಲಿಸುತ್ತಾರೆ. ಪ್ರತಿಯೊಬ್ಬರು ಹೊದಲ್ಲಿ ಅದನ್ನು ಲಕ್ಷ್ಮೀಯಂದು ಭಾವಿಸಿ ಪೂಜಿಸುತ್ತಾರೆ. ಅದರ ಹತ್ತಿರವೇ ಕಣ ಅಥವಾ ಖಳ ಮಾಡುತ್ತಾರೆ. ಅದನ್ನು ಪವಿತ್ರವೆಂದು ಪರಿಗಣಿಸುವುದಷ್ಟೇ ಅಲ್ಲ. ಅದರ ಕಟ್ಟಿಗೆಯನ್ನೂ ಉರಿಯುವುದಿಲ್ಲ. ಅದನ್ನು ಮೇಟಿಯಾಗಿ ಮಾಡುತ್ತಾರೆ.

ಇದರಂತೆ ಕೃಷಿಕರು ಹೊಲದಲ್ಲಿರುವ ಬೇವಿನಮರ, ಹುಣಸೆಮರವನ್ನು ಪೂಜಿಸುತ್ತಾರೆ. ಫಸಲು ಕೊಡುವ ಬಾಳೆ, ತೆಂಗು, ಮಾವಿನ ಮರಗಳಿಗಂತೂ ಮೊದಲಬಾರಿಗೆ ಹಣ್ಣು ಬಿಟ್ಟಾಗ ಮದುವೆ ಮಾಡುವ ಕಾರ್ಯದ ಬಳಿಕವೆ ಹಣ್ಣು ತಿನ್ನಲು ಉಪಯೋಗಿಸುವರು. ಹೀಗೆ ಕೃಷಿಕರು ತಾವು ಬೆಳೆಯುವ ವಾರ್ಷಿಕ ಬೆಳೆಗಳ ಜೊತೆ ತಮಗೆ ಸಹಕರಿಸುವ ಎಲ್ಲಾ ಗಿಡ ಮರಗಳನ್ನು ಪೂಜಿಸುವ ನಂಬಿಕೆ ಕೃಷಿಕರಲ್ಲಿದೆ.

**೩೦. ಭತ್ತದ ಬಿತ್ತನೆ ಬೀಜ ಹೊಗೆ ಹೋಗುವ ಜಾಗದಲ್ಲಿ ಕಟ್ಟುವುದು :**

ಕೊಯ್ಲಿಗೆ ನಾಲ್ಕೈದು ದಿನ ಇರೋವಾಗ ಒಳ್ಳೆ ಫಸಲನ್ನು ತುಂಬಿಕೊಂಡಿರುವ ಭತ್ತದ ತೆನೆಗಳನ್ನು ಅಡುಗೆ ಮನೆಯ ಮಾಳಿಗೆಯ ಸರಕ್ಕೆ ಕಟ್ಟುತ್ತಿದ್ದರು. ತೆನೆಗಳನ್ನು ನೆರಳಲ್ಲಿ ಒಣಗಿಸುತ್ತಿದ್ದರು. ಬಿಸಿಲಿಗೆ ಹಾಕಿದರೆ ಮೊಳಕೆಯ ಶಕ್ತಿ ಕಳಕೊಳ್ಳುತ್ತೆ ಕಾಳು ಮಾಡುತ್ತಿರಲಿಲ್ಲ. ಹೊಗೆ ಹೋಗುವಲ್ಲಿ ಕಟ್ಟುತ್ತಿದ್ದರು. ಬೆಳೆ ಚೆನ್ನಾಗಿರಲೆಂದು ಹಾಗೂ ಹುಳುಗಳು ಹುಟ್ಟುವುದಿಲ್ಲವೆಂಬ ಉದ್ದೇಶ ಈ ನಂಬಿಕೆಯಲ್ಲಿದೆ.

**೩.೧. ಬಿತ್ತನೆ ಗೋಧಿ ಬೀಜ ಬಿಸಿಲಿಗೆ ಒಣಗಿಸುವುದು :**

ಗೋಧಿ ಬೆಳೆಗೆ ಬರುವ ವಿರಳ ಕಾಡಿಗೆ ರೋಗ ತಡೆಗಟ್ಟಲು ಬಿತ್ತನೆ ಬೀಜಗಳನ್ನು ಹೆಚ್ಚಿನ ಉಷ್ಣಾಂಶವಿರುವ ಸಮಯದಲ್ಲಿ ಲೋಹದ ತಗಡು ಅಥವಾ ಸಿಮೆಂಟಿನ ಕಟ್ಟೆಯ ಮೇಲೆ ಒಣಗಿಸುವುದರಿಂದ ರೋಗಾಣುಗಳು ನಾಶ ಹೊಂದುತ್ತವೆ. ಇಂತಹ ಬೀಜಗಳು ಬಿತ್ತನೆಗೆ ಅತ್ಯಂತ ಉಪಯುಕ್ತ. ಇಂಥ ವಿಧಾನದಿಂದ ಭತ್ತದ ಊದುಬತ್ತಿ ರೋಗ ಏಲಕ್ಕಿಯ ಕಟ್ಟೆಯ ರೋಗ ಮುಂತಾದವುಗಳನ್ನು ನಿಯಂತ್ರಿಸಲು ಸಾಧ್ಯವಾಗುತ್ತದೆ.

**೩.೨. ಬಳ್ಳೊಳ್ಳಿಯನ್ನು ಮೇಲೆ ಕಟ್ಟುವುದು :**

ಬಳ್ಳೊಳ್ಳಿಯನ್ನು ಚೀಲದಲ್ಲಿ ತುಂಬಿಟ್ಟರೆ ತನ್ನ ರಸಾಯನಿಕ ಅಂಶ ಕಳೆದುಕೊಂಡು ಒಣಗಿ ಹೋಗುತ್ತವೆ. ಇದಕ್ಕೆ ಯಾವಾಗಲೂ ಗಾಳಿ ಅವಶ್ಯವಾಗಿಬೇಕು. ಆದ್ದರಿಂದ ಬಳ್ಳೊಳ್ಳಿ ಮೇಲೆ ಕಟ್ಟುವ ಪದ್ಧತಿಯಿದೆ. ಹಾಗೂ ಬಳ್ಳೊಳ್ಳಿ ಬೆಳೆಗಳ ಮಧ್ಯದಲ್ಲಿ ಹಾಕುವದರಿಂದ ವೈಜ್ಞಾನಿಕವಾದ ಉಪಯೊಗ ದೊರೆಯುತ್ತದೆ. ಇದು ಪರಿಸರ ಪೂರೈಕೆ ಕೀಟನಾಶಕವೆನಿಸಿದೆ. ಬೆಳ್ಳುಳ್ಳಿ ತೈಲದಲ್ಲಿರುವ ಡೈ ಅಲಿಲ್ – ಡೈ ಸಲ್ಫೈಡ್ ಮತ್ತು ಡಏ ಅಲಿಲ್ ಟ್ರೈಸಲ್ಫೈಡ್ ರಸಾಯನಿಕಗಳು ಕೀಟಗಳನ್ನು ನಿಯಂತ್ರಿಸುತ್ತವೆಂದು ಮುಂಬಯಿಯಲ್ಲಿರುವ ಬಾಬಾ ಅಣು ಸಂಶೋಧನಾ ಸಂಸ್ಥೆಯವರು ತಿಳಿಸಿದ್ದಾರೆ.

**೩.೩. ಬೆಳೆಗಳ ಸುತ್ತ ಚೆಂಡು ಹೂ ಬೆಳೆಯುವುದು :**

ಈ ಹಿಂದಿನ ಕೃಷಿಕರು ಹೊಲದ ಬೆಳೆಯ ಸುತ್ತಲು ಚೆಂಡು ಹೂ ಬೆಳೆಯುವ ಪದ್ದತಿ ರೂಢಿಸಿಕೊಂಡಿದ್ದರು. ದೀರ್ಘಕಾಲದವರೆಗೆ ಬಾಡದೆ ಇರುವುದರಿಂದ ಹೂವಿನ ಸರಗಳನ್ನು ದೇವರಿಗೂ ಬಾಗಿಲುಗಳಿಗೆ ತೋರಣಗಳಾಗಿ ಕಟ್ಟುವರು. ದನಕರುಗಳಿಗೆ ಹುಣ್ಣಾದರೆ ಈ ಗಿಡದ ತಪ್ಪಲು ಕುಟ್ಟಿ ಔಷಧಿಯಾಗಿ ಬಳಸುತ್ತಿದ್ದರು. ಹಾಗೆಯೇ ಬೆಳೆಗಳ ಸುತ್ತಲು ಈ ಗಿಡ ಬೆಳೆಯುವ ನಂಬಿಕೆ ವೈಜ್ಞಾನಿಕವಾಗಿ ಬಹಳಷ್ಟು ಪ್ರಯೋಜನಕಾರಿಯಾಗಿದೆಯೆಂದು ತಿಳಿದು ಬರುತ್ತದೆ.

ಮೇರಿಗೊಲ್ಡ್–ಚೆಂಡು ಹೂ ಬೆಳೆದರೆ ಇದು ಎರಡು–ಮೂರು ರೀತೀಲಿ ನಮ್ಮ ಬೆಳೆಗಳಿಗೆ ರಕ್ಷಣೆ ನೀಡುತ್ತದೆ. ಇದರ ಹೂ, ಎಲೆ ಪ್ರಾಣಿಗಳು ಅಥವಾ ಗಾಳಿಗೆ ಅಲುಗಾಡಿದರೆ ವಾಸನೆ ಬರುತ್ತೆ. ಕೀಟನಾಶಕವಾಗಿ ಕೆಲಸ ಮಾಡುತ್ತಾರೆ. ಆಗ ಅಲ್ಲಿಗೆ ಚಿಟ್ಟೆ ಮೊಟ್ಟೆ ಇಡ್ಲಿಕ್ಕೆ ಬಂದರೆ ಈ ವಾಸನೆಗೆ ಸುತ್ತಮುತ್ತಲು ನಿಲ್ಲದೆ ದೂರ ಹಾರಿ ಹೋಗುತ್ತೆ. "೧೦ ಕೆ.ಜಿ. ಚೆಂಡು ಹೂ ರಸದಲ್ಲಿ ೧೦ಗ್ರಾಮ್ ನಷ್ಟು ವಿಷವಿದೆ".[೭೧] ತಮಾಷೆ ಅಂದ್ರೆ ಮೋಡದ ವಾತಾವರಣದಲ್ಲಿ ಇದು ವಿಷವಾಗಲ್ಲ. ನ್ಯೂಟ್ರಲ್ ಆಗಿರುತ್ತೆ. ಬೆಳಗಿನ ಏಳುಗಂಟೆ ಬಿಸಿಲಾದರೂ ಆದೀತು. ಮಧ್ಯಾಹ್ನ ಎರಡು ಗಂಟೆ ಬಿಸಿಲಾದರೂ ಆದೀತು. ಬಿಸಿಲಲ್ಲಿ ಸ್ಪ್ರೇ ಮಾಡಿದರೆ ಚೆಂಡು ಹೂ ರಸ ಪರಿಣಾಮಕಾರಿ ಕ್ರಿಮಿನಾಶಕ. ಚೆಂಡು ಹೂ ರುಬ್ಬಿ ಕುಟ್ಟಿ ಅಥವಾ ಹಿಂಡಿ ಬಟ್ಟೇಲಿ ಸೋಸಿ, ಬಿಸಿಲಲ್ಲಿ ಸ್ಪ್ರೇ ಮಾಡಿದರೆ ಒಳ್ಳೇ ಕೀಟನಾಶಕವಾಗಿರುತ್ತದೆ. ಚೆಂಡು ಹೂಗಿಡದ ಬೇರಿನ ರಸಕ್ಕೆ ದುಂಡಾಣು ರೋಗ ತಡೆಯುವ ಶಕ್ತಿಯಿದೆ.

---

೭೧(ಅಡಿ ಟಿಪ್ಪಣಿ:೭೧: ಈ ಭೂಮಿ ಈ ಸಸ್ಯ, ಲೇಖಕರು ಡಾ॥ ಎಲ್ ನಾರಾಯಣರೆಡ್ಡಿ ಪುಟ ಸಂಖ್ಯೆ, ೫೭।

ಅದೇ ರೀತಿ ಸೆಣಬು ಬೆಳೆದು ಅದನ್ನು ಅಲ್ಲೇ ಕೊಯ್ದು ಹರಗಿ ಅದರ ಮೇಲೆ ಬಿತ್ತುವ ರೂಢಿ ಬೀದರ ಜಿಲ್ಲೆಯಲ್ಲಿದೆ. ಆದ್ದರಿಂದ ದಂಡಿಗೆ ಪುಂಡಿಬಿತ್ತು ಚಂಡು ಹೂ ಬಿತ್ತು ಎಂದು ಜನಪದರು ಹೇಳುತ್ತಾರೆ. ಅದರಂತೆ ಹತ್ತಿ ಮೊದಲಾದ ಕೆಲವು ಬೆಳೆಯ ಸುತ್ತಲೂ ಚಂಡು ಹೂವಿನ ಗಿಡಗಳನ್ನು ಮತ್ತು ಪುಂಡಿಯನ್ನು ಬಿತ್ತುತ್ತಾ ಬಂದಿದ್ದಾರೆ. ಈ ಎರಡರಲ್ಲೂ ಕೀಟನಾಶಕ ಶಕ್ತಿಯಿದೆ. ಆದ್ದರಿಂದ ರೋಗ ನಿರೋಧಕಗಳೆಂದು ಯಾವ ಕಾಲದಿಂದಲೋ ಪ್ರಮುಖ ಬೆಳೆಯ ರಕ್ಷಣೆಗಾಗಿ ಬಳಸುತ್ತಾ ಬಂದಿದ್ದಾರೆ. ಅದೇ ರೀತಿಯಾಗಿ ಸೆಣಬು ಬಿತ್ತಿ ಗೊಬ್ಬರ ಮತ್ತು ರೋಗ ನಿರೋಧಕ ಶಕ್ತಿಗಾಗಿ ಬೆಳೆಯನ್ನು ಅಲ್ಲೆ ಹಾಕುತ್ತಾರೆ.

**೩೪. ಬಿತ್ತನೆ ಬೀಜಗಳನ್ನು ಮತ್ತು ಆಹಾರ ಧಾನ್ಯಗಳನ್ನು ಸಂಗ್ರಹಿಸಿಡುವುದು :**

ರೈತರ ದವಸ ಧಾನ್ಯಗಳನ್ನು ದಾಸ್ತಾನು ಮಾಡಿಡಲು ಅತ್ಯಂತ ವಿಶ್ವಾಸಾರ್ಹ. ವಿಧಾನಗಳನ್ನು ವಿಕಾಸಗೊಳಿಸಿಕೊಂಡಿದ್ದರು. ಇದಕ್ಕಾಗಿ ಅವರು ವಿಶೇಷ ಕಟ್ಟಡಗಳನ್ನು ನಿರ್ಮಿಸಿ ಹೋಗದೆ ಮುಕ್ತವಾಗಿ ಲಭ್ಯವಿದ್ದ ಹಾಗೂ ಅಗ್ಗದ ನೈಸರ್ಗಿಕ ಸಾಮಾನುಗಳನ್ನೇ ಬಳಸಿಕೊಳ್ಳುತ್ತಿದ್ದರು. ಬಿತ್ತನೆ ಬೀಜಗಳು ಯಾವುದೇ ಕ್ರಿಮಿಗಳಿಗೆ ತುತ್ತಾಗದಂತೆ ಬಿಸಿಲಿನಲ್ಲಿ ಒಣಗಿಸಿ ಬೂದಿಯಲ್ಲಿ ಮಿಶ್ರಣ ಮಾಡಿ ಬಿದಿರಿನಿಂದ (ಡಾಲ್) ಬುಟ್ಟಿಯನ್ನು ಹೆಂಡಿಯಿಂದ ಸಾರಿಸಿ ನುಣುಪುಗೊಳಿಸಿ ಅದರಲ್ಲಿ ಬೀಜ ತುಂಬಿಟ್ಟು ಮೇಲೆ ಹೆಂಡಿಯಿಂದ ಸಾರಿಸಿಡುತ್ತಿದ್ದರು. ಇದರಿಂದ ಬಿತ್ತುವ ದಿನಗಳವರೆಗೆ ಬೀಜಗಳನ್ನು ಸಂರಕ್ಷಿಸಿಡುತ್ತಿದ್ದರು. ಇದರಲ್ಲಿ ಬೇವಿನ ತಪ್ಪಲು, ಲಕ್ಕಿ ತಪ್ಪಲು, ಹರಳುಪ್ಪು, ಕ್ಯಾರಳು ಮುಂತಾದವುಗಳನ್ನು ಆ ಬೀಜಗಳಲ್ಲಿ ರೋಗ ನಿರೋಧಕ್ಕಾಗಿ ಮಿಶ್ರಣ ಮಾಡುತ್ತಿದ್ದರು.

ಹಾಗೆಯೇ ಆಹಾರಕ್ಕಾಗಿ ಉಪಯೋಗಿಸುವ ಕಾಳುಗಳು ಕೂಡಾ ಸಂಗ್ರಹಿಸಿಡುತ್ತಿದ್ದರು. ಈ ಧಾನ್ಯಗಳನ್ನು ಸಂಗ್ರಹಿಸಿಡುತ್ತಿದ್ದ ಕರಸಿ (ಗುಮ್ಮಿ)ಗಳನ್ನು ನಿಸರ್ಗದಲ್ಲೇ ಸುಲಭವಾಗಿ ಸಿಗುತ್ತಿದ್ದ ಬಿದಿರಿನಿಂದ ತಯಾರಿಸುತ್ತಿದ್ದರು. ಯಾವುದೇ ಕ್ರಿಮಿಗಳು ಒಳ ನುಸುಳಲು ಅವಕಾಶವಿರದಂತೆ ರಚಿಸಲಾಗುತ್ತಿದ್ದ ಈ ಗುಮ್ಮಿಗಳು ನಿಜಕ್ಕೂ ಅತ್ಯಂತ ಜಾಣ್ಮೆಯ ಸಾಧನಗಳಾಗಿದ್ದವು. ಇದೇ ರೀತಿ ಅವರು ಸುತ್ತಮುತ್ತಲಿನ ವಾತವರಣದ ಪರಿಸ್ಥಿತಿಗೆ ತಕ್ಕಂತೆ ನೆಲದಡಿ ಹಾಗೂ ನೆಲದ ಮೇಲೆ ಧಾನ್ಯ ದಾಸ್ತಾನು ಮಾಡಿಡುವ ಕೋಣೆಗಳು ಹೊಂದಿದ್ದರು.

ವರ್ಷಗಳಲ್ಲಿ ಹೀಗೆ ದಾಸ್ತಾನು ಮಾಡುತ್ತಿದ್ದ ಮಿಗುತ್ತಾಯ ಧಾನ್ಯವು ಜಲಾಭಾವ ಹಾಗೂ ಕ್ಷಾಮಗಳ ವರ್ಷಗಳಲ್ಲಿ ಬಳಸುವುದಕ್ಕೆ ಒದಗಿ ಬರುತ್ತಿದ್ದಿತು. ಬಡವರಿಗೆ ವಿಶೇಷವಾಗಿ ಧಾನ್ಯ ಕೊರತೆಯ ವರ್ಷಗಳಲ್ಲಿ ಉಚಿತವಾಗಿ ಊಟ ಒದಗಿಸುವ ಅನ್ನದಾನದಂಥ ಕಾರ್ಯವನ್ನು ಬಹಳ ಪುಣ್ಯದ ಕೆಲಸವೆಂದು ಭಾವಿಸಲಾಗಿತ್ತು. ಹೀಗಾಗಿ ಉಳುಮೆ ಇಲ್ಲದಂಥ ಜನರೂ ಅನಾವೃಷ್ಟಿ ಕಾಲದಲ್ಲಿ ಬದುಕಿ ಉಳಿಯಲು ಸಾಧ್ಯವಾಗಿದ್ದಿತು.

**೩.೫. ಬಿತ್ತುವ ಬೀಜಗಳಿಗೆ ಗೋಮೂತ್ರ, ಜಾಜ ಹಚ್ಚುವುದು :**

ಗೋವುಗಳನ್ನು ದೇವರೆಂದು ಪೂಜಿಸುವ ಧಾರ್ಮಿಕ ಭಾವನೆಯೊಂದಿಗೆ ಬಿತ್ತುವ ಕೆಲವೊಂದು ಬೀಜಗಳಿಗೆ ಗೋ ಮೂತ್ರ ಹಚ್ಚುವುದು ಜನಪದರ ನಂಬಿಕೆಯಾಗಿದೆ. ಬಿತ್ತುವ ಬೀಜಗಳಿಗೆ ಗೋಮೂತ್ರ

ಹಚ್ಚಿದರೆ ಮುಂದೆ ಬೆಳೆಗೆ ಬರುವ ಕಾಡಿಗೆ ರೋಗ ನಿಯಂತ್ರಿರಿಸುತ್ತದೆ. ಆದ್ದರಿಂದ ಬಿಳಿಜೋಳ ಖಿಪ್ಲಿ, ಕಡ್ಲಿ, ಖುಸುಬಿ ಮುಂತಾದವುಗಳಿಗೆ ಗೋಮೂತ್ರ ಮತ್ತು ಜಾಜ ಹಚ್ಚುತ್ತಾರೆ. ಇಂದು ಅದನ್ನು ಬೀಜೋಪಚಾರ ಎಂದು ಕರೆಯುತ್ತಾರೆ. ಇದು ವೈಜ್ಞಾನಿಕವಾಗಿ ಸರಿಯೆಂದು ಖಚಿತಪಡಿಸಲಾಗಿದೆ.

**೩.೬. ಮಿಶ್ರ ಬೆಳೆಗಳನ್ನು ಬೆಳೆಯುವುದು :**

ಈ ಹಿಂದಿನಿಂದಲೂ ಕೃಷಿಕರು ಮಿಶ್ರ ಬೆಳೆಗಳನ್ನು ಬೆಳೆಯುವ ಪದ್ಧತಿ ರೂಢಿಸಿಕೊಂಡು ಬಂದಿರುವುದು ವೈಜ್ಞಾನಿಕವಾಗಿದೆ. ಮುಂಗಾರು ಮತ್ತು ಹಿಂಗಾರಿನ ಬೆಳೆಗಳನ್ನು ಹೆಚ್ಚಾಗಿ ಮಿಶ್ರ ಬೆಳೆಗಳಾಗಿ ಬೆಳೆಯುವುದುಂಟು. ಈ ದ್ವಿದಳ ಧಾನ್ಯಗಳನ್ನು ಒಟ್ಟಿಗೆ ಬೆಳೆದಾಗ ವಾತಾವರಣದಿಂದ ಸಾರಜನಕ ಹೀರಿ ಭೂಮಿಯಲ್ಲಿ ಸೇರಿ ಆ ಗಿಡಗಳಿಗೂ ಕೊಟ್ಟು ಬೇರೆ ಗಿಡಗಳಿಗೂ ಒದಗಿಸಿಕೊಡುತ್ತವೆ. "ತೊಗರಿ ಹುರುಳಿ ಕಡಲೆಕಾಳು ಮುಂತಾದ ದ್ವಿದಳ ಧಾನ್ಯ ಬೆಳೆದಾಗ ಒಂಧು ಎಕರೆಗೆ ತೊಗರಿ ೫೦ ಕಿ.ಜಿ. ಸಾರಜನಕ ಶೇಖರಿಸುತ್ತೆ".[೭] ಅಲ್ಲದೆ ಒಂದು ಬೆಳೆ ನಷ್ಟಗೊಂಡರೂ ಇನ್ನೊಂದು ಬೆಳೆ ಕೈಯಲ್ಲಿರುತ್ತಿತ್ತು. ಬೆಳೆಯ ರೋಗ ನಿರೋಧಕ ಶಕ್ತಿ ಜಾಸ್ತಿಯಾಗುತ್ತಿತ್ತು. ಬೆಳೆಗಳಲ್ಲಿ ಎಲ್ಲಾ ಅವಶ್ಯಕತೆಗಳನ್ನು ಪೂರ್ತಿ ಮಾಡಲು ನವ ಧಾನ್ಯಗಳ ಪ್ರಯೋಗ ತುಂಬಾ ಸಫಲವಾಗಿದೆ. ಎನ್ನುತ್ತಾರೆ. ಆಧುನಿಕ ಸಾವಯವ ಕೃಷಿ ತಜ್ಞರು. ಏಕದಳದ ಗೋಧಿ, ಮುಸುಕಿನ ಜೋಳ, ದ್ವಿದಳ ಹೆಸರು, ಉದ್ದು ಹುರಳಿ, ಇತರೆ ಎಣ್ಣೆಕಾಳುಗಳಲ್ಲಿ ಎಳ್ಳು, ಸಾಸಿವೆ, ಸೂರ್ಯಕಾಂತಿ ತರಹದ ನವಧಾನ್ಯದ ಪ್ರತಿಯೊಂದು ಜಾತಿಯ ಮೂರು ಪ್ರಕಾರ ಒಟ್ಟು ಮಾಡಿ ಸಮ ಪ್ರಮಾಣದಲ್ಲಿ ಮಿಶ್ರಣ ಮಾಡಿ ಬಿತ್ತಿದ ನಂತರ ಬೆಳೆ ಸ್ವಲ್ಪ ಎತ್ತರಕ್ಕೆ ಬೆಳೆದಾಗ ಮುಖ್ಯ ಬೆಳೆಯಲ್ಲಿ ಹೂ ಬರುವ ಮೊದಲು ನವಧಾನ್ಯಗಳನ್ನು ಕತ್ತಿರಿಸಿ ಹೂಳಿಡಬೇಕು ಇದು ಕರಗಿ ಗೊಬ್ಬರದಷ್ಟೇ ಶಕ್ತಿಯನ್ನು ನಿರ್ಮಿಸಿ ಹಾಗೂ ಜೀವಾಣುಗಳಿಗೆ ಪೋಷಣೆ ನೀಡಿ ಭೂಮಿಯನ್ನು ಫಲವತ್ತಾಗಿ ಮಾಡುತ್ತದೆ.

**೩.೭. ಆವರ್ತ ಕೃಷಿ ಅನುಸರಿಸುವುದು :**

ವಾರ್ಷಿಕ ಬೆಳೆ ತೆಗೆಯುವ ಯಾವುದೇ ಒಂದು ಜಮೀನಿನಲ್ಲಿ ಪ್ರತಿ ವರ್ಷ ಏಕದಳ ಧಾನ್ಯಗಳನ್ನು ಬೆಳೆಯದೆ, ದ್ವಿದಳ ಧಾನ್ಯದ ಬೆಳೆಗಳನ್ನು ಸರದಿಯಂತೆ ಬೆಳೆಯುವ ಈ ಪದ್ಧತಿಯು ವೈಜ್ಞಾನಿಕವೆ ಆಗಿದೆ. ಅಲ್ಲದೆ ತುಂಬಾ ಲಾಭದಾಯಕವೂ ಆಗಿದೆ. ಜೋಳ ಮುಂತಾದ ಬೆಳೆಯನ್ನು ಬೆಳೆಯುವಾಗ ಬದಲಿಸಿಕೊಂಡು ಬರುವುದು ಉತ್ತಮ ಪದ್ಧತಿಯೇ ಆಗಿದೆ.

**ಪ್ರಮುಖವಾಗಿ ಕಂಡು ಬರುವ ಮಿಶ್ರ ಬೆಳೆಗಳು :**

**೩.೮. ತೊಗರಿಯಲ್ಲಿ ಅಲಸಂಧಿ ಅಥವಾ ಅವರೆ ಹಾಕವುದು :**

ಮುಂಗಾರಿನಲ್ಲಿ ಬಿತ್ತಿದ್ದ ತೊಗರಿ ನೆಲದಿಂದ ಮೇಲೆ ಬೆಳೆಯುವ ಬೆಳೆಯಾಗಿದ್ದು ಅಲಸಂಧಿ ಅಥವಾ ಅವರೆ ನಡುವೆ ಬಳ್ಳಿಯಾಗಿ ನೆಲಮುಚ್ಚಿ ಕಳೆಯನ್ನು ನಿಯಂತ್ರಿಸುತ್ತವೆ. ಅವರೆ ಬೇಸಿಗೆಯಲ್ಲಿಯೂ ಫಲ ನೀಡುತ್ತದೆ.

---

೭೨(ಅಡಿಟಿಪ್ಪಣಿ:೭೨: ಈ ಭೂಮಿ ಈ ಸಸ್ಯ ಲೇಖಕರು ನಾರಾಯಣರೆಡ್ಡಿ ಪುಟ ಸಂಖ್ಯೆ ೪೦)

ಬಿಳಿಜೋಳದ ಮಧ್ಯ ಕಳೆಯನ್ನು ನಿಯಂತ್ರಿಸುವಂತೆ ಸೌತೆಕಾಯಿ ಮತ್ತು ಪುಟೇದಕಾಯಿ ಬಳ್ಳಿಯನ್ನು ಬೀದರ ಜಿಲ್ಲೆಯಲ್ಲಿನ ಭಾಲ್ಕಿ ಮತ್ತು ಔರಾದ ತಾಲೂಕಗಳಲ್ಲಿ ಹೆಚ್ಚಾಗಿ ಬೆಳೆಯುತ್ತಾರೆ.

**ಹುಚ್ಚೆಳು : (ಕಾರಳು) :**

ಹಳದಿ ಹೂ, ಕೀಟಗಳನ್ನು ಬೇಗ ಆಕರ್ಷಿಸುತ್ತದೆ. ಇದರಿಂದ ಬೆಳೆಯ ಪರಾಗಕ್ರಿಯೆ ಉತ್ತಮ ರೀತಿಯಲ್ಲಿ ನಡೆದು ಬೆಳೆಯ ಇಳುವರಿ ಮುಂದಿರುತ್ತದೆ.

**ಸಾಸುವೆ :**

ನಿಜವಾಗಿಯೂ ಒಂದು ಔಷಧಿಯ ಗಿಡ ಬೆಳೆಗಳ ರೋಗರುಜಿನಿಗಳು ತಡೆಯುವಲ್ಲಿ ಇದರದ್ದು ಮಹತ್ವದ ಪಾತ್ರ, ದುಂಬಿಯನ್ನು ಆಕರ್ಷಿಸಿ ಬೆಳೆಯ ಪತಂಗದಲ್ಲಿ ಸಹಕರಿಸುತ್ತದೆ.

**ಔಡಲ :**

ಬೂದಿ ಬಡುಕ ಔಡಲ ಗಿಡದ ನೈತ್ರಿಯಲ್ಲಿ ಬಿರಿದ ರುದ್ರಾಕ್ಷಿಯಂತಿರುವ ಕಾಯಿ ಅಡಿಯಿಂದ ಮುಡಿಯವರೆಗೆ ಗರಿಕೆದರಿದ ಹಸಿರಿಕ್ಕುವ ಎಲೆ, ಕೆಳಗೆ ನೆಲದಲ್ಲಿ ಇಡಿ ಭೂಮಿಗೆ ಹಸಿರೊದಿಸಿದ ಬಳ್ಳಿ. ಇದರಿಂದಾಗಿ ಕಳೆಗಳು ನಿಯಂತ್ರಣದಲ್ಲಿರುತ್ತವೆ.

ಜತೆಗೆ ಇವು ಸಾರಜನಕ ಸ್ಥಿರೀಕರಣ ಗಿಡಗಳು ತಮ್ಮ ಬೇರಿನ ಗಂಟಿನಲ್ಲಿರುವ ಬ್ಯಾಕ್ಟೀರಿಯಾಗಳ ಸಹಾಯದಿಂದ ಮಣ್ಣೀಗೆ ಗಾಳಿಯಲ್ಲಿ ಪುಕಟ್ಟೆಯಾಗಿ ದೊರೆಯುವ ಸಾರಜನಕವನ್ನು ಸ್ಥಿರೀಕರಿಸುತ್ತವೆ. ಮಣ್ಣಿನ ತೇವಾಂಶ ನೆರಳಿನಿಂದಾಗಿ ಬಹಳ ಕಾಲ ಉಳಿಯುತ್ತದೆ. ಈ ಗಿಡಗಳು ತಮ್ಮ ಜೀವನ ಚಕ್ರ ಮುಗಿಸಿದಾಗ ಸಮೃದ್ಧವಾಗಿ ಎಲೆ ಉದುರಿಸುತ್ತವೆ. ಇಂತಹ ಜಾಗದಲ್ಲಿ ಎರೆಹುಳು ಮತ್ತು ಇತರ ಮಣ್ಣಿನ ಜೀವಿಗಳು ಸಮೃದ್ಧವಾಗಿದ್ದು ಕೃಷಿ ಭೂಮಿಯ ಉಳುಮೆ ಸಹಜ ರೀತಿಯಲ್ಲಿಯೇ ನಡೆಯುತ್ತದೆ. ನೆಲ ಮೃದುವಾಗುತ್ತದೆ; ಫಲವತ್ತಾಗುತ್ತದೆ. ನೆಲಕವಿಯುವ ಗಿಡಗಳು ಬಿಡುವ ಹೂದುಂಬಿ ಮುಂತಾದವನ್ನು ಆಕರ್ಷಿಸಿ ಸಸ್ಯ ಪರಾಗಕ್ರಿಯೆಗೆ ಉತ್ತಮ ಚಾಲನೆ ದೊರೆಯುತ್ತದೆ. ಬೆಳೆ ಉತ್ತಮವಿರುತ್ತದೆ.

ನಮ್ಮ ಹಿರಿಯರು ತಮ್ಮ ಅಗಾಧ ಅನುಭವದಿಂದಲೇ ಅತ್ಯುತ್ತಮ ಇಳುವರಿ ನೀಡುತ್ತಿದ್ದ ಎಲ್ಲ ತಳಿಗಳನ್ನು ಹೊಂದಿದ್ದರು. ಆಧುನಿಕ ಕೃಷಿ ಪ್ಧತಿಯಲ್ಲಿ ಕಣ್ಮರೆಯಾಗುತ್ತಿರುವ ಇವುಗಳನ್ನು ಗುರುತಿಸಿ ಉಳಿಸಿ ಬೆಳೆಸುವ ಪ್ರಾಮಾಣಿಕ ಪ್ರಯತ್ನ ನಮ್ಮದಾಗಬೇಕು.

**೩.೯. ಸಸ್ಯಗಳನ್ನು ನಾಟಿ ಮಾಡುವ ಮುನ್ನ ಹಾಲಿನಲ್ಲಿ ಕೈ ಅದ್ದುವುದು :**

ಪ್ರಾಚೀನ ಕಾಲದಲ್ಲಿ ರೈತ ಬಾಂಧವರು ಹಾಲಿನಲ್ಲಿ ರೋಗನಾಶಕ ಗುಣವಿರುವುದನ್ನು ಕಂಡುಕೊಂಡಿದ್ದರು. ಅವರು ಸಸಿಗಳನ್ನು ನಾಟಿ ಮಾಡುವ ಮುನ್ನ ತಮ್ಮ ಕೈಗಳನ್ನು ಹಾಲಿನಲ್ಲಿ ಅದ್ದಿಕೊಂಡು ನಾಟಿ ಮಾಡುತ್ತಿದ್ದರು. ಇದರಿಂದ ಸಸ್ಯಗಳಿಗೆ ರೋಗ ನಿರೋಧಕ ಶಕ್ತಿಯುಂಟಾಗುತ್ತಿತ್ತೆಂದು ಅವರ ನಂಬಿಕೆಯು ವೈಜ್ಞಾನಿಕವಾಗಿಯೂ ನಿಜವಾಗಿದೆ. ಹಾಗೂ ಹಾಲು, ಮಜ್ಜಿಗೆ, ಬೆಲ್ಲವನ್ನು ನೀರಿನಲ್ಲಿ ಮಿಶ್ರಣಮಾಡಿ ಸಿಂಪಡಿಸುವುದರಿಂದ ಪೈರುಗಳಿಗೆ ಲಾಭವಾಗುತ್ತದೆ. ಅನೇಕ ರೈತರ ಅನುಭವದ ಪ್ರಕಾರ ಈ ಮೂರನ್ನು ಬೇರೆ ಬೇರೆ ಸಿಂಪಡಿಸುವದರಿಂದ ಲವಣಗಳ ಸೂಕ್ಷ್ಮ ದ್ರವ್ಯಗಳು ಪೈರುಗಳಿಗೆ ಲಭಿಸುತ್ತವೆ.

**೪೦. ಸಸ್ಯಗಳಿಗೆ ಬೂದಿ ಸಿಂಪಡಿಸುವುದು :**

ಬೂದಿಯಲ್ಲಿ ಪೊಟಾಶಿಯಂನ ಗುಣವಿರುವುದರಿಂದ ಗಿಡಗಳ ಬೇರನ್ನು ದಪ್ಪ ಪುಷ್ಟವನ್ನಾಗಿ ಮಾಡುತ್ತದೆ. ಬೂದಿಯನ್ನು ಸಿಂಪಡಿಸುವುದರಿಂದ ವಿಷ ಜೀವಿಗಳು ಸಾಯುತ್ತವೆ. ಫಲಗಳ ಪೋಷಣೆ ಆಗುತ್ತದೆ. ವಿಶೇಷವಾಗಿ ಈರುಳ್ಳಿ ಮತ್ತು ಮೆಣಸಿನ ಗಿಡಗಳಿಗೆ ಲಾಭದಾಯಕವಾಗಿದೆ. ಆದ್ದರಿಂದ ಹೋಳಿ ಹುಣ್ಣಿಮೆ ದಿವಸ ಕಾಮನ ದಹನಕ್ಕಾಗಿ ಹಚ್ಚುವ ಕುಳ್ಳಿನ ಬೂದಿ ಸಾಕಷ್ಟು ಸಿಗುವುದರಿಂದ ಇದನ್ನು ತುಂಬಿಕೊಂಡು ತಂದು ಬೆಳೆಗಳಿಗೆ ಸಿಂಪಡಿಸುವ ನಂಬಿಕೆ ಜನಪದರಲ್ಲಿ ಇಂದಿಗೂ ಮುಂದುವರೆದುಕೊಂಡು ಬಂದಿದೆ.

**೪೧. ಹಸು, ಎತ್ತು, ಸತ್ತರೆ ಶವ ಸಂಸ್ಕಾರ ಮಾಡುವುದು :**

ಹಸು ಎತ್ತುಗಳನ್ನು ಧಾರ್ಮಿಕವಾಗಿ ದೇವತೆಗಳೆಂದು ಪೂಜಿಸುವ ನಂಬಿಕೆಯಿಂದ ಮನುಷ್ಯರು ಸತ್ತಾಗ ಶವ ಸಂಸ್ಕಾರ ಮಾಡಿದಂತೆ ಅವುಗಳನ್ನು ಶವ ಸಂಸ್ಕಾರ ಮಾಡುವ ನಂಬಿಕೆಯಿದೆಯಾದರೂ ಇದರಿಂದ ಭೂಮಿಯ ಫಲವತ್ತೆ ಹೆಚ್ಚಿಸುವ ವೈಜ್ಞಾನಿಕ ಅಂಶವೂ ಒಳಗೊಂಡಿದೆ. ಇವುಗಳ ಅವಶೇಷವು ದೀರ್ಘಕಾಲದ ನಂತರ ಮಣ್ಣಿನಲ್ಲಿ ಕಬ್ಬಿಣಾಂಶದ ಕ್ಯಾಲ್ಸಿಯಂ, ಸುಣ್ಣದಂತಹ ರಸಾಯನಿಕ ವಸ್ತುಗಳುಂಟಾಗುತ್ತವೆ. ಚಂದ್ರನ ಬೆಳಕು ಕೊಂಬಿನ ಮೂಲಕ ದನದೊಳಗೆ ಬಂದು ಹಾಲು, ಸಗಣಿ, ಗಂಜಲ, ಮಾಂಸ ಎಲ್ಲವನ್ನು ಉತ್ಕೃಷ್ಟವಾಗಿ ಮಾಡುತ್ತವೆ.

ಗೋಮಯ ಅರ್ಥಾತ್ ಸಗಣಿಯಲ್ಲಿ ಲಕ್ಷ್ಮಿಯು ವಾಸವಾಗಿದ್ದಾಳೆ ಎಂಬ ಭಾವನೆ ರೂಢಿಯಲ್ಲಿದೆ. ಇದೇ ಸಿದ್ಧಾಂತವನ್ನುವಲಂಬಿಸಿ ಜೈವಿಕ ಪದ್ಧತಿಯ ಪರಿಣಿತ ರೋಡಾಲ್ಫ್ ಸ್ಟಿನರ್ ಹೇಳುತ್ತಾರೆ. ಹಸುವಿನ ಗೊಬ್ಬರ ನಕ್ಷತ್ರೀಯ (ಅಸ್ಟ್ರಾಲ್ ಮತ್ತು ಆಕಾಶೀಯ) ಪ್ರಭಾವಗಳನ್ನು ಹೊಂದಿರುತ್ತದೆ. ನಕ್ಷತ್ರಿಯ ಪ್ರಭಾವ ನೈಟ್ರೋಜನ್ ವೃದ್ಧಿಸುವ ಶಕ್ತಿಹೊಂದಿದೆ. ಹಾಗೆಯೇ ಆಕಾಶೀಯ ಪ್ರಭಾವ ಆಮ್ಲಜನಕವನ್ನು ಹೆಚ್ಚಿಸುವ ಶಕ್ತಿ ಹೊಂದಿದೆ. ಇದೇ ಶಕ್ತಿಗಳ ಪ್ರಭಾವದಿಂದ ಗೊಬ್ಬರದ ಮಹತ್ವ ನಮ್ಮ ಕೃಷಿ ಜೀವನದಲ್ಲಿ ಹೆಚ್ಚಾಗಿದೆ. ಈ ಶಕ್ತಿಗಳಿಂದ ಸಗಣಿಯ ಆಕಾರ್ಬನಿಕ್ ತತ್ವವು ಆತ್ಮಶಕ್ತಿಯನ್ನು ವೃದ್ಧಿಸುತ್ತದೆ. ಸಗಣಿಯಲ್ಲಿ ಜೀವಾಣುಗಳನ್ನು ಆಕರ್ಷಿಸುವ ಗುಣಗಳಿವೆ. ಗೋವಿನ ಪಚನಾಂಗದ ಕ್ರಿಯೆಯೆ ಈ ದೈವಿ ಶಕ್ತಿಯ ರಸಾಯನಿಕ ಶಾಲೆಯಾಗಿದೆ. ಆಕಳಿನ ಕೊಂಬು ನಕ್ಷತ್ರೀಯ ಶಕ್ತಿಯನ್ನು ಆಕರ್ಷಿಸಿ ಪಚನ ಭಾಗಕ್ಕೆ ಕಳಿಸುವ ಸೆಗಣಿಯಲ್ಲಿ ಜೀವದಾಯಕ ಶಕ್ತಿಯಿದೆ. ದನದ ಕೊಂಬು ಗೊಬ್ಬರದ ಪ್ರಭಾವವನ್ನು ಹೆಚ್ಚಿಸಲು ಉತ್ತಮ ಪಾತ್ರವಹಿಸಿದೆ. ಕೊಂಬನ್ನು ಕೆಲವು ಸಮಯ ಉಪಯೋಗಿಸಿದ ನಂತರ ಸವೆಯುತ್ತದೆ.

**೪೨. ಬೆಳೆಗಳಿಗೆ ನೈವೆದ್ಯ ತೋರುವುದು :**

ಭತ್ತ, ಜೋಳ, ತೋಗರಿ, ನೆಲಗಡಲೆ ಮುಂತಾದ ಬೆಳೆಗಳಿಗೆ ಎಲೆ ತಿನ್ನುವ ಕಾಯಿ ಕೊರೆಯುವ ಹುಳುಗಳ ಬಾಧೆ ತಪ್ಪಿದ್ದಲ್ಲ. ಬೆಳೆ ಮಾಗುವ ಹಂತದಲ್ಲಿ ಹುಳುಗಳು ಎಲೆ ಕಾಯಿಗಳ ಮೇಲೆಲ್ಲಾ ಹರಿದಾಡಿ ಮಾಗುವ ಹಂತದಲ್ಲಿ ಹುಳುಗಳು ಎಲೆ ಕಾಯಿಗಳ ಮೇಲೆಲ್ಲಾ ಹರಿದಾಡಿ ಫಸಲನ್ನು ನಾಶಮಾಡುವ ಚಿತ್ರ ಎಲ್ಲೆಲ್ಲೂ ಕಂಡು ಬರುತ್ತದೆ. ಇಂತಹ ಕೀಡೆಗಳ ಹತೋಟಿಗೆ ರೈತ ಬೆಳೆ ಮಾಗುವ ಸಮಯದಲ್ಲಿ ಅನ್ನವನ್ನು

ಹೊಲದ ತುಂಬೆಲ್ಲಾ ಎರಚಿ ಎಡೆ ಮಾಡುವುದು ರೂಢಿಯಲ್ಲಿದೆ. ಈ ಅನ್ನದ ಅಗುಳುಗಳನ್ನು ತಿನ್ನಲು ಹಾರಿ ಬರುವ ಪಕ್ಷಿಗಳು ಹುಳುಗಳನ್ನು ತಿಂದು ಬೆಳೆಯನ್ನು ಹುಳುಗಳ ಬಾಧೆಯಿಂದ ರಕ್ಷಿಸುತ್ತದೆ. ಇದರಿಂದ ಸಹಜವಾಗಿ ಬೆಳೆ ಸಂರಕ್ಷಣೆ ಆಗುತ್ತದೆ. ಈ ಪದ್ಧತಿಯಲ್ಲಿ ಎಲ್ಲ ರೈತರು ಹೊಲಗಳಲ್ಲಿ ಎಡೆ ಇಡುವುದು ಸತ್ಕಾರ್ಯ ಸದಾಚಾರವೆಂದು ಭಾವಿಸಿ ಆಚರಿಸುತ್ತಿದ್ದರು. ಇದರ ಉದ್ದೇಶ ಪೀಡೆಗಳ ಹತೋಟಿಯಾಗಿದ್ದರೂ ರೈತನಿಗೆ ಮಾನಸಿಕ ಬಲ ನೀಡುವ ವಿಧಾನವಾಗಿದ್ದಿತು.

ಹೀಗೆ ಹಿಂದಿನಿಂದಲೂ ರೈತರು ನಂಬಿಕೊಂಡು ಬಂದ ಕೃಷಿ ನಂಬಿಕೆಗಳು ಅವರ ಬದುಕಿಗೆ ಆಧಾರಗಳಾಗಿದ್ದವು. ಅಕ್ಷರಜ್ಞಾನದ ಕೊರತೆಯಿದ್ದರೂ ಅನುಭವದ ಜ್ಞಾನಕ್ಕೆ ಯಾವುದೇ ಕೊರತೆಯಿರಲಿಲ್ಲ. ಅನುಭವ ಹೆಚ್ಚಾದಂತೆ ಕೃಷಿಯಲ್ಲಿ ಪರಿಪೂರ್ಣ ಬದುಕನ್ನು ಕಂಡುಕೊಂಡು, ಆಧುನಿಕವಾದ ರಸಗೊಬ್ಬರ, ಕ್ರಿಮಿನಾಶಕಗಳನ್ನು ಮೀರಿಸಬಲ್ಲ ನೈಸರ್ಗಿಕವಾದ ವಿಧಾನಗಳು ಅವರು ಕಂಡುಕೊಂಡಿದ್ದರು. ಅವರು ನಂಬಿಕೊಂಡು ಬಂದ ನಂಬಿಕೆಗಳೆಷ್ಟೋ ಇಂದಿನ ಕೃಷಿ ಪದ್ಧತಿಗೆ ಜೀವಾಳವಾಗಿವೆ.

# ಅಧ್ಯಾಯ-೫

## ನಿಸರ್ಗವನ್ನು ಕುರಿತು ನಂಬಿಕೆ ಮತ್ತು ಆಚರಣೆಗಳು

ನಮ್ಮ ಸುತ್ತಮುತ್ತಲು ಕಾಣುವ ಭೂಮಿ, ಜಲ, ಸಸ್ಯ, ಗಾಳಿ, ಪ್ರಾಣಿ, ಪಕ್ಷಿ ಮುಂತಾದವುಗಳು ಕಣ್ಣಿಗೆ ಕಾಣುವ ಈ ಎಲ್ಲಾ ಭೌತಿಕ ವಸ್ತುಗಳನ್ನು ಪರಿಸರ, ನಿಸರ್ಗ ಎನ್ನುತ್ತೇವೆ.

ಭೂಮಿಯ ಉಗಮದ ನಂತರ ಜೀವಿಸೃಷ್ಟಿಯೊಂದಿಗೆ ಭೂಮಿಯ ಮೇಲೆ, ಸಸ್ಯ, ಗಿಡ, ಮರ, ಕಾಡು ಬೆಟ್ಟ ಗುಡ್ಡ ಪರ್ವತ, ಹಳ್ಳ ಕೆರೆ, ನದಿ ಸಮುದ್ರ ಸಾಗರ ಇವೆಲ್ಲವೂ ಅಸ್ತಿತ್ವಕ್ಕೆ ಬಂದವು. ಇಂತಹ ಸರ್ವ ಸಂಪನ್ಮೂಲಗಳಿಂದ ತನ್ನ ಮಡಿಲನ್ನು ತುಂಬಿಕೊಂಡಿರುವ ವನ ಶ್ರೀದೇವಿಯ ಮಡಿಲಲ್ಲಿ ಕಾಣಿಸಿಕೊಂಡ ಜೀವಿಗಳು ನಿಸರ್ಗದತ್ತವಾಗಿ ಸಿಕ್ಕದ್ದನ್ನು ತಿಂದು ಬದುಕುತ್ತಿದ್ದವು.

ಜೀವಿಗಳ ವಾಸಕ್ಕೆ ಯೊಗ್ಯವಾದ ಪರಿಸರ ಇರುವುದು ಭೂಗ್ರಹದಲ್ಲಿ ಮಾತ್ರ ಇಂತಹ ಪರಿಸರದಲ್ಲಿ ಕಾಡು ಒಂದು ಮುಖ್ಯವಾದ ಅವಿಭಾಜ್ಯವಾದ ಅಂಗ, ಜೀವಿಗಳ ಅಸ್ತಿತ್ವಕ್ಕೆ ಕಾಡೇ ಮೂಲಾಧಾರ ಭೂಮಿಯ ಮೇಲಿರುವ ಫಲವತ್ತಾದ ಮಣ್ಣು, ಸುತ್ತುವರೆದಿರುವ ಸಾಗರ ಮೇಲಿರುವ ವಾತಾವರಣದ ಆವರಣಗಳು ಜೀವಿಗಳ ವಾಸಕ್ಕೆ ಯೊಗ್ಯವಾದ ಹಿತಕರವಾದ ಪರಿಸರವನ್ನು ಒದಗಿಸುವಂತೆ, ಕಾಡು ಪ್ರತ್ಯೇಕವಾಗಿ ಜೀವನಕ್ಕೆ ಪೋಷಕವಾದ ಸನ್ನಿವೇಶವನ್ನು ಸೃಷ್ಟಿಸುತ್ತದೆ. ಮಾನವ ಸಂತತಿ ಬೆಳೆದಿದ್ದೇ ಹಸಿರು ತುಂಬಿದ ನಿಸರ್ಗದ ಮಡಿಲಲ್ಲಿ. ನಾಗರಿಕತೆ ಬೆಳೆದಂತೆ ಕಾಡು ಕ್ಷೀಣಿಸುತ್ತ ಹೋಯಿತು. ಸುಧಾರಣೆಯ ಸಂಭ್ರಮ ಕಾಡಿಗೆ ಓಡಿದ ಕೊಡಲಿ ಆಯಿತು.

ಹಿಂದಿನ ಕಾಲದಲ್ಲಿ ನಿಸರ್ಗವೆಂದರೆ ಮನುಷ್ಯನಿಗೆ ಭಯಭಕ್ತಿಯಿತ್ತು, ನಿಸರ್ಗದ ಎದುರಿಗೆ ತಾನು ಅತ್ಯಂತ ದುರ್ಬಲ ಎಂದು ಮನುಷ್ಯ ತಿಳಿದಿದ್ದರಿಂದ ಆತನಲ್ಲಿ ಭಕ್ತಿಗಿಂತ ಭಯವೇ ಹೆಚ್ಚಾಗಿತ್ತೆಂದು ಹೇಳಬಹುದು. ಅದಕ್ಕೆ ಜಗತ್ತಿನ ಎಲ್ಲಾ ಪುರಾತನ ಜನಾಂಗಗಳಲ್ಲೂ ಪ್ರಕೃತಿ ಆರಾಧನೆಯ ಚರಿತ್ರೆಯಿದೆ. ದಕ್ಷಿಣ ಅಮೇರಿಕಾದ ಪುರಾತನ ಇಂಕಾ ಸಾಮ್ರಾಜ್ಯದಲ್ಲಿ ನೆಲದೊಳಕ್ಕೆ ಗಣಿ ತೋಡುವಾಗ ಭೂಮಿ ತಾಯಿಯ ಕ್ಷಮಾಪಣೆ ಕೇಳುತ್ತಿದ್ದರು. ರೆಡ್ ಇಂಡಿಯನ್ ಮೂಲ ನಿವಾಸಿಗಳು ವನ್ಯಪ್ರಾಣಿಗಳ ಬೇಟೆಯಾಡುವ ಮುನ್ನ ನೂರೊಂದು ಭೂತಪ್ರೇತಗಳಿಗೆ ಹರಕೆ, ತಪ್ಪು ಕಾಣಿಕೆ ಇಳಿಯುವ ಮುನ್ನ ಜಲದೇವತೆಯ ಪೂಜೆ ಮಾಡುತ್ತಿದ್ದರು. ನಮ್ಮ ಭಾರತೀಯ ಸಂಸ್ಕೃತಯಲ್ಲಂತೂ ನಿಸರ್ಗವನ್ನು ಪಂಚಮಹಾಭೂತಗಳಾಗಿ ಪರಿಗಣಿಸಲಾಗಿತ್ತು. ಪೃಥ್ವಿ, ನೀರು, ಬೆಂಕಿ, ಗಾಳಿ ಹಾಗೂ ಮಹಾಕಾಶಗಳ ಬಗ್ಗೆ ನಮ್ಮ ಪೂರ್ವಿಕರಲಿದ್ದಷ್ಟು ಭಯ ಭಕ್ತಿ ಬೇರೆಯಾವ ಸಂಸ್ಕೃತಿಯ ದಾಖಲೆಯಲ್ಲೂ ಇರಲಾರದು. ಅಥರ್ವಣವೇದದಲ್ಲಿ 'ಪೃಥ್ವಿಸೂಕ್ತ" ಎಂದ ಅಧ್ಯಾಯದಲ್ಲಿ ಭೂಮಿಯನ್ನು ಆವರಿಸಿದ ವಿವಿಧ ಮೂಲವಸ್ತುಗಳ ಮಹತ್ವವನ್ನು ೬೩ ಶ್ಲೋಕಗಳಲ್ಲಿ ವರ್ಣಿಸಲಾಗಿದೆ. ಕರ್ನಾಟಕದಲ್ಲಿಯ ಪಶ್ಚಿಮ ಘಟ್ಟದಲ್ಲಿರುವ ಗಿರಿಜನರು ಗಿಡವನ್ನು ಕಡಿಯಬೇಕಾದರೆ ಅದಕ್ಕೆ ಪೂಜೆ ಸಲ್ಲಿಸುತ್ತಾರೆ. ಇಂದಿಗೂ ಭೂಮಿ ಪೂಜೆ, ವೃಕ್ಷ ಪೂಜೆ, ಜಲಭೂಮಿ, ಸೂರ್ಯನಮಸ್ಕಾರ ನಮ್ಮಲ್ಲಿ ಪ್ರಚಲಿತದಲ್ಲಿವೆ. ಅಶ್ವತ್ಥ, ಆಲ, ಬನ್ನಿ ವೃಕ್ಷಗಳನ್ನು ಕಡಿಯಕೂಡದೆಂದು ಈಗಲೂ ಶಾಸ್ತ್ರ ಇದೆ. ಹೀಗೆ ನಿಸರ್ಗ ಕುರಿತ ನಮ್ಮ ಪ್ರಾಚೀನರು ಅನುಸರಿಸಿಕೊಂಡು ಬಂದ ನಂಬಿಕೆಗಳು ಇಂದಿಗೂ ಆಚರಣೆಯಲ್ಲಿವೆ. ಆದರೆ

ಪ್ರಾಚೀನ ಮಾನವ ನಿಸರ್ಗದಲ್ಲಿ ಯಾವುದೋ ಚೈತನ್ಯ ಶಕ್ತಿ ಇದೆ ಎಂದು ಭಯಭಕ್ತಿಯಿಂದ ತನಗೆ ಬೇಕಾದಷ್ಟು ಮಾತ್ರ ಉಪಯೋಗಿಸಿಕೊಳ್ಳುತ್ತಿದ್ದ ಬರುಬರುತ್ತಾ ಮಾನವನ ಅನುಭವ ಬುದ್ಧಿಶಕ್ತಿ ಮತ್ತು ಆಸೆ ಹೆಚ್ಚಾದಂತೆ ಹಾಗೂ ವಿಜ್ಞಾನ ತಾಂತ್ರಿಕ ಜ್ಞಾನಗಳ ಬಳಕೆ ಆರಂಭಿಸಿದಂತೆ ನಿಸರ್ಗವನ್ನು ಹೆಚ್ಚಾಗಿ ಬಳಸಲು ಆರಂಭಿಸಿದ. ಅಂದಿನಿಂದಲೂ ಪರಿಸರ ಅವಲಂಬನೆ ಹೆಚ್ಚಾದಂತೆ ಅದರ ದುರ್ಬಳಕೆ ಮತ್ತು ಪರಿಸರ ಮಾಲಿನ್ಯತೆಗೆ ಮಾನವ ಹೀಗೆ ಕಾರಣನಾದ ಮತ್ತು ಹಿಂದಿನವರು ಇಟ್ಟುಕೊಂಡ ಭಯಭಕ್ತಿಯ ನಂಬಿಕೆಗಳು ಹೀಗೆ ಬದಲಾವಣೆಗೆ ಎಡೆಮಾಡಿಕೊಟ್ಟವು ಎಂಬುದನ್ನು ಅಧ್ಯಯನದ ಮೂಲಕ ಗಮನಿಸಬಹುದು. ನಿಸರ್ಗದ ನಿಯಮಗಳನ್ನು ಅರಿತು ಅನುಕರಿಸುವುದರಿಂದ ಮತ್ತು ಅವುಗಳಿಗೆ ಅನುವರ್ತಿಯಾಗಿ ಬಾಳುವುದರಿಂದ ತನಗೆ ಲಾಭವಾಗುವುದು ಎಂಬ ಸಂಗತಿ ಅವನಿಗೆ ಸ್ಪಷ್ಟವಾಯಿತು. ಅರ್ಥವಿಸಿ ವ್ಯಾಖ್ಯಾನಿಸುವಾಗ ಹೆಪ್ಪುಗಟ್ಟುವ ತಿಳುವಳಿಕೆಯಾಗಿತ್ತು ಇದು ತನ್ನ ಕರ್ತವ್ಯ ಇಷ್ಟಾನಿಷ್ಟ ಪ್ರಕಾರ ವರ್ತಿಸುವುದಿಲ್ಲ. ಏಕೆಂದರೆ ನಿಸರ್ಗದ ನಿಯಮಗಳನ್ನು ವ್ಯಕ್ತಿ ಬದಲಾಯಿಸಲಾದ ಬಗ್ಗಿಸಲಾರ ಅವು ಜ್ಞಾತೃನಿಷ್ಠ (ವ್ಯಕ್ತಿನಿಷ್ಠ) ಅಲ್ಲ ಬದಲು ಜ್ಞೇಯ ನಿಷ್ಠ (ವಸ್ತುನಿಷ್ಠ) ಹೌದು, ವ್ಯಕ್ತಿ ಜೀವನದ ಇನ್ನೊಂದು ಮಗ್ಗಲು ಹೆದರಿಕೆ ಆಕಾಶದ ಗಹನ ಗಹ್ವರತೆ ಪ್ರಕೃತಿ ಬಲಗಳ ರುದ್ರ ಭೀಕರತೆ ಸೃಷ್ಟಿಯಲ್ಲಿಯ ಕ್ರಮಬದ್ಧ ರಮಣೀಯತೆ ಮುಂತಾದ ಮಹೋನ್ನತ ವ್ಯಾಪಾರಗಳನ್ನು ಬೆರಗು ಭಯ ಮೂಕ ವಿಸ್ಮಯಗಳಿಂದ ಗಮನಿಸಿದ ಮಾನವ ಅವುಗಳ ಹಿಂದೆ ತನಗಿಂತ ಅತಿಶಯ ಬುದ್ಧಿವಂತ, ದೈತ್ಯ ಪ್ರಾಣಿ ಇರಬೇಕೆಂದು ತರ್ಕಿಸಿ ಅದನ್ನು ದೇವರೆಂದು ಕರೆದ, ತನ್ನ ಸುತ್ತಲು ಇರುವ ಭೂಮಿ, ನೀರು, ಬೆಂಕಿ, ಗಾಳಿ, ಆಕಾಶ ಹಾಗೂ ಪ್ರಾಣಿಗಳನ್ನೆಲ್ಲಾ ಪೂಜಿಸಲಾರಂಭಿಸಿದ. ಇವುಗಳ ದೈತ್ಯ ಸ್ವರೂಪದಿಂದ ತಮ್ಮನ್ನು ರಕ್ಷಿಸುವಂತೆ ಪ್ರಾರ್ಥಿಸಿದ. ಹೀಗೆ ಸರ್ವಶಕ್ತ, ಪರಾತ್ಪರವಸ್ತು, ಸರ್ವಾಂತರ್ಯಾಮಿ ಮುಂತಾದ ನಾಮಧೇಯಗಳು ಮಾನವನ ಎಲ್ಲ ಬಗೆಯ ಅಜ್ಞಾತಗಳ, ಅಮೂರ್ತಗಳ ಆದೇಶಗಳ ಮತ್ತು ಅನಂತಗಳ ಆಕಾರವಾದವು ದೇವರ ಪ್ರತ್ಯಕ್ಷರೂಪ ಆಕಾಶ ಇನ್ನೊಂದು ರೂಪ ಮಾನವ ಆ ದೇವರ ಇಚ್ಛಾನುಸಾರ ಗಗನಕ್ರಿಯೆಗಳು ನಡೆದುಮಾನವ ವ್ಯಾಪಾರಗಳನ್ನು ನಿಯಂತ್ರಿಸುತ್ತವೆ. ಹೀಗೆ ಹರಿದ ಚಿಂತನೆಯ ಫಲವೇ ಇಲ್ಲಿಯ ಸಮಸ್ಯೆಗಳಿಗೆ ಅಲ್ಲಿ ಪರಿಹಾರ ಹುಡುಕುವ ಮನೋಭಾವ ಜಾತಕ ಪ್ರಸ್ತುತವಾಗಿ ರೂಢಿಯಾಯಿತು.

ಭೂಮಿಯ ೪೫೦ ಕೋಟಿ ವರ್ಷಗಳ ಇತಿಹಾಸವನ್ನು ಬಗೆದು ನೋಡಿದರೆ ಇಲ್ಲಿಯ ಪ್ರಳಯಕಾರಿ ಶಕ್ತಿಗಳ ವಿರಾಟ್ ರೂಪದ ಅಂದಾಜು ಸಿಗುತ್ತದೆ. ತನಗೆ ಬೇಕೆಂದಾಗ ಈ ಭೂಮಿ ತನ್ನ ಮೈ ಪರಚಿಕೊಳ್ಳುತ್ತದೆ. ತನ್ನ ಹೊರಮೈಯನ್ನು ಒಳಕ್ಕೆಳೆದು ಒಳ ಮೈಯ ಹೊರಹಾಕುತ್ತದೆ. ಭೂಖಂಡಗಳು ಬೇರ್ಪಡಿಸುತ್ತವೆ. ಒಂದು ಗೂಡಿಸಿ ಕಲೆಸುತ್ತದೆ. ಇನ್ನೆಲ್ಲೋ ಒಂದು ಕಡೆ ಜ್ವಾಲಾಮುಖಿಯ ಕೆಂಡಾ ಮಂಡಲವನ್ನು ಪೂತ್ಕರಿಸಿ ಜೀವಿಗಳನ್ನೇ ಹೇನುಗಳಂತೆ ಹೊಸಕಿ ಹಾಕುತ್ತದೆ.

ನಿಸರ್ಗದ ವಿವಿಧ ವಿದ್ಯಮಾನಗಳನ್ನು ಜಿಕಿತ್ಸಕವಾಗಿ ಗಮನಿಸುವ ವ್ಯಕ್ತಿ ಅವುಗಳ ಹಿನ್ನೆಲೆಯಲ್ಲಿರುವ ಕಾರಣಗಳನ್ನು ಅನ್ವೇಷಿಸಲು ಮುಂದಾಗುತ್ತಾನೆ. ಅದರಲ್ಲಿ ಆತ ಯಶಸ್ಸುಗಳಿಸಿದಾಗ ನಿಸರ್ಗದ ಒಂದು ರಹಸ್ಯ ಆತನಿಗೆ ಸಿದ್ಧಿಸುತ್ತದೆ. ಉದಾಹರಣೆಗೆ ಬೀಜ ಮೊಳೆತು ಚಿಗುರಿ ಗಿಡ ಅರಳಿ ಮರವಾಗಿ ಹೂ ಬಿಟ್ಟು ಕಾಯಿ ಹಿಡಿದು ಹಣ್ಣು ಬಲಿತು ಮತ್ತೆ ಬೀಜ ದೊರೆಯುತ್ತದೆ ಎಂಬ ಚಕ್ರದ ಕಾರಣ ತಿಳಿದಾಗ ಈ ಅರಿವೇ ವಿಜ್ಞಾನ ಸಹಜವಾಗಿಯೇ ವಿಜ್ಞಾನ ನಿರಂತರ ಕಥನದಲ್ಲಿರುವ ಜ್ಞಾನ ಪ್ರಕಾರ ಸ್ಥಗಿತ ನಿರ್ಜೀವ ವಸ್ತುವಲ್ಲ.

ಮಾನವ ಮತ್ತು ನಿಸರ್ಗ ನಡುವಿನ ಅಂತರ ಕ್ರಿಯೆಯ ಶಿಸುವೇ ವಿಜ್ಞಾನ ಇದರ ನಿರ್ಮಾಪಕ ಸ್ವತಃ ಮಾನವನೇ ಆದರೂ ಇದು ಮಾತ್ರ ಪೂರ್ತಿ ಜ್ಞೇಯನಿಷ್ಠ ಚಿಂತನ ಪ್ರಕಾರ ವ್ಯಕ್ತಿಯನ್ನು ಅವಲಂಬಿಸಿದ ನಿರಪೇಕ್ಷ ಜ್ಞಾನ ಎಂದೇ ವಿಜ್ಞಾನದ ಸಾರ್ವತ್ರಿಕತೆ ಮತ್ತು ಸರ್ವಮಾನ್ಯತೆ ನೀರಿನ ಅಣುವನ್ನು ಛೇದಿಸಿದಾಗ ಅಥವಾ ವಿಭಜಿಸಿದಾಗ ಹೈಡ್ರೋಜನ್ನಿನ ಎರಡು ಪರಮಾಣಗಳೂ ಆಕ್ಸಿಜನ್ನಿನ ಒಂದು ಪರಮಾಣವೂ ದೊರೆಯುತ್ತದೆ. ಈ ಸಂಶೋಧನೆ ಮಾಡಿದಾತ ವ್ಯಕ್ತಿಯೇ ಆದರೂ ಈ ಫಲಿತಾಂಶ ಆ ವ್ಯಕ್ತಿಯನ್ನು ಅವಲಂಬಿಸುವ ಅಥವಾ ಮೀರಿರುವ ಸಾರ್ವಕಾಲಿಕ ಮತ್ತು ಸಾರ್ವದೇಶಕ ಸತ್ಯ.

ನಿಸರ್ಗವನ್ನು ಹೇಗೆ ಬೇಕಂದ ಹಾಗೆ ಬದಲಿಸುವ ಶಕ್ತಿ ಮನುಷ್ಯನಿಗೆ ನಿಜಕ್ಕೂ ಬಂದಿದೆಯೇ? ನಮ್ಮ ಜ್ಞಾನ ಅಷ್ಟೊಂದು ಬಲಾಢ್ಯವಾಗಿದೆಯೇ? ಭೂಮಿಗೆ ಈಗ ಮನುಷ್ಯರೇ ರಕ್ಷಣೆ ನೀಡಬೇಕಾಗಿ ಬಂದಿದೆಯೇ? ಈ ಪ್ರಶ್ನೆಗಳಿಗೆ ಹೌದೆಂದು ಉತ್ತರಿಸುವ ಪರಿಸರವಾದಿಗಳನ್ನು ಈಗೀಗ ನಾವು ಎಲ್ಲೆಂದರಲ್ಲಿ ಕಾಣುತ್ತೇವೆ. ಭೂಮಿ ಬಗ್ಗೆ ಭಯಭಕ್ತಿ ಇದ್ದ ನಮ್ಮ ಪೂರ್ವಜರಿಗೂ ಇಂದಿನ ಪರಿಸರವಾದಿಗಳಿಗೂ ಬಹಳಷ್ಟು ವ್ಯತ್ಯಾಸ ಕಾಣುವುದಿಲ್ಲ. ನಿಸರ್ಗಕ್ಕೆ ವಿನೀತರಾಗಿರಬೇಕೆಂಬ ಮನೋವೃತ್ತಿ ಈಗ ಬಹುಪಾಲು ಕಡಿಮೆಯಾಗಿದೆ. ಔದ್ಯಮಿಕ ಕ್ರಾಂತಿ ನಂತರ ಮನುಷ್ಯನಿಗೆ ವಿಜ್ಞಾನ ತಂತ್ರಜ್ಞಾನಗಳ ವಿವಿಧ ಶಾಸ್ತ್ರಾಸ್ತ್ರಗಳು ಲಭಿಸುತ್ತ ಬಂದ ಹಾಗೆ ಆತ ಸಹಸ್ರಾಕ್ಷ ಸಹಸ್ರಬಾಹುವಾಗಿ ನಿಸರ್ಗವನ್ನು ಬಗ್ಗು ಬಡಿಯುತ್ತಿದ್ದಾನೆ.

ಆದರೆ ನಮ್ಮ ಸಂಪ್ರದಾಯಿಕ ಪ್ರಾರ್ಥನೆ ಕೂಡ ಭೂಮಿಯನ್ನು ತುಳಿಯುತ್ತಿರುವುದಕ್ಕಾಗಿ ಪೃಥ್ವಿಯ ಕ್ಷಮೆ ಕೋರುವುದರೊಂದಿಗೆ ಪ್ರಾರಂಭವಾಗುತ್ತದೆ.

"ಸಮುದ್ರವಸನೇ ಪೃಥ್ವಿ ಪರ್ವತಸ್ಥನ ಮಂಡಲೇ ।

ವಿಷ್ಣು ಪತ್ನಿ ನಮಸ್ತುಭ್ಯಂ ಪಾದಸ್ಪರ್ಶಕ್ಷಮಸ್ವಮೇ ॥"

ಪ್ರಾಚೀನರು ಈ ಅರಿವನ್ನು ಧಾರ್ಮಿಕ ತತ್ವಗಳ ಮೂಲಕವಾಗಿ ಕಂಡುಕೊಂಡರೆ ಇಂದಿನ ಜಾಗೃತಿ ಆಧುನಿಕ ವಿಜ್ಞಾನದಿಂದ ಅದರಲ್ಲೂ ಮಾನವ ಮತ್ತು ಪ್ರಕೃತಿಯ ನಡುವಿನ ಪರಸ್ಪರ ಸಂಬಂಧ ಮತ್ತು ಅವಲಂಬನೆಯ ಅಧ್ಯಯನ ಮಾಡುವ 'ಜೀವಿ ಪರಿಸ್ಥಿತಿ ಶಾಸ್ತ್ರ' ದಿಂದ ಲಭ್ಯವಾಗಿದೆ. ಹೀಗಾಗಿ ಜೀವಿ ಪರಿಸ್ಥಿತಿ ಶಾಸ್ತ್ರದ ಮೂಲಭೂತ ತತ್ವಗಳ ಅಧ್ಯಯನದಿಂದ ನಾವಿಂದು ಎದುರಿಸುತ್ತಿರುವ ತೀವ್ರಸ್ವರೂಪದ ಪರಿಸರ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವುದು ಸಾಧ್ಯ. ಸಸ್ಯ ಕೀಟಕ್ಕೆ ಆಹಾರ, ಕೀಟಕಪ್ಪೆಗೆ, ಕಪ್ಪೆ ಹಾವಿಗೆ, ಹಾವು ಹದ್ದುಗಳನ್ನು ಒಳಗೊಂಡು ಒಂದು ಸರಳವಾದ 'ಆಹಾರ ಸರಪಳಿ" ಆಹಾರದ ಮೂಲಕ ಉಂಟಾಗಿರುವ ಖಚಿತ ಸಂಬಂಧ ನಿಸರ್ಗದಲ್ಲಿರುವುದು ಬಹು ಅಪರೂಪ ಇದರ ಬದಲಿಗೆ ಒಂದೇ ಜೀವಿ ಅನೇಕ ಜೀವಿಗಳ ಆಹಾರ ಪಟ್ಟಿಯಲ್ಲಿರಬಹುದು. ಇಂತಹ ಸಂದರ್ಭಗಳಲ್ಲಿ ಸರಳವಾದ ಸರಪಳಿಯ ಬದಲಿಗೆ ನಮಗೆ ದೊರೆಯುವುದು ಸಂಕೀರ್ಣವಾದ ಆಹಾರ ಜಾಲ. ಆಹಾರ ಸರಪಣಿ ಆಹಾರ ಜಾಲಗಳೆರಡೂ ಪ್ರಾಣಿ ಸಸ್ಯಗಳ, ಪ್ರಾಣಿ ಪ್ರಾಣಿಗಳ ನಡುವೆಯಿರುವ ನಿಖರವಾದ ಸಂಕೀರ್ಣ ಸಂಬಂಧವನ್ನು ತೋರಿಸುತ್ತವೆ. ಈ ಸಂಬಂಧವೆ ಪರಿಸರ ಸಮತೋಲನವನ್ನು ಕಾಪಾಡುವ ಪ್ರಕೃತಿಯ ಅತ್ಯಂತ ಸಮರ್ಥವಾದ ನಿಯಂತ್ರಣ ವ್ಯವಸ್ಥೆ.

ಎಲ್ಲರ ಅಗತ್ಯಗಳನ್ನು ಪೂರೈಸಬಲ್ಲಷ್ಟು ಸಂಪತ್ತು ಭೂಮಿಯಲ್ಲಿದೆ. ಆದರೆ ಎಲ್ಲರ ದುರಾಸೆಗಳನ್ನು ಅಲ್ಲ ಎಂಬ ಗಾಂಧೀಜಿಯ ಮಾತು ನಮ್ಮ ಇಂದಿನ ಪರಿಸ್ಥಿತಿಗೆ ಅನ್ವರ್ಥವಾಗಿದೆ. ನಮ್ಮ ಸುತ್ತಮುತ್ತ ನಾವು ನೋಡುತ್ತಿರುವ ಎಲ್ಲ ಸಮಸ್ಯೆಗಳೂ ಈ ದುರಾಸೆಯ ಫಲವೇ ನಮ್ಮ ಬೇಡಿಕೆಗಳ ಪಟ್ಟಿಗೆ ಕೊನೆಯೇ ಇಲ್ಲ. ನಮಗೆ ಆಧುನಿಕ ತಂತ್ರಜ್ಞಾನ ನೀಡುವ ಎಲ್ಲ ಸೌಲಭ್ಯಗಳೂ ಬೇಕು. ಜಲವಿದ್ಯುತ್ ಯೋಜನೆಗಳು ನೀರಾವಿ ಜಲಾಶಯಗಳು ಬೃಹತ್ ಕೈಗಾರಿಕೆಗಳು ಅತ್ಯುತ್ತಮ ಸಂಚಾರ ಸಂಪರ್ಕಕ ವ್ಯವಸ್ಥೆಗಳಿರಬೇಕು. ಭೋಗವಸ್ತುಗಳ ಪಟ್ಟಿಗಂತೂ ಕೊನೆಯ ಇಲ್ಲ. ಆದರೆ ಈ ಬೇಡಿಕೆಗಳ ಪೂರೈಕೆಯ ಜೊತೆಗೆ ಜೊತೆಗೆ ಬರುವ ಹಲವಾರು ಸಮಸ್ಯೆಗಳ ಅವುಗಳ ಪರಿಣಾಮ ಮಾತ್ರಬೇಡ. ಅರ್ಥಾತ್ ನಮಗೆ ಅಭಿವೃದ್ಧಿಬೇಕು, ಅಭಿವೃದ್ಧಿಯ ಜೊತೆಗೆ ಬರುವ ಪರಿಸರ ವಿನಾಶಬೇಡ ಇದೀಗ ಈ ವಿನಾಶವಿಲ್ಲದೆ ಅಭಿವೃದ್ಧಿಯತ್ತ ನಮ್ಮ ಯೋಜನೆಗಳ ದಿಕ್ಕನ್ನು ಬದಲಿಸುವ ಪ್ರಯತ್ನಗಳು ಪ್ರಾರಂಭವಾಗಿವೆ.

ಸ್ವಾತಂತ್ರ್ಯಾನಂತರದ ನಮ್ಮ ಅಭಿವೃದ್ಧಿ ಕಾರ್ಯಗಳಿಗೆ ಮಾರ್ಗದರ್ಶನ ಮಾಡಿದ್ದು ನಮ್ಮ ಪಂಚವಾರ್ಷಿಕ ಯೋಜನೆಗಳು ಆದರೆ ಈಗ ಪರಿಸರ ವಿಜ್ಞಾನ ನಿರಂತರ ಅಭಿವೃದ್ಧಿಗೆ ದಾರಿ ತೋರಿಸುತ್ತಿದೆ. ನಿರಂತರ ಅಭಿವೃದ್ಧಿ ಪ್ರಕೃತಿಯ ಸಂಪನ್ಮೂಲಗಳನ್ನು ಸೂರೆ ಮಾಡಿ ನಿಸರ್ಗವನ್ನು ನಿಷ್ಕ್ರಿಯಗೊಳಿಸುವುದಿಲ್ಲ. ಪ್ರಕೃತಿಯನ್ನು ಏರುಪೇರು ಮಾಡುವುದಿಲ್ಲ. ಅದು ಸ್ಥಳೀಯವಾಗಿ ದೊರೆಯುವ ವಸ್ತಗಳನ್ನೇ ಬಳಸಿಕೊಳ್ಳುತ್ತದೆ. ಉದ್ಯೋಗಾವಕಾಶವನ್ನು ಸೃಷ್ಟಿಸುತ್ತದೆ. ಎಲ್ಲದಕ್ಕಿಂತ ಮುಖ್ಯವಾಗಿ ನಿರಂತರ ಅಭಿವೃದ್ಧಿಯ ಯೋಜನೆಗಳು ಜನರ ಮಧ್ಯದಿಂದ ಅವರ ಅವಶ್ಯಕತೆಗಳಿಗೆ ಅನುಸಾರವಾಗಿ ಹುಟ್ಟಿ ಬೆಳೆಯುತ್ತವೆ. ಪರಿಸರ ವಿಜ್ಞಾನದ ಕೊಡುಗೆಯಾದ ಈ ಹೊಸ ಕಲ್ಪನೆಯನ್ನು ಅಳವಡಿಸಿಕೊಂಡುಅಲ್ಲಲ್ಲಿ ನಡೆಯುತ್ತಿರುವ ಹಲವಾರು ಉಪಯುಕ್ತ ಕೆಲಸ ಕಾರ್ಯಗಳನ್ನು ನಾವು ಗಮನಿಸಬಹುದು.

ವಿಜ್ಞಾನ ತಂತ್ರಜ್ಞಾನಗಳನ್ನು ಬಳಸಿಕೊಂಡು ನಿಸರ್ಗವನ್ನು ಗೆದ್ದು ಅಭಿವೃದ್ಧಿಯ ಹಾದಿಯಲ್ಲಿ ನಾವು ಮುಂದುವರಿಯುತ್ತಿದ್ದೇವೆ ಎನ್ನುವ ಭಾವನೆ ಬಲವಾಗಿ ಬೇರೂರಿದೆ. ಇದು ಕಣ್ಕಾಪು ಹಾಕಿದ ಕುದುರೆಯ ಮುಖದಂತೆ ಆಚೆ ಈಚೆಗಿನದು ಗೋಚರವಾಗದೇ ಕಣ್ಣಿಗೆ ಕಾಣುವುದು ನೇರ ದಾರಿಯೊಂದೇ; ನಮ್ಮ ಸುತ್ತಲಿನ ಜೀವಜಾಲ, ಜಲ, ನೆಲ, ಸಸ್ಯ ಖನಿಜಗಳು, ಪಶುಪಕ್ಷಿ ಕೀಟಗಳು, ಹವೆ ಇವೆಲ್ಲಾ ನಮ್ಮ ಸುತ್ತ ಇದ್ದರೂ ಪ್ರತಿ ನಿಮಿಷಕ್ಕೂ ಅವುಗಳನ್ನು ಅವಲಂಬಿಸಿಯೇ ಜೀವಿಸುತ್ತಿದ್ದೇವೆ ಎಂಬ ಅರಿವು ಮಾತ್ರ ಬಂದಂತಿಲ್ಲ.

ಸಮೃದ್ಧವಾದ ಕಾಡು ಒಂದು ಕಾಲಕ್ಕಿತ್ತು ಶುದ್ಧ ಹವೆಗೆ ಇಂಗಾಲದ ಡೈಯಾಕ್ಸೈಡ್ ಬಳಸಿ ಆಮ್ಲಜನಕ ಬಿಡುವಂತಹ ಕ್ರಿಯೆಗೆ ನೆಲದಲ್ಲಿ ನೀರನ್ನು ಇಂಗಿಸಿನಿರಿನ ಲಭ್ಯತೆಯ ಹೆಚ್ಚಳಕ್ಕೆ ಪಶುಪಕ್ಷಿ ಕ್ರಿಮಿಕೀಟಗಳ ಆಶ್ರಯಕ್ಕೆ ಕಾಡು ಅವಶ್ಯ ಅನಿವಾರ್ಯ ನಮಗೆ ಕಟ್ಟಿಗೆ ಬೇಕು ಉರುವಲಿಗೆ, ಉದ್ದಿಮೆಗೆ, ಮನೆಗೆ ಪಿಠೋಪಕರಣಗಳಿಗೆ ಎಲ್ಲಕ್ಕೂ ಕಟ್ಟಿಗೆ ಬೇಕು, ಜನಸಂಖ್ಯೆ ಮಿತಿ ಮೀರಿ ಬೆಳದಂತೆ ಕಟ್ಟಿಗೆಯ ಬೇಡಿಕೆಯೂ ಹೆಚ್ಚಿದೆ. ಅದಕ್ಕಾಗಿ ಕಾಡನ್ನು ಕಡಿದು ಕಟ್ಟಿಗೆಯನ್ನು ಮಾರಾಟ ಮಾಡಿ ಇಂದಿನ ಲಾಭವನ್ನೇ ಪ್ರಮುಖವಾಗಿಟ್ಟುಕೊಂಡು ಗಳಿಸುವ ಪ್ರವೃತ್ತಿ ಬಲವಾಗಿರುವಾಗ ಕಾಡಿದ್ದರೆ ನಾವಿದ್ದೇವೆ. ಹರಿಯುವ ನೀರಿದೆ. ಪಶು ಪಕ್ಷಿ ಪ್ರಾಣಿ ಕೀಟಗಳಿವೆ. ಸಕಲ ಜೀವ ಸಮುದಾಯವೂ ಇದೆ ಎನ್ನುವ ಅರಿವು ನೀಡುವವರ್‍ಯಾರು? ಇಂತಹ ಪ್ರವೃತ್ತಿಯಿಂದ ವಾತಾವರಣವೇ ಬದಲಾಗುತ್ತಿದೆ. ಸಂಪನ್ಮೂಲಗಳೇ ಇಲ್ಲವಾಗುತ್ತಿವೆ. ಮುಂದೊಂದು ದಿನ ಕರೆ ತೊರೆ ಬತ್ತಿದಾಗ ಬರಗಾಲದ ಉರಿಯೊಂದೇ ನಮಗೆ ಎದುರಾಗಬಹುದು.

ಇಂದಿನ ರಾಕೇಟ್ ಯುಗದಲ್ಲಿ ಅರಣ್ಯದ ಮೇಲಿನ ಅವಲಂಬನೆ ಕಡಿಮೆಯಾಗಿಲ್ಲ. ದೇಶದ ೨೦ ಕೋಟಿಯಷ್ಟು ಗಿರಿಜನ, ಗುಡ್ಡುಗಾಡು ಜನ ತಮ್ಮ ಜೀವನಕ್ಕಾಗಿ ಅರಣ್ಯಗಳನ್ನೇ ಅವಲಂಬಿಸಿದ್ದಾರೆ ದೇಶದ ಜನಸಂಖ್ಯೆಯ ಪ್ರತಿಶತ ೧೫ ಜನ ರೈತರು ಇವರು ಬೇಸಾಯಕ್ಕೆ ಬೇಕಾದ ರಂಟೆ, ಕುಂಟೆ, ನೊಗ, ನೇಗಿಲು ಗಾಡಿ ಮುಂತಾದ ಕೃಷಿ ಉಪಕರಣಗಳಿಗೆ ಸಾಧನೆಗಳಿಗೆ ಮರ ಮುಟ್ಟುಗಳನ್ನೇ ಗೃಹಕೈಗಾರಿಕೆ ಸಣ್ಣ ಪ್ರಮಾಣದ ಕೈಗಾರಿಕೆಗಳಿಂದ ಹಿಡಿದು ಕಾಗದ ರೈಲ್ವೆ ಕೋಚ ಪ್ಲೈವುಡ್ ಪೆನ್ಸಿಲಗಳನ್ನು ತಯಾರಿಸುವ ಬೃಹತ್ ಉದ್ಯಮಗಳವರೆಗೆ ಮರಗಳನ್ನು ಇಂದು ಬಳಸುತ್ತಿದ್ದೇವೆ. ಅರಣ್ಯದ ಮೇಲಿನ ಆಕ್ರಮಣದಿಂದಾಗಿ ವಿಶ್ವದಲ್ಲಿ ೨೫ ಸಾವಿರ ವಿವಿಧ ಸಸ್ಯ ಜಾತಿಗಳು ವಿನಾಶದ ಅಂಚಿನಲ್ಲಿವೆ. ಸುಮಾರು ೫೦೦ ಜೀವ ಪ್ರಭೇದಗಳು ವಿನಾಶದ ಅಂಚಿನಲ್ಲಿವೆ. ನೂರು ವರ್ಷಗಳ ಅವಧಿಯಲ್ಲಿ ವಾತಾವರಣದಲ್ಲಿ ಇಂಗಾಲದ ಡೈಯಾಕ್ಸೈಡ್ ಪ್ರಮಾಣ ಮುಂಚೆ ಇದ್ದುದಕ್ಕಿಂತ ಪ್ರತಿಶತ ೧೩ ರಷ್ಟು ಹೆಚ್ಚಾಗಿದೆ. ರಾಷ್ಟ್ರೀಯ ಪರಿಸರ ಯೋಜನೆಯ ಅಂದಾಜಿನಂತೆ ನಮ್ಮ ದೇಶದಲ್ಲಿ ಸುಮಾರು ಒಂದು ಮುಕ್ಕಾಲು ಕೋಟಿ ಹೆಕ್ಟೆರ್ ಭೂಮಿ ಸವೆತ ಜೌಗು ಮತ್ತು ಕ್ಷಾರಗಳ ಅನಿಷ್ಟ ಪರಿಣಾಮಗಳಿಗೆ ಒಳಗಾಗಿದೆ.

ಭಾರೀ ವಿಸ್ತಾರವಾದ ಕಾಡುಗಳನ್ನು ಕಾಯ್ದಿಡುವುದು ನಮ್ಮ ಪ್ರಥಮ ಕರ್ತವ್ಯ. ಬೆಟ್ಟಗಳು ಹಸಿರಾಗಿದ್ದರೆ, ಕಣಿವೆಗಳು ಫಲಭರಿತವಾಗುತ್ತವೆ. ಜಲರಹಿತ ಬಯಲಿನಲ್ಲಿ ತಂಪು ತುಂಬಿಕೊಳ್ಳುತ್ತದೆ. ಎಚ್ಚರಿಕೆಯಿಂದ ನಿರ್ವಹಿಸಿದಲ್ಲಿ ಕಾಡಿನಲ್ಲಿ ಅಪಾರ ಸಂಪತ್ತು ಕೃಷಿಕ, ಗಣಿಗಾರ, ಕಟ್ಟಡ ನಿರ್ಮಾಣಕಾರ ಇವರೆಲ್ಲರ ಬೇಡಿಕೆ ಅಪಾರವಾಗಿದ್ದರೂ ಕಾಡು ಹಾಳು ಮಾಡುವುದನ್ನು ನಿಲ್ಲಿಸಿದಲ್ಲಿ ಅವರ ಬೇಡಿಕೆಗಳನ್ನು ಕಾಡು ಪೂರೈಸಬಹುದು. ಹಳೆ ಮರಗಳನ್ನು ಕಡಿದಲ್ಲಿ ಅವುಗಳ ಬದಲಿಗೆ ಹೊಸ ಸಸಿಗಳನ್ನು ನೆಡಬೇಕು. ಅರಣ್ಯ ಭೂಮಿಯ ಸಂರಕ್ಷಣೆ ಅವುಗಳ ವಿಸ್ತರಣೆ ಹಾಗೂ ಅಭಿವೃದ್ಧಿಗಾಗಿ ಭೂಮಾಲೀಕ ಹಾಗೂ ಗಣಿಗಾರ ಈ ಇಬ್ಬರಲ್ಲದೆ ಬಿಡುವಿರುವ ಶಕ್ತಿಯಿರುವ ಎಲ್ಲರೂ ಪ್ರಕೃತಿಯ ಸಹಕಾರ್ಮಿಕರಾಗಬೇಕು.

ಇಂದು ಈ ಭೂಮಿಯ ಮೇಲೆ ಮನುಷ್ಯ ಏನೆಲ್ಲವನ್ನೂ ಸಾಧಿಸಿದ್ದಾನೆ. ಬೆಟ್ಟಗಳನ್ನು ಇಬ್ಭಾಗ ಮಾಡಿ ತನ್ನ ಅನುಕೂಲಕ್ಕೆ ತಕ್ಕಂತೆ ನದಿಯ ಪಾತ್ರ ತಿರುಗಿಸಿಕೊಂಡಿದ್ದಾನೆ. ಅದೇ ರೀತಿ ಮಲೇರಿಯಾ ಮಾರಿಯನ್ನು ಮೂಲೋತ್ಪಾಟನೆ ಮಾಡುವ ಹುಮ್ಮಸ್ಸಿನಲ್ಲಿ ಯದ್ವಾತದ್ವಾ ಡಿ.ಡಿ.ಟಿಯನ್ನು ಸಿಂಪಡಿಸಿ ಭೂಮಿಯನ್ನು ಡಿ.ಡಿ.ಟಿ.ಮಯ ಮಾಡಿದ್ದಾನೆ. ಅದರ ಫಲಿತಾಂಶವೆಂದರೆ, ಇಂದು ತಾಯಿಯ ಹಾಲಿನಲ್ಲಿ ಡಿ.ಡಿ.ಟಿಯ ಅಂಶವಿದೆ. ನಿಷ್ಪ್ರಯೊಜಕ ಮರಳಿನಲ್ಲಿ ಥೋರಿಯಂ ಅನ್ನು ಹುಡುಕಿ ಅದಕ್ಕೆ ಚಕಮುಕಿ ಕೊಟ್ಟು ಅಣುಸಿಡಿಸಿ ಹಿರೋಷಿಮಾ, ನಾಗಸಾಕಿಗಳನ್ನು ಸುಟ್ಟು ಭಸ್ಮ ಮಾಡಿದ್ದಾನೆ. ಹಾಗೂ ಇಡಿ ಭೂಮಂಡಲವನ್ನೇ ಎಂಟು ಹತ್ತು ಬಾರಿ ಭಸ್ಮ ಮಾಡಬಹುದಾದಷ್ಟು ಅಣ್ವಸ್ತ್ರಗಳನ್ನು ಪೇರಿಸಿಕೊಂಡು ಅಟ್ಟಹಾಸ ಮಾಡುತ್ತಿದ್ದಾನೆ.

ಜಗತ್ತಿನ ಜೀವ ಭಂಡಾರಗಳಾದ ಗೊಂಡಾರಣ್ಯಗಳನ್ನು ಬಟ್ಟಬಯಲು ಮಾಡಿ ಅದಕ್ಕೆ ಕೈಗಾರೀಕರಣದ ಹಣೆಪಟ್ಟಿ ಹಚ್ಚಿದ್ದಾನೆ. ಇಷ್ಟಾದರೂ ಅವನಿಗೆ ಸಮಾಧಾನವಿಲ್ಲ. ಪ್ರಗತಿ ಮತ್ತು ನಾಗರೀಕತೆಯ ಹೆಸರಿನಲ್ಲಿ ತನ್ನೆಲ್ಲಾ ವಿನಾಶಕಾರಿ ಕೃತ್ಯಗಳನ್ನು ಸಮರ್ಥಿಸುತ್ತಿದ್ದಾನೆ.

ಹಾಗಾದರೆ ಇವೆಲ್ಲದರಿಂದ ಘೋರ ಆಘಾತಕ್ಕೀಡಾದ ಪ್ರಕೃತಿಮಾತೆ ಸುಮ್ಮನಿದ್ದಾಳೆಯೇ? ಕ್ಷಮಾಯಾಧರಿತ್ರಿ ಸಹನೆಗೂ ಒಂದು ಮಿತಿ ಇದೆಯಲ್ಲವೆ? ಅವಳು ಮನುಷ್ಯನ ಕೃತಘ್ನ ಕೃತ್ಯಗಳ ವಿರುದ್ಧ ತಿರುಗಿ ಬಿದ್ದಿದ್ದಾಳೆ. ಪರಿಣಾಮಕಾರಿ ಮಿನಿಮಾಟ, ಮಿದುಳು ಜ್ವರ ಕಾಯಿಲೆಗಳಂತಹ ಚಿಕಿತ್ಸೆಯೇ ಇಲ್ಲದ ಭೀಕರ ರೋಗಗಳು ಹುಟ್ಟಿಕೊಂಡಿವೆ.

ನಮಗೆ ಪೋಷಣೆ ನೀಡುವ ನೀರಿಗೆ, ಗಾಳಿಗೆ, ಮಣ್ಣಿಗೆ ಹಾಗೂ ಸಸ್ಯಕೋಟಿಗೆ ವಿಪತ್ತು ಬಂದಾಗ ಯಾವ ಪ್ರಬಲ ಸೈನ್ಯವಾಗಲಿ, ಸರಕಾರವಾಗಲಿ, ತಂತ್ರಜ್ಞಾನವಾಗಲಿ ನೆರವಿಗೆ ಬರುವುದಿಲ್ಲ ಸ್ಥಿತಪ್ರಜ್ಞ ಭೂಮಿಯಂತೂ ಮನುಷ್ಯರಿಗೆಂದು ತನ್ನ ಭೌತಿಕ ನಿಯಮಗಳ ರಿಯಾಯತಿ ತೋರಿಸುವುದಿಲ್ಲ. ನಮ್ಮ ಪೀಳಿಗೆ ಭೂಮಿಯ ಮೇಲೆ ಇನ್ನೊಂದಿಷ್ಟು ಕಾಲ ಬದುಕಬೇಕೆಂದಿದ್ದರೆ ಭೂಮಿಯನ್ನು ಪಳಗಿಸಬೇಕು. ಜನಸಂಖ್ಯೆ ವೃದ್ಧಿಯನ್ನು ತಡೆಗಟ್ಟಿ ಹತೋಟಿಗೆ ತರಬೇಕು. ನೀರು, ಗಾಳಿ ಹಾಗೂ ಮಣ್ಣಿಗೆ ವಿಷ ಉಣಿಸುವ ಕೃತ್ಯ ಕಡಿಮೆಯಾಗಬೇಕು. ನಮ್ಮೆಲ್ಲರ ತಪ್ಪುಗಳನ್ನು ಭೂಮಿ ಕ್ಷಮಿಸುತ್ತದೆಂಬ ಪುರಾತನ ಕಾಲದ ಭ್ರಮೆಯನ್ನಾಗಲಿ, ವಿಜ್ಞಾನದ ಪ್ರಬಲ ಶಕ್ತಿಯೇ ಭೂಮಿಯನ್ನು ಹದ್ದುಬಸ್ತಿನಲ್ಲಿ ಇಡುತ್ತದೆಂಬ ಆಧುನಿಕ ಮೌಢ್ಯವನ್ನಾಗಲೀ ಅಂಗೀಕರಿಸುವ ಬದಲು ಈ ಗ್ರಹದ ನಿಯಮ ಅರ್ಥಮಾಡಿಕೊಂಡು ಆದಷ್ಟು ಬೇಗ ಅವುಗಳೊಂದಿಗೆ ಸಹಬಾಳ್ವೆ ಸಾಧಿಸಬೇಕು. ಭೂಮಿಯ ಬಹುದೀರ್ಘ ಕಾಲ ಯಾತ್ರೆಯಲ್ಲಿ ನಾವು ನಿನ್ನೆ ಮೊನ್ನೆಯಷ್ಟೇ ಸೇರಿಕೊಂಡ ಪಯಣಿಗರು. ಭೂಮಿಯ ಈ ಕಾಲಯಾನದಲ್ಲಿ ಅದೆಷ್ಟು ಬಗೆಯ ನಿಸರ್ಗಗಳು ಹಿಂದೆಲ್ಲ ಸೃಷ್ಟಿಯಾಗಿ ನಶಿಸಿವೆ. ಮುಂಬರುವ ಸುದೀರ್ಘ ಭವಿಷ್ಯದಲ್ಲಿ ಇನ್ನೂ ಹೊಸ ಹೊಸ ಬಗೆಯ ನಿಸರ್ಗಗಳು ಸೃಷ್ಟಿಯಾಗುತ್ತಾ ನಶಿಸುತ್ತ ಸೃಷ್ಟಿಯಾಗುತ್ತ ಹೋಗಬಹುದು. ನಮ್ಮ ಪಾಲಿಗೆ ಬಂದಿರುವ ಇಂದಿನ ನಿಸರ್ಗ ಎಷ್ಟು ವರ್ಷ ಉಳಿಯತ್ತೋ ಗೊತ್ತಿಲ್ಲ. ಆದರೆ ನಮ್ಮ ಮೇಲುಗೈಯಿಂದಾಗಿಯೇ ಅದುನಾಶವಾದರೆ? ಹಾಗಾಗದಂತೆ ನೋಡಿಕೊಳ್ಳುವಲ್ಲಿ ನಮ್ಮ ಜಾಣತನ ಇದೆ.

ಪರಿಸರಾಂದೋಲನ ಪ್ರಾರಂಭವಾದದ್ದು ಅಮೇರಿಕಾದಲ್ಲಿ. ಆಂದೋಲನದ ದಾಖಲೆಗಳ ಪ್ರಕಾರ ೧೯೬೨ ರಲ್ಲಿ ಪ್ರಕಟವಾದ ರಾಖೆಲ್ ಕಾರ್ಸನ್ ಅವರ ಪುಸ್ತಕದಿಂದ ಪರಿಸರ ಚಳುವಳಿ ಪ್ರಾರಂಭವಾಯಿತು. ಆ ಪುಸ್ತಕವನ್ನು ಆಧುನಿಕ ಪರಿಸರ ಚಳುವಳಿಯ ಬೈಬಲ ಮತ್ತು ಸ್ಥಾಪನಾಘಟನೆ ಎನ್ನಲಾಗಿದೆ. ಕೈಗಾರೀಕರಣಕ್ಕೆ ಪ್ರತಿಕ್ರಿಯೆಯಾಗಿ ಬಂದದ್ದು ಪರಿಸರ ಆಂದೋಲನದ ಮೊದಲ ಅಲೆ; ನಂತರ ಜನಾಭಿಪ್ರಾಯಕ್ಕೆ ಒಂದು ರೂಪ ಹಾಗೂ ಶಕ್ತಿಯನ್ನು ತುಂಬಿದ ಬೌದ್ಧಿಕ ಪ್ರತಿಕ್ರಿಯೆ ಪರಿಸರ ಆಂದೋಲನದ ಪರಂಪರೆ ಇದೆ.

ಜರ್ಮನಿಯ ರೋಮ್ಯಾಂಟಿಕ ಪರಿಸರವಾದವು ದೇಶಭಕ್ತಿಯ ಜೊತೆಗೆ ಕಾಡು ರೈತ ಹಾಗೂ ದೇಶಗಳನ್ನೊಳಗೊಂಡ ಸಾವಯವ ಸಂಪೂರ್ಣತೆಯನ್ನು ಪ್ರತಿಪಾದಿಸುವಂತದ್ದು. ೧೯ನೇ ಶತಮಾನದ ಧರ್ಮ ಗುರುವೊಬ್ಬನ ಪ್ರಕಾರ ಜರ್ಮನಿಯ ಜನರಿಗೆ ದ್ರಾಕ್ಷಾರಸದಷ್ಟೆ ಅಗತ್ಯವಾದದ್ದು ಕಾಡು ನಾವು ಕಾಡನ್ನು ಉಳಿಸಿಕೊಳ್ಳಬೇಕು. ಅದು ಚಳಿಗಾಲದಲ್ಲಿ ಒಲೆಗಳನ್ನು ಬಿಸಿಯಾಗಿಸಿಕೊಳ್ಳುವುದಕ್ಕಲ್ಲ ಬದಲಿಗೆ ರಾಷ್ಟ್ರದ ಜೀವನ ಬೆಚ್ಚಗೆ ಸಂತೋಷದಿಂದ ಇರಲು ಆ ಮೂಲಕ ಜರ್ಮನ್ನರು ಜರ್ಮನಿಯವರಾಗಿ ಉಳಿಯಲು:

ಸ್ವತಂತ್ರ ಭಾರತದ ಕುರಿತು ಗಾಂಧೀಜಿಯ ಕಲ್ಪನೆ ಗ್ರಾಮೀಣ ಭಾರತದ್ದಾಗಿತ್ತು. ಕೈಗಾರಿಕರಣ ನಗರೀಕರಣದ ಅಲೆಯನ್ನು ವಿರೋಧಿಸಿ ಗ್ರಾಮೀಣ ಭಾರತದ ಪುನಶ್ಚೇತನಕ್ಕಾಗಿ ಗಾಂಧಿ ಪ್ರಯತ್ನಿಸಿದರು. ಇದಕ್ಕೆ ನೈತಿಕ ಹಾಗೂ ಪರಿಸರಿಕ ಕಾರಣಗಳಿವೆ. ಇಡಿ ಪ್ರಪಂಚದ ಕೈಗಾರಿಕರಣಕ್ಕೆ ಸ್ವಾಭಾವಿಕ ಮಿತಿಗಳಿವೆ. ಅದು ದೇಶವೊಂದರ ಕೈಗಾರೀಕರಣಕ್ಕೆ ಹೋಲಿಸಿದರೆ ವಿಶಿಷ್ಟವಾದದ್ದು. “ಪಾಶ್ಚಿಮಾತ್ಯರಂತೆ ಭಾರತ ಕೈಗಾರಿಕರಣಕ್ಕೆ ಪ್ರಯತ್ನಿಸಬಾರದು. ಸಣ್ಣ ದ್ವೀಪವೊಂದರ (ಇಂಗ್ಲೇಂಡ್) ಆರ್ಥಿಕ ಸಾಮ್ರಾಜ್ಯ ಶಾಹಿತ್ವ ಇಡಿ ಪ್ರಪಂಚವನ್ನು ಸಂಕೋಲೆಯಲ್ಲಿರಿಸಿದೆ. ಭಾರತದ ೩೦೦ ದಶಲಕ್ಷ ಜನರು ಅದೇ ರೀತಿ ಶೋಷಣೆ ಮಾಡಿದಲ್ಲಿ ಅದು ಪ್ರಪಂಚವನ್ನು ಮಿಡತೆ ತಿಂದಂತೆ ಉರಿದು ಮಾಡಿ ಬಿಡುತ್ತದೆ”[೭೩]

ಗಾಂಧೀಜಿಯವರು ನಗರ ಹಾಗೂ ಕಾರ್ಖಾನೆಗಳ ಬೆಳವಣಿಗೆಯನ್ನು ಗ್ರಾಮೀಣ ಪ್ರದೇಶಗಳ ಏಕಮುಖ ಶೋಷಣೆಯಿಂದ ಆಗುವಂತಹದ್ದು ಎಂದು ನಂಬಿದ್ದು. ಇಂದು ರಕ್ತ ನಾಳಗಳಲ್ಲಿ ಹರಿಯುತ್ತಿರುವ ರಕ್ತವು ಹಳ್ಳಿಗಳ ರಕ್ತನಾಳಗಳಲ್ಲಿ ಹರಿಯುವಂತಾಗಬೇಕು ಎಂದು ಅವರು ಆಶಿಸಿದ್ದರು. ಗಾಂಧೀಜಿಯವರ ಕನಸಿನ ಗ್ರಾಮೀಣ ಭಾರತದ ವಿವರಣೆ ಹೀಗಿದೆ.

“ಆ ಹಳ್ಳಿಯಲ್ಲಿ ಐದು ಮೈಲಿ ಆಸುಪಾಸಿನಲ್ಲಿ ದೊರೆಯುವ ವಸ್ತುಗಳನ್ನು ಬಳಸಿ ನಿರ್ಮಿಸಿದ ಬೆಳಕು ಮತ್ತು ಗವಾಕ್ಷಿಯಿರುವ ಗುಡಿಸಲುಗಳಿರುತ್ತವೆ. ದನಕರುಗಳನ್ನು ಸಾಕಲು ಕೊಟ್ಟಿಗೆ ತಮ್ಮ ಅವಶ್ಯಕತೆಗೆ ಸಾಲುವಷ್ಟು ತರಕಾರಿಗಳನ್ನು ಬೆಳೆಯಲು ಹಿತ್ತಲು ಇರುತ್ತವೆ. ನೀರಿನ ಅಗತ್ಯವನ್ನು ಪೂರೈಸಲು ಎಲ್ಲರೂ ಸುಲಭವಾಗಿ ಬಳಸಬಹುದಾದ ಭಾವಿಗಳಿರುತ್ತವೆ. ಎಲ್ಲರೂ ಸೇರಲು ಸಮುದಾಯ ಭವನ ಪೂಜಾಗೃಹ, ಗೋಮಾಳ, ಸಹಕಾರಿ ಹೈನುಗಾರಿಕೆ ಸಂಘ, ಪ್ರಾಥಮಿಕ ಮತ್ತು ಉನ್ನತ ಶಾಲೆಗಳು ಇದ್ದು, ಅದರಲ್ಲಿ ಕೈಗಾರಿಕಾ ಶಿಕ್ಷಣವನ್ನು ಮುಖ್ಯವಾಗಿ ಕಲಿಸಲಾಗುತ್ತದೆ. ವ್ಯಾಜ್ಯಗಳನ್ನು ಬಗೆಹರಿಸಲು ಪಂಚಾಯತಿಗಳಿರುತ್ತವೆ. ಅದು ತನಗೆ ಅಗತ್ಯವಾದ ಧಾನ್ಯ, ತರಕಾರಿ, ಹಣ್ಣು ಹಂಪಲುಗಳನ್ನು ತಾನೆ ಬೆಳೆದುಕೊಳ್ಳುತ್ತವೆ. ಖಾದಿಯನ್ನು ತಯಾರಿಸುತ್ತದೆ. ಇದು ನನ್ನ ಕಲ್ಪನೆಯ ಮಾದರಿ ಗ್ರಾಮ”[೭೪]

೧೯೮೪ ಡಿಸೆಂಬರ್ ೨ ರ ರಾತ್ರಿ ಭೂಪಾಲಿನ ಯೂನಿಯನ್ ಕಾರ್ಬೈಡ್ ಕಾರ್ಖಾನೆಯಲ್ಲಿ ಮಿಥೈಲ ಐಸೋಸಯನೇಟ್ ವಿಷಾನಿಲಗಾಳಿಯಲ್ಲಿ ಸೇರಿ ೨ ಲಕ್ಷಕ್ಕೂ ಹೆಚ್ಚು ಜನರಿಗೆ ದುಷ್ಪರಿಣಾಮ ಉಂಟಾಗಿ ಮೂರು ಸಾವಿರಕ್ಕೂ ಹೆಚ್ಚು ಸಾವುಗಳಾಗಿ ಬದುಕುಳಿದವರು ವಿಚಿತ್ರ ರೀತಿಯ ಕಾಯಿಲೆಗೆ ಗುರಿಯಾಗಿದ್ದಾರೆ. ಹಾಗೂ ಇನ್ನು ಮುಂದಿನ ತಲೆಮಾರಿನಲ್ಲಿ ಸಹ ಅಲ್ಲಿ ಹುಟ್ಟುವ ಮಕ್ಕಳು ಅಂಗವಿಕಲರಾಗಿಯೂ ಬುದ್ಧಮಾಂಧ್ಯರಾಗಿಯೂ ಇರುತ್ತಾರೆ. ಭಾರತದ ಗ್ಯಾಸಛೇಂಬರ ಎಂದೆ ಹೆಸರಾದ ಚಂಬೂರ, ಕಲ್ಕತ್ತ, ದೆಹಲಿ, ಮದ್ರಾಸ, ಬೆಂಗಳೂರು, ಮುಂಬಯಿ, ವಿಶಾಖಪಟ್ಟಣ, ಮಂಗಳೂರು ಹೀಗೆ ವಿವಿಧ ಬೃಹತ್ ಕೈಗಾರಿಕಾ ನಗರಗಳು ಹೆಚ್ಚಾಗಿ ವಾಯುಮಾಲಿನ್ಯಕ್ಕೆ ಕಾರಣವಾಗಿದೆ.

ಲಕ್ಷಾಂತರ ವರ್ಷಗಳಲ್ಲಿ ನಿಧಾನವಾಗಿ ವಿಕಾಸವಾಗಿ ರೂಪುಗೊಂಡಿರುವ ವಿಶಿಷ್ಟ ಪರಿಸರ ವ್ಯವಸ್ಥೆಗಳೇ ಅರಣ್ಯಗಳು ಇವು ಮಾನವ ಮತ್ತು ಪ್ರಾಣಿಗಳ ಸಂಕುಲಕ್ಕೆ ಅಪಾರವಾದ ಕೊಡುಗೆಯನ್ನು ನೀಡಿವೆ.

---

೭೩(ಅಡಿಟಿಪ್ಪಣಿ:೭೩: ಜಾಗತೀಕ ಚರಿತ್ರೆ ಬಿ.ಆರ್.ನಾಗರಾಜ ಪುಟ ಸಂಖ್ಯೆ-೩೪)
೭೪(ಅಡಿಟಿಪ್ಪಣಿ:೭೪: ಮೂಲ ಕಲೆಕ್ಟೆಡ್ ವರ್ಕ್ಸ್ ಆಫ್ ಮಹಾತ್ಮಗಾಂಧಿ ಸಂಪುಟ ೬೪ ನವದೆಹಲಿ ೧೯೭೬ ಪು.ಸಂ.೨೧೯ ಜಾಗತೀಕ ಚರಿತ್ರೆ [illegible] ೩೫)

ವೈವಿಧ್ಯಮಯವಾದ ಜೀವಿಗಳ ವಿಕಾಸಕ್ಕೆ ನಿಸರ್ಗಕ್ಕೆ ಪ್ರಯೋಗಾಲಯಗಳಾದ ಅರಣ್ಯಗಳಿಂದ ಜೀವಿಗಳ ಉಸಿರಾಟಕ್ಕೆ ಬೇಕಾದ ಆಮ್ಲಜನಕ ಉರುವಲು ಸೌದೆ ಕೈಗಾರಿಕಾ ಕಚ್ಚಾ ಪಧಾರ್ಥಗಳು ರಾಳಗೊಂದು, ತೈಲ ಔಷಧಿಗಳು ಮತ್ತು ಗಂಗಾ ಬ್ರಹ್ಮಪುತ್ರ, ಕಾವೇರಿ, ತುಂಗಾ ನದಿಗಳ ಉಗಮಕ್ಕೆ ಕಾರಣವಾದ ಅರಣ್ಯಗಳು ಅನಂತ ಉತ್ಪನ್ನಗಳು ನಿಧಿಕೂಪಗಳು.

ಚಿಪ್ಕೋ ಚಳುವಳಿಯ ಸ್ಫೂರ್ತಿಯಿಂದ ಅಪ್ಪಿಕೊ ಚಳುವಳಿಯು ಕರ್ನಾಟಕದಲ್ಲಿ ೧೯೮೩ ರಲ್ಲಿ ಪ್ರಾರಂಭವಾಯಿತು. ಶಿರ್ಸಿ, ಸಿದ್ದಾಪುರು, ಸಾಗರ ತಾಲ್ಲೂಕಗಳಲ್ಲಿ ಜನ ಮರ ಕಡಿಯುವುದರ ವಿರುದ್ಧ ಮರಗಳನ್ನು ಅಪ್ಪಿಕೊಂಡು ನಿಂತರು. ಇದೇ ಕರ್ನಾಟಕದ ಅಪ್ಪಿಕೊ ಚಳುವಳಿಯಾಯಿತು. ಎಕೆರೆಗೆ ಎರಡು ಮರ ಕಡಿಯಬೇಕಾಗಿದ್ದ ಕಂಟ್ರಾಕ್ಟರ್ ೭೦ ಮರಗಳನ್ನು ಕಡಿದು ಅರಣ್ಯನಾಶ ಮಾಡುವುದನ್ನು ಈ ಗುಂಪು ಪತ್ತೆ ಹಚ್ಚಿದೆ. ಪಾಂಡುರಂಗ ಹೆಗಡೆ ಈ ಚಳುವಳಿಯ ನೇತೃತ್ವವಹಿಸಿದರು. ಬೆಡ್ತಿಯಲ್ಲಿ ನಡೆದ ವಿಚಾರ ಗೋಷ್ಠಿಯನು ಕರ್ನಾಟಕದ ಪರಿಸರವಾದಿಗಳ ವುಡಸ್ಟಾಕ್ ಎಂದೇ ಹೇಳಬೇಕು. ಡಾ. ಶಿವರಾಮಕಾರಂತ ಡಾ ಕುಸಮಾ ಸೊರಬ, ಡಾ॥ ವಂದನಾಶಿವ, ಡಾ॥ ಜಯಂತ ಬಂದೋಪಾಧ್ಯಾಯ, ಕೆ.ಎ. ಹೆಗಡೆ ಮಂಜುನಾಥ ಹೊಸ್ತೋಟ, ರವಿಶರ್ಮಾ, ಪಾಂಡುರಂಗ ಹೆಗಡೆ ಇವರೆಲ್ಲರ ಚಿಂತನೆ ಚರ್ಚೆ ತಿರುಗಾಟದ ಲೇಖನ ಭಾಷಣ ಯಕ್ಷಗಾನ ಎಲ್ಲವೂ ಪರಿಸರ ಮುಖಿಯಾಗಲು ಈ ಸಮ್ಮೇಳನ ನೆಲೆಗಟ್ಟನ್ನೂ ಒದಗಿಸಿಕೊಟ್ಟಿತೆಂದೂ ಹೇಳಬಹುದು.

ವಿಕಾಸದ ಶ್ರೇಣಿಯಲ್ಲಿ ಅತ್ಯಂತ ಕೆಳಮಟ್ಟದಲ್ಲಿರುವ ವೈರಸ್ಸಿನಿಂದ ಹಿಡಿದು ಮಾನವವರೆಗೂ ಎಲ್ಲ ಜೀವಿಗಳಲ್ಲಿರುವುದೂ ಅದೇ ಪ್ರೋಟಿನುಗಳು ಅದೇ ಸಕ್ಕರೆ ಮತ್ತು ವಂಶವಾಹಿ ವಸ್ತು ಡಿ.ಎನ್.ಎ. ಅಷ್ಟೇ ಅಲ್ಲ ವಾಸ್ತವವಾಗಿ ವಿಜ್ಞಾನಿಗಳಿಗಿಂದು ತಿಳಿದಿರುವ ಮೂವತ್ತು ಲಕ್ಷಕ್ಕೂ ಹೆಚ್ಚು ಪ್ರಭೇದಗಳ ಸೂಕ್ಷ್ಮಾಣು ಜೀವಿಗಳು ಸಸ್ಯಗಳು ಹಾಗೂ ಪ್ರಾಣಿಗಳು ಒಂದೇ ಮೂಲದಿಂದ ಪ್ರಾರಂಭವಾಗಿ ಮೂರುವರೆ ಶತಕೋಟಿ ವರ್ಷಗಳ ವಿಕಾಸ ಕ್ರಿಯೆಯಲ್ಲಿ ಈ ಸ್ಥಿತಿಗೆ ಬಂದು ಮುಟ್ಟಿವೆ ವಿಕಾಸಕ್ರಿಯೆ ಇಂದಿಗೂ ನಡೆದಿದೆ. ಈ ಏಕಮೂಲ ಗುಣದಿಂದಾಗಿ ಯಾವುದೇ ಜೀವಿ ಇತರೆ ಜೀವಗಳು ಉತ್ಪಾದಿಸುವ ರಸಾಯನಿಕ ವಸ್ತುಗಳನ್ನು ಅರಗಿಸಿಕೊಳ್ಳುವ ಸಾಮರ್ಥ್ಯವನ್ನು ಪಡೆದಿದೆ. ಆದರೆ ಮಾನವ ಉತ್ಪಾದಿಸುತ್ತಿರುವ ಕೈಗಾರಿಕಾ ರಸಾಯನಿಕ ವಸ್ತುಗಳು ಈ ಗುಂಪಿಗೆ ಸೇರಿಲ್ಲ. ಹೀಗಾಗಿ ಈ ರಾಸಾಯನಿಕ ವಸ್ತುಗಳನ್ನು ಜೀವಿಗಳು ಜೀರ್ಣಿಸಲಾರವು.

ಈ ಸಂಯೋಜಿತ ರಾಸಾಯನಿಕ ಪದಾರ್ಥಗಳು ನಿಸರ್ಗದ ಜೀವಿಗಳಿಗೆ ವಿಷವಾಗಿ ಪರಿಣಮಿಸಿ ತೀವ್ರ ಅಸಮತೋಲನಕ್ಕೆ ಕಾರಣವಾಗುತ್ತದೆ. ಮಾನವ ನಿರ್ಮಿತ ಸಂಯೋಜಿತ ರಸಾಯನಿಕ ವಸ್ತುಗಳನ್ನು ಇತರ ಜೀವಿಗಳು ಅರಗಿಸಿಕೊಳ್ಳಲಾರವು. ಕೆಲವೊಂದು ಜೀವಿಗಳೂ ಇಂತಹ ಅನ್ಯ ರಾಸಾಯನಿಕ ವಸ್ತುವನ್ನು ಎದುರಿಸಿ ಬಾಳುವ ಸಾಮರ್ಥ್ಯವನ್ನೂ ತೋರಿಸಿವೆ.

ಉದಾಹರಣೆಗೆ ಡಿ.ಡಿ.ಟಿಯನ್ನು ಬಳಸಿದಾಗ ಸೊಳ್ಳೆಗಳು ಸಾಯುತ್ತಿದ್ದವು. ಆದರೆ ಆ ಸೊಳ್ಳೆಗಳು ಇಂದು ಡಿ.ಡಿ.ಟಿಯ ವಿರುದ್ಧ ನಿರೋಧ ಶಕ್ತಿಯನ್ನು ಸಂಪಾದಿಸಿಕೊಂಡಿವೆ. ಮಲೇರಿಯಾ ಪರೋಪಜೀವಿಗಳು ಅದೇ ರೀತಿ ಕ್ಲೆನೈನ್ ವಿರುದ್ಧ ನಿರೋಧ ಶಕ್ತಿಯನ್ನು ಬಳಸಿಕೊಂಡಿವೆ. ಹೀಗಾಗಿ ಹೊಸ ಹೊಸ ರಸಾಯನಿಕ

ಪದಾರ್ಥಗಳನ್ನು ಸಂಯೋಜಿಸುವುದಕ್ಕಿಂತ ಪರಿಸರವನ್ನು ಸುಧಾರಿಸುವ ಮೂಲಕ ಕೀಟಗಳ ವಿರುದ್ಧ ಹೋರಾಡುವುದು ಹೆಚ್ಚು ಜಾಣತನವಾಗುತ್ತದೆ. ಈ ದೃಷ್ಟಿಯಿಂದ ಸೊಳ್ಳೆಗಳು ವೃದ್ಧಿಯಾಗುವ ನಿಂತ ನೀರಿನ ಪ್ರದೇಶಗಳನ್ನು ನಿಯಂತ್ರಿಸುವುದರ ಮೂಲಕವಾಗಿ ಮಲೇರಿಯಾ ರೋಗಕ್ಕೆ ಶಾಶ್ವತ ಪರಿಹಾರವನ್ನು ಕಂಡುಕೊಳ್ಳಬೇಕೇ ವಿನಹ ಡಿ.ಡಿ.ಟಿಯ ವಿಪೂಲ ಬಳಕೆಯಿಂದಲ್ಲ. ಜೀವಿಗಳ ಕ್ರಿಯಾತ್ಮಕ ಸ್ವಭಾವದಿಂದ ಈ ರೋಗಾಣುಗಳ ಕಾಲಕಳೆದಂತೆ ಹೊಸ ತಳಿಯನ್ನು ರೋಗಪೀಡಿತವನ್ನಾಗಿ ಮಾಡುತ್ತವೆ. ಯಾವುದೇ ಹೊಸ ತಳಿಯಾಗಲಿ ಅದು ಐದರಿಂದ ಹದಿನೈದು ವರ್ಷಗಳಷ್ಟು ಮಾತ್ರ ತನ್ನ ರೋಗ ನಿರೋಧಕ ಶಕ್ತಿಯನ್ನು ಉಳಿಸಿಕೊಳ್ಳಬಲ್ಲದು. ಈ ಅವಧಿಯಾದ ಮೇಲೆ ಅದಕ್ಕೆ ಹೊಸದಾದ ರೋಗ ನಿರೋಧಕ ಶಕ್ತಿಯನ್ನು ನೀಡಬೇಕಾದರೆ ಪ್ರಕೃತಿಯಲ್ಲಿ ತಾನೇ ತಾನಾಗಿ ಲಭ್ಯವಿರುವ ರೋಗ ಮುಕ್ತ ಪ್ರಭೇದಗಳಿಂದ ಮಾತ್ರಸಾಧ್ಯ. ಉದಾಹರಣೆಗೆ ಕೆಲವು ವರ್ಷಗಳ ಹಿಂದೆ ಆಗ್ನೇಯ ಏಷ್ಯಾದಲ್ಲಿ ಅಧಿಕ ಇಳುವರಿ ನೀಡುತ್ತಿದ್ದ ಭತ್ತದ ತಳಿಯೊಂದಕ್ಕೆ ಬ್ರೌನಲೀಫ್ ಹಾಫರ ಎಂಬ ಕೀಟವೊಂದರ ಬಾಧೆ ಪ್ರಾರಂಭವಾಯಿತು. ಕಿಟದ ತೀವ್ರ ಹಾವಳಿಯಿಂದಾಗಿ ಇಡಿ ಆಗ್ನೇಯ ಏಷ್ಯಾದಲ್ಲೆ ಭತ್ತದ ಬೆಳೆ ನಾಶವಾಗಿ ಹೋಗಬಹುದೆಂಬ ಆತಂಕ ವ್ಯಕ್ತವಾಯಿತು. ಈ ಕೀಟದ ಹಾವಳಿಯನ್ನು ತಡೆಯಬಲ್ಲ ತಳಿಗಾಗಿ ತ್ವರಿತಗತಿಯ ಶೋಧನೆ ಪ್ರಾರಂಭವಾಯಿತು. ಕಡೆಗೆ ಕೇರಳದ ಪಟ್ಟಾಭಿ ಎಂಬ ಭತ್ತದ ತಳಿಗೆ ಈ ಕೀಟದ ಹಾವಳಿ ತಡೆಯಬಲ್ಲ ಸಾಮರ್ಥ್ಯವಿರುವುದು ಬೆಳಕಿಗೆ ಬಂದಿತು. ಇದರಿಂದಾಗಿ ಸಸ್ಯ ಮತ್ತು ಪ್ರಾಣಿಗಳ ವೈವಿಧ್ಯತೆಯನ್ನು ಸಂರಕ್ಷಿಸಬೇಕಾದ ಮಹತ್ವವನ್ನು ಸ್ಪಷ್ಟವಾಗಿ ತೋರಿಸುತ್ತದೆ.

ಅನಿಲಗಳ ಪ್ರಮಾಣವೂ ಮಾನವನ ಪ್ರಾಣಿಗಳ ಮತ್ತು ಸಸ್ಯಗಳ ಬದುಕಿಗೆ ಮುಖ್ಯ. ಎಲ್ಲ ಜೀವಿಗಳಿಗೂ ಆಮ್ಲಜನಕಬೇಕು, ಉಸಿರಾಟದ ಮೂಲಕವಾಗಿ ದೇಹಕ್ಕೆ ಸೇರಿದ ಆಮ್ಲಜನಕ ಸಕ್ಕರೆ ಪದಾರ್ಥಗಳನ್ನು ವಿಭಜಿಸಿ ಜೈವಿಕ ಕ್ರಿಯಗಳಿಗೆ ಅಗತ್ಯವಾಗಿ ಬೇಕಾಗುವ ಶಕ್ತಿಯನ್ನು ಒದಗಿಸುತ್ತದೆ. ಆಮ್ಲಜನಕದ ಪ್ರಮಾಣ ಕಡಿಮೆಯಾದರೆ ಅಥವಾ ಗಾಳಿ ಮಲೀನಗೊಂಡರೆ ಉಸಿರಾಟದಲ್ಲಿ ತೊಂದರೆ ಕಂಡುಬರುತ್ತದೆ. ಗಾಳಿಯಲ್ಲಿರುವ ಇಂಗಾಲಾಮ್ಲವನ್ನು ಹಸಿರು ಸಸ್ಯಗಳು ದ್ಯುತಿ ಸಂಶ್ಲೇಷಣ ಕ್ರಿಯೆಗೆ ಬಳಸಿಕೊಳ್ಳುತ್ತದೆ. ಈ ಭೂಮಿಯ ಮೇಲಿರುವ ಸಮಸ್ತ ಇಂಗಾಲ ಸಂಯುಕ್ತ ವಸ್ತುಗಳು ಉತ್ಪಾದನೆಗೂ ದ್ಯುತಿ ಸಂಶ್ಲೇಷಣೆ ಕ್ರಿಯೆಯಿಂದ ಉತ್ಪತ್ತಿಯಾಗುವ ಸಕ್ಕರೆಯೇ ಮೂಲಾಧಾರ, ಸಸ್ಯಗಳ ಬೆಳವಣಿಗೆಗೆ ಸಾರಜನಕವೂ ಬೇಕು. ಆದರೆ ವಾಯು ಮಂಡಲದಲ್ಲಿರುವ ಸಾರಜನಕವನ್ನು ಸಸ್ಯಗಳು ನೇರವಾಗಿ ಬಳಸಿಕೊಳ್ಳಲಾರವು. ಹಲವು ಸಸ್ಯಗಳ ಬೇರುಗಳಲ್ಲಿರರುವ ಸೂಕ್ಷ್ಮಾಣು ಜೀವಿಗಳು ಈ ಕೆಲಸವನ್ನು ನಿರ್ವಹಿಸಿ ವಾಯುಮಂಡಲದಲ್ಲಿರುವ ಸಾರಜನಕವನ್ನು ಸಸ್ಯಗಳಿಗೆ ಬೇಕಾದ ರೂಪಕ್ಕೆ ಪರಿವರ್ತಿಸುತ್ತವೆ.

ಬಟ್ಟೆ, ಬಣ್ಣಗಳು, ಔಷಧ, ಸಾಬೂನು, ರಾಸಾಯನಿಕ ಗೊಬ್ಬರಗಳು, ಪೆಟ್ರೋಲಿಯಂ ಉತ್ಪನ್ನಗಳು ತೈಲ ಸಂಸ್ಕರಣಾ ಕೇಂದ್ರಗಳು ಮುಂತಾದ ಕೈಗಾರಿಕೆ ಕಾರ್ಖಾನೆಗಳಿಂದ ಹೊರಬರುವ ಪರಿಷ್ಕರಿಸಿದ ಅನಿಲಗಳಿಂದ ವಾಯುಮಂಡಲ ತೀವ್ರಗತಿಯಲ್ಲಿ ಮಲೀನವಾಗುತ್ತಿದೆ. ಇಂಗಾಲ ಡೈಆಕ್ಸೈಡ ಪ್ರಮಾಣ ಹೆಚ್ಚಿದಂತೆ ಸೂರ್ಯನ ಶಾಖ ಭೂಮಿಗೆ ಮುಟ್ಟದಂತೆ ಅದು ತಡೆಯುತ್ತದೆ. ಇದರಿಂದ ಕ್ರಮೇಣ ಭೂಮಿಯ ತಾಪ ಇಳಿದು ಸಾಗರಗಳು ಹೆಪ್ಪುಗಟ್ಟುವ ಹೊಸ ಶೀತಲ ಯುಗ ಪ್ರಾರಂಭವಾಗಬಹುದೆಂಬ ನಿರೀಕ್ಷೆಯೂ ಇದೆ. ಈ ಎರಡು

ಸಾಧ್ಯತೆಗಳಿಂದಲೂ ತೀವ್ರ ಪರಿಣಾಮಕಾರಿಯೆಂಬುದು ಸುಳ್ಳಲ್ಲ. ರಸಾಯನಿಕ ಉದ್ಯಮಗಳ ವಿಷಯದಲ್ಲಿ ನಮ್ಮಲ್ಲಿ ಸಾಕಷ್ಟು ಭಾನಗಡಿ ನಡೆದು ಹೋಗಿವೆ. ಭೂಪಾಲ ದುರಂತವನ್ನು ನಾವು ಮರೆಯುವ ಹಾಗಿಲ್ಲ. ಬೀದರ ಪಟ್ಟಣದ ಅಂಚಿನಲ್ಲಿ ಸ್ಥಾಪಿಸಲಾದ ಕೆಲವು ಔಷಧ ಉತ್ಪಾದನಾ ಘಟಕಗಳು ಕೆಲಸ ಆರಂಭಿಸಿದ ಎರಡೇ ವರ್ಷಗಳಲ್ಲಿ ಅಲ್ಲಿನ ಕೆರೆಯಲ್ಲಿ, ಹೊಲದಲ್ಲಿ, ಬಾವಿಯಲ್ಲಿ, ಚರಂಡಿಯಲ್ಲಿ ವಿಷ ತುಂಬಿತ್ತು ಹಸು ಎಮ್ಮೆಗಳು ಸತ್ತಿದ್ದವು. ಗಿಡಮರಗಳು ಸೀದು ಕರಕಲಾಗಿದ್ದವು. ಕಬ್ಬಿನ ರಸ ಕುದಿಸಿದರೆ ಬೆಲ್ಲವೆ ಆಗುತ್ತಿರಲಿಲ್ಲ. ಗಲಾಟೆ ಎದ್ದು ತನಿಖೆ ನಡೆಸಿ ಎಲ್ಲ ಕಾರ್ಖಾನೆಗಳನ್ನು ಮುಚ್ಚಿಸಬೇಕಾಯಿತು. ಹೊಸಪೇಟೆಯ ಬಳಿ ಹುಲಗಿ ಎಂಬಲ್ಲಿ ಗಂಧಕಾಮ್ಲ ತಯಾರಿಸುವ ಘಟಕವೊಂದು ತನ್ನ ಸುತ್ತ ಹೀಗೆ ವಿಷ ಹಬ್ಬಿಸಿ ಕೊನೆಗೆ ಜನರ ಪ್ರತಿಭಟನೆಗೆ ಮಣಿದು ಆಸಿಡ್ ಉತ್ಪಾದನೆ ನಿಲ್ಲಿಸಬೇಕಾಯಿತು. ದೊಡ್ಡ ಬಳ್ಳಾಪುರದ ಔಷಧ ತಯಾರಿಕ ಘಟಕವೂ ಹೀಗೆ ಗಲಾಟೆಗೆ ಸಿಕ್ಕಿತು.

ಭೂಮಿಯ ಸುತ್ತ ದಟ್ಟವಾಗಿ ಹಬ್ಬಿರುವ ವಾಯುಮಂಡಲ ನೆಲದಿಂದ ಸುಮಾರು ಸಾವಿರ ಕಿಲೋಮೀಟರುಗಳವರೆಗೂ ವಿಸ್ತರಿಸಿದೆ. ಭೂಮಿಯ ಶೇಕಡಾ ೭೦ ಭಾಗ ಸಾಗರಗಳ ನೀರಿನಿಂದ ಆವೃತ್ತವಾಗಿದೆ. ಈ ಸಾಗರಗಲ್ಲಿ ಅತ್ಯಂತ ಆಳವಾದದ್ದು ಶಾಂತ ಸಾಗರ ಒಂದು ಜಾಗದಲ್ಲಿ ಇದರ ಆಳ ಸುಮಾರು ೧೧ ಕಿ.ಮೀಟರಗಳು ಸಾಗರದ ಈ ಆಳದಿಂದ ವಾಯುಮಂಡದಲ್ಲಿ ಸುಮಾರು ಐದು ಕಿ.ಮೀಟರಗಳವರೆಗೆ ಜೀವಿಗಳು ಹರಡಿವೆ. ನೆಲದಲ್ಲಿ ಸುಮಾರು ಎರಡು ಕಿ.ಮೀ.ಗಳವರೆಗೂ ಜೀವಿಗಳನ್ನು ಕಾಣಬಹುದು ದಪ್ಪದ ವಲಯವನ್ನು ಜೀವಮಂಡಲ ಬಯೋಸ್ಫಿಯರ ಎನ್ನುತ್ತಾರೆ. ೧೨,೮೦೦ ಕಿ.ಮೀಟರುಗಳ ವ್ಯಾಸದ ಭೂಮಿಯ ಬೃಹತ್ ಗಾತ್ರಕ್ಕೆ ಹೋಲಿಸಿದರೆ ೧೬ ಕಿ.ಮೀಟರುಗಳ ಜೀವಮಂಡಲ ಅತ್ಯಂತ ತೆಳುಪದರವಿದ್ದಂತೆ ಭೂಮಿ ಕಿತ್ತಳೆಯ ಹಣ್ಣಾದರೆ ಜೀವಿಗಳಿಗೆ ಆಶ್ರಯ ನೀಡಿರುವ ಜೀವಮಂಡಲ ಕಿತ್ತಳೆ ಹಣ್ಣಿನ ಸಿಪ್ಪೆಯಂತೆ!

ಇಡಿ ಜೀವಿ ಸಮುದಾಯವೇ ಪರಾವಲಂಬಿಯಾಗಿದೆ. ಎಲ್ಲವು ತನ್ನಿಂದ ತಾನೆಯಾದ ಜೀವಿಯು ತನಗೆ ಬೇಕಾದುದೆಲ್ಲವನ್ನೂ ಪೂರೈಸಿಕೊಳ್ಳುವುದಿಲ್ಲ ಅದಕ್ಕಾಗಿ ಒಂದು ಜೀವಿ ಇನ್ನೊಂದರ ಮೇಲೆ ಪರಾವಲಂಬನೆಯಾಗಿರುವುದರಿಂದ ಅನ್ಯೋನ್ಯ ಸಂಬಂಧ ಸಹಕಾರಗಳು ಅಗತ್ಯವಾಗಿರಬೇಕು ಅಂದಾಗ ಸಮಾಜದ ಏಳಿಗೆ ಸಾಧ್ಯವಾಗುತ್ತದೆ.

ಉದಾಹರಣೆಗೆ: ಮನೆಗಳಲ್ಲಿ ಬೆಂಕಿ ಕಡ್ಡಿಗಳನ್ನು ಬಳಸುತ್ತೇವೆ ಈ ಬೆಂಕಿ ಕಡ್ಡಿಗಳಿಗಾಗಿ ನಾವು ಪಕ್ಷಿಗಳ ಮೇಲೆ ಅವಲಂಬಿತರಾಗಿದ್ದೇವೆ ಎನ್ನುವುದನ್ನು ನಾವು ಮರೆಯುವಂತಿಲ್ಲ ಮತ್ತು ಬೆಂಕಿ ಕಡ್ಡಿಯನ್ನು ತಯಾರಿಸಲು ಎಲ್ಲ ಮರಗಳನ್ನು ಬಳಸುವಂತಿಲ್ಲ ಅದಕ್ಕಾಗಿ ಬಳಸುವ ಮರ ಮೆದುವಾಗಿರಬೇಕು. ಕಡ್ಡಿಗಳಾಗಿ ಸೀಳುವಂತಿರಬೇಕು. ನಿಧಾನವಾಗಿ ಉರಿಯುವ ಗುಣವಿರಬೇಕು. ಈ ಎಲ್ಲ ಗುಣಗಳು ಇರುವ ಮಗಳು ಬಳವಿಲ್ಲ. ಇವುಗಳಲ್ಲಿ ಒಂದು ಕೆಂಪು ಬೂರಗದ ಮರ ಸಾಮಾನ್ಯವಾಗಿ ಬೆಂಕಿ ಕಡ್ಡಿಯ ತಯಾರಿಕೆಯಲ್ಲಿ ಈ ಮರವನ್ನೇ ಬಳಸುತ್ತಾರೆ. ಕೆಂಪು ಬೂರಗದಲ್ಲಿ ಪರಾಗಸ್ಪರ್ಶಕ್ರಿಯೆ ನಡೆಯುವುದು ಪಕ್ಷಿಗಳಿಂದ ಹೀಗಾಗಿ ಹೂವು ಕಾಯಿಕಟ್ಟಿ ಬೀಜವಾಗಿ ಬೀಜ ಪ್ರಕೃತಿಯಲ್ಲಿ ಹರಡಿ ಹೊಸ ಮರಗಳಾಗಿ ಬೆಳೆಯಬೇಕಾದರೆ ಪಕ್ಷಿಗಳ ಸಹಾಯ ಬೇಕೇ ಬೇಕು. ಇದೇ ರೀತಿ ಸಸ್ಯ ಪ್ರಪಂಚದ ಲಕ್ಷಾಂತರ ಪ್ರಭೇದಗಳಲ್ಲಿ ಪರಾಗ ಸ್ಪರ್ಶವಾಗಿ ಸಂತಾನೋತ್ಪನ್ನ

ನಡೆಯಲು ಪಕ್ಷಿ, ದುಂಬಿ, ಚಿಟ್ಟೆ ಹಾಗೂ ಇನ್ನಿತರ ಅಸಂಖ್ಯಾತ ಕೀಟಗಳು ನೆರವು ಅತ್ಯಗತ್ಯವಾಗುತ್ತದೆ. ಈ ಜೀವಿಗಳಿಗೆ ಆಹಾರವಾಗಿ ಮಕರಂದ ದೊರೆಯುತ್ತದೆ. ಈ ಅನ್ಯೋನ್ಯ ಸಂಬಂಧದಿಂದ ಪ್ರಾಣಿ ಮತ್ತು ಸಸ್ಯಗಳೆರಡಕ್ಕೂ ಲಾಭವುಂಟು.

ಹುಲ್ಲನ್ನು ಆಹಾರವಾಗಿ ಸೇವಿಸುವ ಜೀವಿಗಳ ಹೊಟ್ಟೆಯಲ್ಲಿ ವಿಶೇಷವಾದ ಸೂಕ್ಷ್ಮಾಣು ಜೀವಿಗಳಿವೆ. ಒಂದು ಘನ ಸೆಂಟಿಮೀಟರಿನಲ್ಲಿ ಒಂದೂವರೆಯಿಂದ ಎರಡು ಕೋಟಿಗಳಷ್ಟಿರುವ ಈ ಸೂಕ್ಷ್ಮಾಣು ಜೀವಿಗಳು ಹುಲ್ಲಿನಲ್ಲಿರುವ ಸೆಲ್ಯೂಲೋಸನ್ನು ವಿಭಜಿಸಬಲ್ಲ. ವಿಶೇಷ ಕಿಣ್ವಗಳನ್ನು ಸ್ರವಿಸುತ್ತವೆ. ಸೆಲ್ಯೂಲೋಸನ್ನು ವಿಭಜಿಸುವುದರೊಡನೆ ಈ ಜೀವಿಗಳು ಗ್ಲೂಕೊಸ್, ಆಮಿನೋ ಆಮ್ಲ, ಕೊಬ್ಬಿನಾಮ್ಲಗಳನ್ನೂ ಉತ್ಪಾದಿಸುತ್ತವೆ. ಯಾವುದೇ ಕಾರಣದಿಂದ ಈ ಸೂಕ್ಷ್ಮಾಣು ಜೀವಿಗಳು ನಾಶವಾದರೆ ಪ್ರಾಣಿ ಹುಲ್ಲನ್ನು ತಿಂದರೆ ಅದು ಜೀರ್ಣವಾಗುವುದಿಲ್ಲ ತಾನು ಪಡೆದ ಆಹಾರ ರಕ್ಷಣೆಗಳಿವೆ ಪ್ರತಿಯಾಗಿ ಈ ಸೂಕ್ಷ್ಮಾಣು ಜೀವಿಗಳು ತಮಗೆ ರಕ್ಷಣೆ ನೀಡಿದ ಜೀವಿಗಳಿವೆ ನೆರವಾಗುತ್ತವೆ.

ಅರಣ್ಯಗಳು ತ್ವರಿತಗತಿಯಲ್ಲಿ ಕಣ್ಮರೆಯಾಗುತ್ತಿರುವುದರಿಂದ, ಸಸ್ಯಗಳು ಹೆಚ್ಚಿನ ಪ್ರಮಾಣದ ಇಂಗಾಲದ ಡೈಆಕ್ಸೈಡನ್ನು ಬಳಸಿಕೊಳ್ಳುವುದು ಸಾಧ್ಯವಿಲ್ಲ. ಇದರಿಂದ ಸಮತೋಲ ಏರುಪೇರಾಗಿ ಹೆಚ್ಚಿನ ಪ್ರಮಾಣದ ಇಂಗಾಲದ ಡೈ ಆಕ್ಸೈಡ್ ವಾಯುಮಂಡಲದಲ್ಲಿ ಉಳಿಯುತ್ತದೆ. ಭೂಮಿಯಿಂದ ಪ್ರತಿಫಲಿತವಾಗಿ ಭೂಮಿಯ ತಾಪ ನಿಧಾನವಾಗಿ ಏರುತ್ತದೆ. ಇದನ್ನು ಹಸಿರು ಮನೆ ಪರಿಣಾಮ (ಗ್ರೀನ್ ಹೌಸ ಎಫೆಕ್ಟ್) ಎನ್ನುತ್ತಾರೆ. ಕ್ರಿ.ಶ. ೨೦೩೦ ರ ವೇಳೆಗೆ ಈ ಪರಿಣಾಮದಿಂದ ಭೂಮಿಯ ತಾಪ ೨° ಯಿಂದ ೩°ಸೆಲ್ಸಿಯಸನಷ್ಟು ಏರುವ ಸಾಧ್ಯತೆಯನ್ನು ವಿಜ್ಞಾನಿಗಳು ಗುರುತಿಸಿದ್ದಾರೆ.

ಓಜೋನ ವಾಯುಮಂಡಲದಲ್ಲಿರುವ ಒಂದು ಅನಿಲ. ಭೂಮಿಯಿಂದ ಸುಮಾರು ೩೦ ಕಿ.ಮೀ.ಗಳ ಎತ್ತರದಲ್ಲಿ ಓಜೋನ ಅನಿಲದ ಪದರವೊಂದಿದೆ. ಈ ಪದರು ತೆಳುವಾದರೂ ಅದರ ಕೆಲಸ ಮಾತ್ರ ಬಲು ಹಿರಿದು. ಭೂಮಿಯಲ್ಲಿರುವ ಸರ್ವ ಸಮಸ್ತ ಜೀವರಾಶಿಗಳನ್ನೂ ಸೂರ್ಯನ ಅತಿನೀಲ ಕಿರಣಗಳಿಂದ ಈ ಪದರು ರಕ್ಷಿಸುತ್ತದೆ. ಹೆಚ್ಚಿನ ಭಾಗವನ್ನು ತಡೆದು ಅವಶ್ಯಕವಾದಷ್ಟನ್ನು ಮಾತ್ರ ಭೂಮಿಯತ್ತ ಬಿಡುತ್ತದೆ. ಇಂಗಾಲದ ಡೈ ಆಕ್ಸೈಡ ಮತ್ತು ಓಜೋನ ಅನಿಲಗಳ ನಡುವೆ ಸೂಕ್ಷ್ಮ ಸಮತೋಲ ವ್ಯವಸ್ಥೆಯೊಂದು ವಾಯುಮಂಡಲದಲ್ಲಿದೆ. ಇಂಗಾಲದ ಡೈಆಕ್ಸೈಡ ಪ್ರಮಾಣ ಹೆಚ್ಚಿದಂತೆ ಓಜೋನಿನ ಪ್ರಮಾಣ ಕಡಿಮೆಯಾಗುತ್ತದೆ. ಓಜೋನಿನ ಪ್ರಮಾಣ ಕಡಿಮೆಯಾದರೆ ಭೂಮಿಗೆ ಬರುವ ಅತಿನೀಲ ಕಿರಣಗಳ ಪ್ರಮಾಣ ಏರಿ ಪ್ರಾಣಿ ಸಸ್ಯಗಳೆರಡಕ್ಕೂ ಅಪಾಯ ಸಂಭವಿಸುತ್ತದೆ. ಓಜೋನಿನ ಲಕ್ಷ ಚರ್ಮದ ಕ್ಯಾನ್ಸರ ಪ್ರಕರಣಗಳು ಹೊಸದಾಗಿ ಕಾಣಿಸಿಕೊಳ್ಳುತ್ತವೆಂದು ಅಮೇರಿಕಾದ ಪರಿಸರ ಸಂರಕ್ಷಣಾ ಸಂಸ್ಥೆ ವರದಿ ಮಾಡಿದೆ.

ಓಜೋನಿನ ಪ್ರಮಾಣ ಕಡಿಮೆಯಾಗುತ್ತಿರುವುದಕ್ಕೆ ಮತ್ತೊಂದು ಮುಖ್ಯ ಕಾರಣವೂ ಇದೆ. ಪ್ರಪಂಚದಾದ್ಯಂತ ರೇಫ್ರಿಜರೇಟರುಗಳಲ್ಲಿ ಹವಾನಿಯಂತ್ರಿಕಗಳಲ್ಲಿ ತುಂತುರು ಡಬ್ಬಿಗಳಲ್ಲಿ ಪ್ಲಾಸ್ಟಿಕ್ ನೊರೆಗಳಲ್ಲಿ ಹಾಗೂ ಕಂಪ್ಯೂಟರಗಳನ್ನು ಶುಚಿ ಮಾಡಲು ಕ್ಲೋರೋಫ್ಲೋರೋ ಕಾರ್ಬನ ಎಂಬ ಅನಿಲವನ್ನು ಬಳಸಲಾಗುತ್ತಿದೆ. ಇದರ ಬಳಕೆ ಪ್ರಾರಂಭವಾದ್ದು ೧೯೩೦ರಲ್ಲಿ ಆಗ ಆ ಅನಿಲ ಉಳಿಯಬಲ್ಲದೆಂದು

ಪ್ರಖ್ಯಾತವಾಗಿತ್ತು. ಆದರೆ ಇಂದಿನ ಪರಿಸ್ಥಿತಿಯೇ ಬೇರೆ ವಾಯುಮಂಡಲಕ್ಕೆ ಸೇರಿದ ಈ ಅನಿಲ ಅತಿ ನೀಲಕಿರಣಗಳೊಡನೆ ವರ್ತಿಸಿ ಕ್ಲೋರಿನನ್ನು ಬಿಡುಗಡೆ ಮಾಡುತ್ತದೆ. ಇದು ೮೦-೯೦ ವರ್ಷಗಳ ಕಾಲ ಪ್ರತಿಯೊಂದು ಅಣುವೂ ಒಂದು ಲಕ್ಷ ಓಜೋನ ಅಣುಗಳನ್ನು ನಾಶಗೊಳಿಸುತ್ತಿವೆಯೆಂದು ಸಂಶೋಧನೆಗಳು ತಿಳಿಸಿಕೊಡುತ್ತವೆ.

ರೋಗ ರುಜಿನಗಳ ವಿರುದ್ಧ ನಾವು ಬಳಸುತ್ತಿರುವ ಔಷಧಿಗಳಲ್ಲಿ ಶೇಕಡಾ ೫೦ಕ್ಕೂ ಹೆಚ್ಚು ಭಾಗ ನಮಗೆ ದೊರೆಯುವುದು ಸಸ್ಯಗಳಿಂದ ಆದರೆ ನಾವು ಪರಿಸರ ಒಳಪಡಿಸಿರದ ಲಕ್ಷಾಂತರ ಸಸ್ಯಗಳು ಪ್ರಕೃತಿಯಲ್ಲಿ ೧೯೬೦ ರಲ್ಲಿ ರಕ್ತದ ಕ್ಯಾನ್ಸರಿಗೆ ಒಳಗಾದ ಮಗುವೊಂದು ಬದುಕುವ ಸಾಧ್ಯತೆಯಿದ್ದದ್ದು ಕೇವಲ ಶೇಕಡಾ ೩೦ ರಷ್ಟು ಮಾತ್ರ, ಆದರೆ ಉಷ್ಣವಲಯದ ಅರಣ್ಯದಲ್ಲಿ ದೊರೆತ ನಿತ್ಯಪುಷ್ಪದ ಗುಂಪಿಗೆ ಸೇರಿದ ಸಸ್ಯವೊಂದರಿಂದ ತಯಾರಿಸಿದ ವಿನಕ್ರಿಸ್ಟಿನ್ ಎಂಬ ಔಷಧಿಯಿಂದ ಅದೇ ಮಗುವನ್ನು ಬದುಕುವ ಸಾಧ್ಯತೆ ಶೇಕಡಾ ೮೦ಕ್ಕೇರಿದೆ. ಅಮೇರಿಕಾದ ರಾಷ್ಟ್ರೀಯ ಕ್ಯಾನ್ಸರ ಸಂಸ್ಥೆ ಕ್ಯಾನ್ಸರ ರೋಗಕ್ಕೆ ಮದ್ದು ಕಂಡು ಹಿಡಿಯಲು ೨೯,೦೦೦ ಸಸ್ಯಗಳನ್ನು ಪರೀಕ್ಷಿಸಿದೆ. ಇದರಲ್ಲಿ ೩೦೦೦ ಸಸ್ಯಗಳು ಆಶಾದಾಯಕ ಫಲಿತಾಂಶ ನೀಡಿದ್ದು ಕಡೆಗೆ ಐದು ಸಸ್ಯಗಳು ವಿನಕ್ರಿಸ್ಟನಗೆ ಸರಿಸಮವಾಗಬಲ್ಲ ಔಷಧವನ್ನು ನೀಡುವ ಸಾಧ್ಯತೆಯಿದೆ. ಪ್ರಪಂಚದಾದ್ಯಂತ ಜನನ ನಿಯಂತ್ರಣಕ್ಕಾಗಿ ೮ ಕೋಟಿ ಮಹಿಳೆಯರು ಬಳಸುತ್ತಿರುವ ಮಾತ್ರೆ ಯೊಂದರ ಮೂಲ ಮೆಕ್ಸಿಕೋದ ಅರಣ್ಯದ ಒಂದು ಸಸ್ಯ.

ಪ್ರಕೃತಿಯಲ್ಲಿನ ವೈವಿಧ್ಯ ಆಪದ್ಧನವಿದ್ದಂತೆ ಕಷ್ಟಕಾಲದಲ್ಲಿ ನಮ್ಮನ್ನು ರಕ್ಷಿಸುವ ಅಮೂಲ್ಯ ನಿಧಿಯಿದ್ದಂತೆ. ಇಂತಹ ನಿಧಿಯನ್ನು ಹಾಳು ಮಾಡದೆ ಕಾಪಾಡಿಕೊಂಡು ಬರುವುದು ಅವಶ್ಯಕವಾಗಿದೆ. ಅರಣ್ಯವನ್ನು ಸಂಪೂರ್ಣವಾಗಿ ನೆಲಸಮಮಾಡಿ ಕೃಷಿ ಭೂಮಿಗೆ ಒಳಪಡಿಸಲಾಗುತ್ತದೆ. ಇದರಿಂದ ಆಹಾರದ ಉತ್ಪಾದನೆ ಹೆಚ್ಚಾಯಿತು. ನಿಜ ಆದರೆ ತಾತ್ಕಾಲಿಕ ಮಾತ್ರ ಅರಣ್ಯನಾಶದಿಂದ ಮಣ್ಣಿನ ಸವಕಳಿ ಹೆಚ್ಚಾಯಿತು ಇದರಿಂದಾಗಿ ಎದುರಿಸುತ್ತಿರುವ ಸಮಸ್ಯೆ ತೀವ್ರವಾದದ್ದು ಆಹಾರ ಉತ್ಪಾದನೆ ಹೆಚ್ಚಿಸಲು ಅರಣ್ಯ ಕಡಿಮೆ ಕೃಷಿ ಭೂಮಿಯನ್ನಾಗಿಸಿದರೆ ಸಾಲದು ನೀರಾವರಿ ಸೌಲಭ್ಯಕ್ಕಾಗಿ ಅಣೆಕಟ್ಟುಗಳನ್ನು ನಿರ್ಮಿಸಲಾಗಿದೆ. ಆದರೆ ಮಳೆಗಾಲದಲ್ಲಿ ಕೊಚ್ಚಿ ಬರುವ ಮೇಲ್ಮಣ್ಣು ಈ ಜಲಾಶಯಗಳಲ್ಲಿ ಸೇರಿ ಜಲಾಶಯಗಳ ಆಯಸ್ಸು ಕಡಿಮೆ ಮಾಡುತ್ತಿದೆ. ಮಳೆಗಾಲದಲ್ಲಿ ದೊರೆಯುವ ಅಪಾರ ಪ್ರಮಾಣದ ನೀರನ್ನು ಅರಣ್ಯಗಳು ಹಿಡಿದಿಟ್ಟು ಅನಂತರ ನಿಧಾನವಾಗಿ ನೂರಾರು ಕಿರುತೊರೆ ನದಿಗಳಲ್ಲಿ ಸಾಮಾನ್ಯವಾಗಿ ಬತ್ತುವುದಿಲ್ಲ. ಪಾಳು ಭೂಮಿಯಲ್ಲಿ ಕಳೆ ಒತ್ತಾಗಿದ್ದಲ್ಲಿ ಕಳೆನಾಶಕಗಳಿಂದ, ವಿರಳವಾಗಿದ್ದಲ್ಲಿ ಕೈಯಿಂದ ಕಿತ್ತು ನಾಶಪಡಿಸಬಹುದು ಕೈಯಿಂದ ಕೀಳುವಾಗ ಕೈಗೆ ಚೀಲ ಹಾಕಿಕೊಂಡು ಗಿಡಗಳನ್ನು ಕೀಳುವುದು ಅತ್ಯಾವಶ್ಯಕ.

ಅಂತರಗಂಗೆ ಇಲ್ಲವೆ ಕೆಲವು ಕಡೆ ಕರೆಯುವಂತೆ ಬುಡ್ಡೆಸೊಪ್ಪುಕೆರೆ, ಕುಂಟೆ ಕಾಲುವೆ ಇಂತಹ ನೀರು ನಿಲ್ಲುವೆಡೆ ಬೆಳೆಯುವ ಮಾರಕ ಕಳೆ ಇದರಿಂದ ಹೊರ ಹೊಮ್ಮುವ ಸಮಸ್ಯೆಗಳು ಅನೇಕ ವಿಸ್ತಾರವಾದ ಸರೋವರದಲ್ಲಿ ಜಲಮಾರ್ಗಕ್ಕೆ ಅಡಚಣೆ ಜಡಲೋಹಗಳ ಅತಿಯಾದ ಶೇಖರಣೆ ತತ್ಫಲವಾಗಿ ಅಂತಹ ನೀರು ಕುಡಿಯಲು ಅನರ್ಹವಾಗುವುದು. ಕೆರೆ ಕುಂಟೆಗಳ ನೀರು ಧಾರಣಾ ಶಕ್ತಿಯ ಇಳಿತ ಭೂಮಿಗಳಿಗೆ. ನೀರಿನ ಅಭಾವ ಇತ್ಯಾದಿ, ಇದರಿಂದ ಸಂತಾನ ಅಭಿವೃದ್ಧಿ ಸಾಮರ್ಥ್ಯ ಅಸಾಧಾರಣ. ಸಮಸ್ಯೆಗಳ ಸರಮಾಲೆಯನ್ನೇ

ತಂದೊಡ್ಡುತ್ತದೆ. ಕಳೆ ಕಂಡಾಕ್ಷಣ ಕಿತ್ತು ಅದನ್ನು ಕಾಂಪೋಸ್ಟಮಾಡಲು ಬಳಸಬಹುದು. ಎಮ್ಮೆಗಳಿಗೆ ಮೇವಾಗಿ ಹಾಕಬಹುದು ಆದರೆ ಈ ಕಾರಣಕ್ಕಾಗಿ ಹರಡಲು ಬಿಡಬಾರದು ಹೊರಗೆ ಇರುವ ಉಷ್ಣತೆಗಿಂತ ಕಾಡಿನೊಳಗೆ ಚಳಿಗಾಲ ರಾತ್ರಿ ದಿನಗಳಲ್ಲಿ ಉಷ್ಣತೆ ಹೆಚ್ಚಾಗಿರುತ್ತದೆಂಬುದು ಆಶ್ಚರ್ಯ ಉಂಟುಮಾಡುತ್ತದೆ. ಹೀಗಾಗಿ ಕಾಡು ಉಷ್ಣತೆಯನ್ನು ಹಾಗೂ ಅದರ ಸುತ್ತಮುತ್ತ ವಾತಾವರಣ ಹೆಚ್ಚು ಆರ್ದ್ರವಾಗಿರುತ್ತದೆ. ಇದರಿಂದಾಗಿ ತೇವಾಂಶಭರಿತ ಮೋಡಗಳು ಅರಣ್ಯ ಪ್ರದೇಶಗಳ ಮೇಲೆ ಹಾದು ಹೋಗುವಾಗ ಅವುಗಳ ಸಾಂದ್ರತೆಗೊಳ್ಳುವಂತೆ ಮಾಡುತ್ತದಷ್ಟೆ ಅಲ್ಲ ಮಳೆ ಸುರಿಸುವಂತೆ ಮಾಡುತ್ತದೆ.

ಪರಿಸರ ಪ್ರಜ್ಞೆ ಚಿಕ್ಕ ಮಕ್ಕಳಿಂದ ಪ್ರಾರಂಭಿಸಿ ಹಿರಿಯರು ಮುಖಂಡರು ಎನಿಸಿ ಕೊಳ್ಳುವವರೆಗೂ ಈ ಪ್ರಜ್ಞೆಯನ್ನು ಮೂಡಿಸುವ ಕಾರ್ಯ ಅವ್ಯಾಹತವಾಗಿ ನಡೆಯಬೇಕು. ಶಿಕ್ಷಣ ಕ್ರಮದಲ್ಲಿ ಅದು ಮುಖ್ಯ ಪಾಠವಾಗಬೇಕು. ಸ್ಥಾನಿಕ ರಾಜ್ಯಗಳ ಮತ್ತು ಕೇಂದ್ರ ಸರ್ಕಾರದ ಆಡಳಿತ ಕ್ರಮದಲ್ಲಿ ಮುಖ್ಯ ಧೋರಣೆಯಾಗಬೇಕು. ಅಭಿವೃದ್ಧಿ ಕಾರ್ಯಕ್ರಮಗಳಿಗೆ ತಳಹದಿಯಾಗಬೇಕು. ಈವರೆಗಿನ ಅಭಿವೃದ್ಧಿ ಬಹುಜನರ ಹೆಸರಿನಲ್ಲಿ ಕೆಲವರಿಗಾಗಿ ಮಾತ್ರ ಇನ್ನು ಮುಂದಿನ ಅಭಿವೃದ್ಧಿ ಬಹುಜನರಿಂದ ಬಹು ಜನರಿಗಾಗಿ ಅಲ್ಲ. ಕೆಲವರಿಗೆ ಸ್ಥಾನವಿಲ್ಲ ಎಂಬ ಧೃಢಧೋರಣೆ ಅವಶ್ಯ.

ಈ ನೆಲದಿಂದ ಮೇಲೇಳುವ ಬೆಳವಣಿಗೆಯ ವಿನ್ಯಾಸಕ್ಕೆ ಪರಿಸರದ ಪ್ರಜ್ಞೆಯ ನೀರೆರೆದು ಅದನ್ನು ಎಲ್ಲರ ಓದಿನಲ್ಲಿ ಅನುಭವದಲ್ಲಿ ಬರಿಸುವಂತೆ ಮಾಡುವುದೇ ಪರಿಸರದ ಉಳಿವಿಗೆ ಉಳಿದಿರುವ ಒಂದೆ ಮುಂದಿನ ದಾರಿ.

ಈ ವಿವೇಚನಾ ರಹಿತವಾದ ದಾಳಿಯ ಪರಿಣಾಮಗಳು ಕಾಣಿಸಿಕೊಳ್ಳಲು ಪ್ರಾರಂಭವಾದದ್ದು ಎರಡು ಮೂರು ದಶಕಗಳ ಹಿಂದೆ ಆದರೆ ಒಂದು ದಶಕದ ಅವಧಿಯಲ್ಲಿ ದುರ್ಬರ ಪರಿಣಾಮಗಳಿಗೆ ಒಳಗಾಗದೇ ಪ್ರಕೃತಿಯನ್ನು ಮನ ಬಂದಂತೆ ಬಳಸಿಕೊಳ್ಳುವುದು ಅಸಾಧ್ಯವೆಂಬ ವಿಶ್ವ ಜಾಗೃತಿ ಮೂಡಿಬಂದಿದೆ. ಮಾನವನ ಇತಿಹಾಸದಲ್ಲಿ ಇಂತಹ ಅರಿವು ಉಂಟಾಗಿರುವುದು ಇದೇ ಮೊದಲ ಬಾರಿಯೆನಲ್ಲ ಅನೇಕ ಪ್ರಾಚೀನ ನಾಗರಿಕತೆಗಳು ಈ ತತ್ವವನ್ನು ಒಪ್ಪಿಕೊಂಡು ಅದರಂತೆ ನಡೆದಿವೆ. ಸಾಮಾಜಿಕ ಅರಣ್ಯ ಯೋಜನೆಯ ಪ್ರಮುಖ ಉದ್ದೇಶವೆಂದರೆ ಜನಸಾಮಾನ್ಯರನ್ನು ಮರಗಿಡಗಳು ಬಗ್ಗೆ ಪ್ರಜ್ಞಾವಂತರವನ್ನಾಗಿ ಮಾಡುವುದು ಮತ್ತು ಅರಣ್ಯ ಬೆಳೆಸಲು ಸ್ವಯಂ ಪ್ರೇರಿತರನ್ನಾಗಿ ಮಾಡುವುದು ಹಾಗೂ ಇದರ ಇನ್ನಿತರ ಪ್ರಮುಖ ಉದ್ದೇಶಗಳೆಂದರೆ.

೧) ಜನರಲ್ಲಿ ವೃಕ್ಷ ಪ್ರಜ್ಞೆಯನ್ನು ಮೂಡಿಸುವುದು.

೨) ವ್ಯರ್ಥ ಭೂಮಿಯಲ್ಲಿ ಗಿಡ-ಮರಗಳನ್ನು ಬೆಳೆಸುವ ಮೂಲಕ ಗ್ರಾಮೀಣ ಜನರಿಗೆ ಉದ್ಯೋಗ ಕಲ್ಪಿಸುವುದು.

೩) ಭೂಸವಕಳಿಯನ್ನು ತಡೆಯುವುದು.

೪) ಗ್ರಾಮೀಣ ಜನರ ತಮ್ಮ ದಿನ ನಿತ್ಯದ ಅಗತ್ಯಗಳಿಗಾಗಿ ಸ್ವಾವಲಂಬಿಗಳಾಗುವಂತೆ ಅವರನ್ನು ಪ್ರೋತ್ಸಾಹಿಸುವುದು.

ಚಟುವಟಿಕೆಗಳಿಗೆ ಚಾಲನೆ ದೊರೆಯುವುದು ಚೈತನ್ಯದಿಂದ ಅಡುಗೆ ಮಾಡುವುದರಿಂದ ಹಿಡಿದು ಅಂತರಿಕ್ಷಯಾನದವರೆಗಿನ ಕೆಲಸ ನಿರ್ವಹಿಸಲು ಚೈತನ್ಯಬೇಕು. ದಿನದಿನಕ್ಕೂ ಹೆಚ್ಚಾಗುತ್ತಿರುವ ಚೈತನ್ಯದ ಬೇಡಿಕೆ ಪರಿಸರದ ಮೇಲೆ ಹಿಂದೆಂದೂ ಇಲ್ಲದ ಒತ್ತಡವನ್ನು ತಂದೊಡ್ಡಿದೆ. ಪರಿಸರ ಸಮತೋಲನ ಮೇಲೆ ಇದರ ಪರಿಣಾಮ ಕಂಡು ಬರತೊಡಗಿದೆ.

ಇಂದು ಅತಿ ವ್ಯಾಪಕವಾಗಿ ಬಳಕೆಯಲ್ಲಿರುವ ಚೈತನ್ಯ ವಿದ್ಯುಚ್ಛಕ್ತಿ ಇಂದು ಉತ್ಪಾದಿಸಲ್ಪಡುತ್ತಿರುವುದು ಜಲ ವಿದ್ಯುತಗಾರಗಳಿಂದ ಇದಕ್ಕೆ ಅಪಾರ ಮತ್ತು ಸಮಯಬೇಕಾದಂತೆ ಇದರಿಂದ ಮುಳುಗಡೆಯ ಸಮಸ್ಯೆಗೆ ತಕ್ಕ ಪರಿಹಾರ ಕಲ್ಪಿಸಬೇಕು.

ಉತ್ತರ ಪ್ರದೇಶದ ಅಲಹಾಬಾದ ಎಂಬಲ್ಲಿ ಕ್ರಿಕೆಟ್, ಬ್ಯಾಟು, ಸ್ಟ್ಯಾಂಪುಗಳನ್ನು ತಯಾರಿಸುವ ಕಂಪನಿ ೧೯೭೨ ರಲ್ಲಿ ಸರಕಾರದ ಅನುಮತಿ ಪಡೆದು ಗಿಡ ಕಡಿಯಲು ಬಂದಾಗ (ಚಮೋಲಿ ಜಿಲ್ಲೆ ಗೋಪೇಶ್ವರ) ಮರ ಕಡಿಯಬೇಡಿ ಮೊದಲು ನಮ್ಮನ್ನು ಕಡಿಯಿರಿ ಎಂದು ಮರ ತಬ್ಬಿಕೊಂಡರು.

ಚಿಪ್ಕೋ ಎಂದರೆ ಹಿಂದಿ ಭಾಷೆಯಲ್ಲಿ ಅಪ್ಪಿಕೋ ಅಥವಾ ತಬ್ಬಿಕೋ ಎಂದಾಗುತ್ತದೆ. ಸುಮಾರು ೩೫ ವರ್ಷಗಳ ಹಿಂದೆ ರಾಜಸ್ಥಾನದ ಜೋದಪುರ ಎಂಬಲ್ಲಿ ಅಮೃತಾದೇವಿ ಎಂಬ ಮಹಿಳೆ ಮೊಟ್ಟ ಮೊದಲು ಚಿಪ್ಕೋ ಚಳುವಳಿ ಪ್ರಾರಂಭಿಸಿ ಕೊಡಲಿಗೆ ಆಹುತಿಯಾದಳು. ಪಿಡುಗು ನಾಶಕಗಳ ವಿಪುಲ ಬಳಕೆಯನ್ನು ಕಡಿಮೆ ಮಾಡಿ ಆ ಮೂಲಕವಾಗಿ ಪರಿಸರ ಮಲೀನತೆಯನ್ನು ತಡೆಯಬಲ್ಲ ಹೊಸ ವಿಧಾನವೊಂದು ಇತ್ತೀಚಿಗೆ ಬಳಕೆಗೆ ಬರುತ್ತಿದೆ. ಇದೇ ಜೈವಿಕ ನಿಯಂತ್ರಣ ಪ್ರತಿಯೊಂದು ಕ್ರಿಮಿಕೀಟ ಪ್ರಾಣಿ ಪಕ್ಷಿಗಳಿಗೂ ಅದರದೇ ಆದ ವೈರಿ ಇರುತ್ತದೆ. ಅವುಗಳನ್ನು ಗುರುತಿಸಿ ಪತ್ತೆಹಚ್ಚಿ ಬಳಸುವುದರಿಂದ ಪಿಡುಗು ನಾಶಕಗಳನ್ನು ಬಳಸದೆಯೇ ಕ್ರಿಮಿ ಕೀಟಗಳನ್ನು ಹತೋಟಿಯಲ್ಲಿಡಬಹುದು. ಉದಾಹರಣೆಗೆ ಇಲಿಗಳ ನಿಯಂತ್ರಣಕ್ಕೆ ಇಲಿ ಪಾಷಾಣವನ್ನೇ ಬಳಸಬೇಕೆಂದಿಲ್ಲ ಹಾವು ಮತ್ತು ಹಕ್ಕಿಗಳು ಈ ಕೆಲಸ ಮಾಡಬಲ್ಲವು.

ಇಂತಹ ಪರಿಹಾರ ಎಲ್ಲಾ ಸಂದರ್ಭಗಳಲ್ಲೂ ಸಿಗುವುದಿಲ್ಲ ಇದು ಸಾಧ್ಯವಾದರೆ ಪರಿಸರದಲ್ಲಿ ಬೆರೆಯುತ್ತಿರುವ ವಿಷ ಪದಾರ್ಥಗಳ ನಿಯಂತ್ರಣಕ್ಕೆ ಅತ್ಯಂತ ಯಶಸ್ವಿಯಾದ ಪರಿಹಾರ ದೊರೆತಂತೆ ಆಗುತ್ತದೆ.

ನೆಲ, ಜಲ ಅಗ್ನಿ, ವಾಯು, ಆಕಾಶ ಇವುಗಳ ಪಂಚಭೂತಗಳೆಂದು ಕರೆದುದಲ್ಲದೆ ಇವುಗಳನ್ನು ಉಪಯೋಗಿಸುವಾಗಲು ಗೌರವ ಸೂಚಿಸಿ ಅವುಗಳನ್ನು ಪೂಜಿಸುತ್ತಿದ್ದರು ಪ್ರಾಚೀನರು. ಈ ನೈಸರ್ಗಿಕ ಅಂಶಗಳು ಕುರಿತು ಜನಪದರ ನಂಬಿಕೆಗಳು ಇಂತಿವೆ.

೧) **ಭೂಮಿಯನ್ನು ಪೂಜಿಸುವುದು :**

ಜನನಿ ಜನ್ಮಭೂಮಿ ಸ್ವರ್ಗ ಸೇ ಮಹಾನ ಹೈ ಎಂಬ ನಂಬಿಕೆ ಹೊಂದಿರುವ ಜನಪದರು ಭೂಮಿಯನ್ನು ನಮ್ಮ ಸಲಹುವ ತಾಯಿ, ಸರಿಯನ್ನು ಬೆಳೆಸುವ ಶ್ರೀದೇವಿ ಎಂದು ಗೌರವಿಸುವುದುಂಟು, ಕೃಷಿ ಕೆಲಸ ಮೊದಲು ಗೊಂಡು ಮನೆ, ಬಾವಿ ಹಾಗೂ ಪ್ರತಿಯೊಂದು ಕಟ್ಟಡ ಕಟ್ಟುವಾಗಲೂ ಭೂಮಿಗೆ ಹಾಲು ತುಪ್ಪವಾಕಿ ಪೂಜಿಸಿಯೇ ಕೆಲಸ ಆರಂಭಿಸುವರು.

ಆಧುನಿಕ ಜನತೆಯ ದುರಾಸೆಯಿಂದಾಗಿ ಭೂಮಿಯ ಫಲವತ್ತತೆ ಉಳಿಸಿಕೊಳ್ಳಲು ಬಿಡುತ್ತಿಲ್ಲಾ ಕಾಡುಗಳನ್ನು ನಾಡು ಕೃಷಿ ಕೈಗಾರಿಕೆ ಹಾಗೂ ಇನ್ನಿತರ ಉಪಯೋಗಕ್ಕಾಗಿ ಬಳಸಿಕೊಳ್ಳುತ್ತಿದ್ದಾರೆ. ಭೂ ಸಂರಕ್ಷಣೆಯ ಕ್ರಮ ಕೈಗೊಳ್ಳದಿದ್ದರೆ ಅಳಿವು ಖಂಡಿತ ಎನ್ನುವುದು ಮರೆಯಲಾಗದ ಮಾತಾಗಿದೆ. ಆದ್ದರಿಂದ ಕೇವಲ ಗೌರವ ಸೂಚಕ ಪೂಜೆಗಿಂತಲೂ ಭೂಮಿಯ ಫಲವತ್ತತೆ ಕಾಯ್ದುಕೊಳ್ಳುವ ಕಾಡು ಬೆಳೆಸುವ ನಿಸರ್ಗ ಉಳಿಸುವ ಕರ್ತವ್ಯಪಾಲಿಸಬೇಕಾಗಿದೆ.

**೨) ರುದ್ರಾಕ್ಷಿ, ತುಳಸಿ ಮಣಿ, ತಾವರೆ ಬೀಜ ಮೊದಲಾದವುಗಳಿಂದ ಮಣಿ ಧರಿಸುವುದು :**

ಈ ಹಿಂದಿನ ಪೂರ್ವಜರು ಅಲಂಕಾರಕ್ಕಾಗಿ ಸಮುದ್ರ ದಂಡೆಯಲ್ಲಿ ಲಭ್ಯವಿರುತಿದ್ದ ಕವಡೆ, ಶಂಕು ಕಪ್ಪೆ ಚಿಪ್ಪು, ಹವಳ ಮುತ್ತು ಇವೇ ಮೊದಲಾದ ವಸ್ತುಗಳಿಂದ ತಯಾರಿಸಿದ ಆಭರಣಗಳನ್ನೂ ಮತ್ತು ಗುಡ್ಡಗಾಡು ಪ್ರದೇಶಗಳಲ್ಲಿ ವಾಸಿಸುತ್ತಿದ್ದ ಆನೆ ದಂತ ಹುಲಿ ಉಗರು ಪ್ರಾಣಿಗಳ ಕೊಂಬು ಪಕ್ಷಿಗಳ ಗರಿ, ಶಿಲಾಮಣಿಗಳು, ಮರವನ್ನಾಗಲೀ, ಬೀಜವನ್ನಾಗಲೀ ಕೊರೆದು ತಯಾರಿಸಿದ ಮಣಿಗಳು ಇವೇ ಮೊದಲಾದ ವಸ್ತುಗಳಿಂದ ತಯಾರಿಸಿದ ಆಭರಣಗಳನ್ನು ಧರಿಸುತ್ತಿದ್ದರೆಂದು ಹೇಳಬಹುದು.

**೩) ಗೋವನ್ನು ಕೊಲ್ಲಬಾರದು :**

ಭಾರತಿಯ ಸಂಪ್ರದಾಯದಲ್ಲಿ ಗೋವಧೆ, ನಿಷೇಧವಿದೆ. ಏಕೆಂದರೆ ಈ ಹಿಂದಿನಿಂದಲೂ ಗೋವನ್ನು ದೇವರೆಂದು ಪೂಜಿಸುವ ಧಾರ್ಮಿಕ ನಂಬಿಕೆಯಿಂದಾಗಿ, ಹಸುವಿನ ಹಾಲು ನಮ್ಮ ಮಕ್ಕಳ ಬೆಳವಣಿಗೆಗೆ ಅತ್ಯಾವಶ್ಯಕ, ಬೆಣ್ಣೆ ಮತ್ತು ತುಪ್ಪ ಮನುಷ್ಯನಿಗೆ ಅಗತ್ಯವಾಗಿರಬೇಕು. ಹೆಣ್ಣು ಕರಗಳಿಗೆ ಜನ್ಮವಿತ್ತರೆ ಕ್ಷಿರೋತ್ಪನ್ನ ಹೆಚ್ಚಲು ದಾರಿಯಾಗುವುದು ಹಸು ಗಂಡು ಕರುಗಳಿಗೆ ಜನ್ಮವಿತ್ತರೆ ವ್ಯವಸಾಯದ ಕೆಲಸಗಳಿಗೆ ಹೆಚ್ಚು ಉಪಯೋಗವಾಗುವುದು ಇದರಂತೆ ಎಮ್ಮೆ, ಮೇಕೆ, ಕುರಿ, ಕುದುರೆ, ಕತ್ತೆ ಇವುಗಳೆಲ್ಲ ಉಪಕಾರಿ ಪ್ರಾಣಿಗಳು ಈ ಯಾವುದೇ ಪ್ರಾಣಿಯ ವಧೆ ಮಾಡದೆ ಸಕಲ ಪ್ರಾಣಿಗಳಲ್ಲಿ ದಯೆ ತೋರುವುದೇ ನಿಜವಾದ ಮಾನವಧರ್ಮ :

**೪) ಶವಸಂಸ್ಕಾರ ಪದ್ಧತಿ :**

ಮೃತ ಶರೀರವನ್ನು ನಿರ್ಧಿಷ್ಟ ಪ್ರದೇಶದಲ್ಲಿ ಹೂಳುವ ಪದ್ಧತಿ ಬಹುಪಾಲು ಜನರಲ್ಲಿ ವಾಡಿಕೆಯಲ್ಲಿದೆ. ಮೃತ ಶರೀರದ ಮೇಲಿನ ವ್ಯಾಮೋಹ ಈ ಪದ್ದತಿಗೆ ಕಾರಣವಾಗಿರಬಹುದು; ಆದರೆ ಈ ಪದ್ದತಿಯಿಂದ ಸಮಾಜಕ್ಕೆ ಬಹಳಷ್ಟು ಹಾನಿಯುಂಟು ಭೂಮಿಯ ನಿಜವಾದ ಉಪಯೋಗದಿಂದ ಜನವಂಚಿತರಾಗುವರು. ಸಾಂಕ್ರಮಿಕ ರೋಗಕ್ಕೆ ತುತ್ತಾಗಿ ಮರಣ ಹೊಂದಿದರೆ ಆ ರೋಗಕ್ಕೆ ಕಾರಣವಾದ ಜೀವಾಣುಗಳು ಮಣ್ಣಿನಲ್ಲಿ ಬೆರೆತು ನೀರು ಮತ್ತು ಗಾಳಿಯ ಮೂಲಕ ಸ್ಥಳದಿಂದ ಸ್ಥಳಕ್ಕೆ ಹರಡುವ ಸಾಧ್ಯತೆಯುಂಟು. ಮೃತ ದೇಹವನ್ನು ನಾಯಿ ನರಿಗಳು ಗುಂಡಿಯಿಂದ ಹೊರಕ್ಕೆ ಎಳೆದು ಹಾಕುವ ಸಂಭವವುಂಟು. ಕೊಳೆಯುತ್ತಿರುವ ದೇಹವು ಈ ರೀತಿಯಾಗಿ ಬಯಲಿಗೆ ಬೀಳುವ ಕಾರಣ ದುರ್ಗಂಧವು ಆ ಪ್ರದೇಶದಲ್ಲಿ ಹರಡಿ ವಾಯುವು ಮಲೀನವಾಗುವುದು ಈ ದೃಷ್ಟಿಯಿಂದ ನೋಡಿದರೆ ಮೃತ ಶರೀರವನ್ನು ಸುಡುವುದೇ ಲೇಸು.

**೫) ಪಕ್ಷಿಗಳ ನೀರು ಮತ್ತು ಆಹಾರಕ್ಕಾಗಿ ಪಾತ್ರೆಗಳನ್ನಿಡುವುದು :**

ಆಹಾರ ಸೇವಿಸುವ ಮೊದಲು ದೇವರ ಅಥವಾ ಪ್ರಾಣಿ ಪಕ್ಷಿಗಳ ಹೆಸರಿನಲ್ಲಿ ಮೊದಲು ತುತ್ತು ತೆಗೆದಿಡುವ ನಂಬಿಕೆಯಿದೆ. ಹೀಗೆ ಇತರ ಪ್ರಾಣಿ ಪಕ್ಷಿಗಳಲ್ಲಿ ದಯೆ ತೋರುವ ಮನೋಭಾವನೆಯಿಂದಾಗಿ

ಜನರು ಪಕ್ಷಿಗಳಾಗಿ ನೀರು-ಆಹಾರ ಹಾಕಲು ಒಂದು ಅಗಲವಾದ ಪಾತ್ರೆ ಅಂಗಳದಲ್ಲಿ ಕಟ್ಟಿರುವುದು. ಸಹಜವಾಗಿ ಹಾರಾಡುವ ಪಕ್ಷಿಗಳು ಇದನ್ನು ಕಂಡಾಗ ನೀರು ಆಹಾರ ಸೇವಿಸುವುದು. ಇದು ಅವುಗಳ ದಿನನಿತ್ಯದ ರೂಢಿಯಾಗಿರುತ್ತದೆ. ಹೀಗೆ ಬರುವ ಕಾಗೆ ಗುಬ್ಬಿಗಳಂತೆ ಪಕ್ಷಿಗಳಿಂದಾಗಿ ಮನೆಯಲ್ಲಿ ಒಣಗಿಸಲು ಹಾಕಿರುವ ಕಾಳಿನಲ್ಲಿರುವ ಹುಳು ಹುಪ್ಪಟೆಗಳು ಸಹ ಆಯ್ದು ತಿನ್ನುತ್ತವೆ.

**೬) ಊಟಕ್ಕೆ ಕುಳಿತಾಗ ಕಾಗೆಗೆ ಅನ್ನ ಹಾಕಬಾರದು :**

ಕಾಗೆಯು ಕಪ್ಪಾಗಿರುವುದರಿಂದಲೇನೋ ಮುಟ್ಟಿಸಿಕೊಳ್ಳಬಾರದೆಂಬ ನಂಬಿಕೆಯು ಇದೆ. ಹಾಗೆಯೇ ಕಾಗೆಗೆ ಅನ್ನ ಹಾಕಬಾರದೆಂಬ ನಂಬಿಕೆಯು ಇದೆ. ಕಾಗೆ ಒಂದಗುಳ ಕಂಡರೆ ತನ್ನ ಬಳಗವನ್ನೆಲ್ಲಾ ಕರೆಯುವುದು ಹರಿದು ಹಂಚಿಕೊಂಡು ತಿನ್ನುವ ಸ್ವಭಾವ ಕಾಗೆಯಲ್ಲಿರುವುದು. ಕಾಗೆಯ ಈ ಸಹಕಾರ ಮನೋಭಾವ ಗುರುತಿಸದ ಜನರು ಅದಕ್ಕೆ ಆಹಾರ ಕೊಟ್ಟರೆ ತನ್ನಲ್ಲಿರುವುದೆಲ್ಲಾ ಖಾಲಿಯಾಗುವವರೆಗೆ ಬಿಡುವುದಿಲ್ಲ ಎನ್ನುವ ಸ್ವಾರ್ಥತೆಯಿಂದ ಅದನ್ನು ಹತ್ತಿರ ಬಾರದಂತೆ ಈ ನಿಷೇಧ ನಂಬಿಕೆ ರೂಢಿಯಲ್ಲಿರಬೇಕು.

**೭) ಗುಬ್ಬಿ ನೀರಿನಲ್ಲಿ ಆಟವಾಡಿದರೆ ಮಳೆ ಬರುತ್ತದೆ :**

ಮಳೆಗಾಲದ ಆರಂಭದಲ್ಲಿ ಕೃಷಿಕರು ಮಳೆಯ ಬರುವಿಗಾಗಿ ಆಕಾಶವನ್ನು ನೋಡುತ್ತಲೆ ಇರುವರು. ಹಾಗೆಯೇ ಅವರ ಸುತ್ತಲು ಇರುವ ಪ್ರಾಣೀ ಪಕ್ಷಿಗಳ ಚಲನವಲನದಿಂದಾಗಿಯೂ ಮಳೆ ಬರುವುದಾಗಿ ನಂಬಿಕೆಯಿಟ್ಟಿದ್ದರು. ಗುಬ್ಬಿ ಸಹಜವಾಗಿ ಹಾರುತ್ತ ಓಡಾಡುವ ಪಕ್ಷಿ ಇದು ತನ್ನ ಓಡಾಟ ಬಿಟ್ಟು ನೀರು ಕಂಡಲ್ಲಿ ಅಪರೂಪವಾಗಿ ತನ್ನ ಚಿಕ್ಕ ಕಾಲುಗಳಿಂದ ನೀರನ್ನು ಬಡಿಯುತ್ತಾ ಆಟವಾಡುವುದನ್ನು ಕಂಡು ಜನರು ಗುಬ್ಬಿ ನೀರಿನಲ್ಲಿ ಆಟವಾಡಿದೆ ಮಳೆ ಬರುತ್ತದೆಂದು ನಂಬಿರುತ್ತಿದ್ದರು.

ಅದೇ ರೀತಿಯಾಗಿ ಕಪ್ಪೆ ವದರಿದರೂ ಮಳೆ ಬರುತ್ತದೆಂಬ ನಂಬಿಕೆಯೂ ಇದೆ.

**೮) ಬಾರೆ ಗಿಡದ ಬಳಕೆ ಅಶುಭ ಎಂದ ನಂಬಿಕೆ :**

ಚಳಿಗಾಲ ಆರಂಭಿಸಿದಂತೆ ಹುಳಿ ಹುಳಿಯಾಗಿರುವ ಬಾರೆ ಹಣ್ಣು ಬಾಯಿ ಚಪ್ಪರಿಸಿ ತಿನ್ನುವುದುಂಟು ಆದರೆ ಈ ಗಿಡಕ್ಕೆ ಮುಳ್ಳು ಇರುವುದರಿಂದ ಗಿಡಕ್ಕೆ ಮಾತ್ರ ತಿರಸ್ಕಾರ ಬಾಗಿಲಿಗೆ ಬಾರಿಯ ಮುಳ್ಳು ಬಡಲಿ (ಹಾಳಾಗಲಿ) ಎಂದು ಶಪಿಸುವ ರೂಢಿ ಇಂದಿಗೂ ಇದೆ. ಅಶುಭ ಪರಿಹಾರಕ್ಕೆ ಮನೆಯನ್ನು ಬಿಡುತ್ತಾರೆ. ಆ ಸಮಯದಲ್ಲಿ ಮನೆಯ ಬಾಗಿಲಿಗೆ ಬಾರಿಯ ಮುಳ್ಳು ಬಡಿಯುವುದೊಂದು ಆಚರಣೆ ಹಳ್ಳಿಗಳಲ್ಲಿ ಇದಿನ್ನೂ ಜೀವಂತವಾಗಿದೆ. ಆದ್ದರಿಂದ ಬಾರಿಯ ಕಟ್ಟಿಗೆ ಮನೆಯ ಹೊಸ್ತಿಲ ಮಾಡಿಸುವುದಕ್ಕೂ ಉಪಯೋಗಿಸುವುದಿಲ್ಲ.

ಆದರೆ ಗುಲಾಬಿ ಗಿಡವು ಮುಳ್ಳಿನಿಂದ ಕೂಡಿದ್ದರು ಅದನ್ನು ಮನೆಯಲ್ಲಿ ಬೆಳೆಯುವುದು ರೂಢಿಯಲ್ಲಿದೆ. ಬಾರೆಗಿಡದ ಮುಳ್ಳು ಚುಚ್ಚಿದರೆ ವಿಪರೀತ ನೋವು ಉಂಟಾಗುವುದರಿಂದ ಇದರಿಂದ ದೂರವಾಗಿರಲು ಈ ಗಿಡದ ಉಪಯೋಗದ ಬಗ್ಗೆ ತಿರಸ್ಕಾರ ಇದ್ದಿರಬೇಕು.

**೯) ಬನ್ನಿ ವೃಕ್ಷವನ್ನು ಪೂಜಿಸುವುದು :**

ಬನ್ನಿ ಮರವನ್ನು ಹೊಲದ ಮಧ್ಯಭಾಗದಲ್ಲಿರುವುದು ಬನ್ನಿಯನ್ನು ಮಹಾಕಾಳಿಯ ಅವತಾರವೆಂದು ಪರಿಗಣಿಸಲಾಗುತ್ತದೆ. ಪಾಂಡವರು ಬನ್ನಿಯ ಎಲೆಯ ಪತ್ರೊಳಿ ಮಾಡಿ ಉಂಡು ವನವಾಸಕ್ಕೆ ಹೋದುದನ್ನು

ತ್ರಿಪದಿಯೊಂದು ತಿಳಿಸುತ್ತದೆ. ಹೋಗುವಾಗ ತಮ್ಮ ಆಯುಧಗಳನ್ನು ಈ ಶಮೀ ತಾಯಿಯ ಬಸಿರಲ್ಲಿ ಬಚ್ಚಿಟ್ಟು ಹೋದರಂತೆ ಮರಳಿ ಬಂದು ತಮ್ಮ ವಿಜಯೋತ್ಸವವನ್ನು ಈ ಮರದ ಪೂಜೆ ಮಾಡಿ ಆಚರಿಸಿದರಂತೆ, ಅದರ ಸಂಕೇತವಾಗಿ ವಿಜಯ ದಶಮಿಯಂದು ಈ ಬನ್ನಿ ಗಿಡಕ್ಕೆ ವಿಶೇಷ ಪೂಜೆ ಸಲ್ಲಿಸುತ್ತಾರೆ. ಪ್ರತಿಯೊಬ್ಬರು ಹೊಲದಲ್ಲಿ ಅದನ್ನು ಲಕ್ಷ್ಮೀ ಗಿಡವೆಂದು ಪೂಜಿಸುತ್ತಾರೆ. ಅದರ ಹತ್ತಿರವೇ ಕಣ ಮಾಡುತ್ತಾರೆ. ಈ ಗಿಡದ ಕೆಳಗಡೆ ಪಾಂಡವರೆಂದು ಐದು ಕಲ್ಲುಗಳನ್ನಿಟ್ಟು ಪೂಜಿಸುತ್ತಾರೆ. ಈ ಗಿಡದ ಕಟ್ಟಿಗೆಯನ್ನೂ ಉರಿಯುವುದಿಲ್ಲ. ಅದನು ಮೇಟಿಯಾಗಿ ಮಾಡುತ್ತಾರೆ.

೧೦) **ಆಲ, ಅರಳಿ ಮತ್ತು ಬಸರಿ ಮರಗಳನ್ನು ಪೂಜಿಸುವುದು :**

ಆಲಕ್ಕೆ ಹೂವಿಲ್ಲ ಎಂಬ ಪ್ರಖ್ಯಾತ ಜಾನಪದ ತ್ರಿಪದಿಯೊಂದಿದೆ. ಆದರೆ ಸಸ್ಯಶಾಸ್ತ್ರದ ಪ್ರಕಾರ ಅದಕ್ಕೆ ಹೂವಿದೆ. ಆಲ, ಅರಳಿ, ಬಸರಿ ಈ ಮೂರು ಒಂದೇ ಸಸ್ಯವರ್ಗಕ್ಕೆ ಸೇರಿದ ಮರಗಳು. ಈ ಮೂರು ಗಿಡಗಳನ್ನು ನೆಡುವಾಗ ಜೊತೆಗೆ ಬೇವಿನ ಮರವನ್ನು ನೆಡುತ್ತಾರೆ. ಈ ಜೋಡಿ ಗಿಡಕ್ಕೆ ಅಶ್ವತ್ಥ ವೃಕ್ಷ ಯಾದ ಬೇವು ತನ್ನ ಹೆಸರನ್ನು ಕಳೆದುಕೊಂಡು ಅಶ್ವತ್ಥದ ಅಂಗವಾಗುತ್ತದೆ. ಆ ಆಲ (ಅಶ್ವತ್ಥ) ವಿಷ್ಣುವಿನ ಅವತಾರವೆಂಬುದು ಪುರಾಣೋಕ್ತ ವಿಷಯ. ಆಲ, ಅರಳಿ, ಬಸರಿ ಎಲ್ಲೂ ಹಾಲಿದ್ದ ಮಗಳು. ಇವುಗಳ ವಂಶಾಭಿವೃದ್ಧಿ ಬೀಜದಿಂದಲ್ಲ ಟೊಂಗೆಯಿಂದ ಇದು ಗಂಡು ಗಿಡ ಎಂದು ಪರಿಗಣಿಸಲ್ಪಟ್ಟಿರುವುದಕ್ಕೆ ಕಾರಣ ವಿಷ್ಣುವಿನ ಅವತಾರವೆಂಬ ನಂಬುಗೆ. ಇವುಗಳಿಂದ ಆರೋಗ್ಯಕ್ಕೆ ತುಂಬಾ ಪ್ರಯೋಜನಕಾರಿಯಾದ ಆಮ್ಲಜನಕವು ದೊರೆಯುತ್ತದೆ.

೧೧) **ತುಳಸಿಯ ಪೂಜೆ ಮಾಡುವುದು :**

ತುಳಸಿಯು ಒಂದು ಸಸ್ಯವಾಗಿದ್ದು ಇದಕ್ಕೆ ಪೂಜಿಸಲಾಗುವುದು. ಈ ಸಸ್ಯಕ್ಕೆ ಸಂಬಂಧಿಸಿದಂತೆ ಪೌರಾಣಿಕ ಹಿನ್ನೆಲೆಯುಂಟು. ಗಂದರ್ಭನಾದ ಶಂಕ ಚೂಡನ (ಜಲಸುಂಧರ) ಪತ್ನಿಯಾಗಿದ್ದಳು ಕೃಷ್ಣ ಮೋಸದಿಂದ ಪಾಪಕಾರ್ಯಮಾಡುವಂತೆ ಪ್ರೇರೇಪಿಸಿದನೆಂದು ಭಾವಿಸಿ ಕಲ್ಲಾಗುವಂತೆ ಶಾಪಕೊಟ್ಟಳಂತೆ ಇದನ್ನು ತಿಳಿದ ಪರಮಾತ್ಮ ಆಕೆ ಭಕ್ತಿ ಮತ್ತು ಧರ್ಮವ್ರತಗಳನ್ನು ಗಮನಿಸಿ ಪೂಜನೀಯ ಗಿಡವಾಗುವಂತೆ ಹರಿಸಿದನು. ತನ್ನ ಮರವನ್ನು ಅಲಂಕರಿಸುವಳೆಂಬ ವರವಿತ್ತ. ಗೌರಿ ವೃತ್ತದ ಪೂಜೆಯಲ್ಲಿ ತುಳಸಿ ಎಲೆ ಇಲ್ಲದ. ಪೂಜೆ ಅಪೂರ್ಣ ಹಾಗೂ ವರಲಕ್ಷ್ಮೀಯ ಪ್ರತೀಕ ಎಂಬ ನಂಬಿಕೆಯೂ ಇದೆ. ಪೌರಾಣಿಕ ಹಿನ್ನೆಲೆ ಏನೆ ಇದ್ದರೂ ಇದರ ಪೂಜೆಯ ಸಂದರ್ಭದಲ್ಲಿ ಕೆಲವು ನಿಮಿಷ ಇದರ ಮುಂದೆ ಇದ್ದು ಸುತ್ತು ಹಾಕುವವರಿಗೆ ಅದರ ವಾಸನೆಯಿಂದ ಆರೋಗ್ಯಕ್ಕೆ ಹಿತವನ್ನುಂಟು ಮಾಡುತ್ತದೆ. ತುಳಸಿ ಸಸ್ಯದ ಅಲುಗಾಡುವಿಕೆಯಿಂದ ಆಮ್ಲಜನಕ ಸಿಗುತ್ತದೆ. ತುಳಸಿ ಎಲೆಯ ಸೇವನೆಯಿಂದ ಜ್ವರ, ತಲೆನೋವು, ನೆಗದಿ, ಸೇರಿದಂತೆ ದೀರ್ಘ ಖಾಯಿಲೆಗಳಾದ ಸಿಹಿಮೂತ್ರ, ವೃಣರೋಗ, ಗೂರಲು, ತೊನ್ನು ಇತ್ಯಾದಿ ಅನೇಕ ರೋಗ ನಿವಾರಣೆಯಾಗುತ್ತದೆ. ಆದ್ದರಿಂದ ದಿನಾಲೂ ತುಳಸಿ ಎಲೆ ತಿನ್ನುವುದು ಆರೋಗ್ಯಕ್ಕೆ ಉತ್ತಮ.

ವಿಳ್ಯದೆಲೆ ಎಲ್ಲಾ ಪೂಜೆಗಳಲ್ಲಿ ಅವಶ್ಯಕವಾಗಿ ಬಳಸುವುದು: ಸಾಮಾನ್ಯವಾಗಿ ಮೇಲೆ ಅಡಿಕೆ ಇಟ್ಟಿರ ಅದೇ: ವಿಘ್ನ ನಿವಾರಕ ಗಣಪತಿಯ ಪ್ರತಿರೂಪ ಎನ್ನುವ ನಂಬಿಕೆಯಿದೆ. ವೀಳ್ಯದೆಲೆ ಅಡಿಕೆ ಇರದೆ ಯಾವುದೇ ಧಾರ್ಮಿಕ ಮತ್ತು ಮಂಗಲಕಾರ್ಯಗಳೇ ನಡೆಯುವುದಿಲ್ಲ. ಮದುವೆ ಸಂದರ್ಭದಲ್ಲಿನ ವಳ್ಳುಕಲ್ಲು ಪೂಜೆ ಮತ್ತು

ಮುತ್ತೈದಿತನ ಇಂತಹ ಕಾರ್ಯಗಳಲ್ಲಿ ಬಾಗೀಣುಕೊಟ್ಟೆಯೇ ಕಾರ್ಯ ಆರಂಭಿಸುತ್ತಾರೆ. ಕರಕಿಯ ಕುಡಿಯಂಗ ಹಬ್ಬಲಿ ಅವರ ರಸಬಳ್ಳಿ ಎನ್ನುವ ತ್ರಿಪದಿ ಸಾಲಿನಂತೆ ವೀಳ್ಯದೆಲೆಯ ಬಳ್ಳಿಯು ಹರಡಿದಂತೆ ಸಂಬಂಧದ ಬಳ್ಳಿ ಹರಡಲಿ ಎನ್ನುವ ಆಸೆ ಜನಪದರದ್ದಾಗಿರಬೇಕು. ಹಾಗೆಯೇ ಈ ಬಳ್ಳಿಯ ತೋಟದಲ್ಲಿ ಮುಟ್ಟಾದವರು (ಹೋದರೆ ಬಳ್ಳಿ ಒಣಗುಣತ್ತದೆಂಬ ನಂಬಿಕೆ) ಹೊಗದೆ ಇರುವ ಕಾರಣಕ್ಕಾಗಿ ಸೂಕ್ಷ್ಮತೆಯಿಂದ ಬೆಳೆಸಿದ ವೀಳ್ಯದೆಲೆ ದೇವರಿಗೆ ಮೀಸಲಾಗಿರಬೇಕು. ಧಾರ್ಮಿಕ ಪದ್ಧತಿಗಳಲ್ಲಿ ಬಳಸಿದ ಪೂಜ್ಯ ಭಾವನೆಯೇ ಮಂಗಳ ಕಾರ್ಯಗಳಲ್ಲಿ ಮಾಡಿಕೊಂಡು ಬಂದಿರಬೇಕು. ವೀಳ್ಯದೆಲೆಯು ತೆಗೆದುಕೊಂಡ ಮುತ್ತೈದಿ ತನ ಪತಿಯ ಹೆಸರನ್ನು ಪರಿಚಯಿಸುವಳು.

ವೀಳ್ಯದೆಲೆ ಊಟದ ನಂತರ ತಿನ್ನುವುದು ರೂಢಿಯಲ್ಲಿರುವುದು. ಇದನ್ನು ತಿನ್ನುವ ಚಟವಿದ್ದ ವಯಸ್ಸಾದವರಂತೂ ಅದು ಇರದಿದ್ದರೆ ಏನೋ ಕಳೆದುಕೊಂಡವರಂತೆ ಚಡಪಡಿಸುತ್ತಾರೆ. ಹೆಚ್ಚಾಗಿ ಸಿಗದೆ ಇರುವ ಕಾರಣದಿಂದಾಗಿ ಒಂದು ಎಲೆಯಲ್ಲಿ ಚೂರು ಚೂರಾಗಿ ಹಗಲೆಲ್ಲಾ ತಿನ್ನುವುದುಂಟು. ಇದು ತಿನ್ನುವುದರಿಂದ ಹಲ್ಲು ಹುಳು. ಬಾಯಿ ದುರ್ವಾಸನೆ ತಡೆಯುತ್ತದೆ. ಇದನ್ನು ಅಗೆಯುವುದರಿಂದ ಬಾಯಲ್ಲಿ ಲಾಲಾರಸದ ಸ್ರಾವ ಹೆಚ್ಚಿ ಪಿಷ್ಟಜೀರ್ಣಿಸಲು ಸಹಾಯಕಾರಿಯಾಗುತ್ತದೆ. ಎದೆಯಲ್ಲಿ ತುಂಬಿದ ಕಫ ಹೊರಹಾಕುತ್ತದೆ. ಲೈಂಗಿಕ ಉತ್ಸುಕತೆ ದೊರಕುವುದರಿಂದ ವಿವಾಹದ ನಂತರ ಸೇವಿಸಬೇಕೆಂಬ ನಿಯಮ ರೂಢೀಸಿಕೊಂಡಿದ್ದಾರೆ. ಹಿಂದೆ ತಾಂಬೂಲಕ್ಕೆ ಸುಣ್ಣ ಸೇರಿಸುತ್ತಿರಲಿಲ್ಲ. ಹೊಗೆ ಸೊಪ್ಪು ಬಳಸುತ್ತಿರಲಿಲ್ಲ. ಹಬ್ಬದ ರುಚಿಯಾದ ಊಟದಿಂದ ಹೊಟ್ಟೆ ಭಾರವಾಗುವುದು. ಆದ್ದರಿಂದ ಸುಣ್ಣ ಕಾಚು ಬಳಸಿದ ವೀಳ್ಯದ ತಾಂಬೂಲ ಸೇವನೆಯಿಂದ ಜೀರ್ಣವಾಗುತ್ತದೆ. ಹೀಗೆ ಇದು ಆರೋಗ್ಯಕ್ಕೆ ಉತ್ತಮ. ಅಲ್ಲದೆ ಬೆರಳ ತುದಿಯಲ್ಲಿ ಆಗುವ ಉಗುರು ಸುತ್ತ ರೋಗಕ್ಕೆ ವೀಳ್ಯದೆಲೆಯಲ್ಲಿ ಔಷಧಿ ಇಟ್ಟು ನೋವಿದ್ದ ಜಾಗಕ್ಕೆ ಕಟ್ಟುವರು. ಹೀಗೆ ಔಷಧಿಯ ಗುಣವು ಇದರಲ್ಲಿದೆ.

**೧೨) ಬೇವಿನ ಗಿಡವನ್ನು ಪೂಜಿಸುವುದು :**

ಆಲ ಅರಳಿಯ ಜೊತೆಗೆ ಅಶ್ವತ್ಥ ಕಟೆಯ ಮೇಲೆ ಬೇವು ಪೂಜೆಗೊಳ್ಳುವುದನ್ನು ನೋಡಬಹುದು. ಬೇವು ಶಕ್ತಿಯ ಅವತಾರವೆಂದು ಜಾನಪದದಲ್ಲಿ ಪರಿಗಣಿಸಲ್ಪಟ್ಟಿದೆ. ಎಲ್ಲ ಅಂಬಾಬಾಯಿಯ ಭಕ್ತರಿಗೆ ಇದು ಪವಿತ್ರ ಮರ, ಬೇವಿನ ಗಿಡದ ಕಡ್ಡಿಯನ್ನು ಹಲ್ಲು ತಿಕ್ಕಲು ಬಳಸುವುದರಿಂದ ಸ್ವಚ್ಛತೆಯೊಂದಿಗೆ. ದುರ್ವಾಸನೆ ಹೊಗಲಾಡಿಸಿ ಆರೋಗ್ಯವನ್ನು ಕಾಪಾಡುತ್ತದೆ. ಶುದ್ಧವಾದ ಆಮ್ಲಜನಕ ನೀಡುತ್ತದೆ. ಬೇವಿಗಿರುವ ರೋಗ ನಿರೋಧದ ಶಕ್ತಿಯನ್ನು ಅನಾಗರಿಕ ಹಂತದಿಂದ ಗುರುತಿಸಲಾಗಿದೆ (ಇದರ ಇನ್ನಿತರ ಉಪಯೊಗ ಕುರಿತು ಅಧ್ಯಾಯ–೪ ರಲ್ಲಿ ವಿವರಿಸಲಾಗಿದೆ).

**೧೩) ಹುಣಸೆಯ ಮರದಲ್ಲಿ ದೆವ್ವ ಇರುತ್ತವೆ :**

ಹುಣಸೆ ಮರದಲ್ಲಿ ದೆವ್ವ ಇರುತ್ತವೆನ್ನುವ ಕಾರಣಕ್ಕಾಗಿ ಮನೆಯಲ್ಲಿ ಈ ಮರ ಹಚ್ಚಬಾರದೆಂಬ ನಂಬಿಕೆಯು ಇದೆ. ಹೀಗೆ ಹೇಳಲು ಕಾರಣವೆಂದರೆ ಅದು ವಿಶಾಲವಾಗಿ ಬೆಳೆಯುವ ಮರ ಅದಕ್ಕೆ ಸಾಕಷ್ಟು ಸ್ಥಳ ಬೇಕಾಗಿರುವುದರಿಂದ ಮನೆಯಲ್ಲಿ ಹಚ್ಚಬಾರದೆಂಬ ಹೇಳಿಕೆಯಿರಬೇಕು. ಏಳು ಮಕ್ಕಳ ತಾಯಿ. ಕರೆವ್ವ ಮೊದಲಾದ ದುಷ್ಟ ಶಕ್ತಿಗಳಿಗೆ ಈ ಮರ ವಾಸಸ್ಥಾನವೆಂದು ನಂಬಿದ್ದಾರೆ. ಈ ರೀತಿ ಹೇಳಲು ನಿಜವಾದ

ಕಾರಣವೆಂದರೆ ಈ ಮರಗಳು ಬಹಳ ಎತ್ತರವಾಗಿ ಬೆಳೆದು ವಿಸ್ತಾರವಾದ ಪ್ರದೇಶವನ್ನು ಆಕ್ರಮಿಸಿಕೊಳ್ಳುತ್ತವೆ. ಇಂಥ ಮರಗಳು ಸಿಡಿಲನ್ನು ಆಕರ್ಷಿಸುವುದರ ಸಾಧ್ಯತೆಯಿರುವುದರಿಂದ ಬಿರುಗಾಳಿಗೆ ಮರಉರುಳಿ ಬೀಳಬಹುದಾದ ಕಾರಣಗಳಿಂದಾಗಿ ಈ ಗಿಡದಿಂದ ದೂರವಿರುವಂತೆ ಹಾಗೂ ರಾತ್ರಿ ಕಾರ್ಬನ್ ಡೈ ಆಕ್ಸೈಡ್ ಜಾಸ್ತಿ ಬಿಡುವುದರಿಂದ ಸೂರ್ಯ ಶಾಖದಿಂದ ಹಗುರವಾದ ಅನಿಲ ಎಲೆ ಸೇರಿಸುತ್ತದೆ. ಆದರೆ ರಾತ್ರಿ ವೇಳೆ ಪ್ರಮಾಣ ಕಡಿಮೆಯಾಗಿ ಒತ್ತಡದಿಂದಾಗಿ ಟೊಂಗೆಗಳ ಅಲಗಾಡುವಿಕೆ ಶಬ್ಧದಿಂದಾಗಿ ಅಲ್ಲಿ ದೆವ್ವ ಇರುತ್ತವೆಂಬ ನಂಬಿಕೆಯಿರಬಹುದು.

೧೪) **ಕಣಗಿಲ ಹೂವಿನ ಗಿಡ ಮನೆಯಲ್ಲಿರಬಾರದು :**

ಕಣಗಿಲ ಹೂವು ಮುಡಿಯಲ್ಲಿಕ್ಕೂ, ದೇವರ ಪೂಜೆಗೂ ಸಲ್ಲದು ಕೇವಲ ಶಿವನ ಪೂಜೆಗೆ ಮತ್ತು ಶವದ ಪೂಜೆಗೆ ಅವುಗಳನ್ನು ಬಳಸುತ್ತಾರೆ ಆದ್ದರಿಂದ ಈ ಗಿಡ ಮನೆಯಿಂದ ದೂರವಾಗಿರಬೇಕೆಂಬ ನಂಬಿಕೆ.

೧೫) **ಬಾಳೆ ಗಿಡ ಕಿರುಚುವುದನ್ನು ಕೇಳಬಾರದು :**

ಬಾಳೆ ಈಯುವಾಗ ಒಂದು ರೀತಿಯ ಸಪ್ಪಳ ಮಾಡುತ್ತದೆಯಂತೆ, ಅದನ್ನು ಕೇಳಿದವರಿಗೆ ಕೆಡಕಾಗುವುದೆಂಬ ಮೂಢ ನಂಬಿಕಯೊಂದಿಗೆ, ನಿಜವಾಗಿ ನೋಡಿದರೆ ಅದು ಸಪ್ಪಳವನ್ನೇ ಮಾಡುವುದಿಲ್ಲ. ನೀರಿನ ಕೊರತೆಯಿದ್ದ ಈ ಬಯಲು ನಾಡಿನಲ್ಲಿ ಬಾಳೆ ಬೇಡವೆಂಬ ನಂಬಿಕೆ ಮೂಡಿರಬೇಕು. ಆದರೆ ಇತ್ತೀಚಿಗೆ ಕಡಿಮೆ ಬಂಡವಾಳದ ಬಾಳೆ ಬೀದರ ಜಿಲ್ಲೆಯಲ್ಲಿ ಹೆಚ್ಚಾಗಿ ಬೆಳೆಯಲಾಗುತ್ತಿದೆ.

೧೬) **ಮನೆಯಲ್ಲಿ ನುಗ್ಗಿಯ ಗಿಡ ಹಚ್ಚಿದರೆ ಅದು ಮನೆಯವರನ್ನೆಲ್ಲ ನುಗ್ಗು ಮಾಡುತ್ತದೆ:**

ಈ ನಂಬುಗೆಗೆ ಮೂಲ ಕಾರಣ ಆ ಗಿಡ ತೀರ ಪೊಳ್ಳಾಗಿರುವುದಲ್ಲದೆ ಇನ್ನೊಂದಿಲ್ಲ. ಈ ಪೊಳ್ಳು ಮರವನ್ನೇರಿ ಮಕ್ಕಳು ಮರಿ ಬಿದ್ದು ಹಾನಿಗೊಳಗಾಗಬಾರದೆಂದು ಈ ಹೆದರಿಕೆ ಹಾಕಿದಂತಿದೆ. ನುಗ್ಗಿಯ ಗಿಡ ಬೇರಿನಿಂದ ಹೂ ಕಾಯಿಯವರೆಗೆ ಬಹಳಷ್ಟು ಪೌಷ್ಟಿಕಾಂಶಗಳನು ಹೊಂದಿದ್ದೆಂದು ಆಯುರ್ವೇದ ಹೇಳುತ್ತದೆ.

೧೭) **ಅತ್ತಿಯ ಗಿಡ ಇದ್ದಲ್ಲಿ ನೀರಿರುತ್ತದೆ :**

ಅತ್ತಿ ಗಿಡ ಇದ್ದ ಕಡೆ ನೀರಿಗೆ ಬರಾ ಇಲ್ಲವನ್ನುವುದು ಜನಸಾಮಾನ್ಯರ ಹೇಳಿಕೆ. ಆದರೆ ಅತ್ತಿ ಹೂ ಬಿಡುವುದನು ನೋಡಿದರೆ ಕಣ್ಣು ಹೋಗುತ್ತದೆ ಎಂಬುದೊಂದು ಮೂಢ ನಂಬಿಕೆ ನಿಜವಾಗಿಯೂ ನೋಡಿದರೆ ಅದು ಹೂವು ಕಾಣುವುದೆ ಇಲ್ಲ. ಅದರ ಕಾಯಿ ಹುಳದಿಂದ ತುಂಬಿಕೊಂಡಿದ್ದರೂ ಮನೆಯಲ್ಲಿ ಆ ಹಣ್ಣುವನ್ನಿಟ್ಟರೆ ತಗಣಿ, ಸೊಳ್ಳೆಗಳು ಆಗುವುದಿಲ್ಲ ಎನ್ನುವ ನಂಬಿಕೆ ಇದೆ.

೧೮) **ತಳಿರು ತೋರಣ ಶುಭ ಕಾರ್ಯಗಳಲ್ಲಿ ಕಟ್ಟುವುದು :**

ಕಬ್ಬು, ತೆಂಗು, ಮಾವು, ಬಾಳೆ ಎಲೆಗಳನ್ನು ಪೂಜಾ ಕಾರ್ಯಗಳಲ್ಲಿ ಮತ್ತು ಹಬ್ಬ ಹರಿದಿನ, ಹಾಗೂ ಇನ್ನಿತರ ಶುಭಕಾರ್ಯಗಳಲ್ಲಿ ತೋರಣವಾಗಿಯೂ, ಹಂದರವಾಗಿ ಕಟ್ಟುತ್ತಾರೆ. ಇದು ಶುಭಕಾರ್ಯದ ಕಲ್ಪನೆಯನ್ನು ತಂದುಕೊಡುತ್ತದೆ. ಅದು ಅಲಂಕಾರ ಆಕರ್ಷಣೆಯ ಜೊತೆಗೆ ವೈಜ್ಞಾನಿಕ ಪ್ರಯೋಜನಗಳನ್ನು ಹೊಂದಿರುವ ಸಾಧ್ಯತೆಯೂ ಇದೆ. ಇಂತಹ ಸಂದರ್ಭಗಳಲ್ಲಿ ನೆರೆದ ಜನಸ್ತೋಮದಿಂದಾಗಿ ಆಮ್ಲಜನಕದ ಕೊರತೆಯನ್ನು ನೀಗಿಸುತ್ತದೆ.

**೧೯) ಫಲ ಕೊಡುವ ಮರಗಳನ್ನು ವಿವಾಹ ಮಾಡುವುದು :**

ಬೀದರ ಜಿಲ್ಲೆಯಲ್ಲಿ ಮಾವು ಮತ್ತು ಬಾಳೆ ಗಿಡಗಳು ಮೊದಲ ಬಾರಿಗೆ ಫಲ ಕೊಡುವ ಸಂದರ್ಭದಲ್ಲಿ ಮದುವೆ ಮಾಡಲಾಗುತ್ತದೆ. ಮದುವೆ ಮಾಡದ ಹೊರತು ಆ ಗಿಡದ ಹಣ್ಣು ತಿನ್ನಲು ಉಪಯೋಗಿಸುವುದಿಲ್ಲ ಮದುವೆ ಹಣ್ಣಿಗೆ ಬೇಕಾಗುವ ತಾಳಿ ಕಾಲುಂಗುರ, ಬಳೆ, ಸೀರೆ, ಕುಪ್ಪಸವೆಲ್ಲಾ ಇಟ್ಟು ಪೂಜಿಸಿ ಅವು ಗಿಡಳಿಸಿ ಹಾಕುವರು. ಮುತ್ತೈದಿಯರಿಗೆ ಉಣ ಬಡಿಸಿ ಅವರಿಗೂ ಈ ಗಿಡಗಳ ಫಲದೊಂದಿಗೆ ಅಕ್ಕಿಯಿಂದ ಉಡಿ ತುಂಬುವರು. ಕಣದಲ್ಲಿ ರಾಶಿ ಮನೆಯ ಜಂಗಮರಿಗೆ ದಾನ ಕೊಟ್ಟಂತೆ ಇದು ಮೊದಲ ದಾನವಾಗಿ ಕೊಡುವುದು ಕಂಡುಬರುತ್ತದೆ.

**೨೦) ಮೂರನೆ ಮದುವೆಯಾಗುವ ಗಂಡಿಗೆ ಸಸ್ಯ ಜೊತೆಗೆ ಲಗ್ನ ಮಾಡುವುದು :**

ಮೂರು ಎಂಬ ಸಂಖ್ಯೆ ಅಶುಭ ಎನ್ನುವ ನಂಬಿಕೆಯಿರುವುದರಿಂದ ಈ ಪದ್ಧತಿ ರೂಢಿಯಾಗಿರಬೇಕು. ಗಂಡಿಗೆ ಮೂರನೆಯ ಮದುವೆಯಾಗುವ ಪ್ರಸಂಗಬಂದರೆ ನೇರವಾಗಿ ಹೆಣ್ಣಿನೊಂದಿಗೆ ಮದುವೆ ಮಾಡುವುದಿಲ್ಲ. ಮೂರನೆ ಮದುವೆಯನ್ನು ಒಂದು ಬಾಳೆಯ ಗಿಡದ ಜೊತೆಗೆ ಮಾಡುತ್ತಾರೆ. ಮದುವೆ ಶಾಸ್ತ್ರ ಮುಗಿಯುತ್ತಲೂ ಆ ಬಾಳೆಯ ಗಿಡವನ್ನು ಕಡಿದು ಹಾಕುತ್ತಾರೆ. ಮತ್ತು ನಾಲ್ಕನೆ ಮದುವೆ ಹೆಣ್ಣಿನೊಡನೆ ನಡೆಯುತ್ತದೆ. ಇದಕ್ಕೆ ಬಲಿ ಅನ್ನಬೇಕೋ, ಮದುವೆ ಅನ್ನಬೇಕೋ ಹೇಳುವುದೇ ಕಷ್ಟ ಅದಕ್ಕಾಗಿ ಇಂತಹ ನಂಬಿಕೆಗಳು ಸಂಕೀರ್ಣದಿಂದ ಕೂಡಿರುತ್ತವೆ.

**೨೧) ಸಸ್ಯದ ಮದುವೆ ಶವದ ಜೊತೆಗೆ ನಡೆಯುವುದು :**

ಮದುವೆ ವಯಸ್ಸಿಗೆ ಬಂದ ಗಂಡು, ಹೆಣ್ಣಾಗಲಿ ಮದುವೆಯಾಗದೆ ಸತ್ತರೆ. ಆ ಶವವನ್ನು ಹಾಗೆ ಸಂಸ್ಕಾರ ಮಾಡುವುದಿಲ್ಲ. ಮಣ್ಣು ಮಾಡುವ ಮೊದಲು ಒಂದು ಎಕ್ಕೇ ಗಿಡದ ಜೊತೆಗೆ ಆ ಶವದ ಮದುವೆಯಾಗುತ್ತದೆ ಆ ಮೇಲೆ ಶವವನ್ನು ಕೂಡಿಸಿದ ಸ್ಥಿತಿಯಲ್ಲಿ ಸಂಸ್ಕಾರ ಮಾಡುತ್ತಾರೆ ಇಲ್ಲವಾದಲ್ಲಿ ಅಡ್ಡ ಒಯ್ದು ಮಲಗಿಸಿದ ಸ್ಥಿತಿಯಲ್ಲೇ ಮಣ್ಣು ಮಾಡಬೇಕಾಗುತ್ತದೆ. ಶವದೊಂದಿಗೆ ಸಸ್ಯದ ಮದುವೆಯ ಸಂಪ್ರದಾಯ ಇನ್ನೂ ಜೀವಂತವಾಗಿಯೇ ಇದೆ.

**೨೨) ಗೊಂಚಲು ಫಲ ಧಾನ್ಯಗಳಿಂದ ಉಡಿ ತುಂಬುವುದು :**

ಹೆಣ್ಣು ಮಗಳ ಉಡಿ ತುಂಬುವಾಗ, ಅವಳ ಬಾಳು ಸಸ್ಯಗಳಂತೆ ಸಮೃದ್ಧ ಸಂತತಿ ಉಳ್ಳದ್ದಾಗಿ ತಿಂದು ಹಾರೈಸಿ ಅವಳ ಉಡಿಗೆ ಗೊಂಚಲು ಗೊಂಚಲಾಗಿ ಬೆಳೆವ ಹಣ್ಣುಗಳನ್ನೇ ಹಾಕುತ್ತಾರೆ. ತೆಂಗು, ಬಾಳಿ, ಅಡಿಕೆ, ಅರಿಷಿಣ, ಉತ್ತತ್ತಿಯ ಫಲಗಳಿಂದ ಅವಳ ಉಡಿ ತುಂಬುತ್ತಾರೆ. ಚೊಚ್ಚಲ ಬಸುರಿಗೂ ಕುಪ್ಪಸ ಮಾಡುವಾಗ ಅವಳ ಉಡಿಗೆ ಇಂಥ ಗೊಂಚಲು ಫಲಗಳನ್ನೇ ಹಾಕುತ್ತಾರೆ. ಆ ಆಚರಣೆಯಲ್ಲಿ ಅತ್ತಿಯ ಹಣ್ಣಿನ ಗೊಂಚಲನ್ನು ಹುಡುಕಾಡಿ ಬಳಸುತ್ತಾರೆ. ಹೆಣ್ಣು ಮಕ್ಕಳ ತವರು ಮನೆಯಿಂದ ಗಂಡನ ಮನೆಗೆ ಹೋಗುವಾಗಲೂ ಓಣಿಯ ಓತ್ತೈಷಿಗಳೂ ಗೋಧಿಯ ಉಡಿಯಕ್ಕಿಯನ್ನೇ ಹಾಕುತ್ತಾರೆ. ಗೋಧಿ ಒಂದಕ್ಕೆ ಹತ್ತಾಗಿ ಚಿಗಿಯುವ ಸಸ್ಯ. ಗೋಧಿಯ ತೆನೆಯಂತೆ ಹಲವು ಮಕ್ಕಳಿಗೆ ಆಸರೆಯಾಗಿ ಬದುಕಲಿ ಎನ್ನುವ ಹಾರೈಕೆಯ ಪ್ರತೀಕವೇ ಆ ಆಚರಣೆಯಾಗಿ ರೂಪುಗೊಂಡಿದೆ. ಮದುವೆಯಲ್ಲಿ ತಲೆಯ ಮೇಲೆ ಅಕ್ಕಿಕಾಳನ್ನು ಹಾಕುವ ಆಚರಣೆಯ ಹಿಂದೆಯೂ ಇಂತಹ ಉದ್ದೇಶವೇ ಇದೆ.

### ೨೩) ಗಿಡಗಳಲ್ಲಿ ಗಡಿಗೆಳನ್ನು ಕಟ್ಟುವುದು :

ಗಿಡ ಮರಗಳು ಸಾಮಾನ್ಯವಾಗಿ ಅನೇಕ ಜೀವಿಗಳಿಗೆ ವಾಸಿಸಲು ಆಶ್ರಯ ನೀಡುತ್ತವೆ. ಆದ್ದರಿಂದ ಇಲ್ಲಿ ಜೀವಿಸುವ ಪಕ್ಷಿಗಳಿವೆ ಇನ್ನೂ ರಕ್ಷಣೆ ದೊರಕಲಿ ಎನ್ನುವ ಉದ್ದೇಶದಿಂದ ಜನರು ಗಿಡ ಮರಗಳಲ್ಲಿ ಗಡಿಗೆಯನ್ನು ಕಟ್ಟಿರುತ್ತಾರೆ. ಈ ಮೂಲಕ ಅವುಗಳ ಸಂತತಿಯನ್ನು ಹೆಚ್ಚಿಸಿಕೊಂಡಿರುವುದು ಕಾಣುತ್ತವೆ. ಈ ತತ್ವವನ್ನು ಆಧಾರವಾಗಿ ಇಟ್ಟುಕೊಂಡ ಕೀಟಗಳನ್ನು ತಿನ್ನುವ ಪಕ್ಷಿಗಳಿಗೆ ಆಸರೆ ನೀಡಲು ಮರಗಳಲ್ಲಿ ಅವಕಾಶ ಇರುವೆಡೆ ಗಡಿಗೆಗಳನ್ನು ಕಟ್ಟಿ ಪ್ರಯೋಜನ ಮಾಡಿಕೊಳ್ಳುವ ನಿಟ್ಟಿನಲ್ಲಿ ಕೆಲವರು ಪ್ರಯೋಗಗಳನ್ನು ಕೈಗೊಂಡು ಫಲಕಂಡಿದ್ದಾರೆ. ಗಿಣಿಯನ್ನು ಹೊತುಪಡಿಸಿ ಹಲವಾರು ಪಕ್ಷಿಗಳು ಹಲವಾರು ಕಿಟಗಳನ್ನೇ ಆಹಾರಕ್ಕಾಗಿ ತಿನ್ನುತ್ತವೆ. ಇಂತಹ ವ್ಯವಸ್ಥೆಯಲ್ಲಿ ಹೆಚ್ಚಾಗಿ ಪಾರಿವಾಳ ಇರುವುದು ಕಂಡುಬರುತ್ತದೆ.

### ೨೪) ಸಸ್ಯಗಳನ್ನಾಗಲಿ, ಹೂವನ್ನಾಗಲಿ, ಸಂಜೆ ಹೊತ್ತಿಗೆ ಕೀಳಬಾರದು:

ಸಸ್ಯಗಳು ಒಂದು ಸ್ಥಳದಿಂದ ಕಿತ್ತು ತೆಗೆದು ಇನ್ನೊಂದು ಕಡೆ ಹಚ್ಚಬೇಕಾದರೆ ಸಂಜೆ ಹೊತ್ತು ತೆಗೆದಿದ್ದು ಮರುದಿವಸ ಹಚ್ಚುವ ವೇಳಗೆ ಬಾಡಿ ಹೋಗಿರುತ್ತವೆ. ಎಳೆ ಬೇರು ನೀರಿನಿಂದ ಹೊರಗೆ ಬಂದು ಗಾಳಿಗೆ ತನ್ನ ಸತ್ವ ಕಳೆದುಕೊಂಡಿರುತ್ತದೆ ಹಾಗೂ ಹೂವಿನ ಗಿಡಗಳಲ್ಲಿ ಸಂಜೆ ಹೊತ್ತಿಗೆ ಹುಳ ಹುಪ್ಪಟೆ ಇದ್ದರೂ ಕಾಣುವುದಿಲ್ಲ. ಎಂಬ ಕಾರಣಕ್ಕಾಗಿ ಸಂಜೆ ಹೊತ್ತಿಗೆ ಹೂವನ್ನು ಕಡಿಯಬಾರದೆಂಬ ನಂಬಿಕೆಯಿದೆ.

### ೨೫) ಫಲಕೊಡುವ ಗಿಡಗಳನ್ನು ಕಡಿಯಬಾರದು :

ನೈಸರ್ಗಿಕವಾಗಿ ಬೆಳೆಯುವ ಫಲ ಕೊಡುವ ಗಿಡಮರಗಳು ಅಭಿವೃದ್ಧಿಯ ಸಂಕೇತವಾಗಿರುತ್ತದೆ. ಹಾಗೂ ತಮಗೆ ಬೇಕಾದ ಫಲ ಕೊಡುವ ಸಂಪತ್ತಾಗಿರುತ್ತವೆ ಅಂತಹವುಗಳನ್ನು ಅನಾವಶ್ಯಕವಾಗಿ ಹಾಳು ಮಾಡಬಾರದೆಂಬ ಉದ್ದೇಶಕ್ಕಾಗಿ ಫಲಕೊಡುವ ಮರಗಳನ್ನು ಕಡಿದರೆ ಮಕ್ಕಳಾಗುವುದಿಲ್ಲವೆಂಬ ನಿಷೇಧ ನಂಬಿಕೆಯು ಜಾರಿಯಲ್ಲಿದೆ.

### ೨೬) ಎಕ್ಕೆಯ ಗಿಡ ಪೂಜಿಸುವುದು :

ಎಕ್ಕೆಯನ್ನು ಹೊಲದಲ್ಲಿ ರಾಶಿಯ ಕಾಲಕ್ಕೆ ಪೂಜಿಸುತ್ತಾರೆ. ರಾಶಿಗೆ ಎಕ್ಕೆಯ ಹೂವೇ ಬೇಕು. ಕಣ ಮಾಡುವಾಗಲೇ ಎಕ್ಕೆಯ ಗಿಡದ ಸಮೀಪ ಮಾಡುತ್ತಾರೆ. ಇದರಲ್ಲಿ ಕೆಂಪು, ಬಿಳಿ ಎರಡು ಪ್ರಕಾರಗಳಿವೆ. ಶಿವರಾತ್ರಿಯಂದು ಶಿವ ಎಕ್ಕೆಯ ಗಿಡದ ಕೆಳಗೆ ವಾಸಮಾಡುತ್ತಾನೆಂದು ಜನಪದ ನಂಬುಗೆಯೊಂದಿಗೆ ಇದರ ಎಲೆಯ ಬತ್ತಿ ಕಟ್ಟಿ ತಂಬಾಕು ಸೇದುತ್ತಾರೆ. ಹಾಗೂ ಇದರ ಆಮ್ಲಜನಕವೂ ಆರೋಗ್ಯಕ್ಕೆ ಒಳ್ಳೆಯದ್ದು ಹಾಗೂ ಕಾಲು ಮತ್ತಿತರ ದೇಹದ ಭಾಗಗಳಲ್ಲಿ ನೋವು ಉಂಟಾದರೆ ಹಾಲು ಹಚ್ಚುತ್ತಾರೆ.

### ೨೭) ಕೆಂಪು ನೀರು ನೋಡಬಾರದು :

ಮಳೆಗಾಲದ ಆರಂಭದಲ್ಲಿ ಬರುವ ಮಳೆಯ ನೀರು ಹಳ್ಳ ಕೊಳ್ಳ ತಗ್ಗಿನ ಸ್ಥಳಗಳಲ್ಲಿ ಕೆಂಪಾಗಿ ಕಾಣಿಸುತ್ತವೆ. ಈ ಕೆಂಪು ನೀರು ನೋಡಿದರೆ ಭಯವಾಗಿ ಜ್ವರ ಬರುತ್ತವೆ ಎಂಬ ನಂಬಿಕೆ ಜನರಲ್ಲಿರುವುದರಿಂದ ಈ ನಿಷೇಧ ಜಾರಿಯಲ್ಲಿರಬೇಕು. ಹಾಗೆಯೇ ಆರಂಭದಲ್ಲಿರುವ ಈ ಮಳೆ ನೀರು ಕುಡಿಯಲಾಗಲಿ ಅಥವಾ ಇನ್ನಿತರ ಕೆಲಸಕ್ಕೆ ಉಪಯೋಗಿಸುವಂತಿರುವುದಿಲ್ಲ ಅದಕ್ಕೆ ಅದರ ಸಮೀಪ ಹೋಗದಿರಲೆಂದೂ ಆಗಿರಬೇಕು. ಈ ಕೆಂಪು ನೀರಿನ ರಭಸವೂ ಜೋರಾಗಿರುವುದು ಮಳೆಗಾಲದ ದಿನಗಳಲ್ಲಿ ಯಾವ ಸಂದರ್ಭಗಳಲ್ಲಾದರೂ ಹಳ್ಳ ಕೊಳ್ಳ ತುಂಬಿ ಹರಿಯುವ ಸಾಧ್ಯತೆಗಳಿರುತ್ತದೆ ಇಂತಹ ನೆಪಗಳಿಂದ ಜಾರಿ ಮಾಡುವ ಈ ನಂಬಿಕೆ ರೂಢಿಯಲ್ಲಿರಬೇಕು.

**೨೮) ಗಂಗಾ ಪೂಜೆ ಮಾಡುವುದು :**

ಸಾಮಾನ್ಯವಾಗಿ ಮಳೆಗಾಲದ ಆರಂಭದ ದಿನಗಳಲ್ಲಿ ಹಾಗೂ ಹೊಸದಾಗಿ ನಿರ್ಮಿಸಿದ ಬಾವಿ, ಕೊಳವೆ, ಬಾವಿಗಳನ್ನು ಗಂಗಾ ಪೂಜೆ ಮಾಡಿಯೇ ನೀರನ್ನು ಉಪಯೋಗಿಸುವುದುಂಟು ಈ ಗಂಗಾ ಪೂಜೆ ಮೊದಲು ರೈತರು ಬಯಲು ಭೂಮಿಯಲ್ಲಿ ಕೃಷಿ ಮಾಡುವುದರಿಂದ ನಿರಾವರಿ ಮೂಲಗಳು ಇರಲಿಲ್ಲ. ಆದ್ದರಿಂದ ಊರಿನ ಮುಂದೆ ಹರಿಯುವ ಹಳ್ಳಗಳಿಗೆ ಹೋಗಿ ಭೂಮಿ ತಾಯಿಯಂತೆ ಗಂಗಾಮಾತೆಗೂ ವಿವಿಧ ತರಹದ ಅಡುಗೆ ಮಾಡಿ ಅದರಲ್ಲಿ ಎಲ್ಲವೂ ಸ್ವಲ್ಪ ಸ್ವಲ್ಪ ನೈವೇದ್ಯವನ್ನು ತೆಪ್ಪೆ (ಪುಂಡಿಕಟ್ಟಿಗೆಯಿಂದ ಮಾಡಿದ ಚೌಕಾರದ ತಟ್ಟೆ) ಯ ಮೇಲೆ ಇಟ್ಟು ನಡುವೆ ದೀಪವಿಟ್ಟು ಅದನ್ನು ಹರಿಯುವ ನೀರಿನಲ್ಲಿ ಬಿಡುವರು. ಅದರ ಮೇಲಿಟ್ಟ ದೀಪವನ್ನು ಕೆಳಗಿನ ನೀರಿನಲ್ಲಿ ಕಾಣುವುದರೊಂದಿಗೆ ಗಂಗೆಯನ್ನು ನಮಸ್ಕರಿಸುತ್ತಿದ್ದರು. ಆದರೆ ಇತ್ತೀಚಿಗೆ ಕೃಷಿಯಲ್ಲಿ ಮಳೆಯಿಲ್ಲದೆ ನೀರಾವರಿ ಸೌಲಭ್ಯಕ್ಕೆಂದು ಬಾವಿ ಕೊಳವೆ ಬಾವಿಗಳನ್ನು ನಿರ್ಮಿಸಿಕೊಳ್ಳುತ್ತಿರುವುದರಿಂದ ಹಳ್ಳಕ್ಕೆ ಹೋಗಿ ಗಂಗಾ ಪೂಜೆ, ಮಾಡುವುದು ಕಡಿಮೆಯಾಗಿದೆ.

ಹಾಗೂ ಇನ್ನಿತರ ವಿಶೇಷಗಳ ಪೂಜೆಗಳಲ್ಲಿ, ಮುತ್ತೈದಿಯರನ್ನು ಕರೆದೊಯ್ದು, ಗಂಗೆ ಪೂಜೆ ಮಾಡುವುದುಂಟು ನೀರು ಸ್ವಚ್ಚಗೊಳಿಸುವುದಾಗಿದ್ದು ಅದರಂತೆ ನಮ್ಮ ಮನಸಿನ ಕಲ್ಮಶ ತೊಳೆದು ನಿರ್ಮಲತೆಯಿಂದ ಕೂಡಿದ ಮನಸು ನಮ್ಮಲ್ಲೂ ಇರಲಿ ಮತ್ತು ತುಂಬಿದ ಕೊಡದಂತೆ ನಮ್ಮ ಜೀವನದಲ್ಲಿ ಸುಖ, ಶಾಂತಿ, ನೆಮ್ಮದಿ ಪರಿಪೂರ್ಣವಾಗಿರಲಿ ಎಂಬ ನಂಬಿಕೆ ಜನಪದರು ಹೊಂದಿರುವುದಾಗಿ ಕಂಡುಬರುತ್ತದೆ.

ಹರಿಯುವ ಸಾಧ್ಯತೆಗಳಿರುತ್ತವೆ. ಇಂತಹ ನೆಪಗಳಿಂದ ಪಾರು ಮಾಡಲು ಈ ನಂಬಿಕೆ ರೂಢಿಯಲ್ಲಿರಬೇಕು.

**೨೯) ಹುತ್ತವನ್ನು ಸುತ್ತಿಕೊಂಡು ಹೋಗಬಾರದು; ಮಗ್ಗುಲಲ್ಲಿ ಹೋಗಬೇಕು :**

ಹುತ್ತಿನ ಒಳಗೆ ಹಾವು ಇರುವುದು ಎಂಬುದು ತಿಳಿದ ವಿಷಯವೇ ಆಗಿರುತ್ತದೆ. ಹುತ್ತದ ಸಮೀಪಕ್ಕೆ ಹೋಗುತ್ತಿರಬೇಕಾದರೆ ಶಬ್ದಕ್ಕೆ ಅಂಜಿ ಹಾವು ಮೇಲೇರಿ ಬರಬಹುದು. ಹಾವು ಮೇಲೆ ಬಂದರೆ ಸಮೀಪಕ್ಕಿರುವವರಿಗೆ ಅಪಾಯ ಆದ್ದರಿಂದ ಮುಂಚಿತವಾಗಿಯೇ ಜಾಗೂರಕರಾಗಿರಲೆಂದೇ ಮಗ್ಗುಲಲ್ಲಿ ಹೋಗಬೇಕೆಂಬ ನಂಬಿಕೆ ರೂಢಿಯಲ್ಲಿರಬೇಕು.

**೩೦) ಹೋಮ ಮಾಡುವುದು :**

ಹೋಮ ಕುಂಡದಿಂದ ಹೊರ ಹೊಮ್ಮುವ ಧೂಪದ ಪ್ರಭಾವದಿಂದ ವಾಯುವು ಶುದ್ಧಿಯಾಗುವುದು ರೋಗಕಾರಕ ಜೀವಿಗಳು ನಾಶ ಹೊಂದುವುದು, ಮಾನಸಿಕ ಒತ್ತಡ ನಿವಾರಣೆಯಾಗುವುದು ಎಂಬುದಾಗಿ ತಿಳಿದು ಬಂದಿದೆ. ಹೋಮ ಕುಂಡದಿಂದ ಹೊರ ಹೊಮ್ಮುವ ಹೊಗೆಯನ್ನು ಪ್ರತಿನಿತ್ಯವೂ ಸಂಧ್ಯಾ ಸಮಯದಲ್ಲಿ ಸೇವಿಸುತ್ತಿದ್ದರೆ ಹಲವಾರು ರೋಗಗಳು ಗುಣವಾಗುವುದೆಂಬ ಅಂಶವನ್ನು ಆಯುರ್ವೇದ ವಿಜ್ಞಾನದಲ್ಲಿ ಪ್ರತಿಪಾದಿಸಲಾಗಿದೆ.

ಹೋಮಾಥೇರಪಿ ಕುರಿತು ಅಮೇರಿಕಾದ ಖ್ಯಾತ ಮನೋಶಾಸ್ತ್ರಜ್ಞರಾದ ಬ್ಯಾರಿ ರಾತ್ನರ್ ಎಂಬುವರು ಹಲವಾರು ಸಂಶೋಧನೆಗಳನ್ನು ನಡೆಸಿದ್ದಾರೆ. ಹೋಮಾಥೆರಪಿಯಿಂದ ಅಪಸ್ಮಾರ (ಮೂರ್ಛೆ)ರೋಗವನ್ನು ಗುಣಪಡಿಸಬಹುದೆಂಬುದು ಅವರ ಸ್ಪಷ್ಟ ಅಭಿಪ್ರಾಯ. ಅಲ್ಲದೆ ಮಕ್ಕಳ ಬೌದ್ಧಿಕ ಬೆಳವಣಿಗೆಯ ಮಟ್ಟ ಸುಧಾರಿಸಲು ಹೋಮ ಥೆರಪಿ ಬಳಸಬಹುದೆಂತಲೂ ತಿಳಿಸಿದ್ದಾರೆ.

**೩೧) ಒಲೆಯ ಬೆಂಕಿ ಇನ್ನೊಬ್ಬರಿಗೆ ಕೊಡಬಾರದು :**

ಕಟ್ಟಿಗೆ ಬೆಂಕಿಯಿಂದ ಬೆಳಕಿನ ಉಪಯೋಗ ಎಷ್ಟು ಪಡೆಯಬಹುದೋ ಅಷ್ಟೇ ಅದರಿಂದ ಎಚ್ಚರ ತಪ್ಪಿದಂತೆ ಅನಾಹುತವೂ ಇದೆ. ಆದ್ದರಿಂದಲೇ ಇಂತಹ ಅನಾಹುತ ಆಗದಿರಲೆಂಬ ನಂಬಿಕೆ ರೂಢಿಯಲ್ಲಿದೆ. ಏಕೆಂದರೆ ಬೆಂಕಿ ಒಂದು ಒಲೆಯಿಂದ ಇನ್ನೊಬ್ಬರ ಒಲೆಗೆ ಒಯ್ಯುವುದರವರೆಗೆ ನಡುವೆ ಚೆಲ್ಲಬಹುದು. ಮೈಮೇಲೆ ಬೀಳಬಹುಯದು. ಕಾಲಲ್ಲಿ ಕುಳಿತವರ ಮೇಲೆ ಬಿದ್ದು ಅಪಾಯವಾಗಬಹುದು. ಇವುಗಳಿಂದ ತಪ್ಪಿಸಿಕೊಳ್ಳುವ ಜಾಗೂರುಕತೆಯ ನಂಬಿಕೆ ಇದ್ದಾಗಿದೆ.

**೩೨) ಬೆಂಕಿ ಮಕ್ಕಳಿಗೆ ಹೂವಿನಂತೆ ಕಾಣುತ್ತದೆ :**

ಕಟ್ಟಿಗೆ, ಕುಳ್ಳು ಉರಿದು ತನ್ನ ಬಣ್ಣವನ್ನು ಕೆಂಪು ಬಣ್ಣಕ್ಕೆ ಬದಲಾಯಿಸಿಕೊಳ್ಳುತ್ತದೆ. ಇದು ನೋಡಲು ಕೆಂಪುಬಣ್ಣ ಕಣ್ಣಿಗೆ ಹಿತವಾದಷ್ಟು ದೇಹಕ್ಕೆ ತಾಗಿದೆ ಅಷ್ಟೇ ಅಪಾಯವಿದೆ ಅಂತ ದೊಡ್ಡವರಿಗೆ ಗೊತ್ತು ಆದರೆ ಏನು ಅರಿಯದ ಮುಗ್ಧ ಮಕ್ಕಳಿಗೆ ಇದರ ಅನುಭವ ಅವುಗಳಿಗೆ ಗೊತ್ತಿರುವುದಿಲ್ಲ ಆದ್ದರಿಂದ ಬಣ್ಣದ ಆಕರ್ಷಣೆಯಿಂದ ಮಕ್ಕಳು ಅದನ್ನು ಹಿಡಿಯಲು ಧಾವಿಸುವುದು ಸಹಜವೇ ಆಗಿದೆ. ಮಕ್ಕಳಿಗೆ ಬೆಂಕಿ ಎಂದೂ ಗೊತ್ತಾಗುವುದಿಲ್ಲ. ಇಂತಹ ವಸ್ತುಗಳನ್ನು ಮುಟ್ಟಬಾರದು ಇದು ಚೆಲ್ಲಬಾರದು ಎನ್ನುವ ಪ್ರಜ್ಞೆಯು ಅದರಲ್ಲಿ ಇರುವುದೇ ಇಲ್ಲ. ಮಕ್ಕಳು ಬೆಂಕಿ ಹಿಡಿಯಲು ಧಾವಿಸುವರ ಹವಣಿಕೆ ಕಂಡು ಜನರು ಕಲ್ಪಿಸಿಕೊಂಡ ನಂಬಿಕೆಯಿದಾಗಿರಬೇಕು.

**೩೩) ನವಗ್ರಹಗಳನ್ನು ಪೂಜಿಸುವುದು :**

ಈ ಹಿಂದಿನ ಪೂರ್ವಿಕರು ಗ್ರಹಗಳು ಒಂಭೆತ್ತು ಅವುಗಳನ್ನು ಪೂಜಿಸದಿದ್ದರೆ ಶನಿಕಾಟ ಆರಂಭವಾಗುತ್ತದೆಂಬ ನಂಬಿಕೆ ಹಾಗೂ ನವಗ್ರಹಗಳು ಸಮೀಪಕ್ಕೆ ಬಂದು ಒಂದೇ ದಿಕ್ಕಿನಲ್ಲಿ ಕೂಡಿದರೆ, ಅದರಿಂದ ಜಗತ್ತಿಗೆ ಕೆಡುವಕಾಗುತ್ತದೆಂದು ಹೇಳಿ ಆ ಗ್ರಹಕಗಳು ಶಾಂತಿ ಹೋಮ-ಹವನ ಮಾಡುತ್ತಾರೆ. ಆದರೆ ಇಂದಿನ ವಿಜ್ಞಾನವು ಗ್ರಹಗಳ ಅಧ್ಯಯನ ಮಾಡಿ ಒಂದಂತೂ ಪೂರ್ತಿಯಾದ ತೆಗೆದುಹಾಕಲಾಗಿದೆ. ಒಂದು ನಕ್ಷತ್ರ, ಇನ್ನೊಂದು ಉಪಗ್ರಹ, ಮತ್ತೆರಡು ಕ್ಷುದ್ರಗ್ರಹಗಳು ಎಂದಾಗ ಒಂಭತ್ತು ಗ್ರಹಗಳೆಂದು ಪೂಜಿಸುವುದು ಸರಿಯೆನಿಸುವುದಿಲ್ಲ.

**೩೪) ನದಿಯಲ್ಲಿ ತೀರ್ಥಸ್ನಾನ ಮಾಡುವುದು :**

ಗುಡಿ ಗುಂಡಾರಗಳಿಗೆ ಹೋಗುವುದು, ದೂರದ ತೀರ್ಥ ಯಾತ್ರೆ ಮಾಡಿದರೆ ಪಾಪ ಪರಿಹಾರವಾಗುತ್ತದೆಂಬ ನಂಬಿಕೆ ಜನರಲ್ಲಿದೆ. ಪುಣ್ಯ ಬರುತ್ತದೆ ಎಂಬ ಮೂಢನಂಬಿಕೆಯಲ್ಲಿ ನದಿಯ ನೀರಿನಲ್ಲಿ

ಅದೆಷ್ಟು ಜನ ಸ್ನಾನ ಮಾಡುವರು ಅದೇ ನೀರಿನಲ್ಲಿ ಬಟ್ಟೆ ತೊಳೆಯುವರು. ನೈವೇದ್ಯ ಅಂತ ಅನ್ನವೆಲ್ಲಾ ನೀರಿಗೆ ಎಸೆಯುವುದು. ಗಂಗೆ ಪೂಜೆ ಎಂದೂ ಹೂ, ಕಾಯಿ, ಕರ್ಪೂರ ಊದು ಬತ್ತಿ ನೀರಿಗೆ ಎಸೆಯುವುದು. ಇವುಗಳಿಗಾಗಿ ಕಾಗೆ ಯಂತಹ ಅಲ್ಲಿಯೇ ಮಲ ಮೂತ್ರವೆಲ್ಲಾ ಮಾಡುವುದು. ಇಷ್ಟೆಲ್ಲಾ ಮಲೀನ ಮಾಡಿದ ಆ ನದಿ ಅಥವಾ ಗುಂಡಾದೊಳಗಿನ ನೀರು ಶುದ್ಧ ತೀರ್ಥವೆಂದು ತುಂಬಿಕೊಂಡು ತರುವುದು ಕುಡಿಯುವುದು ಇದರಿಂದ ಆರೋಗ್ಯ ಕೆಡುವುದಲ್ಲದೆ, ಜಲವು ಮಲೀನಗೊಳ್ಳುವುದು ಎಲ್ಲರು ನೋಡುವ ತಿಳಿಯುವ ವಿಚಾರವೇ ಆಗಿದೆ ಈ ರೀತಿಯಾಗಿ ಜಲಮಾಲಿನ್ಯಗೊಳ್ಳದಂತೆ ತಡೆಗಟ್ಟುವ ಕ್ರಮ ಅಗತ್ಯವಾಗಿದೆ.

**೩೫) ದೆವ್ವಗಾಳಿ ಬಿಟ್ಟಾಗ ಹೊರಗೆ ಬರಬಾರದು :**

ಜೋರಾಗಿ ಬೀಸುವ ಬಿರುಗಾಳಿಗೆ ದೆವ್ವಗಾಳಿ ಎನ್ನುವ ನಂಬಿಕೆ, ಗಾಳಿ ಎಂದು ಯಾವತ್ತೂ, ಯಾರಿಗೂ ಹೇಳಿ ಕೇಳಿ ಬಿಡುವುದಿಲ್ಲ. ಒಮ್ಮೆಂದೊಮ್ಮೆಲೆ ಜೋರಾಗಿ ಬಿಸುವ ಗಾಳಿಗೆ ಧೂಳು ಮಣ್ಣಿನ ಕಣವೆಲ್ಲವೂ ಭೂಮಿಯಿಂದ ಮೇಲೇಳುವುದು ಇದು ಒರಟಾಗಿ ದೇಹಕ್ಕೊತಾಗಿ ಕಣ್ಣಿನಲ್ಲೂ ಧೂಳುಸೇರುವುದು ಅಲ್ಲದೆ ಗಾಳಿಗೆ ಮನೆಯ ಮಾಳಿಗೆಗೆ ಹಾಕಿದ ಹಗುರವಾದ ಆಶ್ರಯಗಳು ಬೀಳುವುದು ಇವೆಲ್ಲಾ ಆಕಸ್ಮಿಕವಾಗಿ ಮೈ ಮೇಲೆ ಬಿದ್ದು ಗಾಯವಾಗಬಹುದು ಇಲ್ಲವೆ ಪ್ರಾಣಪಾಯವು ಆಗಬಹುದು.

ಆ ಗಾಳಿಯ ಅತಿಯಾದ ಒತ್ತಡದ ರಭಸವನ್ನು ವಿರಾಟವಾಗಿ ಕಂಡ ಜನತೆ ದೆವ್ವ ಎಂದು ಹೇಳಿದ್ದಾರೆ. ಆದ್ದರಿಂದ ಆರೊಗ್ಯ ರಕ್ಷಣೆ ದೃಷ್ಟಿಯಿಂದ ಹೀಗೆ ಹೇಳಲಾಗಿದೆ.

**೩೬) ದೆವ್ವಗಾಳಿಗೆ ಹಾರಿಹೋದ ಬಟ್ಟೆ ಹಾಕಿಕೊಳ್ಳಬಾರದು :**

ಈ ಜೋರಾದ ಗಾಳಿಗೆ ಹಾರಿ ಹೋದ ಬಟ್ಟೆ ಎಲ್ಲೆಲ್ಲೋ ದೂರದಲಿ ಬಿದ್ದಿರುತ್ತವೆ ಅವು ಸಿಗುವುದೆ ಅಪರೂಪ. ಒಂದು ವೇಳೇ ಸಮೀಪಕ್ಕೆ ಬಿದ್ದು ಅವು ಸಿಕ್ಕಿದರೂ ದೆವ್ವಗಾಳಿ ಎನ್ನುವ ಭಯದಿಂದಾಗಿ ಅದನ್ನು ಧರಿಸುವುದಿಲ್ಲ ವಿನಹ ಯಾವುದೇ ಇನ್ನಿತರ ಕಾರಣಗಳೇನು ಇಲ್ಲ.

**೩೭) ಗುಲಾಬಿ ಗಿಡ ನೆಡುವಾಗ ಅದಕ್ಕೆ ಹೆಂಡಿ ಹಚ್ಚಬೇಕು :**

ಸಾಮಾನ್ಯವಾಗಿ ಎಲ್ಲಾ ಸಸ್ಯಗಳು ಸೂರ್ಯನ ಶಾಖದಿಂದಾಗಿ ಭೂಮಿಯಿಂದ ಹೊರಗೆ ತೆಗೆದಾಕ್ಷಣ ಬಿಸಿಲಿಗಿಟ್ಟರೆ ಬಾಡುತ್ತವೆ. ಆದ್ದರಿಂದ ಗುಲಾಬಿ ಗಿಡ ಬಿರುಸಾದರೂ ಗಿಡದಿಂದ ಕೊಯ್ದುತಂದ ಭಾಗ ಬಿಸಿಲಿಗೆ ಹಾಗೆ ಬಿಟ್ಟರೆ ಒಣಗುತ್ತದೆ. ಅದೆ ಕೊಯ್ದು ಭಾಗದಲ್ಲಿ ಮೇಲ ಹೆಂಡಿ ಮೆತ್ತಿದರೆ ಅದಕ್ಕೆ ಬಿಸಿಲಿನಿಂದ ರಕ್ಷಣೆ ಸಿಗುವುದು ಹಾಗೂ ನೆಟ್ಟಿದ ಗುಲಾಬಿ ಗಿಡ ಒಣಗುವುದಿಲ್ಲ.

**೩೮) ಸತ್ತವರು ಚುಕ್ಕಿಗಳಾಗುತ್ತಾರೆ :**

ಗ್ರಹ, ನಕ್ಷತ್ರಗಳೆಲ್ಲಾ ಆಕಾಶದಲ್ಲಿ ಹೇಗೆ ಹುಟ್ಟಿಕೊಂಡವು ಎಂಬುದನ್ನು ವಿಜ್ಞಾನ ತೋರಿಸಿಕೊಟ್ಟರೂ ಜನರಿಂದ ಸತ್ತವರು ಚುಕ್ಕಿಗಳಾಗುತ್ತರೆನ್ನುವ ಮೂಢನಂಬಿಕೆ ಇನ್ನೂ ಇದೆ. ಅದಕ್ಕಾಗಿ ಮಕ್ಕಳ ತೊಟ್ಟಿಲಿಗೆ ಆಕಾಶದ ಸಾಕಾರವಾದ ಛತ್ತನ್ನು ಕಟ್ಟಿರುತ್ತಾರೆ. ಅದರಲ್ಲಿ ಸೂರ್ಯ ಚಂದ್ರ ಚುಕ್ಕಿಗಳನ್ನು ನಿರ್ಮಿಸಿ ಮಗುವನ್ನು ಆಕಾಶದ ವೈಚಿತ್ರ್ಯಗಳಿಗೆ ಕಣ್ತೆರಿಸಿದರು.

**೩೯) ಓಡುವ ಚುಕ್ಕೆ ನೋಡಬಾರದು :**

ನಕ್ಷತ್ರಗಳನ್ನು ಸತ್ತವರ ಕಣ್ಣುಗಳು ಎನ್ನುವ ಮಾತು ಈ ಹಿಂದಿನಿಂದಲೂ ಬಂದಿರುವುದು ಪುಣ್ಯವಂತರೇ ನಕ್ಷತ್ರಗಳಾಗುತ್ತಾರೆಂಬ ತಿಳಿಕೆ ಬದುಕಿನ ಸಾರ್ಥಕತೆಗೆ ಬೆರಳು ಮಾಡಿ ತೋರಿಸುವಂತಿದೆ. ನಕ್ಷತ್ರ ಓಡಾವುದಾಗಲಿ ಅಥವಾ ಬೀಳುವುದನ್ನು ಕಂಡರೆ ಅಶುಭ ಕೆಡುಕು ಎಂಬುದು ಜನಪದರ ನಂಬುಗೆ ನಕ್ಷತ್ರ ಬಿದ್ದೊಡನೆ ನೋಡಿದವರು ಉಗುಳಿ ಒಳಿತೆನ್ನುವ ರೂಢಿ ಇಂದೂ ಇದೆ.

**೪೦) ಹುಣ್ಣಿಮೆಗೆ ಚಂದ್ರನನ್ನು ಪೂಜಿಸುವುದು :**

ಚಂದ್ರನು ಹುಣ್ಣಿಮೆಯ ದಿನಗಳಲ್ಲಿ ಕಂಡುಕೊಳ್ಳುವ ಈತನಿಂದ ಬೆಳಂದಿಗಳು ಕೊಡುವುದಿಂದ ಪೂಜಿಸುವ ನಂಬಿಕೆಯಿದೆ ಚಂದಿರ ಬೆಳಕಿನ ಪ್ರತೀಕ ಚಂದಿರನನ್ನು ಪೂಜಿಸುವುದರಿಂದ ನಮ್ಮ ಕಷ್ಟಗಳನ್ನೆಲ್ಲಾ ಕಳೆದು ಬೆಳಕನ್ನು ಕೊಡುತ್ತಾನೆ. ಬಾಳು ಬೆಳಂದಿಗಳಿನಂತೆ ತಂಪಾಗಿರಲೆಂದು ಈ ಚಂದಿರ ನಮ್ಮನ್ನು ಹರಸಲಿ ಎನ್ನುವ ಭಾವನೆ. ಬೆಳಕು ತಂಪುಕೊಡುವ ಚಂದಿರನಿಗೆ ಕೈಮುಗಿದು ತಮ್ಮ ವಿನಯ ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತಾರೆ.

ವಿದ್ಯುಚ್ಛಕ್ತಿ ಇರದ ಕಾಲವೊಂದರಲ್ಲಿ ಜನಪದರು ರಾತ್ರಿ ಚಂದಿರನ ಬೆಳಕನ್ನೇ ಅವಲಂಬಿತರಾಗಿ ಈ ಬೆಳದಿಂಗಳ ದಿನಗಳಲ್ಲಿ ಕೃಷಿ ಮನೆ ಕೆಲಸಗಳನ್ನು ಹಚ್ಚಾಗಿ ಮಾಡಿ ಕೊಳ್ಳುತ್ತಿದ್ದರು. ಪ್ರಕೃತಿಯು ಪ್ರತಿಯೊಂದು ಅಂಶಗಳನ್ನು ಪೂಜಿಸುತ್ತಿದ್ದಂತೆ ಚಂದಿರನನ್ನು ಪೂಜಿಸುವ ರೂಢಿ ಬಂದಿರಬೇಕು. ಪ್ರತಿ ಹುಣ್ಣಿಮೆಗೂ ಪೂಜಿಸಿದರೂ ವರ್ಷದಲ್ಲಿ ಬರುವ ಕಾರ್ತಿಕ ಮಾಸ ಮತ್ತು ಚೈತ್ರ ಮಾಸದಲ್ಲಿ ಬರುವ ಸಂಕಷ್ಟ ಚತುರ್ಥಿಯೆಂದು ಚಂದ್ರೋದಯದ ನಂತರ ಚಂದಿರನನ್ನು ಮೊದಲು ಪೂಜಿಸಿ ಗಣೇಶನನ್ನು ಪೂಜಿಸುತ್ತಾರೆ.

ಭೂಮಿಯಿಂದ ಬಹುದೂರದಲ್ಲಿರುವ ಚಂದಿರ ನಮಗೆ ದೂರದಿಂದಲಾದರೂ ಹರಿಸಲಿ ಎನ್ನುವ ನಂಬಿಕೆ ಜನಪದರಲ್ಲಿ ಕಂಡುಬರುತ್ತದೆ. ಆದರೆ ಚಂದ್ರ ಉಪಗ್ರಹವಾಗಿದ್ದು ಇಂದು ಚಂದ್ರಲೋಕಕ್ಕೆ ಪಯಣಿಸಿ ಅಲ್ಲಿನ ವಿದ್ಯಾಮಾನಗಳು ಅರಿತುಕೊಳ್ಳುವ ಅವಕಾಶ ಸಿಕ್ಕಿದೆ ಎಂದು ಗೊತ್ತಾದ ಈ ದಿನಗಳಲ್ಲಿಯೂ ಚಂದಿರನ ಪೂಜೆ ಮಾತ್ರನಿಂತಿಲ್ಲ;

**೪೧) ಅಮವಾಸ್ಯೆಗಳಲ್ಲಿ ರವಿವಾರ ಅಮವಾಸ್ಯೆ ಶ್ರೇಷ್ಠ :**

ಸೂರ್ಯ ಜಗತ್ತಿನ ಕಣ್ಣು ಎನ್ನಲಾಗುತ್ತದೆ. ಸೃಷ್ಟಿಯ ತಾಪಮಾನ, ಚಲನೆ ಶಕ್ತಿಯ ಪ್ರಭಾವ, ಜೀವ ಜಗತ್ತು ಹಾಗೂ ಪ್ರಕೃತಿ ಸೂರ್ಯನ ಕೃಪೆಯಾಗಿದೆ. ಸೂರ್ಯ ಶಕ್ತಿಯನ್ನು ಅಮವಾಸ್ಯೆಗೆ ಹೋಲಿಕೆ ಮಾಡುವರು. ಆದರೆಅಮವಾಸ್ಯೆ ಸುತ್ತಲಿನ ದಿನಗಳಲ್ಲಿ ರಾತ್ರಿ ಕತ್ತಲು ಹೆಚ್ಚಾಗಿ ಇರುವುದರಿಂದ ಈ ದಿನಗಳಲಿ ಆರಂಭಿಸುವ ಕೆಲಸಗಳೆಲ್ಲವು ಕತ್ತಲಿನಿಂದ ತುಂಬಿರುತ್ತವೆ ಎನ್ನುವ ತಪ್ಪು ಕಲ್ಪನೆ ಜನರಿಲ್ಲಿರುವುದು. ಸಾಮಾನ್ಯವಾಗಿ ಚಂದಿರನ ಬೆಳಂದಿಗಳು ಮರೆಯಾದ ಈ ದಿನಗಳಲ್ಲಿ ರಾತ್ರಿಯೆಲ್ಲಾ ಕತ್ತಲು ಆವರಿಸುವುದರಿಂದ ಪ್ರಾಚೀನರಿಗೆ ತಮ್ಮ ಕೃಷಿ ಕಾರ್ಯ ಮನೆಕೆಲಸ ಹಾಗೂ ಒಡಾಟಕ್ಕೂ ತೊಂದರೆಯಾಗುತ್ತಿತ್ತು (ಅಜ್ಞಾನದಿಂದಾಗಿ) ಈ ದಿನಗಳಲ್ಲಿ ಭೂತ ದೆವ್ವಗಳ ಕಾಟವಿರುತ್ತದೆ ಎನ್ನುವ ಭಯದ ವಾತಾವರಣಗಳು ಕಲ್ಪಿಸಿಕೊಂಡರು. ಧೈರ್ಯದಿಂದ ಓಡಾಡುವರನ್ನು ಗುರುತಿಸಿದೆ. ಅಂತಹವರನ್ನೇ ದೆವ್ವ ಎಂದು ಕರೆದಿರಬಹುದು. ಆದರೆ

ವಿದ್ಯುಚ್ಛಕ್ತಿಯನ್ನು ಬಳಸುವ ಈ ದಿನಗಳಲ್ಲಿ ಹುಣ್ಣಿಮೆ ಕಾಲದ ಬೆಳಂದಿಗಳು ಮತ್ತು ಅಮವಾಸ್ಯೆ ಕತ್ತಲಿನ ರಾತ್ರಿಗಳಿಗೂ ವ್ಯತ್ಯಾಸ ಎನಿಸುವುದಿಲ್ಲ. ವಿದ್ಯುತ್ ಬೆಳಕಿನಿಂದಾಗಿ ಜನರಿಗೆ ರಾತ್ರಿ ಹೊತ್ತು ಕೆಲಸ ಮಾಡಲು ತೊಂದರೆಯಾಗುವುದಿಲ್ಲ. ನಗರದ ಜನಸಂಖ್ಯೆ ಬೆಳೆದಂತೆ ಸಶ್ಮಾನ ಭೂಮಿಗಳಲ್ಲೂ ಮನೆ ನಿರ್ಮಾಣವಾಗುತ್ತಿವೆಯಾದರೂ ಜನರಿಂದ ಭೂತದ ಭಯ ದೂರವಾಗಿಲ್ಲ.

ಅಮವಾಸ್ಯೆ ದಿನದಂದು ಭಯನಾಕ ಚಟುವಟಿಕೆಗಳಿಂದ ದೂರವಿರಲು ವಿಶೇಷ ಪೂಜೆ ತೀರ್ಥ ಯಾತ್ರೆ ಇತ್ಯಾದಿ ಧಾರ್ಮಿಕ ನಂಬಿಕೆಗಳು ಅನುಸರಿಸುವರು. ವಿಶೇಷವಾಗಿ ಅಮವಾಸ್ಯೆ ಗಂಡು ಮತ್ತು ಬಲಿಷ್ಠವೆಂದು ಅದರಂತೆ ವಾರಗಳಲ್ಲಿ ರವಿವಾರ ಸೂರ್ಯನ ಶ್ರೇಷ್ಠ ದಿನ. ಗಂಡು ವಾರ ಎಂಬ ನಂಬಿಕೆಯಿದೆ. ಆದ್ದರಿಂದ ಭಾನುವಾರ ಅಮವಾಸ್ಯೆ ಬಂದರೆ ಜನರ ಪೂಜೆ, ತೀರ್ಥ ಯಾತ್ರೆ ರಕ್ಷಾಕವಚಗಳ ನಿರ್ಮಾಣ ಇವೆಲ್ಲಾ ಭರದಿಂದ ನಡೆದಿರುವುದುಮಟು. ಇಂತಹ ಆಧುನಿಕ ಶಿಕ್ಷಣ ಪಡೆದ ಜನತೆಯೂ ಈ ಆಚರಣೆಗಳಿಂದ ದೂರವಾಗಿ ಉಳಿದಿಲ್ಲ. ಯಾವುದು ಬೇಕು. ಯಾವುದು ಬೇಡ ಎನ್ನುವ ವಿಚಾರ ಮಾಡಬೇಕಾಗಿದೆ. ಅಮಾವಾಸ್ಯೆ ಬಗ್ಗೆ ಇಟ್ಟಿಕೊಂಡ ಈ ನಂಬಿಕೆಗಳಲ್ಲಾ ಮೂಢನಂಬಿಕೆಗಳಾಗಿ ಮುಂದುವರೆಯುತ್ತಲೆ ಇವೆ.

**೪೨) ಸೂರ್ಯನನ್ನು ಪೂಜಿಸುವುದು :**

ದಿನಾಲೂ ಮುಂಜಾವಿನ ಸಮಯದಲ್ಲಿ ಸೂರ್ಯನ ಹೊಂಗಿರಣಗಳಿಂದ ಡಿ ವಿಟಾಮಿನ ಸಿಗುತ್ತದೆ. ಇದು ದೇಹಕ್ಕೆ ಬೇಕಾದ ಅಗತ್ಯ ಪೌಷ್ಠಿಕಾಂಶಗಳಲ್ಲಿ ಒಂದಾಗಿದ್ದು ಆರೋಗ್ಯವನ್ನು ಕಾಪಾಡುತ್ತದೆ. ಈ ಬಿಸಿಲಿಗೆ ಚಳಿಗಾಲದಲ್ಲಿ ಚಳಿಯಾಗುವುದರಿಂದ ಮೈಯನ್ನು ಕಾಯಿಸಿಕೊಳ್ಳುವ ನೆಪದಿಂದಲಾದರೂ ಕೊಡಲಾಗುತ್ತದೆ. ಆದರೆ ಇನ್ನುಳಿದ ದಿನಗಳಲ್ಲಿ ಈ ರೀತಿ ಆಪೇಕ್ಷಿಸುವ ಅಗತ್ಯವು ಇರುವುದಿಲ್ಲ. ಆದ್ದರಿಂದ ಋತುಮಾನಕ್ಕನುಸಾರವಾಗಿ ಸೂರ್ಯನ ಕಿರಣ ಆರೋಗ್ಯ ಸೋಂಕುವಂತೆ ಸೂರ್ಯನಿಗೆ ನಮಸ್ಕಾರ ಮತ್ತು ಪೂಜೆ ಮಾಡುವ ನೆಪದಿಂದಲಾದರೂ ಈ ಎಳೆ ಬಿಸಿಲಿಗೆ ಮೈಯೊಡ್ಡುವ ಅವಕಾಶ ಸಿಗುತ್ತದೆ. ಆದ್ದರಿಂದ ದಿನಾಲೂ ಸೂರ್ಯನ ಪೂಜೆ, ನಮಸ್ಕಾರ ಮಾಡುವಲ್ಲಿ ಈ ಒಂದು ವೈಜ್ಞಾನಿಕ ಉಪಯೋಗ ಕಂಡುಬರುತ್ತದೆ.

**೪೩) ಬೆಳ್ಳಿ ಚುಕ್ಕಿ ನೋಡಿದರೆ ಶುಭ :**

ಜನಪದ ಬದುಕಿನಲ್ಲಿ ಬೆಳ್ಳಿ ಚುಕ್ಕಿ ಬಗ್ಗೆ ತಮ್ಮದೇ ಆದ ನಂಬಿಕೆಗಳನ್ನಿಟ್ಟುಕೊಂಡಿದ್ದಾರೆ. ಯಾವುದೇ ಗಡಿಯಾರದ ಸೌಲಭ್ಯವಿರದಿದ್ದ ಕಾಲದಲ್ಲಿ ನೈಸರ್ಗಿಕ ವಿಧಾನಗಳ ಮೂಲಕ ಸಮಯ ಗುರುತಿಸಿಕೊಳ್ಳುತ್ತಿದ್ದರು. ಈ ಚುಕ್ಕಿ ಜನರಿಗೆ ಬೆಳಗಾಗುವ ಮೂನ್ಸೂಚನೆ ನಿಡುವುದಾಗಿದ್ದರಿಂದ ಇದರ ಮೇಲೆ ಅಭಿಮಾನ ಜನರಿಗಿತ್ತು. ಹಾಗಾಗಿ ಅವರ ಬದುಕಿನಲ್ಲಿ ಬಹಳಷ್ಟು ಜನ ಜನಿತವಾದ ನಕ್ಷತ್ರ ಈ ಬೆಳ್ಳಿಚುಕ್ಕಿ ಶುಕ್ರಗ್ರಹಕ್ಕೆ ಸೂರ್ಯೋದಯವೇ ಸರಿ. ಇದನ್ನು ನೋಡಿಯೇ ಅವರಿಗೆ ಬೆಳಗು ಹರಿಯುತ್ತದೆ. ಹೊಲದಲ್ಲಿರುವವರಂತೂ ಬೆಳ್ಳಿ ಚುಕ್ಕಿಯನ್ನೇ ನಂಬಿಕೊಂಡು ಏಳುತ್ತಿದ್ದರು. ಅವರಿಗೆ ದಿನ ಆರಂಭವಾಗುವುದೇ ಬೆಳ್ಳಿಯ ಬರುವಿನಿಂದ. ನೀರು, ಸಿಡಿ ಹೆಂಡಿ ಕಸ, ಬೀಸು, ಕುಟ್ಟುವ ಕಾರ್ಯಕ್ಕಾಗಿ ಗ್ರಾಮೀಣ ಬದುಕು ಎಚ್ಚರಗೊಳ್ಳುತ್ತದೆ. ಬೆಳ್ಳಿ ಮೂಡುವ ಹೊತ್ತು ಕೋಳಿ ಕೂಗುವ ಹೊತ್ತು ಎಂಬ ಮಾತುಗಳು ಜನಪದರಲ್ಲಿ ಸಹಜ. ಈ ನಕ್ಷತ್ರ ಬೆಳ್ಳಿಗೆ ಬೆಳ್ಳಿಯಂತೆ ಪ್ರಕಾಶ ಮಾನವಾಗಿರುವುದರಿಂದಲೇ ಇದಕ್ಕೆ ಬೆಳ್ಳಿ ಎಂದು ಕರೆಯಲಾಗಿದೆ.

**೪೪) ಸಸ್ಯದ ಬೇರುಗಳು ಆಕಾಶಕ್ಕೆ ತೋರಿಸಬಾರದು :**

ಯಾವುದೇ ಸಸ್ಯಗಳು ಒಂದು ಸ್ಥಳದಿಂದ ತೆಗೆದು ಇನ್ನೊಂದು ಸ್ಥಳಕ್ಕೆ ಒಯ್ದು ಹಚ್ಚುವಾಗ ಸಸ್ಯಗಳ ಬೇರು ಎಳೆಯದಾಗಿರುವುದರಿಂದ ಸೂರ್ಯನ ಶಾಖಕ್ಕೆ ಬಾಡಿ ಹೋಗುವವು. ಹಿಗಾಗಿ ಬೆಳೆಯುವ ಜೀವಸತ್ವ ಕಳೆದುಕೊಂಡು ಸಸ್ಯಗಳು ಇನ್ನೊಂದು ಕಡೆ ಹಚ್ಚಿದರೂ ಬೆಳೆಯುವುದಿಲ್ಲ ಆದ್ದರಿಂದ ಭೂಮಿಯಿಂದ ತೆಗೆದ ಎಳೆಯ ಸಸ್ಯಗಳನ್ನು ಎಳೆ ಮಗುವಿನಂತೆ ಬಿಸಿಲಿಂದ ರಕ್ಷಿಸುವುದು ಅಗತ್ಯವಾಗಿರುತ್ತದೆ. ಆದ್ದರಿಂದ ಸಸ್ಯಗಳ ರಕ್ಷಣೆಯ ಉದ್ದೇಶ ಈ ನಂಬಿಕೆಯಲ್ಲಿರುವುದು ವೈಜ್ಞಾನಿಕವಾಗಿ ಒಪ್ಪುವ ಮಾತಾಗಿದೆ.

**೪೫) ಹಾಲು, ಮಜ್ಜಿಗೆ, ಮೊಸರು ಆಕಾಶಕ್ಕೆ ತೋರಿಸಬಾರದು :**

ಹೈನುಗಾರಿಕೆ ಮಾಡುವ ಜನಪದರು ನಿಯಮ, ನಂಬಿಕೆಗಳು ನಾಜೂಕವಾಗಿ ಅನುಸರಿಸುತ್ತಾರೆ. ಮನೆಯಲ್ಲಿಯೇ ಹಾಲು ಕರೆಯುವಾಗ ಮಜ್ಜಿಗೆ ಮಾಡುವಾಗ ಹೊರಗಿನಿಂದ ಬಂದವರ ಕಣ್ಣಿಗೆ ಬೀಳದಂತೆ ಎಚ್ಚರ ವಹಿಸುತ್ತಾರೆ ಹಾಗೆಯೇ ಬಿಸಿಲಿನಿಂದಲೂ ಹಾಲು, ಮಜ್ಜಿಗೆ, ಮೊಸರಿನ ರಕ್ಷಣೆ ಮಾಡುವ ಉದ್ದೇಶ ಈ ನಂಬಿಕೆಯಲ್ಲಿದೆ.

ಸಾಮಾನ್ಯವಾಗಿ ಬೇಸಿಗೆ ದಿನಗಳಲ್ಲಿ ಹೆಚ್ಚಿನ ಉಷ್ಣತೆಯ ಪರಿಣಾಮವಾಗಿ ಮನೆಯಲ್ಲಿಟ್ಟ ಹಾಲು ಕೆಡುವುದು, ಮಜ್ಜಿಗೆ ಮೊಸರಿನಲ್ಲಿ ಹೆಚ್ಚಿನ ಕಿಣ್ವಗಳು ಬ್ಯಾಕ್ಟರಿಯಾಗಳು ಹುಟ್ಟಿಕೊಳ್ಳುವುದರಿಂದ ಹುಳಿಯಾಗುತ್ತವೆ. ಅದರಂತೆ ಸೂರ್ಯನ ಶಾಖಕ್ಕೆ ಈ ವಸ್ತುಗಳೆಲ್ಲಾ ತೋರಿಸಿದಾಗ ಹಾಳಾಗುವುದು ವೈಜ್ಞಾನಿಕವಾಗಿ ನಿಜವೆ ಆಗಿದೆ. ಹಾಳಾಗುವುದನ್ನು ತಪ್ಪಿಸಲು ಈ ನಂಬಿಕೆ ರೂಢಿಯಲ್ಲಿರುವುದು.

**೪೬) ಆಕಾಶಕ್ಕೆ ಮುಖಮಾಡಿ ಮಲಗಬಾರದು :**

ಆಕಾಶಕ್ಕೆ ನೋಡುತ್ತಾ ಅಂಗಾತಾಗಿ ಮಲಗಿರುವಾಗ ಉಸಿರಾಟದ ಸಂದರ್ಭದಲ್ಲಿ ನೇರವಾಗಿ ಕ್ರಿಮಿಗಳು ದೇಹ ಸೇರುವ ಸಾಧ್ಯತೆಗಳಿರುತ್ತವೆ ಹಾಗೂ ಭಾರವಾದ ಯಾವುದೇ ವಸ್ತುಗಳು ಹೃದಯದ ಮೇಲೆ ಬೀಳುವ ಸಾಧ್ಯತೆಗಳಿರುತ್ತವೆ. ಆದ್ದರಿಂದ ಇಂತಹ ಅಪಾಯಗಳಿಂದ ರಕ್ಷಿಸಿಕೊಳ್ಳಲು ಈ ನಂಬಿಕೆ ರೂಢಿಯಲ್ಲಿರುವುದು.

**೪೭) ಆಕಾಶ ಕೆಂಪಾಗಿ ಕಂಡರೆ ಕಡಲಲ್ಲಿ ಮೀನುಗಳು ಸಾಯುತ್ತವೆ :**

ಮೋಡಗಳಲ್ಲಿನ ಶುಭ್ರ ಆಕಾಶದಲ್ಲಿ ಸೂರ್ಯಾಸ್ತದ ಬಳಿಕ ರಂಗೇರುವ ದೃಶ್ಯ ಮತ್ತು ಮೀನುಗಳ ದೊರೆಯುವ ಸಂದರ್ಭಗಳ ನಡುವೆ ತಾಳೆ ಹಾಕಲಾಗಿದೆ. ಮೀನು ಹಿಡಿಯಲು ಅನುಕೂಲವಾದ ವಾತಾವರಣವನ್ನು ಗಮನಿಸಿಕೊಂಡು ಇಂತಹ ನಂಬಿಕೆ ಹುಟ್ಟಿಕೊಂಡಿರಬೇಕು.

**೪೮) ಆಕಾಶ ನೋಡಿ ಗಂಡು ಮಗು ಹುಟ್ಟಬೇಕು :**

ಭೂಮಿ ನೋಡಿ ಹೆಣ್ಣು ಮಗು ಹುಟ್ಟಬೇಕು; ಆಕಾಶ ನೋಡಿ ಗಂಡು ಮಗು ಹುಟ್ಟಬೇಕು ಎಂಬ ನಂಬಿಕೆ ರೂಢೀಯಲ್ಲಿರುವುದು. ಈ ನಂಬಿಕೆಯಲ್ಲಿ ಯಾವುದೇ ವೈಜ್ಞಾನಿಕವಾಗಲಿ ಅಥವಾ ಇನ್ನಿತರ ದೃಷ್ಟಿಕೋನದಿಂದಲೂ ಉಪಯುಕ್ತ ಅಂಶವೇನು ಕಂಡುಬರುವುದಿಲ್ಲ. ಆಕಾಶ ಗಂಡು ಭೂಮಿ ಹೆಣ್ಣು ಎಂಬ ಕಲ್ಪನೆ ಜನರಲ್ಲಿರುವುದರಿಂದ ಹಿಗೆ ಹುಟ್ಟಬೇಕೆಂಬ ನಂಬಿಕೆ ರೂಢಿಯಲ್ಲಿ ಬಂದಿರಬೇಕು.

೪೯) **ಗ್ರಹಣ ಹಿಡಿದಾಗ ಆಕಾಶ ನೋಡಬಾರದು :**

ಗ್ರಹಣವೆಂದರೆ ಸೂರ್ಯಚಂದ್ರರಿಗೆ ಹಿಡಿದಿರುವ ಶನಿಯ ಕಾಟವೆಂಬ ನಂಬಿಕಯಿರುವುದರಿಂದ ಈ ಸಮಯದಲ್ಲಿ ಆಕಾಶ ನೊಡಬಾರದೆಂಬ ನಂಬಿಕೆಯಿದೆ. ಗ್ರಹಣವೆಂದರೆ ಅಂತಿಮವಾಗಿ ನೆರಳು ಬೆಳಕುಗಳು ಹಿಡಿಯುವಾಗ ನಮಗೆ ಕಾಣುವಂತೆ ಸೂರ್ಯಬಿಂಬದ ಎದುರು ಚಂದ್ರಬಿಂಬ ಬಂದಾಗ ಸೂರ್ಯಗ್ರಹಣವೂ, ಭೂಮಿಯ ನೆರಳಿಗೆ ಚಂದ್ರಬಿಂಬ ಪ್ರವೇಶಿಸಿದಾಗ ಚಂದ್ರಗ್ರಹಣವೂ ಸಂಭವಿಸುತ್ತವೆ. ಮೊದಲನೆ ಸಂದರ್ಭದಲ್ಲಿ ಚಂದ್ರನ ನೆರಳು ನಮ್ಮ ಮೇಲೆ ಬೀಳುತ್ತದೆ. ಎರಡನೆ ಸಂದರ್ಭದಲ್ಲಿ ಚಂದ್ರ ಭೂಮಿಯ ನೆರಳಿನಲ್ಲಿ ಹೋಗುತ್ತದೆ. ಈ ನೆರಳುಗಳು ಒಂದಿಷ್ಟು ನಮ್ಮನ್ನು ಬಾಧಿಸುವುದಿಲ್ಲ.

ಗ್ರಹಣದ ವೇಳೆ ಗುರುತ್ವಾಕರ್ಷಣದ ಬಲದಲ್ಲಿ ಕ್ಷೋಭೆಯಾಗಲಿ ವಾಯುಮಂಡಲದಲ್ಲಿ ವಿಷಾನೀಲದ ಏರಿಕೆಯಾಗಲಿ ಖಂಡಿತ ಉಂಟಾಗದು. ಸೂರ್ಯ ಗ್ರಹಣವನ್ನು ಬರಿಗಣ್ಣಿನಿಂದ ನೋಡಬಾರದು ಎಂಬ ಎಚ್ಚರಿಕೆಯ ವಿನಹ ಗ್ರಹಣ ಕಾಲದಲ್ಲಿ ಬೇರೆ ಯಾವುದೇ ತೆರನಾದ ವಿಧಿನಿಯಮಗಳನ್ನು ಆಚರಿಸಬೇಕಾಗಿಲ್ಲ. ಆದ್ದರಿಂದ ಗ್ರಹಣ ಬಗ್ಗೆ ಭಯಸಲ್ಲದು. ಆಕಾಶದ ಈ ಅದ್ಭುತ ನಾಟಕವನ್ನು ನೋಡಿ ಸಂತೋಷಿಸಬೇಕು ತರುವಾಯ ಅದರ ಕಾರಣವನ್ನು ವೈಜ್ಞಾನಿಕವಾಗಿ ಅನ್ವೇಷಿಸಿ ತಿಳಿಯಬೇಕು.

೫೦) **ಗ್ರಹಣಗಳ ಸುತ್ತಲಿನ ನಂಬಿಕೆಗಳು :**

ಗ್ರಹಣವೆಂದರೆ ವಿಪತ್ತು ಎನ್ನುವ ಭಯಾನಕ ನಂಬಿಕೆ ಜನರಲ್ಲಿದೆ ಸೂರ್ಯ ಚಂದ್ರರಿಗೆ ಬಂದಿರುವ ವಿಪತ್ತಿನ ಸಮಯ. ಮಧ್ಯಾಹ್ನ (ಸೂರ್ಯಗ್ರಹಣ) ದಲ್ಲಿ ಆವರಿಸಿರುವ ಕತ್ತಲೆಯ ಅನುಭವ ಈ ಭಯದಿಂದ ರಕ್ಷಿಸಿಕೊಳ್ಳಲು ಸಾಮೂಹಿಕ ಕೂಗಾಟ, ವಾದ್ಯಗಳ ಘೋಷಣೆ ಉಪಯೋಗಿಸಿರಬೇಕು.

ಗ್ರಹಣವನ್ನು ಗ್ರಹ (ಹಿಡಿಯುವುದು) ಉಪರಾಗ (ಕಪ್ಪಾಗುವಿಕೆ) ಎಂದೂ ಕರೆಯುವುದುಂಟು. ಗ್ರಹಣ ಕುರಿತು ಆಧುನಿಕ ವಿಜ್ಞಾನ ವಿವರಿಸುವ ರೀತಿ ಹೀಗಿದೆ "ಒಂದು ಆಕಾಶಕಾಯವು ಇನ್ನೊಂದರ ನೆರಳಿನಿಂದ ಮರೆಯಾದರೆ ಮೊದಲನೆಯದು ಗ್ರಹಣಕ್ಕೆ ಒಳಗಾಗುತ್ತದೆ. ಅದು ನೆರಳಿನಿಂದ ಪೂರ್ತಿಮರೆಯಾದರೆ ಅದು ಸರ್ವಾಗ್ರಸ ಅಥವಾ ಖಗ್ರಾಸ ಅಥವಾ ಪೂರ್ಣಗ್ರಹಣ; ಪೂರ್ತಿಮರೆಯಾಗದಿದ್ದರೆ ಖಂಡಗ್ರಹಣ"[೭೫] ಇನ್ನೊಂದು ಕಂಕಣ ಗ್ರಹಣ ಎಂದು ಗುರುತಿಸಿರುವುದು ಕಾಣುತ್ತೇವೆ ಇದು "ವೈಶಿಷ್ಟ್ಯಪೂರ್ಣಕಂಕಣ ಗ್ರಹಣ" ದಿನಾಂಕ: ೧೫-೧-೨೦೧೦ ರಲ್ಲಿ ಸಂಭವಿಸಿತು. ಇಂತಹ ಗ್ರಹಣ ಶತಮಾನಗಳ ಹಿಂದೆ ಆಗಿತ್ತು[೭೬] ಸೂರ್ಯನನ್ನು ನೇರವಾಗಿ ನೊಡಬಾರದಷ್ಟೇ ಗಾಜು ದೂರದರ್ಶಕಗಳಂತ ಸಾಧನಗಳಿಂದ ನೋಡಬಹುದು.

ಸೂರ್ಯ ಮತ್ತು ಚಂದ್ರರ ನಡುವೆ ಭೂಮಿ ಬಂದಾಗ ಭೂಮಿಯ ನೆರಳು ಚಂದ್ರನ ಮೇಲೆ ಬಿದ್ದು ಚಂದ್ರ ನಮ್ಮಿಂದ ಮರೆಯಾಗುತ್ತಾನೆ; ಅದು ಚಂದ್ರಗ್ರಹಣ. ಸೂರ್ಯ ಮತ್ತು ಭೂಮಿಯ ನಡುವೆ ಚಂದ್ರ ಬಂದಾಗ ಸೂರ್ಯ ನಮ್ಮಿಂದ ಮರೆಯಾಗುತ್ತಾನೆ; ಅದು ಸೂರ್ಯಗ್ರಹಣ.

ಗುಹಾವಾಸಿಗಳು ಗ್ರಹಣಗಳ ಚಿತ್ರಗೊಡೆಗಳ ಮೇಲೆ ಒರಟೊರಟಾಗಿ ಬಿಡಿಸುತ್ತಿರುವುದಾಗಿ ಪ್ರಾಚ್ಯ ಶಾಸ್ತ್ರಜ್ಞರು ಗುರುತಿಸುತ್ತಾರೆ. ಹಿಂದಿನಿಂದ ಇದರ ಕಲ್ಪನೆ ಇರುವುದೆಂದು ಇದರಿಂದ ತಿಳಿಯಬಹುದು. ಗ್ರಹಗಳ

೭೫(ಅಡಿಟಿಪ್ಪಣಿ:೭೫: ಜನ-ಜನಪದ-ಜಾನಪದ, ಲೇಖಕರು ಡಾ.ಎಂ.ಚಿದಾನಂದ ಮೂರ್ತಿ ಪುಟ ಸಂಖ್ಯೆ:೪೨೩)
೭೬(ಅಡಿಟಿಪ್ಪಣಿ:೭೬: ಟಿ.ವಿ-೯ರಲ್ಲಿ ದಿ:೧೫.೦೧.೨೦೧೦)

ಚಲನೆ ವೀಕ್ಷಿಸಿದ ಮೊದಲಿಗರಲ್ಲಿ ಈಜಿಪ್ಟಿಯನ್ನುರು (ಕ್ರಿ.ಪೂ ೩೫೦೦ ರಲ್ಲಿ) ಮತ್ತು ಮೆಸಪೋಟೊಮಿಯಾನ್ನರು (ಕ್ರಿ.ಪೂ ೨೭೦೦ ರಲ್ಲಿ) ಅಗ್ರಗಣ್ಯರು, ಭಾರತದಲ್ಲಿ ಕ್ರಿ.ಪೂ ಸಾವಿರಕ್ಕಿಂತಲೂ ಹಿಂದಿನಿಂದಾದ ಋಗ್ವೇದದಲ್ಲಿ ಪೂರ್ಣ ಸೂರ್ಯಗ್ರಹಣದ ಉಲ್ಲೇಖವಿದೆ "ಓ ಸೂರ್ಯನೇ, ಅಸುರನ ಮಗನಾದ ಸ್ವಾರ್ಭಾನವು ನಿನ್ನನ್ನು ಕತ್ತಲೆಯಿಂದ ಘಾತಿಸಿದಾಗ, ಅತ್ರಿಯು, ಅತ್ಯುನ್ನತ, ಮಂತ್ರದ ಪಠಣದಿಂದ ಕತ್ತಲೆಯಲ್ಲಿ ಮುಚ್ಚಿಹೋದ ಸೂರ್ಯನನ್ನು ಬಿಡುಗಡೆ ಮಾಡಿದನು.[೨೨]

ರಾಹು ಮತ್ತು ಕೇತು ಎನ್ನುವ ರಾಕ್ಷಸರು ಪೀಡಿಸುತ್ತಾರೆನ್ನುವ ನಂಬಿಕೆಯು ಇದೆ. ಮೋನಿಯರ್ ವಿಲಿಯಮ್ಸ ತಮ್ಮ A Sanskrit English Dictionary ಕೋಶದಲ್ಲಿ ಪುಟ ಸಂಖ್ಯೆ ೮೭೯ ರಲ್ಲಿ ರಾಹುವಿನ ಕಥೆ ಹೀಗೆ ಕೊಟ್ಟಿದ್ದಾರೆ. ರಾಹು ಸೂರ್ಯ ಚಂದ್ರನನ್ನು ಹಿಡಿದು ಗ್ರಹಣ ಉಂಟುಮಾಡುವ ದೈತ್ಯ ವಿಪ್ರಚಿತ್ತ ಸಿಂಹಿತೆಯರಮಗ ಅವನಿಗೆ ಹಾವಿನ ಬಾಲ ಉಂಟು ಸಮುದ್ರ ಮಥನವಾದಾಗ ಅವನು ವೇಷ ತೊಟ್ಟು ದೇವತೆಗಳ ಮಧ್ಯ ಕುಳಿತು ವಿಷ್ಣು ಅವನ ತಲೆಯನ್ನು ಕತ್ತರಿಸಿಬಿಟ್ಟ. ಅದು ಹೋಗಿ ಆಕಾಶಕ್ಕೆ ·ಸೇರಿಕೊಂಡಿತು. ಅಮೃತ ಕುಡಿದಿದ್ದರಿಂದ ಪ್ರಾಣ ಹೊಗಲಿಲ್ಲ. ಪ್ರತೀಕಾರ ಬುದ್ಧಿಯಿಂದ ರಾಹು ಆಗಾಗ್ಗೆ ಸೂರ್ಯ ಚಂದ್ರರನ್ನು ನುಂಗುತ್ತಾನೆ. ಆ ದೈತ್ಯನ ಬಾಲ ಕೇತುವಾಗಿ ಅನೇಕ ಉಲ್ಕೆ ಧೂಮಕೇತುಗಳಿಗೆ ಕಾರಣವಾಗಿದೆ. ರಾಹು ಕೇತುಗಳು ಈ ಕಥೆ ಇಂದಿಗೂ ಜನಪದರು ಹೇಳುತ್ತಾರೆ. ಆದರೆ ಪ್ರಾಚೀನ ಭಾರತದ ಖಗೋಳ ವಿಜ್ಞಾನಿಗಳು ಈ ಕಥೆಯನ್ನು ನಂಬಿಲಿಲ್ಲ. ಗ್ರಹಣ ಪ್ರಾಕೃತಿಕ ಘಟನೆಗಳಲ್ಲಿ ಒಂದು ಎಂದು ತಿಳಿದಿದ್ದರು. ಕ್ರಿ.ಶ. ೪೯೯ ರಲ್ಲಿ ಆರ್ಯಭಟನು ಆರ್ಯಭಟೀಯ ಎನ್ನುವ ಗ್ರಂಥ ರಚಿಸಿದನು ಛಾದಯತಿ ಶಶಿ ಸೂರ್ಯ ಶಶಿನಂ ಮಹತೀ ಚಭೂಛಾಯ (ಶಶಿ ಸೂರ್ಯನನ್ನು ಭೂಛಾಯೇಶಶಿಯನ್ನು ಆವರಿಸುತ್ತದೆ) ಎನ್ನುವ ಮಾತಿನಿಂದ ಗ್ರಹಣವನ್ನು ವೈಜ್ಞಾನಿಕವಾಗಿ ಅರ್ಥ ಮಾಡಿಕೊಂಡಿದ್ದರೆಂದು ತಿಳಿಯುತ್ತದೆ. ವರಹಾಮೀಹರನು ಬೃಹತ ಸಂಹಿತೆಯಲ್ಲೂ ವೈಜ್ಞಾನಿಕ ವಿಚಾರವೇ ಹೇಳಿದನು.

ಗ್ರಹಣ ಮುಗಿದ ಬಳಿಕ ಸ್ವಚ್ಛ ಮಾಡುವುದು ಎಸ್ಕಿಮೋಗಳು ಗ್ರಹಣದ ವೇಳೇ ಕೆಟ್ಟ ಪರಿಣಾಮದಿಂದ ಸೂಕ್ಷ್ಮವಸ್ತು ಇಳಿದು ಬಂದು ಅಡುಗೆ ಪಾತ್ರೆಗಳಿಗೆ ಸೇರಿದ್ದರೆ ರೋಗ ಬರುತ್ತವೆಂದು ಹೆದರಿ ಹೆಂಗಸರು ಪಾತ್ರಗಳೆಲ್ಲಾ ತಲೆಕೆಳಗೆ ಮಾಡಿ ಇಡುತ್ತಿದ್ದರು. ಈ ನಂಬಿಕೆ ಭಾರತದಲ್ಲೂ ಉಂಟು. ಗ್ರಹಣದ ನಂತರ ಮನೆ ತೊಳೆದು. ಪಾತ್ರೆ ತೊಳೆದು ಸ್ನಾನ ಮಾಡಿ ಅಡುಗೆ ಮಾಡಿ ದೇವರಿಗೆ ಅರ್ಪಿಸಿ ನಂತರ ಊಟ ಮಾಡುವ ಪದ್ಧತಿ ಬೆಳೆದು ಬಂದಿದೆ. ಮೊಸರು ಹಾಲು ಇನ್ನಿತರ ವಸ್ತುಗಳು ಚೆಲ್ಲಲು ಆಗದ ವಸ್ತುಗಳಲ್ಲಿ ದರ್ಭೆ (ಒಂದು ಜಾತಿಯ ಹುಲ್ಲು; ಕುಶ) ಹಾಕಿ ಶುದ್ಧಗೊಳಿಸುತ್ತಾರೆ. ದವಸಧಾನ್ಯ ಸಂಗ್ರಗಳಲ್ಲಿ ಗರಿಕೆ, ಬೇವಿನಸೊಪ್ಪು, ಬಿಲ್ವಪತ್ರೆ, ಬನ್ನಿಪತ್ರೆ ಹಾಕುವ ನಂಬಿಕೆಯೂ ಇದೆ.

೧೮ನೇ ಶತಮಾನದಲ್ಲಿ ಇಂಗ್ಲೆಂಡಿನ ಒಬ್ಬ ವೈದ್ಯ ಸೂರ್ಯ ಗ್ರಹಣದ ಸಂಧರ್ಭದಲ್ಲಿ ವಿಷಾನೀಲ ಸುರಿಯುತ್ತದೆಂದು ತನ್ನ ಊರಿನ ಸುತ್ತವಿರುವ ಬಾವಿ ಮುಚ್ಚಿಸಿದ. ಕರ್ನಾಟಕದಲ್ಲೂ ಕೆಲವೆಡೆ ಇಂತಹ ಕಾರ್ಯ ಉಂಟು ಹೀಗೆ ಆಧುನಿಕದಲ್ಲೂ ಇದರ ಬಗ್ಗೆ ತಪ್ಪುಕಲ್ಪನೆಗಳಿವೆ.

---

೨೨(ಅಡಿಟಿಪ್ಪಣಿ.೨೨: ಜನ-ಜನಪದ-ಜಾನಪದ, ಲೇಖಕರು ಡಾ.ಎಂ.ಚಿದಾನಂದ ಮೂರ್ತಿ ಪುಟ ಸಂಖ್ಯೆ:೪೨೮)

ಭಾರತದಲ್ಲಿ ಧರ್ಮ ಶಾಸ್ತ್ರ ಗ್ರಂಥಗಳಲ್ಲಿ ಈ ಸಮಯದಲ್ಲಿ ಅನೇಕ ನಿಷೇಧಗಳು ನಿಯಮಿಸಲಾಗಿದೆ. ಗ್ರಹಣದ ಸಮಯದಲ್ಲಿ ಊಟ ಮಾಡಬಾರದು, ಗರ್ಭಿಣಿಯರು ಕೆಲಸ ಮಾಡಬಾರದು; ಮಲಗಕೊಂಡಿರಬೇಕು ಮೇಲೆ ಬಿಳಿಬಟ್ಟೆ ಹೊದ್ದಿಕೊಳ್ಳಬೇಕು. ಏನನ್ನೂ ತಿನ್ನಬಾರದು, ದೇವರಧ್ಯಾನದಲ್ಲಿರಬೇಕು ಹೀಗೆ ಅನೇಕ ನಂಬಿಕೆಗಳು ಇದರ ಸುತ್ತಲೂ ಇವೆ. "ಗರ್ಭಿಣಿಯರಿಗೆ ವಿಧಿಸಿದ ನಿಯಮಗಳು ಮಿಥ್ಯ" ಎಂದು ಖಗೋಳ ವಿಜ್ಞಾನಿ ಡಾ.ಎಲ್.ಪಿ.ಶ್ರೀ ವತ್ಸ ಹೇಳುತ್ತಾರೆ. [೭೮]

ಅಂದಿನ ಮಾನವನ ದೃಷ್ಟಿಯಲ್ಲಿ ಗ್ರಹಣಗಳು ರುದ್ರಗಗನ ನಾಟಕಗಳೆನಿಸಿದವು. ಈ ನಿರ್ಜೀವ ಮತ್ತು ಅಗಾಧ ದೂರದ ಗ್ರಹಗಳು ವ್ಯಕ್ತಿಗಳ ಯಾವ ಪ್ರಭಾವ ಭೀರುವುದಿಲ್ಲ. ಯಾವುದೇ ಅನಾವಶ್ಯಕ ಪೂಜೆ, ಹೋಮ ಹವನಗಳ ಅವಶ್ಯಕತೆ ಇಲ್ಲವೆಂದೇ ಹೇಳಬಹುದು.

"ನಾವು ನವಗ್ರಹಗಳೆಂದು ಹೇಳುವ ಯಂತ್ರಗಳು ಪರಮ ವಿಪರ್ಯಾಸ! ಎಲ್ಲಕ್ಕೂ ವೇದ ಅಥವಾ ವೇದಿಕ ಪದ ಜೋಡಣೆಯಿಂದ ಪಾವಿತ್ರ್ಯ .ಸಿದ್ಧಿಸುವುದು ಎಂಬುದೊಂದು ಅಥವಾ ವೇದಿಕೆ ಪದ ಜೋಡಣೆಯಿಂದ ಪಾವಿತ್ರ್ಯ ಸಿದ್ಧಿಸುವುದು ಎಂಬುದೊಂದು ಮೂರ್ಖ ನಂಬಿಕೆ. ಇದಕ್ಕೆ ನಿದರ್ಶನವಾಗಿ ನವಗ್ರಹಗಳನ್ನು ಕುರಿತು ಮಂತ್ರಗಳು ಇವು ವೇದೋಕ್ತವೆಂಬ ಹಂಬಲ ಸಾವಿರಾರು ವರ್ಷಗಳ ಹಿಂದೆಯೇ ಮೂಡಿದೆ. ಇದು ಭ್ರಾಂತಿ, ವೇದಗಳಲ್ಲಿ ಗ್ರಹಗಳ ಉಲ್ಲೇಖವೇ ಇಲ್ಲ! ಅಂದ ಮೇಲೆ ಅವನ್ನು ಕುರಿತು ಸ್ತೋತ್ರ ಮಂತ್ರಗಳೆಲ್ಲಿಂದ ಬರಬೇಕು?" [೭೯] ಆದ್ದರಿಂದ ಆಕಾಶಕಾಯಗಳಾದ ಅವುಗಳನ್ನು ದೈವತ್ವಕ್ಕೆ ಆರೋಪಿಸದೆ ಇರುವುದು, ಆಕಾಶದ ನಿರಂತರ ಪ್ರಕ್ರಿಯೆಯಲ್ಲಿ ಸಹಜವಾಗಿ ದೈವತ್ವಕ್ಕೆ ಆರೋಪಿಸದೆ ಇರುವುದು, ಆಕಾಶದ ನಿರಂತರ ಪ್ರಕ್ರಿಯೆಯಲ್ಲಿ ಸಹಜವಾಗಿ ನಡೆಯುತ್ತದೆಂಬುದನ್ನು ತಿಳಿದು ಮೇಲೂ ಅದರ ಬಗ್ಗೆ ಇರುವ ಭಯದ ಕಲ್ಪನೆಗಳು ಬದಲಾಯಿಸಿಕೊಳ್ಳಬೇಕು.

**೫೧) ಧೂಮಕೇತು ಕಾಣಿಸಿಕೊಂಡರೆ ಕೇಡು :**

ಎಲ್ಲಿ ತಾರ್ಕಿಕ ವಿವೇಚನೆ ಇಲ್ಲವೋ ಅಲ್ಲಿ ಮೂಢಚಿಂತನೆ ಸಮೃದ್ಧವಾಗಿ ವಿಜ್ರುಂಭಿಸುತ್ತದೆ. ಎಂದೇ ಅಂದಿನ ಉಲ್ಕಾಪಾತ ಮತ್ತು ಧೂಮಕೇತು ಘಾತದಂತಹ ಅನೈಸರ್ಗಿಕ ದೃಶ್ಯಗಳಲ್ಲಿ ಭಗವಂತನ ಕೋಪ ಗುರುತಿಸಿದರು ಪ್ರಾಚೀನರು. ದೇಶದ ಮುಖಂಡರು ಹಾಗೂ ಜನರಿಗೆ ಅಪಾಯದ ಪೂರ್ವ ಸೂಚನೆ ಗುರುತಿಸಿದ. ಹೀಗೆ ಬೆಳೆದು ಬಂದಿದೆ ಧೂಮಕೇತು.

ರಾತ್ರಿ ಇದ್ದಕ್ಕಿದಂತೆ ಆಕಾಶದ ಯಾವುದೇ ಮೂಲೆಯಲ್ಲಿ ಬೆಳಕಿನ ಮಸುಕು ಮಚ್ಚೆ ಮೈ ದೋರಿ ಸೂರ್ಯನತ್ತ ಈಸತೊಡಗುತ್ತದೆ. ಬೆಳ್ಳಗಿನ ಬಿಲ್ಲೆ ಇದರ ಶಿರ ಇದರಿಂದ ಸೂರ್ಯ ವಿರುದ್ಧ ದಿಕ್ಕಿಗೆ ಚಿತ್ತಾರ ಕುಂಚಿಸಿದಂತೆ ಚಾಚಿರುವ ಚಾಮರ ಲಾಂಗೂಲ ಬಿಟ್ಟಾರೆ ಓಲಾಲು ಉರಿಯುತ್ತಿರುವ ದೃಶ್ಯ ಧೂಮಕೇತು ಸೂರ್ಯನು ಸಮೀಪಿಸಿದಂತೆ ತಲೆ ಬಿಲ್ಲೆಯ ಗಾತ್ರ ಉಬ್ಬುತ್ತದೆ. ಬಾಲ ಉದ್ದ ಉದ್ದ ಬೆಳೆಯುತ್ತದೆ. ತೆವಳುವೇಗ ತ್ವರೆಗೊಳ್ಳುತ್ತದೆ. ಮುಂದೊಂದು ದಿನ ಅದು ದಿಶೇ ಬದಲಿಸಿ ಅಂದರೆ ಸೂರ್ಯನಿಗೆ ಸುತ್ತ ಬಳಸಿ ಕ್ರಮೇಣ ತಗ್ಗುವ ವೇಗದಲ್ಲಿ ದೂರ ದೂರ ಸರಿದು ನೀಲಿಮೆಯ ಗಾಢತೆಯಲ್ಲಿ ಲೀನವಾಗಿ ಬಿಡುತ್ತದೆ. ಧೂಮ ಎಂದರೆ

---

೭೮(ಅಧಿಟಿಪ್ಪಣಿ:೭೮: ಜನ-ಜನಪದ-ಜಾನಪದ, ಲೇಖಕರು ಡಾ.ಎಂ.ಚಿದಾನಂದ ಮೂರ್ತಿ ಪುಟ ಸಂಖ್ಯೆ:೫೨೧)
೭೯(ಅಧಿಟಿಪ್ಪಣಿ:೭೯: ವಿಜ್ಞಾನ ಮತ್ತು ಮನೋಧರ್ಮ ಟಿ.ಕೆ.ಎಸ್. ನವೀನ್ ಪುಟ ಸಂಖ್ಯೆ ೧೦೪)

ಹೊಗೆ, ಕೇತು ಎಂದರೆ ಕಿರಣ, ಬಾಲ ಕೇತು, ಆದ್ದರಿಂದ ಧೂಮಕೇತು ಬಗ್ಗೆ ನಮ್ಮಲ್ಲಿ ಅಂಕುರಿಸಬೇಕಾದದ್ದು ವಿಸ್ಮಯ ಕುತೂಹಲ, ಕೊನೆಗೆ ಬೇಕಾದರೆ ಮರುಕ ಭಯ ಖಂಡಿತವಾಗಿಯೂ ಅಲ್ಲ. ಧೂಮಕೇತುಗಳೆಲ್ಲ ಗುರುತ್ವಾಕರ್ಷಣೆಯ ನಿಯಮವನ್ನು ಅನುಸರಿಸುವುದೆಂದು ಕಂಡುಹಿಡಿದ ಮೇಲೆ, ಕೆಲವು ಧೂಮಕೇತುಗಳ ಕಕ್ಷೆಯನ್ನಾದರೂ ಲೆಕ್ಕಾಚಾರಗಳಿಂದ ನಿರ್ಧರಿಸಬಹುದೆಂದು ಕಂಡುಹಿಡಿದ ಮೇಲೆ ವಿದ್ಯಾವಂತರು ಸಾಮಾನ್ಯವಾಗಿ ಇವುಗಳನ್ನು ಭವಿಷ್ಯ ಸೂಚಕಗಳೆಂದು ನಂಬಲು ನಿರಾಕರಿಸಿದರು.

ಒಟ್ಟಿನಲ್ಲಿ ನಿಸರ್ಗದ ಪರಿಕರಗಳ ಬಗ್ಗೆ ಈ ಹಿಂದಿನ ಪೂರ್ವಿಕರಿಗೆ ಎಷ್ಟು ಭಯ ಭಕ್ತಿಗಳಿದ್ದವೋ ಅವುಗಳೆಲ್ಲಾ ಮಾನವನ ಬಳಕೆಯಿಂದಾಗಿ ಸಾಮಾನ್ಯ ಸಂಗತಿಗಳಾದವು. ನಿಸರ್ಗ ಸಂಪತ್ತು ತನ್ನ ಆಸೆಯನ್ನು ಪೂರೈಸುತ್ತದೆ ಎನ್ನುವ ದುರಾಸೆಯನ್ನು ಹೆಚ್ಚಿಸಿಕೊಂಡನು. ಬೆಟ್ಟಗುಡ್ಡ ಕಾಡು, ಜಲ, ಸಸ್ಯ ಎಲ್ಲವನ್ನು ತನ್ನ ಮನ ಬಂದಂತೆ ಉಪಯೋಗಿಸಿಕೊಂಡು ಕೊನೆಗೆ ವಿನಾಶದ ಹಂತ ತಲುಪುತ್ತಿರುವನು ಆಧುನಿಕ ಕಾಲಚಕ್ರದಲ್ಲಿ ಸಿಲುಕಿಸಿಕೊಂಡು ಮಾನವನಿಗೆ ಇದೀಗ ಪರಿಸರನಾಶ ಕುರಿತು ಅರಿವಾಗುತ್ತಿದೆ ಆದ್ದರಿಂದ ಮತ್ತೇ ಈ ಹಿಂದೆ ಇರುವ ನೈಸರ್ಗಿಕ ಕಾಡುಗಳನ್ನು ದೊರಕಿಸಿಕೊಡಲಾಗದಿದ್ದರೂ ಕೃತಕ ಗಿಡ ಮರಗಳನ್ನು ಬೆಳಸುವುದರ ಮೂಲಕ ಪರಿಸರ ಪ್ರಜ್ಞೆ ಹೆಚ್ಚಿಸಿಕೊಳ್ಳಬೇಕಾಗಿದೆ.

# ಅಧ್ಯಾಯ - ೬

## ಆಹಾರ-ಆರೋಗ್ಯ ಕುರಿತು ನಂಬಿಕೆ ಮತ್ತು ಆಚರಣೆಗಳು

ನಮ್ಮ ದೇಹದ ಬೆಳವಣಿಗೆಗೂ ಮಾಡುವ ಕೆಲಸಗಳಿಗೆ ಶಕ್ತಿಯನ್ನು ಒದಗಿಸಿಕೊಡುವುದಕ್ಕೂ ಆಹಾರವು ಅವಶ್ಯಕ ಎಂಬುದು ಎಲ್ಲರಿಗೂ ತಿಳಿದ ವಿಷಯ. ಪುಟ್ಟ ಮಗುವು ಬೆಳೆದು ದೊಡ್ಡ ಹುಡಗನಾಗುವಾಗ ಆಹಾರವು ಅವನ ದೇಹವನ್ನು ಬಳಸುತ್ತದೆ. ಓಡಾಡುವಾಗ ಕೆಲಸ ಮಾಡುವಾಗ ಹಾಗೂ ದೇಹದ ಅತ್ಯಗತ್ಯ ಕೆಲಸಗಳಾದ ಹೃದಯದ ಬಡಿತ, ಶ್ವಾಸೋಚ್ಛ್ವಾಸ ದೇಹದ ಶಾಖವನ್ನು ಒಂದು ಮಟ್ಟದಲ್ಲಿರಿಸುವುದು ಇತ್ಯಾದಿಗಳಿಗೂ ಶಕ್ತಿಯು ಅವಶ್ಯಕ. ಶಕ್ತಿಯು ದೇಹದಲ್ಲಿ ಲಕ್ಷಾಂತರ ರಾಸಾಯನಿಕ ಕ್ರಿಯೆಯಗಳಿಂದ ಉತ್ಪನ್ನವಾಗುತ್ತದೆ. ಹಾಗೆ ಉತ್ಪನ್ನವಾದ ಶಕ್ತಿಯು ಕೆಲವು ವೇಳೆ ವಿದ್ಯುಚ್ಛಕ್ತಿಯಾಗಿ ಪರಿವರ್ತನೆ ಹೊಂದಿ ನರಗಳ, ಪಂಚೇಂದ್ರಿಯಗಳ ಹಾಗೂ ಇತರ ಕೆಲವು ಅಂಗಗಳ ಕಾರ್ಯಕ್ರಮಗಳಿಗೆ ಉಪಯೋಗಿಸಲ್ಪಡುತ್ತದೆ. ಮತ್ತೆ ಕೆಲವು ಭಾಗ ಶಕ್ತಿಯು ಶಾಖವಾಗಿ ಪರಿವರ್ತನೆ ಹೊಂದಿ ದೇಹದ ಶಾಖದ ಪ್ರಮಾಣವನ್ನು ಸರಿದೂಗಿಸುತ್ತದೆ ಹಾಗೂ ಬಹುಭಾಗ ಶಕ್ತಿಯು ದೇಹದ ಹಲವಾರು ಮಾಂಸಖಂಡಗಳ ಕಾರ್ಯಕ್ರಮಕ್ಕೆ ಒದಗಿ ಬರುತ್ತದೆ. ಅಂದ ಮೇಲೆ ಆಹಾರವು ಮುಖ್ಯವಾಗಿ ದೇಹದ ಬೆಳವಣಿಗೆಗೆ ಮತ್ತು ಶಕ್ತಿಯ ಉತ್ಪಾದನೆಗಾಗಿ ಕೆಲಸಗಳನ್ನು ಮಾಡುತ್ತದೆ.

ಹೀಗೆ ಸೃಷ್ಠಿಯಲ್ಲಿ ಜೀವಿಗಳ ಹುಟ್ಟಿನೊಂದಿಗೆ ಹೊಟ್ಟೆ ತುಂಬಿಸಿಕೊಳ್ಳುವ ಹವಣಿಕೆಯು ಆರಂಭಗೊಂಡಿತು. ಅದಕ್ಕಾಗಿ ಪ್ರಾಗಿತಿಹಾಸಕಾಲ ಅಥವಾ ಇತಿಹಾಸ ಪೂರ್ವಕಾಲದಲ್ಲಿ ಮಾನವನ ವಿಕಾಸಕ್ಕೆ ಕಾರಣವಾದ ಕೆಲವು ಸಣ್ಣ ಪ್ರಾಣಿಗಳು ತಮ್ಮ ಅಂಗಗಳನ್ನು ತಿಂದು ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದವು. ಅನಂತರ ಗೆಡ್ಡೆ ಗೆಣಸು, ಹಣ್ಣು, ಹಸಿ ಮಾಂಸ ಹಾಗೂ ಕಾಲಕ್ರಮೇಣ ಆಹಾರ ಬೇಯಿಸಿ ತಿನ್ನುವುದು ರೂಢಿಯಾಯಿತು. ಮಾನವನ ಹೊಟ್ಟೆಗೆ ಹಣ್ಣೆಯಾಗಲಿ, ಕಚ್ಚಾ ಆಹಾರವೇಯಾಗಲಿ ಅಥವಾ ಬೇಯಿಸಿದ ಆಹಾರವೇಯಾಗಲಿ ಮನುಷ್ಯ ಆರೋಗ್ಯವಂತನಾಗಿ ಬದುಕಿಬಾಳಲು ಆಹಾರ ಮುಖ್ಯವಾಗಿರಬೇಕು. ಅದರಂತೆ ಸೂಕ್ಷ್ಮಾಣು ಜೀವಿಯಿಂದ ಮೊದಲುಗೊಂಡು ಎಲ್ಲಾ ಜೀವಿ ಸಮುದಾಯಕ್ಕೂ ಆಹಾರ ಅಗತ್ಯವಾಗಬೇಕು.

'ಗೋವಿನ ಹಾಡು' – ಕನ್ನಡಿಗರ ಮೆಚ್ಚಿನ ಈ ಕಥಾ ಕಾವ್ಯದಲ್ಲಿ ಪುಣ್ಯಕೋಟಿ ಎಂಬ ಹಸು ಕಾಡಿನಲ್ಲಿ ಮೇಯಲು ಹೋಗಿದ್ದಾಗ ಹುಲಿಯೊಂದು ಅಡ್ಡಗಟ್ಟುತ್ತದೆ. ಆಗ ಪುಣ್ಯಕೋಟಿ ತನ್ನ ಕರುವಿಗೆ ಹಾಲುಣಿಸಿ, ಸುರಕ್ಷತೆ ಪಾಠ ಕಲಿಸಿ ಹಿಂದಿರುಗುವುದಾಗಿ ಬಿನ್ನಹ ಮಾಡಿಕೊಳ್ಳುತ್ತದೆ. ಮೊದಲಿಗೆ ಒಪ್ಪದಿದ್ದರೂ ಕರುಳಿನ ಕುಡಿಗಾಗಿ ಅಂಗಲಾಚಿದ ಹಸುವಿನ ಕೋರಿಕೆ ಈಡೇರಿಸಿಕೊಳ್ಳಲು ಹುಲಿ ಅದಕ್ಕೆ ಅಪ್ಪಣೆ ನೀಡುತ್ತದೆ. ಶ್ರೀಮಂತಿಕೆ ಭೇದವಿಲ್ಲದೆ, ಗಾತ್ರದಲ್ಲಿ ಇಲಿಯಿಂದ ಆನೆಯವರೆಗೂ, ಕುರಿಯಂತಹ ಸಾಧು ಪ್ರಾಣಿಯಿಂದ ಹುಲಿಯಂತಹ ಕ್ರೂರ ಪ್ರಾಣಿಯವರೆಗೂ ಎಲ್ಲಾ ಸಸ್ತನಿಗಳೂ ಮರಿಗಳಿಗೆ ಅಮೃತಪಾನ ಮಾಡಿಸಿಯೇ ಬೆಳೆಸುತ್ತವೆ. ಈ ಅಮೃತ ಕ್ಷೀರ ಅಥವಾ ಹಾಲು ತಾಯಿಯಲ್ಲಿರುವ ವಿಶೇಷ ಗ್ರಂಥಿಯಾದ ಸ್ತನದಲ್ಲಿ ಉತ್ಪತ್ತಿಯಾಗುತ್ತದೆ. ಹಾಗಾಗಿ ಈ ಗುಂಪಿನ ಜೀವಿಗಳನ್ನು ಸ್ತನಿ ಎಂದೇ ಹೆಸರಿಸಲಾಗಿದೆ.

ಹಾಲು ಮಗುವಿಗೆ ಬೇಕಾದ ಪೋಷಕ ವಸ್ತುಗಳನ್ನು ಒದಗಿಸುವ ಒಂದು ಪರಿಪೂರ್ಣ ಆಹಾರ. ಸ್ತನಿಗಳ ಮರಿಗಳ ಬೆಳವಣಿಗೆಗೆ ತಕ್ಕಂತೆ ಆಯಾ ಪ್ರಭೇದಗಳಲ್ಲಿ ರಾಸಾಯನಿಕ ಸಂಯೋಜನೆಯ ವ್ಯತ್ಯಾಸ ಕಾಣಬಹುದು. ಮುಖ್ಯವಾಗಿ ಹಾಲಿನಲ್ಲಿ ನೀರು, ಕಾರ್ಬೋಹೈಡ್ರೇಟ್, ಕೊಬ್ಬು, ಪ್ರೋಟೀನ್ ಖನಿಜಗಳು ಮತ್ತು ವಿಟಾಮಿನ್‌ಗಳಿರುತ್ತವೆ. ಹಾಗಾಗಿ ಇದೊಂದು ಸಂಯುಕ್ತ ಕಲಿಲ ಮಿಶ್ರಣ. ಹಾಲಿನಲ್ಲಿರುವ ನೀರಿನಂಶವು ಅದರಲ್ಲಿರುವ ಲ್ಯಾಕ್ಟೋಸ್ ಎಂಬ ಸಕ್ಕರೆ ಅಂಶದ ಮೇಲೆ ನಿರ್ಧಾರವಾಗುತ್ತದೆ. ಅಲ್ಲದೆ ಹುಟ್ಟಿದ ಮಗುವಿಗೆ ಬೇಕಾದ ನೀರನ್ನೂ ಈ ಆಹಾರದ ಮೂಲಕವೇ ಒದಗಿಸಬೇಕಾದ್ದರಿಂದ ದ್ರವರೂಪದಲ್ಲಿ ನೀರು ಮತ್ತು ಆಹಾರ ಎರಡನ್ನೂ ಹಾಲು ಒದಗಿಸುತ್ತದೆ. ಗ್ಲೂಕೋಸ್ ಮತ್ತು ಗ್ಯಾಲಕ್ಟೋಸ್‌ಗಳಿಂದಾದ ದ್ವಿಶರ್ಕರವಾದ ಲ್ಯಾಕ್ಟೋಸ್, ಟ್ರೈಗ್ಲಿಸರೈಡ್ ರೂಪದ ಕೊಬ್ಬಿನಾಂಶ ಕೇಸಿನ್ ರೂಪದಲ್ಲಿರುವ ಪ್ರೋಟೀನ್ ಕ್ಯಾಲ್ಸಿಯಂ ಮತ್ತು ರಂಜಕದಂತಹ ರಸಾಯನಿಕ ಅಂಶಗಳಲ್ಲದೆ ಚೋದಕಗಳು, ಕಿಣ್ವಗಳು ಮತ್ತು ಪ್ರೋಟೀನ್‌ಗಳೂ ಹಾಲಿನಲ್ಲಿರುತ್ತವೆ.

ಮುಖ್ಯವಾಗಿ ತನ್ನ ಮರಿಯನ್ನು ಬಿಸಿ ಅಪ್ಪುಗೆಯಲ್ಲಿ ಒತ್ತಿಕೊಂಡಾಗ ಕಂಕುಳಭಾಗದಿಂದ ಮರ್ಮಾಂಗದವರೆವಿಗೂ ಒಂದು ಸಾಲಿನ ಸ್ವೇದ ಗ್ರಂಥಿಗಳು ಬೆವರನ್ನು ಸುರಿಸಿ ಬಿಸಿ ಅಪ್ಪುಗೆಯಲ್ಲಿ ಮರಿ ಒಣಗದಂತೆ ಬೆವರಿನ ಸ್ನಾನ ಮಾಡಿಸಿ ಬಾಯಾರಿಕೆಯನ್ನು ತಣಿಸಬೇಕು. ಹಾಗಾಗಿ ಈ ಕ್ಷೀರ ಪಥ ವೈವಿಧ್ಯಮಯವಾಗಿ ರೂಪುಗೊಂಡಿರುವುದನ್ನು ಕಾಣಬಹುದು.

ಮಾನವನ ಉಸಿರಾಟಕ್ಕೆ ಗಾಳಿ ಅಗತ್ಯವಾಗಿ ಬೇಕಾದಂತೆ ಆರೋಗ್ಯಕ್ಕೆ ಆಹಾರ ನೀರು ಕೂಡಾ ಅಷ್ಟೇ ಅಗತ್ಯವಾಗಿಬೇಕು. ಆಹಾರ ಬೇಕಾದಕ್ಷಣ ದನಕರುಗಳಂತೆ ಆಹಾರ ಸಂಗ್ರಹಿಸಿಟ್ಟುಕೊಳ್ಳವ ಸಾಮರ್ಥ್ಯ ಮನುಷ್ಯನಿಗಿಲ್ಲ. ಇಡೀ ದಿನದ ಊಟವೆಲ್ಲಾ ಒಂದೇ ಬಾರಿಗೆ ಮಾಡುವುದಿಲ್ಲ. ಇಡೀ ದಿನವಾದರೂ ಸಮಯಕ್ಕನುಸಾರವಾಗಿ ದ್ರವಪದಾರ್ಥ ಮೊದಲಗೊಂಡು ಆಹಾರಸೇವನೆಯ ಕ್ರಮ ರೂಢಿಸಿಕೊಳ್ಳುತ್ತಾನೆ. ಒಂದು ವೇಳೆ ಇಡೀ ದಿನದ ಆಹಾರ ಒಮ್ಮೆ ತಿನ್ನುವುದಾಗಲಿ ಅಥವಾ ತನ್ನ ಜೀರ್ಣಶಕ್ತಿಗೂ ಮೀರಿ ಆಹಾರಸೇವನೆಯು ಆರೋಗ್ಯಕ್ಕೆ ತೊಂದರೆಯಾಗುವುದು. ಆದ್ದರಿಂದ ಉತ್ತಮ ಆರೋಗ್ಯಕ್ಕೆ ಉತ್ತಮ ಹಾಗೂ ಮಿತ ಆಹಾರ ಅಗತ್ಯವಾಗಬೇಕು; ಆದ್ದರಿಂದ ಒಂದ್ಹೊತ್ತು ಉಂಡವನು ರೋಗಿ, ಎರಡ್ಹೊತ್ತು ಉಂಡವನು ಯೋಗಿ, ಮೂರ್ಹೊತ್ತು ಉಂಡವನು ಭೋಗಿ ನಾಲ್ಕೋತ್ತು ಉಂಡವನ್ನೆತ್ಕೊಂಡ್ಹೋಗಿ ಎನ್ನುವ ನಾಣ್ಣುಡಿ ಪ್ರಚಲಿತದಲ್ಲಿದೆ. ಸರ್ವಜ್ಞ ಕವಿ ಕೂಡಾ ಕ್ರಮಬದ್ದ ಆಹಾರ ಸೇವನೆ ಕುರಿತು ಹೀಗೆ ಹೇಳುತ್ತಾನೆ.

> ಹಸಿವಿಲ್ಲದುಣಬೇಡ
> ಹಸಿದು ಮತ್ತಿರಬೇಡ
> ಬಿಸಿಗೂಡಿ ತಂಗಳುಣಬೇಡ
> ವೈದ್ಯನ ಬೆಸಸಲೇ ಬೇಡ – ಸರ್ವಜ್ಞ

ಆಹಾರ-ಆರೋಗ್ಯ ಎನ್ನುವ ಸಮತತ್ವವೇ ಇಲ್ಲಿ ಪಾರಂಪರಿಕವಾಗಿ ರೂಢಿಯಲ್ಲಿದೆ. ಈ ಸೂತ್ರವನ್ನು ಅಳವಡಿಸಿಕೊಂಡಿರುವುದರಿಂದಲೇ ನಮ್ಮ ಆಹಾರ ಪದ್ಧತಿಗಳು ಪ್ರದೇಶದಿಂದ ಪ್ರದೇಶಕ್ಕೆ ಸಮುದಾಯದಿಂದ

ಸಮುದಾಯಕ್ಕೆ ಮತ್ತು ಋತುಮಾನದಿಂದ ಋತುಮಾನಕ್ಕೆ ಬೇರೆ ಬೇರೆ ಬಗೆಯ ಭಿನ್ನತೆಗಳನ್ನು ವಿಶೇಷತೆಗಳನ್ನು ಪ್ರಕಟಪಡಿಸುತ್ತವೆ. ಅದು ಬೇರೆ ಬೇರೆ ಆಹಾರ ಭಕ್ಷಗಳು ಬೇರೆ ಬೇರೆ ಆಹಾರ ತಯಾರಿಕಾ ವಿಧಾನಗಳು ಹಬ್ಬದ ವಿಶೇಷ ಅಡುಗೆಗಳು ಬೇರೆ ಬೇರೆ ಋತು ವಿಶೇಷಗಳು ಆಹಾರ ಸೇವನೆಯ ನಿಯಮಗಳ ರೂಪದಲ್ಲಿ ಕಂಡು ಬರುತ್ತವೆ. ಇಂಥ ವೈವಿಧ್ಯಮಯ ಅಂಶಗಳು ಆಹಾರ ಪದ್ಧತಿಗಳ ವೈಶಿಷ್ಟ್ಯ.

ಹೀಗೆ ಆಹಾರವು ಆರೋಗ್ಯ ಕಾಪಾಡುವುದರಿಂದ ಋತುಮಾನಕ್ಕನುಸಾರವಾಗಿ, ಸ್ವಚ್ಛತೆಯಿಂದ ಆಹಾರ ಬೇಯಿಸುವುದನ್ನು ನಮ್ಮ ಪೂರ್ವಿಕರಿಂದಲೇ ರೂಢಿಯಲ್ಲಿದೆ. ಆಹಾರದಲ್ಲೂ ದೈವಿಭಾವವನ್ನು ಗುರುತಿಸಿಕೊಂಡಿದ್ದರು. ಆಹಾರದ ಮೂಲವಾದ ಸಸ್ಯ, ಧಾನ್ಯ ಸಿದ್ಧಪಡಿಸಿದ ಆಹಾರದಲೆಲ್ಲ. 'ಅನ್ನಪೂರ್ಣೇಶ್ವರಿ ದೇವಿ' ಇರುವಳೆಂದು ಗೌರವಿಸುವರು. ಬೆಳೆ ಬಂದಾಗ ಅದರ ಮೊದಲ ಧಾನ್ಯ ದೇವರಿಗೆ ಅರ್ಪಿಸುವ ಹಾಗೂ ಸಿದ್ಧಪಡಿಸಿದ ಅಡುಗೆಯ ಆಹಾರವೂ ದೇವರಿಗೆ ಮೊದಲು ನೈವೈದ್ಯವಾಗಿ ಅರ್ಪಿಸುವುದನ್ನು ಇಂದಿಗೂ ಕಾಣುತ್ತೇವೆ. ಇಲ್ಲಿ ಉಣ್ಣದ ದೇವರಿಗೆ ಸಾಂಕೇತಿಕವಾಗಿ ನೈವೈದ್ಯ ಅರ್ಪಿಸುವದನ್ನು ವಿಡಂಬನಾತ್ಮಕವಾಗಿ ಕಂಡು ಬಂದರೂ ಮರ್ಕಟದಂತಹ ಮನಸ್ಸಿಗೆ ಸಂಕೋಲೆ ಹಾಕಿ ಸ್ವಚ್ಛತೆ, ಆರೋಗ್ಯ ಕಾಪಾಡುವ ವಿವಿಧ ಆಹಾರವನ್ನು ತಯಾರಿಸುವ ಜನರ ನಂಬಿಕೆ ವೈದ್ಯಕೀಯ ಮನೋಭಾವನೆ ತೋರ್ಪಡಿಸುತ್ತದೆ. ಪ್ರಾಚೀನದಿಂದಲೂ ಆರೋಗ್ಯಕ್ಕೆ ಹಿತಕರವಾದ ಮತ್ತು ಅಗತ್ಯವಾಗಿ ಬೇಕಾದ ಪ್ರೊಟೀನ ಒದಗಿಸುವಂತಹ ಆಹಾರ ಪದ್ಧತಿ ರೂಢಿಸಿಕೊಂಡು ಬಂದಿರುವರು.

ವಿಶ್ವದ ಸೃಷ್ಠಿಗೆ ಕಾರಣವಾದ ಪಂಚಮಹಾಭೂತಗಳೇ ಆಹಾರದ ಸೃಷ್ಟಿಗೂ ಕಾರಣವಾಗಿವೆ. ಆದ್ದರಿಂದ ಆಯುರ್ವೇದದಲ್ಲಿ ಪಂಚಮಹಾಭೂತ ಅಂಶಗಳ ಅನುಗುಣವಾಗಿ ಆಹಾರ ಇರುವುದನ್ನು ಗುರುತಿಸಬಹುದು. ಭೂಮಿ ತತ್ವದಲ್ಲಿ; ಘನ ಆಹಾರಗಳು ಸೇರುತ್ತವೆ. ಅವುಗಳೆಂದರೆ ಅಕ್ಕಿ, ಗೋಧಿ, ಕಾಳು ಮತ್ತು ತರಕಾರಿ ಇವುಗಳ ಸೇವನೆ ಶರೀರಕ್ಕೆ ಪೋಷಣೆ ನೀಡುವಂತಹವು. ಇದರಿಂದ ಶರೀರದಲ್ಲಿ ಸ್ಥಿರತ್ವ, ಬಲ, ತೂಕ, ಮಾಂಸ ಖಂಡಗಳ ಬೆಳವಣಿಗೆ ಉಂಟಾಗುತ್ತದೆ.

**ನೀರಿನ ತತ್ವದಲ್ಲಿ :**

ದ್ರವಹರಳು ಸೇರುತ್ತವೆ. ಇವುಗಳು ಹೆಚ್ಚು ಸಿಹಿ, ರುಚಿ ಮತ್ತು ಸ್ವಲ್ಪ ಒಗರು ಉಪ್ಪಿನ ರುಚಿ ಹೊಂದಿರುತ್ತವೆ. ಎಲ್ಲಾ ಆಹಾರ ಪದಾರ್ಥಗಳ ರುಚಿ ಗುಣವನ್ನು ನೀಡುವುದೇ ಆಪ್ ಮಹಾಭೂತವಾಗಿದೆ. ಅವುಗಳೆಂದರೆ ನೀರು, ಹಾಲು, ಮಜ್ಜಿಗೆ, ಹಣ್ಣಿನ ರಸ. ತರಕಾರಿ ಬೇಯಿಸಿದ ನೀರು, ತುಪ್ಪ. ಶರೀರದಲ್ಲಿ ಸ್ನಿಗ್ಧತೆ, ತೇವಾಂಶ, ದೃಢತೆ ಉಂಟಾಗುತ್ತವೆ. ದೇಹದಲ್ಲಿನ ರಕ್ತ ಎಲ್ಲ ಬಗೆಯ ದ್ರವಗಳು ಶುಕ್ರ ಆರ್ತವ ಸ್ವೇದ ಮುಂತಾದವುಗಳಲ್ಲಿ ಆಪ್ ಕಂಡು ಬರುತ್ತದೆ.

**ಜೆಂಕಿ ತತ್ವದಲ್ಲಿ :**

ಖಾರದ ರುಚಿ ಹೊಂದಿದ್ದು ಸ್ವಲ್ಪ ಹುಳಿ ಮತ್ತು ಉಪ್ಪಿನ ಅಂಶ ಹೊಂದಿರುತ್ತವೆ. ಮೆಣಸಿನಕಾಯಿ, ಓಮ್ಮಲಿ, ಶುಂಠಿ ಇವುಗಳಿಂದ ಶರೀರದಲ್ಲಿ ಉಷ್ಣತೆ ಉಂಟಾಗುತ್ತದಲ್ಲದೆ ಜೀರ್ಣಶಕ್ತಿಯೆ ಹೆಚ್ಚುತ್ತದೆ. ಚರ್ಮವು ಕಾಂತಿಯುಕ್ತವಾಗುತ್ತದೆ.

**ಗಾಳಿ ತತ್ವದಲ್ಲಿ :**

ಸೂಕ್ಷ್ಮ, ಒರಟು, ಒಣಗುವಿಕೆ ಒಗರು–ರುಚಿ ಅಧಿಕವಾಗಿದ್ದು ಸ್ವಲ್ಪ ಕಹಿ ರುಚಿಯನ್ನು ಹೊಂದಿರುತ್ತದೆ. ಎಲ್ಲಾ ಬಗೆಯ ಹಳದಿ ಬಣ್ಣದ ಬೇಳೆಗಳು ಇವುಗಳಿಂದ ಶಾರೀರಿಕ ಲಘುತ್ವ ಚಲನೆ ಉಂಟಾಗುತ್ತವೆ.

**ಆಕಾಶ ತತ್ವದಲ್ಲಿ :**

ಮೃದುತ್ವ ಲಘುತ್ವ ಸ್ಪಷ್ಟತೆ ಹೊಂದಿರುತ್ತವೆ. ಇವುಗಳ ಮುಖ್ಯ ಗುಣವೆಂದರೆ ಶಬ್ದ, ಹುರಿದಿರುವ ಎಲ್ಲಾ ಪದಾರ್ಥಗಳು.

ಈ ದೇಹ ಭೂಮಿಯ ಬಿರುಸು. ನೀರಿನ ಹಸಿ, ಬೆಂಕಿಯ ಬಿಸಿ, ಗಾಳಿಯ ಚಂಚಲತೆ ಹಾಗೂ ಆಕಾಶದ ಅವಕಾಶಗಳಿಂದ ಕೂಡಿಕೊಂಡಿದೆ. ಪಂಚತತ್ವಗಳಿಂದ ಕೂಡಿ ಪಂಚಜ್ಞಾನೇಂದ್ರಿಯಗಳನ್ನು ಹೊಂದಿದ ಈ ದೇಹವು ಒಂದು ದೇಗುಲವೇ ಸರಿ. ಎಲವು ಕಂಬಗಳಂತೆ; ಆ ಕಂಬಗಳಿಗೆ ಪೂರಕವಾದವುಗಳೆಂದರೆ, ಸ್ನಾಯು ನರನಾಡಿಗಳು. ಹೃದಯವೇ ಗರ್ಭಗುಡಿ; ಅಲ್ಲಿಂದಲೇ ಚೈತನ್ಯವು ದೇಗುಲದ ತುಂಬೆಲ್ಲ ಪಸರಿಸುತ್ತದೆ. ಮೆದಳು ಶಿಖರವಿದ್ದಂತೆ. ಮೆದುಳಿನ ಕ್ರಿಯೆ ಜೀವನಾವಶ್ಯಕ. ಎಲ್ಲವನ್ನೂ ನಿಯಂತ್ರಿಸುತ್ತ ಶಿಖರದಂತೆ ಶ್ರೇಷ್ಠ ಗೌರವಕ್ಕೆ ಪಾತ್ರವಾಗಿದೆ. ರಕ್ತ ದೇಗುಲವನ್ನು ಸ್ವಚ್ಛವಾಗಿಡುವ ನೀರಿನಂತೆ, ತೊಳೆದಾದ ಮೇಲೆ ಕೊಳೆಯನ್ನು ಹೊರ ಚೆಲ್ಲಲು ಹಲವಾರು ಕೊಳವೆಗಳಿವೆ. ಅವುಗಳೆಂದರೆ ಮೂತ್ರ, ಮಲ ಹಾಗೂ ಬೆವರುಗಳೇ ಕೊಳವೆಗಳು, ದೇಗುಲದೊಳಗೆ ಗದ್ದಲವುಂಟು ಮಾಡುವ ಚಂಚಲ ಮನಸ್ಸು; ಶಾಂತತೆ ಕಾಪಾಡಿಕೊಳ್ಳಲು ಬುದ್ಧಿಯಿದೆ. ಅಡುಗೆ ತಯಾರಿಸಿ ಊಟ ಬಡಿಸುವಂತಹ ಜಠರ ಕರಳು ಹಾಗೂ ಯಕೃತ್ತುಗಳಿವೆ. ಉಪ್ಪು, ಖಾರ, ಹುಳಿ ಎಲ್ಲ ಸೇವ್ಯವೆನಿಸಿಕೊಳ್ಳುವಂತೆ ನೋಡಲು ಪಚನ ಕ್ರಿಯೆಗೆ ಸಹಾಯವಾಗುವ ಜೊಲ್ಲು, ಆಮ್ಲ, ಬೈಲ್ ರಸ್; ಸಕ್ಕರೆಯ ಅಂಶವನ್ನು ಹತೋಟಿಯಲ್ಲಿಡುವ ಮೇದೋಜಿರಕ ಗ್ರಂಥಿ; ವೈರಿಗಳಿಂದ ರಕ್ಷಿಸಿಕೊಳ್ಳುವ ಕೈ; ಕಾಲುಗಳು ಹೀಗೆ ಅನೇಕಾನೇಕ ಅಂಗಗಳು ದೇಹವೆಂಬ ದೇಗುಲದ ಭಾಗಗಳಾಗಿವೆ. ಈ ಭಾಗಗಳೆಲ್ಲ ಒಟ್ಟೊಟ್ಟಿಗೆ ಕೆಲಸ ನಿರ್ವಹಿಸುತ್ತ ದೇಗುಲವನ್ನು ಸುಸ್ಥಿತಿಯಲ್ಲಿಡುತ್ತವೆ.

ಶುದ್ಧ ಮನಸ್ಸಿನಿಂದ ದೇವರನ್ನು ನಂಬಿ ಪ್ರಾರ್ಥಿಸಿದರೆ ಹೇಗೆ ಮನಸ್ಸಿಗೆ ಶಾಂತಿ ಸಿಗುತ್ತದೆಯೊ ಹಾಗೆ ನಿತ್ಯ ನಿಯಮದಿಂದ ಶರೀರವನ್ನು ಸ್ವಚ್ಛವಾಗಿಟ್ಟುಕೊಂಡರೆ ರೋಗ ರುಜಿನಿಗಳಿಂದ ರಕ್ಷಣೆ ಪಡೆದು ಬೌದ್ಧಿಕ ಬೆಳವಣಿಗೆ ಹಾಗೂ ಮಾನಸಿಕ ತೃಪ್ತಿ ಸಿಗುವದರಲ್ಲಿ ಅನುಮಾನವಿಲ್ಲ.

ಜೀವನದಲ್ಲಿ ಜನಪದ ಮತ್ತು ತೃಪ್ತಿ ಪ್ರಧಾನ ಭಾವನೆಗಳಿಗಿರಬೇಕಾದರೆ, ನಮಗೆ ದೈಹಿಕ ಆರೋಗ್ಯ ಮತ್ತು ಮಾನಸಿಕ ಪ್ರಶಾಂತತೆ ಎರಡು ಅತ್ಯವಶ್ಯಕ. ಆರೋಗ್ಯ ಹದಗೆಟ್ಟಾಗ ಮನಸ್ಸು ಪ್ರಶಾಂತವಾಗಿರುವುದು ಕಷ್ಟ. ಹಾಗೆಯೇ ಯಾವುದೇ ಕಾರಣದಿಂದ ನಮ್ಮ ಮನಸ್ಸು ಪ್ರಕ್ಷುಬ್ಧವಾಗಿ ಮಾನಸಿಕ ಒತ್ತಡ ಹೆಚ್ಚಾದರೆ ಅದರಿಂದ ನಮಗೆ ಅನಾರೋಗ್ಯ ಉಂಟಾಗಿ ಅನೇಕ ತರಹದ ಕಾಯಿಲೆಗಳು ಉದ್ಭವಿಸುತ್ತವೆ.

ನಾವು ಸೇವಿಸುವ ಆಹಾರ ಮತ್ತು ಮನಸ್ಸಿಗೆ ಒಂದಕ್ಕೊಂದು ಪೂರಕ ಸಂಬಂಧವಿದೆ. ಆಹಾರದ ಪ್ರಭಾವ ಮನಸ್ಸಿನ ಮೇಲೂ ಉಂಟಾಗುತ್ತದೆ. ಆಹಾರವು ಶರೀರ ಪೋಷಣೆ ಮಾಡುವುದು ಮಾತ್ರವಲ್ಲ, ಮನಸ್ಸಿನ ಮೇಲೂ ಪರಿಣಾಮ ಬೀರುತ್ತದೆ. ಮನಸ್ಸಿನ ಆರೋಗ್ಯ ಹಾಗೂ ಅನಾರೋಗ್ಯ ಆಹಾರ ಮೇಲೆ

ಅವಲಂಬಿತವಾಗಿದೆ. ಆಹಾರ ಸೇವನೆಯು ನಮ್ಮ ಬಲ ವರ್ಣ ಆಯುಷ್ಯ ಹಾಗೂ ಸೌಖ್ಯವನ್ನು ಹೆಚ್ಚಿಸುತ್ತದೆ. ಅದಕ್ಕಾಗಿಯೇ ನಮ್ಮ ಪೂರ್ವಿಕರು ಇವುಗಳನ್ನು ಪ್ರತಿಯೊಬ್ಬರು ಸೇವನೆ ಮಾಡಲಿ ಎನ್ನುವ ಉದ್ದೇಶಕ್ಕಾಗಿ ಹಬ್ಬಗಳ ನಿಯಮ – ನಂಬಿಕೆಗಳಾಗಿ ಜಾರಿಗೆ ತಂದಿರುವ ಉದ್ದೇಶ ವ್ಯಕ್ತಪಡಿಸುತ್ತದೆ. ಏಕೆಂದರೆ ಹಿಂದಿನ ಕಾಲದಲ್ಲಿ ಹೆಚ್ಚಿನ ಜನ ರೈತರಾಗಿದ್ದು ಬಡವರಾಗಿದ್ದವರೆ ಹೆಚ್ಚು ಹಾಗಾಗಿ ಇಂತಹವರು ಹಣದ ತೊಂದರೆಯಿಂದಾಗಲಿ ಅಥವಾ ಹೊಲದಲ್ಲಿರುವ ಕೆಲಸಗಳ ಒತ್ತಡದಿಂದಾಗಲಿ ದಿನ ನಿತ್ಯ ವಿವಿಧ ನಮೂನೆಯ ಆಹಾರ ಬೇಯಿಸುವುದರಲ್ಲೇ ಕಾಲ ಕಳೆಯುವಂತಿರಲಿಲ್ಲ. ಹಾಗೂ ಬೇಕೆನಿಸಿದ ಎಲ್ಲಾ ಬಗೆಯ ಆಹಾರದ ಮೂಲಗಳು ಸರ್ವಕಾಲಿಕವಾಗಿಯೂ ಸಿಗುತ್ತಿರಲಿಲ್ಲ. ಅದಕ್ಕಾಗಿ ಅವರು ಋತುವಿಗೆ ಅನುಸಾರವಾಗಿ ಬರುವ ಆಹಾರ ವೈವಿಧ್ಯಗಳು ಆ ಸಮಯದಲ್ಲಿ ಬರುವ ವರ್ಷದ ಪ್ರತಿಯೊಂದು ಹಬ್ಬಕ್ಕೂ ಒಂದೊಂದು ಬಗೆಯ ಆಹಾರವನ್ನು ತಯಾರಿಸುವ ನಿಯಮವನ್ನು ರೂಢಿಸಿಕೊಂಡರು. ಮಾಡುವ ಪ್ರಮಾಣ ಎಷ್ಟೇ ಆಗಿರಬಹುದು ಆದರೆ ಆ ಹಬ್ಬಕ್ಕೆ ಒಂದೊಂದು ದೇವತೆಗಳ ವೈಶಿಷ್ಟ್ಯತೆಯೊಂದಿಗೆ ಆ ದೇವರಿಗೆ ಸಿದ್ದಪಡಿಸಿದ ಅದೇ ಆಹಾರ ನೈವೈದ್ಯವಾಗಿ ಅರ್ಪಿಸಲೇಬೇಕೆಂಬ ವಿಧಿ ಒತ್ತಡದ ಆಚರಣೆ ಸಾಮಾಜಿಕವಾಗಿ ಬಿಟ್ಟಿತು. ಆದ್ದರಿಂದ ಆರೋಗ್ಯಕ್ಕೆ ಬೇಕಾದ ಜೀವಸತ್ವ, ಕೊಬ್ಬಿನಾಂಶ, ಕಬ್ಬಿಣ, ರಂಜಕ, ಕ್ಯಾಲ್ಸಿಯಂ ಮುಂತಾದ ಅಂಶಗಳನ್ನು ಪೂರೈಸುವ ಆಹಾರ ಪದ್ಧತಿಗಳನ್ನು ನಿಯಮನುಸಾರವಾಗಿ ನಮ್ಮ ಪೂರ್ವಿಕರು ರೂಢಿಸಿಕೊಂಡರು. ಅವುಗಳನ್ನು ತಿರಸ್ಕರಿಸಬಾರದೆಂಬ ಉದ್ದೇಶಕ್ಕಾಗಿ ನಿಷೇಧ ನಂಬಿಕೆಗಳಾಗಿ ಅನುಸರಿಸುವಂತೆ ಮಾಡಿದರು. (ಹಬ್ಬಗಳ ಆಚರಣೆಯಲ್ಲಿ ಆಹಾರ ಮತ್ತು ಆರೋಗ್ಯಕ್ಕೆ ಕೊಟ್ಟ ಮಹತ್ವ ಏನೆಂಬುವದು ಅಧ್ಯಾಯ–೩ರಲ್ಲಿ ವಿವರಿಸಲಾಗಿದೆ).

ಹಬ್ಬ ಹರಿದಿನಗಳಲ್ಲದೆ ಊರಿನ ಜನವೆಲ್ಲಾ ಸಾಮೂಹಿಕವಾಗಿ ಸೇರಿ ಆಚರಿಸುವ ಆಚರಣೆಗಳು ಕೂಡಾ ಇವೆ. ಊರಿನ ಜಾತ್ರೆ, ದೇವರ ಹೆಸರಲ್ಲಿ ಊರಿಗೆ ಊಟ ಹಾಕುವ (ಖಾಂಡ)ಂತಹ ವಿಶೇಷ ಆಚರಣೆಗಳ ಹಿಂದಿರುವ ಸತ್ವವನ್ನು ಗಮನಿಸಿದರೆ ನಮ್ಮ ಪರಂಪರೆಯ ಹಿಂದಿರುವ ಅರ್ಥ ಮತ್ತು ಮಹತ್ವ ಹೇಗೆ ವಿಕಾಸಗೊಂಡಿದೆ ಎನ್ನುವುದು ಅರಿವಾಗುತ್ತದೆ. ಊರಿನ ಜಾತ್ರೆಯಲ್ಲಿ ಅಥವಾ ಇನ್ನಿತರ ವಿಶೇಷ ಸಂದರ್ಭಗಳಲ್ಲಿ ಕಂಡು ಬರುವ ಸಾಮೂಹಿಕ ಭೋಜನ ಎನ್ನುವುದು ಮೇಲ್ನೋಟಕ್ಕೆ ಸಂಭ್ರಮ ತುಂಬಿದ ಒಂದು ಸಂದರ್ಭ ಮಾತ್ರ. ಊರಿನ ಎಲ್ಲ ಮನೆಗಳವರೂ ಒಂದು ನಿರ್ಧಿಷ್ಟ ದಿನದಂದು ಊರಿನ ದೇವಸ್ಥಾನದಲ್ಲಿ ಒಟ್ಟು ಗೂಡಿ ವಿಶೇಷ ಅಡುಗೆಯನ್ನು ಸಿದ್ಧಪಡಿಸಿ ಊಟಮಾಡಬೇಕು ಎನ್ನುವ ಕಡ್ಡಾಯವು ಒಂದು ಸಂಪ್ರದಾಯವಾಗಿ ಬದಲಾಗಿರುತ್ತದೆ. ಆದರೆ ಸರಿಯಾಗಿ ನೋಡಿದರೆ ಇಂಥ ಸಾಂಪ್ರದಾಯಿಕ ಆಚರಣೆಗಳು ಇಡೀ ಊರಿನವರ ಆರೋಗ್ಯವನ್ನು ಒಂದೇ ಸಾರಿಗೆ ವ್ಯವಸ್ಥಿತವಾಗಿ ನಿಭಾಯಿಸುವ ಒಂದು ಜಾಣ್ಮೆಯ ಕಾರ್ಯ ತಂತ್ರವಾಗಿ ಕಾಣಿಸುತ್ತದೆ. ಸಾಮೂಹಿಕ ಭೋಜನಕ್ಕೆಂದು ತಯಾರಾದ ವಿಶೇಷ ಅಡುಗೆಯಲ್ಲೋ ಅಥವಾ ಅಂದಿನ ಯಾವುದೋ ಒಂದು ಆಚರಣೆಯಲ್ಲೋ ಬಳಕೆಯಾಗುವ ಒಂದು ನಿರ್ದಿಷ್ಟ ಸಂಪನ್ಮೂಲದಲ್ಲಿ ಇಡೀ ಊರನ್ನು ಒಂದು ಖಾಯಿಲೆಯಿಂದ ತಡೆಗಟ್ಟುವ ಗುಣವಿರುವುದು ಕಾಣುತ್ತದೆ. ಆ ಸಂಪನ್ಮೂಲವನ್ನು ಅಡುಗೆಯಲ್ಲೋ ಆಚರಣೆಯಲ್ಲೋ ಅಂದು ತಪ್ಪದೆ ಬಳಕೆ ಮಾಡಿದರೆ ಸಾಕು. ಆ ಊರಿನವರಿಗೆ ರೋಗ ನಿವಾರಣೆಯ ಔಷಧ ಅದರಲ್ಲಿ ಇದ್ದೆ ಇರುತ್ತದೆ.

ಆಚರಣೆಯ ಹಿಂದೆ ಅಗೋಚರವಾಗಿ ಬೆಸೆದುಕೊಂಡಿರುವುದು ನಮ್ಮ ಜನಪದರ ಜಾಣ್ಮೆ! ಅಲ್ಲಿ ಕಡ್ಡಾಯವಾಗಿ ಬಳಕೆಯಾಗುವ ಮುತ್ತುಗದೆಲೆಯ ಹಿಂದೆ ಇಂಥದೊಂದು ಅಮೂಲ್ಯ ದೇಸಿ ಜ್ಞಾನ ಅಡಗಿದೆ. ಇಡೀ ಊರಿನವರೆಗೆ ರೋಗ ನಿರೋಧಕತೆಯನ್ನು ತಂದುಕೊಡುವ ಒಂದು ಸುಲಭ ಸಾಧನವಾಗಿ ಇಲ್ಲಿ ಬಳಕೆಯಾಗುತ್ತದೆ. ವಾಸ್ತವವಾಗಿ ಮುತ್ತುಗದೆಲೆಗೆ ಶಾಮಕ, ಉಷ್ಣಹಾರಕ ಗುಣಗಳಿವೆ. ಬೇಸಿಗೆ ಕಾಲದ ಮೈ ಕಡಿತವನ್ನೂ ಚರ್ಮದ ಮೇಲೆ ಏಳುವ ಹದದ ಗುಳ್ಳೆಗಳನ್ನು ನಿವಾರಿಸಲು ಮುತ್ತುಗದೆಲೆಯ ಕಷಾಯವು ಜಾನಪದ ವೈದ್ಯದಲ್ಲಿ ಬಳಕೆಯಾಗುತ್ತದೆ.

ಒಳ್ಳೆಯ ಆರೋಗ್ಯ ನಮ್ಮೆಲ್ಲರ ಸುಖ-ಸಂತೋಷಕ್ಕೆ ಯೋಗ್ಯ ಅಡಿಪಾಯವನ್ನು ಒದಗಿಸಿಕೊಡುತ್ತದೆ. ಆರೋಗ್ಯಕರ ದೇಹದಲ್ಲಿ ಆರೋಗ್ಯಕರ ಮನಸ್ಸು ಇದ್ದಲ್ಲಿ ಅದು ಜೀವನವನ್ನು ಚೇತೋಹಾರಿಯಾಗಿಸುತ್ತದೆ. ಆರೋಗ್ಯ ಸಂವರ್ಧನೆ ಮಾಡುವ ಸೂತ್ರಗಳನ್ನು ಪಾಲಿಸಿದಲ್ಲಿ ಪ್ರತಿಯೊಬ್ಬರೂ ಆರೋಗ್ಯಕರ ಜೀವನವನ್ನು ಹೊಂದಬಲ್ಲರು. 'ಆರೋಗ್ಯವೇ ಭಾಗ್ಯ' ವೆಂದು ಎಲ್ಲ ಜನಾಂಗಗಳು ಪರಿಗಣಿಸಿವೆ. "ಯಾರು ಆರೋಗ್ಯ ಹೊಂದಿದ್ದಾರೋ ಅವರಿಗೆ ಭರವಸೆಯಿದೆ. ಯಾರಿಗೆ ಭರವಸೆಯಿದೆಯೋ ಅವರಿಗೆ ಎಲ್ಲವೂ ಇದೆ."[೨೦] ಎಂದು ಅರಬ್ಬಿ ಗಾದೆ ಹೇಳುತ್ತದೆ. ಇದೇ ಅಂಶವನ್ನು ಜಗತ್ತಿನ ಬೇರೆ ಬೇರೆ ರಾಷ್ಟ್ರಗಳಲ್ಲಿ ಪ್ರಚಲಿತವಿರುವ ಗಾದೆಗಳು ಸ್ಪಷ್ಟಪಡಿಸುತ್ತವೆ. ಜೀವಾಣು ಸೋಂಕು ಪರಾವಲಂಭಿ ಜೀವಿಗಳು ನ್ಯೂನಪೋಷಣೆ, ರಸದೂತಗಳ ವೈತ್ಯಯ ಅನುವಳಿಕೆ ಗಂತಿ ಬೆಳವಣಿಗೆ ಮುಂತಾದವು ರೋಗದ ಉದ್ಭವಕ್ಕೆ ಅನಿಷ್ಠ ಶಕ್ತಿ ಹಾಗೂ ಮಾಟ ಮಂತ್ರಗಳ ಪ್ರಭಾವ, ಭಾನಾಮತಿಯ ಉಪಟಳದಿಂದ ಉಂಟಾಗುತ್ತವೆ. ಎಂಬ ತಪ್ಪು ಕಲ್ಪನೆ ಇಂದಿಗೂ ಅನೇಕರಲ್ಲಿದೆ. ಜಾನ್ ಗಾರ್ಡನ್ ಒತ್ತಡದ ಜೀವನವನ್ನು ಎದುರಿಸುವ ಶಕ್ತಿ ಸಂಜೀವಿನಿಯ ಏಳು ಶಬ್ಧಗಳ ಅನುಪಾನ ನೀಡಿದ್ದಾನೆ. ಅವುಗಳೆಂದರೆ ಜೀವಿಸಿ, ಪ್ರೀತಿಸಿ, ಕಲಿಯಿರಿ, ವಿಚಾರಮಾಡಿ, ಕೊಡಿ, ಪ್ರಸನ್ನಗೊಳಿಸಿ ಮತ್ತು ಪ್ರಯತ್ನಿಸಿ ಈ ಏಳು ಶಬ್ದ ಸೂತ್ರಗಳು ಒತ್ತಡವನ್ನು ದೂರಮಾಡಿ ಜೀವನಕ್ಕೆ ಬಲ ತಂದು ಕೊಡುತ್ತವೆ.

ಹಿಂದಿನ ಕಾಲದಲ್ಲಿ ಎಲ್ಲಾ ದೇಶಗಳಲ್ಲಿಯೂ ಜನರು ಕೈಕೊಟ್ಟಣದ ಧಾನ್ಯವನ್ನು ಮಾಂಸವನ್ನೂ ಮದ್ಯವನ್ನೂ ಸೇವಿಸುತ್ತಿದ್ದರು. ಮಧ್ಯವೊಂದನ್ನು ಬಿಟ್ಟರೆ ಉಳಿದ ಖಾದ್ಯಗಳು ಇಂದು ಪದಚ್ಯುತವಾಗಿ ಅವುಗಳ ಸ್ಥಾನದಲ್ಲಿ ಹೆಚ್ಚು ಪೋಷಣಾಂಶಗಳುಳ್ಳ ಹಾಲು, ಬೆಣ್ಣೆ, ತರಕಾರಿ, ಹಣ್ಣು ಹಂಪಲ, ಗಿರಿಣಿಯಲ್ಲಿ ಹುಡಿಯಾದ ಧಾನ್ಯ ಹಿಟ್ಟುಗಳು ಬಂದು ಬಿಟ್ಟಿವೆ. ಜನರು ಹಾಲು, ಜೇನು, ಖೀರು ಮುಂತಾದವನ್ನು ಹೆಚ್ಚಾಗಿ ಬಳಸುತ್ತಿರುವುದರಿಂದ ಸಕ್ಕರೆಯ ವೆಚ್ಚ ಹೆಚ್ಚಾಗಿದೆ. ಮಕ್ಕಳ ಆಹಾರದಲ್ಲೂ ಮಾರ್ಪಾಟಾಗಿದೆ. ಕೃತಕವಾದರೂ ಅಧಿಕಾಧಿಕ ಪೋಷಾಣಾಂಶಗಳುಳ್ಳ ಆಹಾರ ತಿಂದೇ ಇಂದಿನ ಮಕ್ಕಳು ಪುಟವಾಗಿ ಬೆಳೆಯುವವು. ನಮ್ಮ ಪೂರ್ವಿಕರಂತೆ ನಾವು ಆರೋಗ್ಯದ ಬಗ್ಗೆಯಾಗಲಿ, ಧಾರ್ಮಿಕ ಶ್ರದ್ಧೆಯಿಂದಾಗಲಿ ಉಪವಾಸ ವ್ರತಗಳನ್ನಾಚರಿಸುವುದಿಲ್ಲ. ಅಂಥ ಹಬ್ಬದೂಟಗಳನ್ನೂ ಜರುಗಿಸುವುದಿಲ್ಲ. ನಿತ್ಯದ ಆಹಾರ ಸೇವನೆಯಲ್ಲಿ ಒಂದು ಬಗೆಯ ಕಟ್ಟು ಕಟ್ಟಲೆಯೂ ನಿಯತಿಯೂ ಪ್ರಾಪ್ತವಾಗಿವೆ. ನೈತಿಕ, ಧಾರ್ಮಿಕ ಭಾವನೆಗಳು ಶಿಥಿಲವಾಗುತ್ತ ಬಂದ ಹಾಗೆ ಆಹಾರ ಕ್ರಮದಲ್ಲಿ ಸ್ವ-ಇಚ್ಛೆಗೆ ಪ್ರಾಧಾನ್ಯವು ದೊರೆತುಕೊಂಡರೂ ಕ್ರಮಬದ್ಧತೆಯೂ ಸಂಯಮವೂ ಪ್ರಾಪ್ತವಾಗಿದೆ. ಮೇಲಿನಲ್ಲಿ ಪುಡಿಯಾಗಿ ಜೀಸಲ್ಪಟ್ಟು ಶುಭಗೊಳಿಸಲ್ಪಟ್ಟು

---

೨೦(ಅದಿ ಟಿಪ್ಪಣಿ:೮೦: ಆರೋಗ್ಯ ರಕ್ಷಣೆ ಲೇಖಕರು ಡಾ.ಹಿ.ಎಸ್.ಶಂಕರ ಪುಟ ಸಂಖ್ಯೆ-೧)

ಗೋಧಿಹಿಟ್ಟು ಸರ್ವವಿಧದಲ್ಲೂ ಕೈಕೊಟ್ಟಣದ ಕಂದು ಹಿಟ್ಟನ್ನು ಮಿಗುತ್ತಿದೆಯೆಂದು ಪ್ರಕಟಣೆಗಳು ಸಾರುತ್ತಿವೆ. ಮಿೀಲಿನಲ್ಲಿ ಪುಡಿಯಾದ ಹಿಟ್ಟಾದರೋ ಹೆಚ್ಚು ಕಾಲ ಹಾಳಾಗದೆ ಉಳಿಯಬಹುದು ಆದರೆ ಅದು ತನ್ನ ಸಾರವನ್ನು ಪೂರ್ತಿಯಾಗಿ ಕಳೆದುಕೊಂಡು ಪೋಷಣಾಂಶಗಳ ದೃಷ್ಟಿಯಿಂದ ಅಥವಾ ರುಚಿಯ ದೃಷ್ಟಿಯಿಂದಲೂ ಕಂದುಹಿಟ್ಟನ್ನು ಮಿಗಿಸುತ್ತಿಲ್ಲ. ಆದರೆ ಪ್ರಕಟಣೆಗಳ ಫಲವಾಗಿ ಬಿಳಿ ಹಿಟ್ಟು ಮತ್ತು ಅದರಿಂದ ತಯಾರಿಸಲ್ಪಟ್ಟ ರೊಟ್ಟಿಗಳೇ ಇಂದು ವಿಕ್ರಯವಾಗುತ್ತಲಿವೆ. ಫಲವಾಗಿ ಜನರ ಆರೋಗ್ಯವೂ ಅವರಿಗೆ ತಿಳಿಯದೆಯೇ ಕೆಡುತ್ತಿದೆ. ಇವುಗಳಂತೆಯೇ ತೀರ ಅನಾವಶ್ಯಕವಿರುವ ಮಾತ್ರವಲ್ಲದೆ, ಬಹುಭಾರಿ ಹಾನಿಯನ್ನೂ ಒದಗಿಸುತ್ತಿರುವ ರಾಸಾಯನಿಕ ದ್ರವ ಔಷಧಿಗಳನ್ನು ಜನರು ಇಂದು ಸೇವಿಸುತ್ತಿದ್ದಾರೆ.

ಕೃಷಿ ಪದ್ಧತಿಯಲ್ಲಿ ಯಾವುದೇ ರಸಾಯನಿಕ ವಸ್ತುಗಳ ಬಳಕೆ ಮಾಡದೆ ನಿಸರ್ಗದತ್ತವಾಗಿ ಬೆಳೆದ ಆಹಾರ ಧಾನ್ಯಗಳನ್ನು ಮನೆಯಲ್ಲಿ ಸ್ವಚ್ಛಗೊಳಿಸಿ ಆಹಾರ ಸಿದ್ದಪಡಿಸುವುದಕ್ಕಾಗಿ ತಯಾರಿಸಲು ಬೀಸುವ ಕಲ್ಲಿನಿಂದ ಬೀಸಿ ಸೌದೆ ಉರುವಲಿನಿಂದ ಒಲೆಯ ಮೇಲೆ ಗಡಿಗೆಯಲ್ಲಿ ಕುದಿಸಿದ ಆಹಾರ ಇವೆಲ್ಲಾ ಈ ಹಿಂದಿನ ಪೂರ್ವಿಕರ ರೋಗ ನಿರೋಧಕ ಹಾಗೂ ಪೌಷ್ಠಿಕಾಂಶಗಳನ್ನು ಹೆಚ್ಚಿಸುವ ಆಹಾರ ಪದ್ಧತಿಯಾಗಿತ್ತು. ಇಂದಿನ ಕಾಲದಲ್ಲಿ ಬಳಸುವ ಗ್ಯಾಸ್, ಕುಕ್ಕರ್, ಮಿಕ್ಸರ್, ಫ್ರಿಜ್‌ಗಳಂತ ಕೃತಕ ವಸ್ತುಗಳ ಬಳಕೆಯಿರಲಿಲ್ಲ. ಪ್ರತಿ ದಿನದ ಹಾಗೂ ಶರೀರಗಟ್ಟಿಗೊಳಿಸುವ ಬೀದರ ಜಿಲ್ಲೆಯ ವಿಶೇಷ ಆಹಾರವೆಂದರೆ ರೊಟ್ಟಿ, ಮಜ್ಜಿಗೆ, ಹಾಲು, ನುಚ್ಚು, ಬಳ್ಳೊಳ್ಳಿ ಖಾರ, ಅನ್ನ ಮುಂತಾದವುಗಳಾಗಿವೆ. ಈ ಊಟ ಹಬ್ಬದೂಟಗಿಂತಲೂ ತೀರಾ ಸರಳವಾಗಿದ್ದರೂ ಇವುಗಳ ಬಳಕೆಯಿಂದ ದೇಹಾಲ್ಯಸವಾಗಲಿ, ಅಜೀರ್ಣತೆಯಾಗಲಿ ಯಾವುದೇ ತೊಂದರೆಗೊಳಿಸದೆ, ದೇಹದ ಸ್ಥಿತಿ ಸುವ್ಯವಸ್ಥಿತವಾಗಿಡಬಲ್ಲ ಆಹಾರವಾಗಿದೆ. ಇದರಿಂದ ಆರೋಗ್ಯವನ್ನು ನೈಸರ್ಗಿಕ ವಿಧಾನಗಳಿಂದ ದಿನ ನಿತ್ಯದ ಚಟುವಟಿಕೆಗಳ ಮೂಲಕ ಕಾಪಾಡಿಕೊಳ್ಳುತ್ತಿದ್ದರು. ಆರೊಗ್ಯಕ್ಕಾಗಿ ಮಾತ್ರ ಔಷಧಿ, ಚಿಕಿತ್ಸೆ ಅನ್ನುವಂತಹಗೋಜಿಗೆ ಪ್ರತ್ಯೇಕ ಸಮಯ ವ್ಯಯಮಾಡಬೇಕಾಗಿರಲಿಲ್ಲ. ಸಂರಕ್ಷಣೆಯ ಕಾಳಜಿಯು ವಹಿಸಿಬೇಕಾಗಿರಲಿಲ್ಲ.

ಅಡುಗೆ ತಯಾರಿಸುವ ವಿಧಾನದಲ್ಲಾದರೂ ಆರೋಗ್ಯೆ ದೃಷ್ಟಿಯಿಂದ ಅದರ ವಿಧಾನವನ್ನು ಮೀರಿದಂತೆ ಅನುಸರಿಸಬೇಕಾಗುತ್ತದೆ. ಅಂದಾಗ ಅದು ಆರೋಗ್ಯಕರ ಆಹಾರವಾಗಿ ಸಿದ್ಧವಾಗುತ್ತದೆ. ಉದಾಹರಣೆಗೆ: ದೊಸೆ ಹಿಟ್ಟನ್ನು ತಯಾರಿಸಿ ಆ ಕೂಡಲೇ ದೋಸೆ ಮಾಡಲು ಸಾಧ್ಯವಿಲ್ಲ. ಅಕ್ಕಿ ಉದ್ದಿನ ಬೇಳೆ ನೆನೆಯಿಸಿ ನುಣ್ಣಗೆ ರುಬ್ಬಿ ಆ ಹಿಟ್ಟು ಹುದಗಲು ಒಂದು ರಾತ್ರಿ ಹಾಗೆ ಬಿಡುತ್ತೇವೆ. ದೋಸೆ ಹಿಟ್ಟು ಹುದುಗುವುದು ಒಂದು ಬಗೆಯ ಜೀವ ರಸಾಯನಿಕ ಕ್ರಿಯೆ. ಬರಿ ಕಣ್ಣಿಗೆ ಕಾಣಿಸದಿರದಷ್ಟು ಚಿಕ್ಕವಾದ ಏಕಕೋಶ ಜೀವಿಗಳೂ ದೋಸೆ ಹಿಟ್ಟಿನಲ್ಲಿ ಸಂತಾನಾಭಿವೃದ್ಧಿ ಮಾಡಿಕೊಳ್ಳುವುದರ ಫಲವಾಗಿ ಆ ಹಿಟ್ಟಿನಲ್ಲಿ ಉಂಟಾಗುವ ರಸಾಯನಿಕ ಬದಲಾವಣೆಗಳೇ ಹುದುಗುವಿಕೆ. ಇಂಥ ರಸಾಯನಿಕ ಕ್ರಿಯೆಗಳನ್ನು "ಫರ್ಮಂಟೇಷನ್" ಎಂದು ಕರೆಯುತ್ತಾರೆ. ಚಳಿಗಾಲಕ್ಕಿಂತಲೂ ಬೇಸಿಗೆಯಲ್ಲಿ ಚೆನ್ನಾಗಿ ಹುದುಗುವ ಸಂಭವ ಹೆಚ್ಚು. ದೋಸೆ ಹಿಟ್ಟಿನ ಕಿಣ್ವನದಲ್ಲಿ ಸಾಕಷ್ಟು ಸೂಕ್ಷ್ಮ ಜೀವಿಗಳಿರುತ್ತವೆ. ಅವೆಲ್ಲವೂ ಅಕ್ಕಿ ಮತ್ತು ಉದ್ದಿನ ಬೇಳೆಯ ಮೇಲಿರುತ್ತವೆ ರುಬ್ಬಿದಾಗ ಒಳ ಸೇರಿಕೊಳ್ಳತ್ತವೆ.

ಉದ್ದಿನ ಬೇಳೆಯಲ್ಲಿ ಕಾರ್ಬೋಹೈಡ್ರೇಟ್ ಮತ್ತು ಪ್ರೋಟೀನಗಳು ಸಂಕೀರ್ಣ ಅಣುಗಳು ರಾಸಾಯನಿಕ ಕ್ರಿಯೆಗೆ ಒಳಗಾಗಿ ಭಾಗಶಃ ವಿಘಟನೆಗೊಂಡ ಇನ್ನೂ ಸರಳ ಅಣುಗಳಾಗುವುದರಿಂದ ಅದನ್ನು ನಾವು ಸೇವಿಸಿದಾಗ ಅರುಗುವುದು ಸುಲಭ. ಕಿಣ್ವನದಲ್ಲಿ ಪ್ರಮುಖ ಪಾತ್ರವಹಿಸುವ ಲ್ಯಾಕ್ಟಿಕ್ ಗುಂಪಿನ ಬ್ಯಾಕ್ಟೀರಿಯಾವು ಕಾರ್ಬೋಹೈಡ್ರೇಟಗಳ ಮೇಲೆ ವರ್ತಿಸಿ ಲ್ಯಾಕ್ಟಿಕ್ ಆಮ್ಲವನ್ನು ಉತ್ಪತ್ತಿ ಮಾಡುವವು. ಪರಿಣಾಮವಾಗಿ ಹಿಟ್ಟಿಗೆ ಹುಳಿ ರುಚಿ ಬಂದು ನಾಲಿಗೆಗೆ ರುಚಿಸುವುದು. ಕಾರ್ಬನ್ ಡೈ ಆಕ್ಸೈಡ್ ಗುಳ್ಳೆಗುಳ್ಳೆಯಾಗಿ ಹೊರಕ್ಕೆ ಬರುತ್ತದೆ. ಅದಕ್ಕೆ ಎಲ್ಲರ ಮನೆಯ ದೋಸೆಯೂ ತೂತೇ ಎಂಬ ಆಡು ನುಡಿಯು ಬಳಕೆಯಲ್ಲಿರುವುದು. ಉಳಿದ ಹಿಟ್ಟಿನಲ್ಲಿ ಕಿಣ್ವನ ಮುಂದುವರೆಯದಂತೆ ಫ್ರಿಜನಲ್ಲೂ ಮಣ್ಣಿನ 'ಪಾತ್ರೆಯಲ್ಲಿರುವ ನೀರಿನಲ್ಲಿ ಪಾತ್ರೆಯನ್ನಿರಸಬೇಕು. ಇದರಿಂದ ಕಿಣ್ವನ ತಡೆಗಟ್ಟಬಹುದು.

ದೋಸೆ ತಯಾರಿಸುವ ಪ್ರಕ್ರಿಯೆಯಲ್ಲಿ ಅಡಗಿರುವ ವೈಜ್ಞಾನಿಕ ತತ್ವಗಳಂತೆ ಇತರ ಆಹಾರ ಪದ್ಧತಿಗಳಲ್ಲೂ ಕಂಡು ಬರುವವು. ನೂರಾರು ವರ್ಷಗಳ ಅನುಭವದಿಂದ ಗೃಹಿಣಿಯರು ಉಪಯುಕ್ತ ಪಾಠ ಕಲಿತಿದ್ದಾರೆ. ನಿರ್ದಿಷ್ಟ ಕ್ರಮಗಳನ್ನು ರೂಢಿಗೆ ತಂದಿದ್ದಾರೆ. ಅವುಗಳ ಹಿಂದಿರುವ ವೈಜ್ಞಾನಿಕ ತತ್ವಗಳನ್ನು ಪತ್ತೆ ಮಾಡಿಕೊಳ್ಳುವುದು ಒಳ್ಳೆಯದು.

ಆಯಾ ಪ್ರಾದೇಶಿಕ ಪರಿಸರದಲ್ಲಿ ವಾಸಿಸುವ ಸಮುದಾಯವು ರೂಢಿಸಿಕೊಂಡಿರುವ ಇಂಥ ನಿರ್ದಿಷ್ಟ ಮತ್ತು ವಿಶಿಷ್ಟ ಆಹಾರ ಪದ್ಧತಿಯನ್ನು ಸ್ಥಳೀಯ ಆಹಾರ ಪದ್ಧತಿ ಎಂದು ಗುರುತಿಸಲಾಗುತ್ತದೆ. ಉತ್ತರ ಕರ್ನಾಟಕ ಭಾಗದಲ್ಲಿ ಜೋಳದ ರೊಟ್ಟಿ, ಚಟ್ನಿ ಪುಡಿ, ಪುಂಡಿಪಲ್ಯ, ಹಳೆ ಮೈಸೂರು ಕಡೆ ರಾಗಿ ಮುದ್ದೆ ಸೊಪ್ಪಿನಸಾರು. ಮಲೇನಾಡಿನಲ್ಲಿ ನೀರು ದೋಸೆ-ಬೆಲ್ಲದ ಹರಕಲು, ಕೊಡಗಿನ ಕಡೆ ಅಕ್ಕಿ ರೊಟ್ಟಿ, ಮಸಾಲೆ ಸಾಗು, ಗುಲ್ಬರ್ಗಾ ಶೇಂಗಾ ಹೋಳಿಗೆ, ಉತ್ತರ ಕನ್ನಡದ ಅವಲ್ಲಕಿ ಮೊಸರು ಮುಂತಾದವು ಈ ಆಹಾರ ಪದ್ಧತಿಗಳು ಆಯಾ ಪ್ರದೇಶಕ್ಕೆ ತಕ್ಕಂತೆ ಅವರ ಆರೊಗ್ಯಕ್ಕೆ ಹೊಂದಾಣಿಕೆಯಾಗಿರುತ್ತವೆ. ರೂಢಿಯಲ್ಲಿರದ ಆಹಾರ ಸೇವನೆಯು ಕೆಲವೊಮ್ಮೆ ಆರೋಗ್ಯಕ್ಕೆ ಹಿತಕರವಾಗಿರುವುದಿಲ್ಲ. ಅಹಾರಕ್ಕೆಂದು ಬಳಸುವ ಒಂದೇ ಮೂಲ ಸಾಮಗ್ರಿಯಿಂದ ಬೇರೆ ಬೇರೆ ಬಗೆಯ ಆಹಾರ ಪದಾರ್ಥಗಳನ್ನು ತಯಾರಿಸುವುದು ಕೂಡ ಸ್ಥಳೀಯ ಆಹಾರ ಪದ್ಧತಿಗಳ ಒಂದು ವಿಶೇಷತೆ.

ಋತುವಿಗನುಸಾರವಾಗಿ ಸಿಗುವ ಆಹಾರ ಪಾನೀಯಗಳು ಆರೋಗ್ಯವನ್ನು ಕಾಪಾಡುತ್ತವೆ. ಇವುಗಳ ಸೇವನೆ ದೇಹದ ರಕ್ಷಣೆಗೆ ಅಗತ್ಯವಾಗಿಬೇಕಾಗಿರುತ್ತವೆ.

**ವಸಂತ ಋತು :**

ಉತ್ತರಾಯಣದ ಮಧ್ಯಭಾಗವೇ ವಸಂತ ಋತು. ಈ ಋತುವಿನಲ್ಲಿ ಮನುಷ್ಯನ ಬಲವು ಮಧ್ಯಮವಾಗಿಯೇ ಇರುತ್ತದೆ. ಚೈತ್ರ-ವೈಶಾಖ ಮಾಸಗಳು ಅಂದರೆ ಏಪ್ರಿಲ್-ಮೇ ತಿಂಗಳುಗಳನ್ನು ಈ ಋತು ಒಳಗೊಂಡಿರುತ್ತದೆ. ಹೇಮಂತ, ಶಿಶಿರ ಋತುಗಳಲ್ಲಿ ದೇಹದಲ್ಲಿ ಸೇರಿದಂತಹ ಕಫವೂ ವಸಂತದ ಸೂರ್ಯಕಿರಣಗಳಿಂದಾಗಿ ಕರಗಿ ಜೀರ್ಣಶಕ್ತಿಯನ್ನು ಕುದಿಸಿ ಅನೇಕ ರೋಗಗಳಿಗೆ ಕಾರಣವಾಗುತ್ತದೆ. ವಸಂತ ಋತುವಿನಲ್ಲಿ ಚಿಗುರುವ ಬೇವು ಕಫದ ದೋಷ ನಿವಾರಣೆಗೆ ಸಹಕರಿಸುತ್ತದೆ. ಆದ್ದರಿಂದ ಯುಗಾದಿ ಮತ್ತು

ರಾಮನವಮಿಗಳಲ್ಲಿ ಉಪಯೋಗಿಸುವ ಆಹಾರ, ಪಾನೀಯಗಳು ಈ ಸಮಯಕ್ಕೆ ಆರೋಗ್ಯಕ್ಕೆ ಬೇಕಾದ ಅಂಶ ಪೂರೈಸುತ್ತವೆ. (ಈ ಹಬ್ಬಗಳ ಕುರಿತ ಆಹಾರ ಪಾನೀಯಗಳ ವಿಶೇಷತೆಯ ಅಧ್ಯಯ-೩ರಲ್ಲಿ ವಿವರಿಸಲಾಗಿದೆ) ಮಾವು, ಬೆಲ್ಲ, ಸೌತೆಕಾಯಿ ಹಾಗೂ ಪಾನಕಗಳಂತಹ ದ್ರವರೂಪದ ಆಹಾರಗಳ ಬಳಕೆ ಹೆಚ್ಚು. ಬೇಸಿಗೆ ದಿನಗಳಲ್ಲಿ ದೇಹಕ್ಕೆ ಹೆಚ್ಚಿನ ಪ್ರಮಾಣದಲ್ಲಿ ನೀರಿನಾಂಶದ ಪೂರೈಕೆ ಆಗಬೇಕಾದ್ದರಿಂದ ಇಲ್ಲಿ ಆಹಾರವು ಸಹಜವಾಗಿಯೇ ದ್ರವರೂಪದ್ದು. ಬೇಸಿಗೆ ಕಾಲದಲ್ಲಿ ಊಳಾಗಡ್ಡಿ ಮತ್ತು ಮಾವಿನಕಾಯಿ ಚಟ್ನಿ, ಮಜ್ಜಿಗೆ, ರೊಟ್ಟಿ ಬೀದರ ಜಿಲ್ಲೆಯ ವಿಶೇಷ ಆಹಾರಗಳಾಗಿರುತ್ತವೆ.

**ಗ್ರೀಷ್ಮ :**

ಉತ್ತರಾಯಣದ ಕೊನೆಯಭಾಗ, ಜೇಷ್ಠ ಆಷಾಡ ಮಾಸಗಳು ಅಂದರೆ ಜೂನ್ ಜುಲೈ ಈ ಋತುವಿನಲ್ಲಿ ಬರುತ್ತವೆ. ಈ ಋತುವಿನಲ್ಲಿ ಮನುಷ್ಯನ ಬಲವು ಬಹಳ ಕಡಿಮೆಯಾಗಿರುತ್ತದೆ. ಸೂರ್ಯ ಕಿರಣಗಳು ಬಹಳ ತೀಕ್ಷಣವಾಗಿದ್ದು ಭೂಮಿಯ ಹಾಗೂ ಮನುಷ್ಯನ ಸಾರವನ್ನು ಹೀರಿ ಬಿಡುತ್ತವೆ. ಇದರಿಂದಾಗಿ ಮನುಷ್ಯನ ದೇಹದಲ್ಲಿ ನೀರಿನಾಂಶ ಹಾಗೂ ಉಪ್ಪಿನಾಂಶ ಹೆಚ್ಚಿಸುವ ಸಿಹಿ, ಶೀತ, ದ್ರವ ಪದಾರ್ಥಗಳು ಜೀರ್ಣಕ್ಕೆ ಸುಲಭವಾದ ಆಹಾರ ಪಾನಕ ಸೇವಿಸಬೇಕು. ಬೀದರ ಜಿಲ್ಲೆಯಲ್ಲಿ ಮಳೆಗಾಲದ ಶೀತ ಹವಮಾನ ವಿದ್ದರೆ ಸಾಕು ಬೆಲ್ಲ, ಶುಂಠಿ ಹಾಕಿ ಮಾಡಿದ ಸೌತಿ ಬೀಜ ಇಲ್ಲವೆ ಬಟವಿ ಹುಗ್ಗಿ ಮಾಡಿ ಕುಡಿಯುವರು. ಇದರಿಂದ ಆರೋಗ್ಯಕ್ಕೆ ಶೀತದಿಂದ ರಕ್ಷಣೆ ಸಿಗುತ್ತದೆ.

**ವರ್ಷ ಋತು :**

ವಿಸರ್ಗ ಕಾಲದ ಪ್ರಾರಂಭಕಾಲ ಶ್ರಾವಣ; ಭಾದ್ರಪದ ಮಾಸಗಳು ಅಂದರೆ ಅಗಸ್ಟ್ ಸೆಪ್ಟೆಂಬರ್ ಈ ಋತುವಿನಲ್ಲಿ ಬರುತ್ತವೆ. ಇದು ದಕ್ಷಿಣಾಯನದ ಮೊದಲ ಋತು. ಈ ಋತುವು ಮಳೆ, ಚಳಿಯಿಂದಾಗಿ ಇನ್ನೂ ಪ್ರಕೋಪ ಹೊಂದುತ್ತದೆ. ಕಾದ ನೆಲದ ಮೇಲೆ ಬಿದ್ದಂತಹ ಮಳೆಯಿಂದಾಗಿ ಆಮ್ಲತ್ವವು ಹೆಚ್ಚಾಗಿ ದೇಹದಲ್ಲಿ ಪಿತ್ತದೋಷ ಸಂಗ್ರಹವಾಗುತ್ತದೆ. ಮಳೆ ಚಳಿಯಿಂದಾಗಿ ಕಫವೂ ಹೆಚ್ಚುತ್ತದೆ. ಮೂರು ದೋಷಗಳು ಹೆಚ್ಚಾದರೂ, ವಾತದೋಷದ ಪ್ರಕೋಪ ತುಂಬಾ ಹೆಚ್ಚಾಗಿರುತ್ತದೆ. ಈ ದೋಷಗಳ ವೃದ್ಧಿಯಿಂದಾಗಿ ಅಗ್ನಿಯು ಕ್ಷಿಣಿಸುತ್ತದೆ. ಹಾಗೂ ದೇಹದ ಬಲ ಕುಗ್ಗಿ ನಾನಾ ರೋಗಗಳಿಗೆ ದಾರಿ ಮಾಡಿಕೊಡುತ್ತದೆ. ದೋಷಗಳನ್ನು ಸಮಾವಸ್ಥೆಗೆ ತರುವ ಹಾಗೂ ಅಗ್ನಿಯನ್ನು ಉದ್ದೀಪನ ಗೊಳಿಸುವ ಆಹಾರ ಕ್ರಮರೂಢಿಸಿಕೊಳ್ಳಬೇಕು. ಈ ಋತುವಿನಲ್ಲಿ ಹುಳಿ, ಸಿಹಿ, ಉಪ್ಪು, ರುಚಿ ಪ್ರಧಾನವಾದ ಸುಲಭವಾಗಿ ಜೀರ್ಣವಾಗುವ ಬಿಸಿಯಾದ ಶುಷ್ಕ ಆಹಾರವನ್ನು ಸೇವಿಸಬೇಕು. ಈ ಕಾಲದಲ್ಲಿ ಸೊಪ್ಪು ಹೇರಳವಾಗಿ ಸಿಕ್ಕರೂ ಅದನ್ನು ಬಳಸದಿರುವುದೇ ಲೇಸು. ಭೂಮಿಯ ಆಮ್ಲತ್ವವನ್ನು ಸೊಪ್ಪು ಹೀರಿಕೊಳ್ಳುವುದರಿಂದಲೂ ಸೊಪ್ಪು ಬಿಡುವುದೆ ಒಳ್ಳೆಯದು.

**ಶರದ್ ಋತು :**

ವಿಸರ್ಗಕಾಲದ ಮಧ್ಯಹಂತ ಆಶ್ವೀಜ-ಕಾರ್ತಿಕ ಮಾಸ ಅಂದರೆ ಅಕ್ಟೋಬರ್-ನವೆಂಬರ್ ತಿಂಗಳಿನಲ್ಲಿ ಬರುತ್ತದೆ. ಈ ಋತುವಿನಲ್ಲಿ ಜನರ ಬಲವೂ ಮಧ್ಯಮವಾಗಿರುತ್ತದೆ. ವರ್ಷ ಋತುವಿನಲ್ಲಿ ಮೋಡದಲ್ಲಿ ಮರೆಯಾದ ಸೂರ್ಯನು ಹೊರಗೆ ಬಂದು ತನ್ನ ಕಿರಣಗಳನ್ನು ಭೂಮಿಯ ಮೇಲೆ ಬೀರುತ್ತಾನೆ.

ತೀಕ್ಷ್ಣವಾದ ಈ ಕಿರಣಗಳು ವರ್ಷ ಋತುವಿನ ಸಂಗ್ರಹವಾದ ಪಿತ್ತವನ್ನು ಕರಗಿಸಿ ರಕ್ತವನ್ನು ಕೆಡಿಸುತ್ತದೆ. ಆದ್ದರಿಂದ ಶರದೃತುವಿನಲ್ಲಿ ಪಿತ್ತ ಮತ್ತು ರಕ್ತಕ್ಕೆ ಸಂಬಂಧಿಸಿದ ವ್ಯಾಧಿಗಳು ಜನರನ್ನು ಕಾಡುತ್ತವೆ. ಉಲ್ಬಣವಾದ ಪಿತ್ತವನ್ನು ಹತೋಟಿಗೆ ತರಲು ಸಿಹಿ-ಕಹಿ ಒಗರು ರಸವುಳ್ಳ, ಶೀತ ಗುಣವುಳ್ಳ ಜೀರ್ಣಕ್ಕೆ ಸುಲಭವಾದ ಆಹಾರ ಪದಾರ್ಥಗಳನ್ನು ಸೇವಿಸಬೇಕು.

ಆಹಾರವನ್ನು ಪ್ರಮಾಣವರಿತು ಚೆನ್ನಾಗಿ ಹಸಿದಾಗ ಮಾತ್ರ ತಿನ್ನಬೇಕು. ಶರದೃತುವಿನಲ್ಲಿ ಬೆಳದಿಂಗಳು ತುಂಬಾ ಆಹ್ಲಾದಕರವಾಗಿರುವುದರಿಂದ ಈ ಋತುವಿನಲ್ಲಿ ಬಂಧು ಜನರೊಂದಿಗೆ ಬೆಳಂದಿಗಳ ಭೋಜನ ಸೇವಿಸಬೇಕು.

**ಹೇಮಂತ ಋತು:**

ದಕ್ಷಿಣಾಯಣದ ಕೊನೆಯ ಭಾಗವೇ ಹೇಮಂತ ಋತು. ಈ ಋತು ಮಾರ್ಗಶಿರ- ಪುಷ್ಯ ಮಾಸಗಳನ್ನು ಒಳಗೊಂಡಿದೆ. ಅಂದರೆ ಡಿಸೆಂಬರ್ ಮತ್ತು ಜನವರಿ ತಿಂಗಳು ಹೇಮಂತ ಋತುವಿನಲ್ಲಿ ಬರುತ್ತವೆ. ಈ ಋತುವಿನಲ್ಲಿ ಸಹಜವಾಗಿಯೇ ಮನುಷ್ಯನ ದೇಹ ಬಲವು ಪ್ರಬಲವಾಗಿರುತ್ತದೆ. ಈ ಋತುವಿನ ಗುರುತೇ ಚಳಿ ಹೊರಗಿನ ಹವಾಮಾನದಲ್ಲಿ ಚಳಿ ಹೆಚ್ಚಾಗಿ ರೂಮಕೂಪಗಳು ಮುಚ್ಚಿಕೊಂಡು ದೇಹದ ಉಷ್ಣತೆ ದೇಹದಲ್ಲೇ ಉಳಿಯುತ್ತದೆ. ಈ ಕಾರಣದಿಂದ ಜೀರ್ಣಶಕ್ತಿಯು ಉಲಬ್ಬಣಗೊಂಡು ಹಸಿವೆ ಹೆಚ್ಚಾಗಿ ಆಗುತ್ತವೆ. ಉತ್ತರ ದಿಕ್ಕಿನಿಂದ ಬೀಸುವ ಗಾಳಿ ತಣ್ಣಗಿರುವ ಕಾರಣ ಸೂರ್ಯನ ಕಿರಣಗಳ ತೀಕ್ಷ್ಣತೆಯು ಕಡಿಮೆಯಾಗಿ ಈ ಋತುವಿನಲ್ಲಿ ಶೀತ ಭಾದೆಗಳಾದ ನೆಗಡಿ, ಕೆಮ್ಮು ಜನಸಾಮಾನ್ಯರನ್ನು ಕಾಡುತ್ತವೆ. ಆದ್ದರಿಂದ ಅನ್ನಪಾನಗಳನ್ನು ಬಿಸಿಯಾಗಿ ಸೇವಿಸುವುದು ಉತ್ತಮ.

ಹೊಸ ಅಕ್ಕಿ, ಗೋಧಿ, ರಾಗಿ ಮತ್ತು ಬೇಳೆ ಕಾಳುಗಳ ಬಳಕೆ ಈ ಋತುವಿನಲ್ಲಿ ಸೂಕ್ತ ಹೊಸ ಅಕ್ಕಿ ಗೋಧಿ ಜೀರ್ಣಕ್ಕೆ ಕಷ್ಟಕರವಾಗಿರುವುದರಿಂದಲೇ ಇಡಿ ವರ್ಷದಲ್ಲಿ ಈ ಋತುವಿನಲ್ಲಿ ಮಾತ್ರ ಬಳಸಲು ಯೋಗ್ಯ. ಆದ್ದರಿಂದಲೇ ಉದ್ದಿನ ಹಪ್ಪಳ ಮತ್ತು ಉದ್ದಿನ ಹಿಟ್ಟು ಮತ್ತು ಎಳ್ಳು ಮಿಶ್ರಣದ ಸೆಂಡಿಗೆ ಈ ದಿನಗಳಲ್ಲಿಯೇ ಹೆಚ್ಚಾಗಿ ಮಾಡುವ ಪದ್ಧತಿ ಕಂಡು ಬರುತ್ತದೆ. ಎಳ್ಳು ಕೂಡಾ ಹೆಚ್ಚಾಗಿ ಬಳಸುವರು. ಆದ್ದರಿಂದ ಎಳ್ಳು ಬೆಲ್ಲ ಹಂಚುವ ಜನಪ್ರಿಯ ಸಂಕ್ರಾಂತಿ ಹಬ್ಬವು ಈ ಋತುವಿನಲ್ಲಿಯೇ ಬರುವುದು. ಈ ಕಾಲದಲ್ಲಿ ಚಳಿಯಿಂದ ಚರ್ಮ ಹಾಗೂ ಆರೋಗ್ಯ ಕಾಪಾಡಲು ಪೋಷಿಸಲು ಸಹಾಯಕವಾಗಿದೆ. ತೈಲಾಂಶದ ಕೊರತೆಯಿಂದ ಚರ್ಮ ಒಡೆಯುವುದು. ಈ ಋತುವಿನಲ್ಲಿ ಸಹಜ. ಚರ್ಮವನ್ನು ಸಂರಕ್ಷಿಸುವಂತಹ ತೈಲಾಂಶವನ್ನು ಹೊಂದಿರುವ ಎಳ್ಳು, ಕಡಲೆಕಾಯಿ ಬೀಜ, ಕೊಬ್ಬರಿಗಳನ್ನು ಈ ಹಬ್ಬದಲ್ಲಿ ಹಂಚಲಾಗುತ್ತದೆ. ಕೊಬ್ಬಿನಾಂಶವನ್ನು ಹೊಂದಿದ ಇವು ದೇಹಕ್ಕೆ ಚಳಿಯನ್ನು ಶಕ್ತಿಯನ್ನು ಕೊಡುತ್ತದೆ. ಚರ್ಮದ ಆರೋಗ್ಯಕ್ಕೆ ಬೇಕಾಗಿರುವಂತಹ ಜೀವಸತ್ವ ಎ.ಡಿ.ಕೆ.ಸಿಗಳನ್ನು ದೇಹ ಹೀರಿಕೊಳ್ಳಲು ಕೊಬ್ಬಿನಾಂಶ ಸಹಾಯಕವಾಗಿದೆ. ಈ ಋತುವಿನಲ್ಲಿ ಕಬ್ಬಿನ ರಸದಿಂದ ಮಾಡಿದ ಸಿಹಿ ಪದಾರ್ಥ ಸಕ್ಕರೆಯ ಅಚ್ಚು ಬತ್ತಾಸು ತಿನ್ನಬೇಕು. ಆದ್ದರಿಂದಲೇ ಸಂಕ್ರಾಂತಿಯಲ್ಲಿ ಎಳ್ಳಿಗೆ ಸಕ್ಕರೆ ಅಚ್ಚು ಹಾಕಿದ ಬತ್ತಾಸು (ಕುಸುರೆಳ್ಳು) ಹಂಚುವದು ರೂಢಿಯಲ್ಲಿದೆ. ಅಷ್ಟೆಲ್ಲ ಅಲ್ಲದೆ ಕಬ್ಬು, ಬಾರೆಹಣ್ಣು, ಪೇರುಹಣ್ಣು (ಜಾಪಳಕಾಯಿ) ಕ್ಯಾರಿಕಾಯಿ, ಗಜ್ಜರಿ, ಬಟಾಣಿ, ಸೌತೆಕಾಯಿ, ಸೇಬು, ದ್ರಾಕ್ಷಿ, ಕಿತ್ತಳೆ

ಮುಂತಾದ ಹಣ್ಣುಗಳು ತಿನ್ನುವುದು ರೂಢಿಯಲ್ಲಿದೆ. ಇವುಗಳಿಂದ ಸಿ.ಎ.ಬಿ. ಜೀವ ಸತ್ವಗಳು ಹಾಗೂ ರಂಜಕ, ಪೊಟ್ಯಾಶೀಯಂ ಅಂಶಗಳಿಂದ ಕೂಡಿರುವುದರಿಂದ ನರಗಳ ಸಹಜ ಕ್ರಿಯೆಗೆ ಪೂರಕವಾಗಿವೆ.

**ಶಶಿರ ಋತು:**

ಉತ್ತರಾಯಣದ ಅಂದರೆ ಮೊದಲ ಋತು ಶಶಿರ. ಈ ಋತುವಿನಲ್ಲಿ ಚಳಿ ಹೆಚ್ಚು. ಮಾಘ-ಫಾಲ್ಗುಣಗಳು ಈ ಋತುವಿನಲ್ಲಿ ಬರುವ ಮಾಸಗಳು ಅಂದರೆ ಫೆಬ್ರುವರಿ-ಮಾರ್ಚ ತಿಂಗಳುಗಳು. ಹೇಮಂತದಂತೆ ಈ ಋತುವಿನಲ್ಲಿಯೂ ಮನುಷ್ಯನ ಬಲ ಅಧಿಕವಾಗಿರುತ್ತದೆ. ಚಳಿಯ ಜೊತೆ ವಾತವರಣದಲ್ಲಿ ತೇವಾಂಶ ಕಮ್ಮಿಯಾಗಿರುತ್ತದೆ. ದೇಹದ ಆರೋಗ್ಯ ಕಾಪಾಡಿಕೊಳ್ಳಲು ಸಿಹಿ, ಉಪ್ಪು, ಹುಳಿ ರಸದಿಂದ ಕೂಡಿದ ಹೇಮಂತ ಋತುವಿನ ಆಹಾರ ಕ್ರಮವೇ ಈ ಋತುವಿಗೂ ಸೂಕ್ತವಾಗಿದೆ.

ಈ ಋತುವಿನಲ್ಲಿ ಗೋಧಿ ಹೊಸ ಬೆಳೆಯಾಗಿ ಧಾನ್ಯ ಬಂದಿರುವುದರಿಂದ ಮೊದಲು ಗೋಧಿ ಹುಗ್ಗಿ ಮಾಡಿ ದೇವರಿಗೆ ನೈವೇದ್ಯ ಕೊಡುವ ನಂಬಿಕೆಯಿದೆ. ಈ ಸಮಯದಲ್ಲಿ ಬರುವ ಹುಣ್ಣಿಮೆಯನ್ನು 'ಗೋಧಿ ಏರಿಸುವ ಹುಣ್ಣಿಮೆ' ಯಂದೇ ಬೀದರ ಜಿಲ್ಲೆಯಾದ್ಯಂತ ಕರೆಯಲಾಗುವುದು. ಗೋಧಿ ಹುಗ್ಗಿ ಜೀರ್ಣಕ್ಕೆ ಕಷ್ಟವಾದರೂ ಬುದ್ಧಿಯನ್ನು, ಬಲವನ್ನು ವೃದ್ಧಿಸುತ್ತದೆ.

ಪ್ರಕೃತಿಯಿಂದ ಉಂಟಾದ ರೋಗಗಳಿಗೆ ಪ್ರಕೃತಿಯಲ್ಲಿಯೇ ಚಿಕಿತ್ಸೆಯೂ ಅಡಗಿದೆ. ಋತುವಿನ ಪ್ರಭಾವದಿಂದ ಸಹಜವಾಗಿ ಉಂಟಾದ ದೋಷ ವೈಷಮ್ಯತೆ (ಏರಿಳಿತ)ವನ್ನು ಸಮಾವಸ್ಥೆಗೆ ತರುವಂತಹ ತರಕಾರಿ ಹಣ್ಣು ಮತ್ತು ಇತರ ಆಹಾರ ದ್ರವ್ಯಗಳನ್ನು ಪ್ರಕೃತಿಯು ಆ ಋತುವಿಗನುಗುಣವಾಗಿ ಮನುಜನಿಗೆ ನೀಡುತ್ತಾ ಬಂದಿದೆ. ಅವುಗಳನ್ನು ಬಳಸಿ ಆರೋಗ್ಯ ಕಾಪಾಡಿಕೊಳ್ಳಬೇಕು.

ಆಹಾರ ಪದಾರ್ಥಗಳು ವಿವಿಧ ನಮೂನೆಯಲ್ಲಿ ಸಿಗುವುದರಿಂದ ಅವುಗಳು ಹೊಂದಿರುವ ಗುಣಧರ್ಮವು ಬೇರೆ ಬೇರೆಯಾಗಿರುತ್ತವೆ. ಆದುದ್ದರಿಂದ ದೇಹಕ್ಕೆ ಒಂದೇ ನಮೂನೆಯ ಆಹಾರವನ್ನೇ ರೂಢಿಸಿಕೊಳ್ಳಬಾರದು. ಏಕೆಂದರೆ ಕೆಲವು ಸುಲಭವಾಗಿ ಜೀರ್ಣವಾದರೆ ಇನ್ನು ಕೆಲವು ಜಿಡ್ಡಿನ ಪದಾರ್ಥಗಳು ಸುಲಭವಾಗಿ ಜೀರ್ಣವಾಗುವುದಿಲ್ಲ. ಆದ್ದರಿಂದ ದೇಹಕ್ಕೆ ಸುಲಭವಾಗಿ ಜೀರ್ಣವಾಗುವ ಜೀವಸತ್ವ, ಜಿಡ್ಡಿನಾಂಶ ಮತ್ತು ಘನ ಪದಾರ್ಥಗಳೆಲ್ಲವು ದೇಹಕ್ಕೆ ಅಗತ್ಯವಾಗಿರಬೇಕು. ಪ್ರಕೃತಿಯ ಎಲ್ಲಾ ನಮೂನೆಯ ಆಹಾರ ಸೇವನೆ ಒಳ್ಳೆ ಆರೋಗ್ಯಕ್ಕಾಗಿ ರೂಢಿಸಿಕೊಂಡಿರಬೇಕು. ಸಾಮಾನ್ಯವಾಗಿ ಸರಳವಾದ ಆಹಾರಗಳನ್ನು ಸಾತ್ವಿಕಗುಣದ ಆಹಾರ ಪದಾರ್ಥಗಳೆನ್ನುವರು. ಹೆಚ್ಚು ಸಿಹಿ ಮತ್ತು ಪಿಷ್ಟ ಭರಿತವಾದವುಗಳು. ಧಾನ್ಯಗಳು, ಕಾಳುಗಳು, ಬೆಲ್ಲ ಬಹಳಷ್ಟು ಬಗೆಯ ಹಣ್ಣುಗಳು, ಸೊಪ್ಪು ತರಕಾರಿಗಳು ಹಾಲು ಜೇನು ಇತ್ಯಾದಿ - ಇಂಥ ಸಾತ್ವಿಕ ಗುಣದ ಆಹಾರ ಪದಾರ್ಥಗಳು ಇವು ಸುಲಭವಾಗಿ ಜೀರ್ಣವಾಗುವಂಥವು.

ಸಾಮಾನ್ಯವಾಗಿ ಜಿಡ್ಡು ಮತ್ತು ಸಾರಜನಕ ಅಂಶಗಳಿಂದ ಆದವುಗಳನ್ನು ರಾಜಸಿಕ ಗುಣದ ಆಹಾರ ಪದಾರ್ಥಗಳೆನ್ನುವರು. ಎಳ್ಳು, ಬಟಾಣಿ, ಕಡಲೆ, ಶೇಂಗಾ, ಕುಂಬಳ ಜಾತಿಯ ತರಕಾರಿಗಳು ಹುಳಿ, ಖಾರದ ಅಂಶ ಹೆಚ್ಚಿರುವ ಸಸ್ಯೋತ್ಪನ್ನಗಳು ಬೆಣ್ಣೆ, ತುಪ್ಪ, ಎಣ್ಣೆ, ಪೇಡಾ, ತೆಂಗು ಬಹಳಷ್ಟು ಮಸಾಲೆ ಪದಾರ್ಥಗಳು ಇಂಥ ರಾಜಸಿಕ ಗುಣ ಇರುವ ಆಹಾರ ಪದಾರ್ಥಗಳು ಎಂದು ಪರಿಗಣಿತವಾಗುತ್ತವೆ. ಈ ಆಹಾರ ಪದಾರ್ಥಗಳು ಜೀರ್ಣವಾಗಲು ಹೆಚ್ಚು ಸಮಯ ಹಿಡಿಯುತ್ತದೆ.

ಒರಟಾದ ಮತ್ತು ಗಡುಸಾದ ಘನ ಪದಾರ್ಥಗಳಿಂದ ಕೂಡಿದ ಆಹಾರಗಳನ್ನು ತಾಮಸಿಕ ಗುಣದ ಆಹಾರ ಪದಾರ್ಥಗಳೆನ್ನುವರು. ರಾಗಿ, ಜೋಳ, ಸಜ್ಜೆ, ನವಣೆಯಂತ ಒರಟಾದ ತೃಣಧಾನ್ಯಗಳು ಗೆಣಸು ಮತ್ತು ಗೆಡ್ಡೆ, ತರಕಾರಿಗಳು ನಾರಿನ ಅಂಶ ಹೆಚ್ಚಾಗಿರುವ ಪದಾರ್ಥಗಳು, ಮಾಂಸ ಇವನ್ನು ತಾಮಸಿಕ ಗುಣದ ಆಹಾರ ಪದಾರ್ಥಗಳೆಂದು ಪರಿಗಣಿಸಲಾಗುತ್ತದೆ. ಸೇವನೆಯ ನಂತರ ನಿಧಾನವಾಗಿ ಜೀರ್ಣಗೊಂಡು ದೇಹದಲ್ಲಿ ಶಕ್ತಿಯನ್ನು ನಿಧಾನವಾಗಿ ಬಿಡುಗಡೆ ಮಾಡುವ ಆಹಾರ ಪದಾರ್ಥಗಳು ಇವು.

ಒಳ್ಳೆ ಆಹಾರ ಸೇವನೆಯಿಂದ ಆರೋಗ್ಯದಾಯಕವಾಗಿಟ್ಟದ್ದಂತೆ ಈ ದೇಹದ ಹೊರ ಭಾಗದ ಮೇಲಾದ ನೋವುಗಳ ನಿವಾರಣೆಗೂ ಆಹಾರ ಪದಾರ್ಥಗಳು ಔಷಧಿಯಾಗಿ ಜನಪದರು ಬಳಸಿಕೊಂಡು ಬಂದಿರುವುದುಂಟು. ಗಾಯದ ರಕ್ತ ನಿಲ್ಲಿಸಲು ಅರಿಶಿಣ, ಸುಟ್ಟುಗಾಯದ ಉರಿ ಶಮನಕ್ಕೆ ಬೆಣ್ಣೆ, ಕೊಬ್ರಿ, ಕೆಮ್ಮಿಗೆಂದು ಕುಡಿಸುವ ಕಷಾಯ ಅಥವಾ ಬಳ್ಳೊಳ್ಳಿ ವಾಕರಿಕೆ ನಿಲ್ಲಿಸಲು ಬಾಯಲ್ಲಿಟ್ಟುಕೊಳ್ಳುವ ಅಡಿಕೆ ಚೂರು ಗಂಟಲ ಕೆರೆತ ಕಳೆಯಲು ಚೀಪುವ ಶುಂಠಿ ಬೆಲ್ಲ, ಹುಳಿ ತೇಗು ನಿಲ್ಲಿಸಲು ನೆಕ್ಕುವ ಹುಣಸೆ ಜೀರಿಗೆ ಬೆಲ್ಲದ್ 'ಲಾಲಿ ಪಾಪ್' ಜೀರ್ಣಕ್ಕೆಂದು ನಿಂಬೆಹಣ್ಣು ಉಪ್ಪು ಅಜೀವನ ಮತ್ತು ಸೋಪ್ ಬಾಯಿ ಕಹಿ ಹೋಗಲು ಉಪ್ಪಿನಕಾಯಿ, ವಾತಪಿತ್ತ ನಿವಾರಣೆಗೆ ಅರಿಶಿಣ ಮತ್ತು ಉಪ್ಪು, ತುಟಿ ಒಡೆದಾಗ ತುಪ್ಪ ಮತ್ತು ಹಾಲಿನ ಕೆನೆ, ರೋಗನಿರೋಧಕಕ್ಕೆ ಬೆಟ್ಟದ ನೆಲ್ಲಿಯ ಅಡಿಕೆ, ಮಲಬದ್ಧತೆಗೆ ದಂಟಿನ ಸೊಪ್ಪು (ರಾಜಗಿರಿ), ಬಾಯಿಯ ದುರ್ವಾಸನೆ ಪುದೀನಾ, ನೆನಪಿನ ಶಕ್ತಿಗೆ ಕೊತ್ತಂಬರಿ ಮತ್ತು ಜೇನುತುಪ್ಪ, ಹೊಟ್ಟೆಯ ಬೊಜ್ಜು ಕರಿಗಿಸಲು ಕರಿಬೇವು, ನರ ದೌರ್ಬಲ್ಯದ ನಿವಾರಣೆಗೆ ನುಗ್ಗೆಸೊಪ್ಪು, ಕಾಲಿನಲ್ಲಿ ಮುಳ್ಳು ಚುಚ್ಚಿದಾಗ ಗೋಧಿ ಹಿಟ್ಟು ಕಟ್ಟುವುದು. ದೇಹದ ತುರಿಕೆಯೊಂದಿಗೆ ಗದ್ದುಗಳು ಕಂಡು ಬಂದಾಗ ಮೆಣಸು ಮುಂತಾದವುಗಳು.

ನಿಸರ್ಗದಲ್ಲಿ ಋತುಮಾನಕ್ಕನುಸಾರವಾಗಿ ಸಿಗುವ ಆಹಾರ ಪದಾರ್ಥ ಹಣ್ಣು ಹಂಪಲುಗಳು ಆರೋಗ್ಯಕ್ಕೆ ಒಳ್ಳೆಯದು, ಆರೋಗ್ಯ ಕಾಪಾಡುತ್ತದೆಂಬ ನಂಬಿಕೆಯಿಂದ ಜನಪದರು ಇವುಗಳನ್ನು ತಮ್ಮ ಅನುಭವದ ಮೂಲಕ ರೂಢಿಸಿಕೊಂಡರು. ಇಂತಹ ಎಲ್ಲಾ ಆಹಾರ ಸೇವನೆ ಅರಗಿಸಿಕೊಳ್ಳುವಂತಹ ಒಳ್ಳೆ ಆರೋಗ್ಯ ಅಗತ್ಯವಾಗಿರಬೇಕು. ಎಲ್ಲಾ ಆಹಾರವಿದ್ದರೂ ಕೆಲವೊಬ್ಬರು ಸೇವಿಸುವಂತಹ ಸ್ಥಿತಿಯಲ್ಲಿರುವುದಿಲ್ಲ. ಅನಾರೋಗ್ಯದಿಂದ ಬಳಲುವ ವ್ಯಕ್ತಿಗೆ ಊಟ ಸೇರದಿರುವುದು, ಮಧುಮೇಹ, ರಕ್ತದ ಒತ್ತಡದಂತಹ ಕಾಯಿಲೆ ಇದ್ದವರು ಎಲ್ಲಾ ಆಹಾರ ಸೇವಿಸಲು ಅವಕಾಶವಿರುವುದಿಲ್ಲ. ಆದ್ದರಿಂದ ಆರೋಗ್ಯಕ್ಕೆ ಆಹಾರ ಎಷ್ಟು ಮುಖ್ಯವೋ, ಆಹಾರ ಸೇವಿಸಲು ಒಳ್ಳೆ ಆರೋಗ್ಯ ಅಷ್ಟೇ ಮುಖ್ಯವಾಗಿದೆ. ಆಹಾರ-ಆರೋಗ್ಯ ಒಂದೇ ನಾಣ್ಯದ ಎರಡು ಮುಖಗಳಿಂದ್ದಂತೆ ಒಂದನ್ನು ಬಿಟ್ಟು ಇನ್ನೊಂದಿಲ್ಲ. ಒಳ್ಳೆ ಆರೋಗ್ಯಕ್ಕೆ- ಆಹಾರ ಸೇವನೆ ಪರಿಸರ, ಆಹಾರ ಸೇವಿಸಲು ಉತ್ತಮ ಮಾನಸಿಕ ಸ್ಥಿತಿ, ಸ್ವಚ್ಛತೆ, ಮತ್ತು ಜಾಗರತೆಯಿದ್ದಾಗ ಮಾತ್ರ ಆಹಾರ ಸೇವನೆ ಆರೋಗ್ಯಕ್ಕೆ ಹಿತವಾಗಿರುವುದು.

ಆಹಾರದಂತೆ ನಮ್ಮ ಬದುಕಿಗೆ ನೀರು, ಗಾಳಿ, ಅತ್ಯಗತ್ಯವಾದ ವಸ್ತುಗಳು ಆರೋಗ್ಯವಂತ ವ್ಯಕ್ತಿಗೆ ದಿನವೊಂದಕ್ಕೆ ಒಂದೂವರೆಯಿಂದ ಎರಡು ಕಿ.ಗ್ರಾಂಗಳಷ್ಟು ಆಹಾರಬೇಕು. ೩ ರಿಂದ ೪ ಲೀಟರ ಗಳಷ್ಟು ನೀರು ಬೇಕು. ಆದರೆ ಉಸಿರಾಟಕ್ಕೆ ಬೇಕಾದ ಶುದ್ಧವಾದ ಗಾಳಿಯು ಪ್ರಮಾಣ ಮಾತ್ರ ೨೦ ರಿಂದ ೩೦

ಕಿ.ಗ್ರಾಂಗಳು."[೪೧] ಅಷ್ಟೇ ಅಲ್ಲ ವ್ಯಕ್ತಿ ಆಹಾರವಿಲ್ಲದೇ ಅನೇಕ ದಿನಗಳೂ ಬದುಕಬಲ್ಲ. ನೀರಿಲ್ಲದೇ ಕೆಲವು ದಿನ ಕಳೆಯಬಲ್ಲ ಆದರೆ ಉಸಿರಾಟಕ್ಕೆ ಗಾಳಿಯಿಲ್ಲದೆ ಎರಡು ಮೂರು ನಿಮಿಷಗಳೂ ಬದುಕಲಾರ. ಹೀಗಾಗಿ ಗಾಳಿಯು ಅತ್ಯಂತ ಮುಖ್ಯವಾದ ಜೀವನಾಧಾರ ವಸ್ತುವಾಗಿದೆ.

ವಾಯು ಮಲೀನತೆಯಿಂದ ನಮ್ಮ ಆರೋಗ್ಯದ ಮೇಲೆ ಆಗುವ ಪರಿಣಾಮಗಳನ್ನು ಅನೇಕ ಅಧ್ಯಯನಗಳು ಸ್ಪಷ್ಟವಾಗಿ ತೋರಿಸಿಕೊಟ್ಟಿವೆ. ಕಲ್ಮಷ ವಸ್ತುಗಳು ತರಬಹುದಾದ ತೊಂದರೆಗಳನ್ನೂ ಗುರುತಿಸಲಾಗಿದೆ. ಸಾಮಾನ್ಯವಾಗಿ ವಾಯುಮಂಡಲಕ್ಕೆ ಸೇರುತ್ತಿರುವ ವಸ್ತುಗಳೆಂದರೆ ಇಂಗಾಲದ ಡೈ ಆಕ್ಸೈಡ್, ಇಂಗಾಲದ ಮೊನಾಕ್ಸೈಡ್, ಗಂಧಕದ ಡಯಾಕ್ಸೈಡ, ಸಾರಜನಕದ ಆಕ್ಸೈಡಗಳು, ತೇಲಾಡುವ ಧೂಳಿನ ಕಣಗಳು ಜಲಜನಕ – ಇಂಗಾಲ ಸಂಯುಕ್ತಗಳು ಇತ್ಯಾದಿ. ಇಂಗಾಲ ಡೈ ಆಕ್ಸೈಡ್ ನಮ್ಮ ಆರೋಗ್ಯದ ಮೇಲೆ ನೇರವಾಗಿ ಯಾವ ಪರಿಣಾಮವನ್ನೂ ಬೀರುವುದಿಲ್ಲ. ಆದರೆ ಇಂಗಾಲದ ಮೊನಾಕ್ಸೈಡ್ ಶರೀರದ ಅಂಗಾಂಶಗಳಿಗೆ ದೊರೆಯುವ ಆಮ್ಲಜನಕ ಪ್ರಮಾಣ ಇಳಿಸುತ್ತದೆ. ಹೃದಯ ಮತ್ತು ಶ್ವಾಸಕೋಶದ ರೋಗಿಗಳಿಗೆ ಮೇಲೆ ತ್ವರಿತವಾಗಿ ಪರಿಣಾಮ ಬೀರುತ್ತದೆ. ಗಂಧಕದ ಡೈ ಆಕ್ಸೈಡ್ ಹೊಗೆಯೊಡನೆ ಸೇರಿದಾಗ ಉಸಿರಾಟಕ್ಕೆ ಕಷ್ಟ ಮಾಡಿ ಗಂಟಲ ಕೆರೆತ ಹಾಗೂ ಕಣ್ಣುರಿಗಳನ್ನು ತರುತ್ತದೆ. ಸಾರಜನಕದ ಆಕ್ಸೈಡುಗಳು ಅಸ್ತಮಾವನ್ನು ಉಲ್ಬಣಗೊಳಿಸಿ ಉಸಿರಾಟದ ಸೋಂಕನ್ನು ತೀವ್ರಗೊಳಿಸುತ್ತದೆ.

ಎಲ್ಲಾ ಪ್ರಾಕೃತಿಕ ಜಲ ಮೂಲಗಳಲ್ಲಿಯೂ ಸೂಕ್ಷ್ಮಾಣು ಜೀವಿಗಳಿರುತ್ತವೆ. ನೀರಿಗೆ ಸೇರಿದ ಸಾವಯವ ವ್ಯರ್ಥ ವಸ್ತುಗಳನ್ನು ವಿಘಟಿಸಿ ಅಪಾಯ ರಹಿತವಾಗಿ ಮಾಡುವುದು. ಈ ಸೂಕ್ಷ್ಮಾಣು ಜೀವಿಗಳ ಕೆಲಸ. ಈ ಕೆಲಸಕ್ಕೆ ಆಮ್ಲಜನಕಬೇಕು. ನೀರಿನಲ್ಲಿ ಕರಗಿರುವ ಆಮ್ಲಜನಕ ಈ ಕಾರ್ಯದಲ್ಲಿ ಬಳಕೆಯಾಗುತ್ತದೆ. ನದಿಯ ನೀರಿಗೆ ಸೇರುವ ಕೊಳಚೆಯ ಪ್ರಮಾಣ ಏರಿದರೂ ಅದನ್ನು ಜೀರ್ಣಿಸಲು ಬೇಕಾದ ಆಮ್ಲಜನಕದ ಪ್ರಮಾಣ ಹೆಚ್ಚುತ್ತದೆ.

ಸಣ್ಣ ಸಣ್ಣ ಹಳ್ಳಿಗಳಲ್ಲಿ ಕೆರೆಗಳೂ ಹಾಗೂ ಬಾವಿಗಳು ಸುಲಭವಾಗಿ ಮಲೀನಗೊಳ್ಳುವ ಸಾಧ್ಯತೆಯಿದೆ. ಇದನ್ನು ತಡೆಗಟ್ಟುವುದು ಅತ್ಯವಶ್ಯಕ ಕುಡಿಯುವ ನೀರಿನ ಬಾವಿಯ ಬಳಿ ಗೊಬ್ಬರದ ಗುಂಡಿಯಾಗಲಿ, ಕೊಳಚೆಯ ನೀರಿನ ಮೋರಿಯಾಗಲಿ ಇರಬಾರದು. ಕೆರೆಯ ನೀರನ್ನು ಯಾವುದೇ ಕೆಲಸಕ್ಕೆ ಬಳಸುವಾಗಲೂ ಕೆರೆಯಿಂದ ಸ್ವಲ್ಪದೂರ ತೆಗೆದುಕೊಂಡು ಹೋಗಿ ಬಳಸುವುದರಿಂದ ಮಲೀನತೆಯನ್ನು ಗಮನಾರ್ಹವಾಗಿ ಕಡಿಮೆ ಮಾಡಬಹುದು.

ಬಸವಣ್ಣನವರು 'ದೇಹವೇ ದೇಗುಲ' ಎಂದು ಹೇಳಿರುವರು. ದೇಹ ದೇಗುಲವಾದರೆ ಅಲ್ಲಿ ಬಹುಶಃ ಪ್ರಾಣವೇ ದೇವರಾಗಿರಬೇಕು. ಸದಾಕಾಲ ದೇಹದೊಳಗೆ ಚೇತನ ರೂಪವಾಗಿರುವುದೇ ಪ್ರಾಣ. ದಿನದಲ್ಲಿ ಚಟುವಟಿಕೆಯ ಕೇಂದ್ರವಾದ ದೇಹ ರಾತ್ರಿಯಾದಂತೆ ಶಾಂತವಾಗಿ ನಿದ್ರಿಸುವಾಗ ಪ್ರಾಣಮಾತ್ರ ದೇಹದಲ್ಲಿ ನೆಲೆಸಿರುತ್ತದಲ್ಲವೆ ? ಗರ್ಭಗುಡಿ, ಕಂಬ, ಮಾಳಿಗೆ, ಶಿಖರ, ಅಂಗಳ ಇವೆಲ್ಲ ಶರೀರವೆಂಬ ದೇವಾಲಯದಲ್ಲೂ ಇವೆ. ಒಳಗೆ ಎಲ್ಲವು ಸ್ನಾಯು ನರನಾಡಿ ಹೃದಯ ಮೇದಳು ಹೊರಗೆ ತ್ವಚೆ, ಕೈಕಾಲು, ತಲೆ, ಅಲ್ಲದೆ ಕಣ್ಣು,

೪೧(ಅಡಿಟಿಪ್ಪಣಿ:೪೧: ಪರಿಸರ ದರ್ಶನ ಎಚ್.ಆರ್.ಕೃಷ್ಣಮೂರ್ತಿ ಪುಟ ಸಂಖ್ಯೆ ೨೧)

ಕಿವಿ, ಮೂಗು, ನಾಲಿಗೆ ಹೀಗೆ ಪಂಚಭೂತಗಳಿಂದ ರಚನೆಗೊಂಡ ಶರೀರ ಪಂಚೇಂದ್ರಿಯ ಅಂತಃಕರಣಗಳನ್ನು ಒಳಗೊಂಡು ಒಂದು ಮಹಾದೇವಾಲಯದಂತೆ ಕಾಣಿಸುತ್ತದೆ. ಎಚ್ಚರವಿದ್ದಾಗ ಮನಸ್ಸು ಚಿತ್ತ, ಬುದ್ದಿ ಅಹಂಕಾರ ಅದರಲ್ಲಿ ಒಳ್ಳೆಯದು. ಕೆಟ್ಟದ್ದು, ಧೈರ್ಯ, ಅಧೈರ್ಯ, ಮೂಡತನ, ಜಾಣತನ ಎಲ್ಲರಲ್ಲಿದ್ದು ದೇವಾಲಯದಲ್ಲಿ ಶಾಂತಿ ನೆಲೆಸಲು ಅನುವು ಮಾಡಿಕೊಡುತ್ತವೆ. ಹೀಗೆ ನಿದ್ದೆಗೆ ಒಳಪಟ್ಟು ಶರೀರವು ನೀರವತೆ ಹೊಂದುತ್ತದೆ.

ದೇಹವು ಪ್ರತಿ ನಿತ್ಯ ಅನಗತ್ಯವಾದ ಹಾಗೂ ಅಪೇಕ್ಷಿತವಾದ ಹೊಲಸನ್ನು ಹೊರಹಾಕುತ್ತದೆ. ಕಲ್ಮಷಗೊಳ್ಳುವ ಮನಸ್ಸನ್ನು, ಹತೋಟಿ ತಪ್ಪಿಸುವ ಅಹಂಕಾರವನ್ನು ಚಂಚಲತೆಯಿಂದ ನರಳುವ ಚಿತ್ತವನ್ನು, ಸುಬುದ್ದಿಯಿಂದ ಹಿಡಿತದಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತದೆ. ಕೆಲವು ಬುದ್ದಿ-ಮನಸಾಪೂರ್ವಕ ನಮಸ್ಕಾರ ಮಾಡುವಂತಹವು ಕೆಲವು ಬೇಕು. ಬೇಡವೆಂಬ ಅಸ್ಥಿರತೆಯಿಂದ ನಲಗುವಂತಹವು ಕೆಲವು ನಮಿಸುವುದು ತಮ್ಮ ಜಾಯಮಾನಕ್ಕೆ ಸಲ್ಲದು ಎಂಬುವಂತಹವು; ಹೀಗೆ ಶರೀರವು ಚಿತ್ರ ವಿಚಿತ್ರವಾದ ನಾನಾ ತರಹದ ವ್ಯಕ್ತಿತ್ವದ ವೈಪರೀತ್ಯಗಳನ್ನು ಹೊಂದಿರುತ್ತವೆ. ದೈಹಿಕವಾಗಿ ಸ್ವಚ್ಛತೆ ಕಾಪಾಡುವುದಕ್ಕೆ ನಿಯಮದಂತೆ ಪೂಜಾರಿಯ ಕೆಲಸ ಅತ್ಯಗತ್ಯ. ಮುಖಮಾರ್ಜನೆ, ಸ್ನಾನಾದಿಗಳು ದೇಹದ ಬಾಹ್ಯ ಸ್ವಚ್ಛತೆ ಕಾಪಾಡಿಕೊಂಡರೆ ಆಂತರಿಕ ಮನಸಾದಿಗಳನ್ನು ಶುದ್ಧವಾಗಿಡಲು ಸಾಧ್ಯವಾಗುತ್ತದೆ. ಮಾನಸಿಕ ಹಾಗೂ ಬೌದ್ಧಿಕ ಸ್ವಚ್ಛತೆಗೆ ಸುಸ್ಥಿತಿಯ ಮತಿಯೆಂಬ ಪೂಜಾರಿ ಇರಬೇಕಾಗುತ್ತದೆ. ಈ ದೇಹವೆಂಬ ದೇಗುಲವನ್ನು ನಿತ್ಯ ನಿಯಮಗಳಿಂದ ಸ್ವಚ್ಛಗೊಳಿಸುತ್ತ ಶುದ್ದವಾಗಿಟ್ಟರೆ, ಊರಿನ ಸ್ವಚ್ಛವಾದ ದೇವಾಲಯ ಹೇಗೆ ಚಟುವಟಿಕೆಗಳ ಕೇಂದ್ರ ಬಿಂದುವಾಗುತ್ತದೆಯೊ ಹಾಗೆಯೇ ರೋಗರುಜಿನ ರಹಿತ ಶರೀರ, ಮಾನಸಿಕ ತಳಮಳವಿಲ್ಲದ ಶಾಂತ ಸಾಗರದಂತಿದ್ದು ಕೌಟುಂಬಿಕ ಆಹ್ಲಾದ ನೀಡುತ್ತ ಸಾಮಾಜಿಕ ಪರಿಸರವನ್ನು ಪಕ್ವಗೊಳಿಸುವಲ್ಲಿ ಸಹಕಾರಿಯಾಗುತ್ತದೆ.

ನಾವು ಊಟಮಾಡಿದ ಅನ್ನವು ಏಳುದಿನಗಳಲ್ಲಿ ಪರಿವರ್ತನೆಗೊಂಡು ಪುರುಷರಲ್ಲಿ ಅದು ವೀರ್ಯವಾಗಿ ಹಾಗೂ ಸ್ತ್ರೀಯರಲ್ಲಿ ಅದು ಶೋಣಿತ ಅಂದರೆ ರಕ್ತ ರೂಪವಾಗಿಯೇ ಇರುತ್ತದೆ. ಈ ದೇಹವು ಆರು ಹೊದಿಕೆ ಅಥವಾ ಭಾಗಗಳಿಂದ ಕೂಡಿದೆ. ಅದರಲ್ಲಿ ಚರ್ಮ, ರಕ್ತ, ಮಾಂಸಗಳು ತಾಯಿಯಿಂದ ಪಡೆದವುಗಳಾದರೆ ಅಸ್ತಿ ಮಜ್ಜ, ನರಗಳು ತಂದೆಯ ಅಂದರೆ ರೇತಸ್ಸಿನ ಭಾಗಗಳಾಗಿರುತ್ತವೆ. ಹೀಗೆ ತಾಯಿ-ತಂದೆಯ ಸಮ್ಮಿಲನದಿಂದ ಶೋಣಿತ ಶುಕ್ಲದ ಅನ್ಯೋನ್ಯ ಬೆರೆತವುಂಟಾಗಿ ಅನುರೂಪವಾದ ಜೀವ ಆಶ್ಚರ್ಯಕರವಾಗಿ ಬೆಳೆದು ಪಿಂಡರೂಪವಾಗಿ ವೃದ್ಧಿಸಿ 'ಕೂಸು' ಜನಿಸುವುದು.

ದೇಹ ಬಲಿಷ್ಠವಾಗಿದ್ದರೆ ಮನಸ್ಸು ನಿಶ್ಚಲವಾಗಿರುತ್ತದೆ. ನಿಶ್ಚಲ ಮನಸ್ಸಿದ್ದರೆ ಬುದ್ದಿ ಚುರುಕಾಗಿರುತ್ತದೆ. ಜೀವನದಲ್ಲಿ ಉಲ್ಲಾಸವಿರುತ್ತದೆ; ಚಿತ್ತಸ್ಥಿಮಿತದಲ್ಲಿದ್ದು ಮಾಡುವ ಕೆಲಸ ಚೇತೋಹಾರಿಯಾಗಿರುತ್ತದೆ. ದೈಹಿಕ ಆರೋಗ್ಯವಿದ್ದರೆ ಮಿದಳು ಚುರುಕಾಗಿರುತ್ತದೆ. ಕೆಲಸ ಮಾಡಲು ಉತ್ಸಾಹವಿರುತ್ತದೆ. ತಾಮಸ ಗುಣಕ್ಕೆ ಆಲಸ್ಯತನಕ್ಕೆ ಆಸ್ಪದವಿಲ್ಲದಂತಾಗುತ್ತದೆ. ಸದಾಕಾಲ ಎಲ್ಲರ ಹಿತ ಬಯಸುತ್ತಿದ್ದರೆ ತನಗೂ ತನ್ನವರಿಗೂ ಹಿತವೇ ಆಗುತ್ತದೆ.

ಶರೀರವು ಒಂದು ಕೈಗಾರಿಕೆಯಿದ್ದಂತೆ. ನರಮಂಡಲವು ಕೈಗಾರಿಕೆಯಲ್ಲಿನ ಯಂತ್ರದಂತೆ ಕಾರ್ಯ ನಿರ್ವಹಿಸುತ್ತದೆ. ಯಂತ್ರ ಸರಕುಗಳ ಉತ್ಪಾದನೆಯನ್ನು ನಿರಂತರವಾಗಿ ಮಾಡುವಂತೆ ಶರೀರದ ನರಮಂಡಲವು ನಿರಂತರ ಕಾರ್ಯ ಪ್ರವೃತ್ತವಾಗಿರುತ್ತವೆ. ಶರೀರದ ಭಾಗಗಳು ಒಂದಕ್ಕೊಂದು ಪೂರಕ. ಅಂಗಾಂಗಳ ಬೆಳವಣಿಗೆ ಮತ್ತು ರಕ್ಷಣೆ ಒಂದರ ಮೇಲೊಂದು ಅವಲಂಬಿಸಿರುತ್ತದೆ. ಮೆದಳು 'ಕಂಟ್ರೋಲ್ ರೂಮ' ಇದ್ದಂತೆ ಎಲ್ಲವನ್ನೂ ಅದು ನಿಭಾಯಿಸುತ್ತದೆ ನಿಯಂತ್ರಣದಲ್ಲಿಡುತ್ತದೆ. ಮಿದುಳು ಏರುಪೇರುಗೊಂಡರೆ ಅಂಗಾಂಗಳ ಕಾರ್ಯವಿಮುಕ್ತಗೊಳ್ಳುತ್ತದೆ.

ಈ ದೇಹವು ನಿರ್ಲಕ್ಷತೆಗೆ ಒಳಗಾದರೆ ಅನೇಕ ರೋಗಗಳಿಗೊಳಗಾಗಿ ಶಿಥಿಲಗೊಂಡು ಅವಸಾನ ಹೊಂದುವುದಕ್ಕೆ ವಿಳಂಬವಾಗುವುದಿಲ್ಲ. ದೇಹವು ನಾವು ಕಂಡಂತೆ ಒಂದು ಜಟೀಲವಾದ ಯಂತ್ರ. ಈ ಯಂತ್ರವನ್ನು ಮನಸ್ಸು ನಿಯಂತ್ರಿಸುತ್ತದೆ. ಆದರೆ ಮನಸ್ಸು ಮಾತ್ರ ಒಂದು ಅಂಗವಾಗಿ ಇನ್ನು ಕಂಡಿಲ್ಲ. ಬಹುಶಃ ಮುಂದೆಯೂ ಕಾಣಲಿಕ್ಕಿಲ್ಲ. ಮನುಷ್ಯ ಸುಖವಾಗಿರಲು ದುಃಖವೆಂದು ಭಾವಿಸಲು ಈ ಮನಸ್ಸೇ ಕಾರಣವಾಗಿರುತ್ತದೆ. ಹೇಗೆ ದೇವಾಲಯವನ್ನು ನಿಯಮದಂತೆ ನಿರ್ಲಕ್ಷಿಸದೆ ಸ್ವಚ್ಛವಾಗಿಡಬೇಕಾಗುತ್ತದೆಯೋ ಅದೇ ರೀತಿ ನಿತ್ಯ ನಿಯಮದಿಂದ ಎಲ್ಲ ಅಂಗಾಂಗ ಕ್ರಿಯೆಯನ್ನು ಸುಸ್ಥಿತಿಯಲ್ಲಿಡಲು ಪ್ರಯತ್ನಿಸಬೇಕು. ಇದಕ್ಕೆ 'ದೈಹಿಕ ಶ್ರಮ' ಅವಶ್ಯವಾದಷ್ಟು ಬೇಕೇ ಬೇಕು. ದೈಹಿಕ ಶ್ರಮಕ್ಕೂ; ಆರ್ಥಿಕ ಸ್ಥಿತಿಗೂ ನೇರವಾದ ಸಂಬಂಧ ಇಲ್ಲವಾದರೂ ಅವು ಒಂದಕ್ಕೊಂದು ಪೂರಕವಾಗಿವೆ. ದೈಹಿಕ ಕ್ರಮದೊಂದಿಗೆ ಪೌಷ್ಠಿಕ ಆಹಾರ ಸೇವನೆ ಅವಶ್ಯಕವಾಗಿರುತ್ತದೆ. ಪೌಷ್ಠಿಕ ಆಹಾರ ದೊರಕಬೇಕಾದರೆ ತಕ್ಕಷ್ಟು ಆರ್ಥಿಕ ಸ್ಥಿತಿ ಚೆನ್ನಾಗಿರಬೇಕಾಗುತ್ತದೆ. ಆರ್ಥಿಕ ಸ್ಥಿತಿ ಒಳ್ಳೆದಾಗಿದ್ದು ದೈಹಿಕ ಶ್ರಮ ಇಲ್ಲದಿದ್ದರೆ ಆರೋಗ್ಯ ಕಾಪಾಡಿಕೊಳ್ಳುವುದು ಕಷ್ಟಕರ. ಅನೈತಿಕ ಚಟಗಳಿದ್ದರೂ ದೈಹಿಕ ಆರೋಗ್ಯ ಹದಗೆಡುವುದು ಆಶ್ಚರ್ಯವೇನಲ್ಲ.

ಆಹಾರದೊಂದಿಗೆ ದೇಹವನ್ನು ಸಮತೋಲನದಲ್ಲಿಡಲು ಮತ್ತು ಆರೋಗ್ಯದಾಯಕವಾಗಿಡಲು ಯೋಗವು ಅತ್ಯವಶ್ಯಕವಾಗಿದೆ. ಯೋಗ ಮಾಡುವುದರಿಂದ ಜೀರ್ಣಶಕ್ತಿ ಹೆಚ್ಚಾಗುತ್ತದೆ. ಆದ್ದರಿಂದ ಹಸಿವೆ ಹೆಚ್ಚಾಗಿ ಸಮಯಕ್ಕನುಸಾರವಾಗಿ ಹೆಚ್ಚಿನ ಊಟಮಾಡಲು ಪ್ರಚೋದಿಸುತ್ತದೆ. ಇದರಿಂದ ದೈಹಿಕ ಮತ್ತು ಮಾನಸಿಕ ಕಾಯಿಲೆಗಳಿಂದ ದೂರವಿಡುತ್ತದೆ. ಹಾಗಾಗಿ ಯೋಗ ದೈಹಿಕ ವ್ಯಾಯಾಮಕಂದಷ್ಟೇ ಸೀಮಿತವಾಗಿ ಹೇಳಿಲ್ಲ. ತನ್ನನ್ನು ತಾನು ಅರಿಯಲು; ತನ್ನ ಸಾಕ್ಷಾತ್ಕಾರ ಮಾಡಿಕೊಳ್ಳಲು ಯೋಗವು ಮೂಲಭೂತವಾಗಿ ಬೇಕಾಗುತ್ತದೆ. ಯೋಗದಿಂದ ಮನಸ್ಸಿನ ಚಂಚಲತೆ ನೀಗುತ್ತದೆ; ಬುದ್ಧಿ ಚುರುಕಾಗುತ್ತದೆ. ಮನಸ್ಸಿನ ಉದ್ವೇಗವನ್ನು ನಿಯಂತ್ರಿಸುತ್ತದೆ. ಇಂದಿನ ಜೀವನದ ಸನ್ನಿವೇಶದಲ್ಲಿ ಶಾರೀರಕ ಪರಿಶ್ರಮವು ಅಷ್ಟೊಂದು ಅಗತ್ಯವಾಗಿರುವುದಿಲ್ಲ. ಮೈಮುರಿದು ಕೆಲಸ ಮಾಡುವ ಜನರ ಸಂಖ್ಯೆಯು ಈಗ ಅತ್ಯಲ್ಪವೆಂದರೂ ಸಲ್ಲುತ್ತದೆ. ಮನುಷ್ಯನು ತನ್ನ ಕೆಲಸಗಳಲ್ಲಿ ಅನೇಕ ತೇರನಾದವುಗಳನ್ನು ಯಂತ್ರಗಳ ಪಾಲಿಗೆ ಬಿಟ್ಟು ಕೊಟ್ಟಿರುವನು. ಯಂತ್ರಗಳ ಸನಿಹದಲ್ಲಿ ನಿಂತು, ಅಲ್ಪ ಸ್ವಲ್ಪ ಕೈಕಾಟದಿಂದ ಮಾನವನು ಅವಶ್ಯಕತೆಗಳನ್ನು ನೀಗಿಸಿಕೊಳ್ಳುತ್ತಿರುವನು. ಟೆನ್ನಿಸ್, ಬ್ಯಾಡ್ಮಿಂಟನ್ ಇಂತಹ ಆಟಗಳಿಂದಲೂ ಈ ಹಿಂದಿನ ಜನಗಳಿಗಿದ್ದ ನೈಸರ್ಗಿಕ ಶಕ್ತಿಯನ್ನು ಸಂಪಾದಿಸುವಂತಿಲ್ಲ. ಕೇವಲ ಕೃತಕವಾದ ಗಾಳಿಯನ್ನು ಬಲೂನಗಳಲ್ಲಿ ತುಂಬಿದಾಗ ದಪ್ಪವಾಗಿ ಕಾಣುವಂತೆ ದೇಹ ದಪ್ಪವಾಗಿಸಲು ಶಕ್ತಿ ಸಂಪಾದಿಸಲು ವಿಟಾಮಿನ್ ಗುಳಿಗೆಗಳು ಪಾಲಿನಲ್ಲಿ

ಸೇವಿಸುವ ಹಾರ್ಲಿಕ್ಸ್, ಬೋರವಿಟಗಳಂತಹ ಅನೇಕ ವಸ್ತುಗಳು ಬಳಸಿದರೂ ನೈಸರ್ಗಿಕ ಶಕ್ತಿಗೆ ಸಾಟಿಯಾಗಲಾರದು. ನಮ್ಮ ಆಹಾರ ಅಭ್ಯಾಸಗಳಲ್ಲೂ ತುಂಬಾ ಬದಲಾವಣೆಗಳುಂಟಾಗಿವೆ. ಇಂದು ನಮ್ಮ ಆಹಾರದಲ್ಲಿ ಕಠಿಣವಾದ ಆಹಾರವು ಏನೇನು ಉಪಯೋಗಿಸಲ್ಪಡುತ್ತಿಲ್ಲ. ಈ ಕಾರಣಗಳಿಂದ ನಮ್ಮ ಹಲ್ಲು ದವಡೆಗಳಿಗೆ ಹೆಚ್ಚಿನ ಕೆಲಸವಂತಿರಲು, ಅವಶ್ಯವಿರುವಷ್ಟು ಕೆಲಸವೂ ಇಂದು ದೊರೆಯುವಂತಿಲ್ಲ. ಮಕ್ಕಳು ಅತಿ ಲಘುವಾದ ತೆಳ್ಳಗಿನ ಕೃತಕ ಆಹಾರಗಳನ್ನೇ ಸೇವಿಸುತ್ತಿದ್ದರೆ. ಅವರ ಹಲ್ಲುಗಳ, ದವಡೆ ಮತ್ತು ಮುಖಗಳು ಸಾಕಷ್ಟು ಪುಷ್ಠಿವಾಗುವುದಿಲ್ಲ. ಹಾಗೆಯೇ ಪಚನಾಂಗಗಳೂ ಸಾಕಷ್ಟು ಬಲಿತುಕೊಳ್ಳಲಾರವು. ಹಳ್ಳಿಯಲ್ಲಿ ಜೀವಿಸುವ ಸ್ತ್ರೀ–ಪುರುಷರು ಮನೆ ಮತ್ತು ಕೃಷಿ ಉದ್ಯೋಗದಲ್ಲಿ ತೊಡಗಿದವರಿಗೆ ದೈಹಿಕ ಶ್ರಮ ಅನಿವಾರ್ಯವಾಗಿ ದೊರಕುವುದರಿಂದ ಅವರ ಆರೋಗ್ಯ ಪಟ್ಟಣದವರಿಗಿಂತ ಉತ್ತಮವಾಗಿರುತ್ತದೆ. ವಾಹನಗಳು ಬಿಡುವ ಹೊಗೆಯನ್ನು ಸೇವಿಸುತ್ತ; ಔಷಧಿ ಮಿಶ್ರಿತ ನೀರನ್ನು ಕುಡಿಯುತ್ತ, ನೀರು ಮತ್ತು ಪೌಡರು ಬಳಸಿದ ಹಾಲನ್ನು ಬಳಸುತ್ತಾರೆ; ನೀರು ಸಿಂಪಡಿಸಿ 'ತಾಜಾ' ವಾಗಿಡಲು ಪ್ರಯತ್ನಿಸುವ ತರಕಾರಿಯನ್ನು, ಕಲಬೆರಕೆಯ ಧಾನ್ಯಗಳ ಆಹಾರವನ್ನು ತಿನ್ನುತ್ತ ಹಲವು ಕಿಲೋಮೀಟರ ದೂರವನ್ನು ನಿಮಿಷಗಳಲ್ಲಿ ಸಾಗಿಸುವ ವಾಹನಗಳಲ್ಲಿ ಶ್ರಮವಿಲ್ಲದೆ ಕ್ರಮಿಸುತ್ತ ಜೀವಿಸುವ ನಗರಗಳ ಆಧುನಿಕ ಮಾನವನಿಗೆ ದೈಹಿಕ ಶ್ರಮದ ಕೊರತೆಯಿಂದಾಗಿ ಸ್ವರಕ್ಷಣೆ ಶಕ್ತಿ ಕಡಿಮೆಗೊಂಡಿರುವುದು ಅನಿವಾರ್ಯ ಸತ್ಯವಾಗಿದೆ. ಯಾಂತ್ರಿಕೃತ ಬದುಕಿಗೆ ಮಾನವ ಮೊರೆ ಹೋಗುತ್ತಿರುವುದು ಹೆಚ್ಚಾದಂತೆ ದಿನಕ್ಕೊಂದು ಹೊಸ ಕಾಯಿಲೆಗಳು ಹುಟ್ಟಿಕೊಳ್ಳುತ್ತಿವೆ. ಇವುಗಳನ್ನು ಸಮೀಪಕ್ಕೆ ಬಾರದಂತೆ ಆಟದ, ಓದುವ, ಬರೆಯುವ ಸಂಗೀತದ ಹವ್ಯಾಸ ಬೆಳೆಸಿಕೊಳ್ಳಬೇಕು. ಅಂದರೆ ದೈಹಿಕ ಆರೋಗ್ಯ ಕಾಪಾಡಿಕೊಳ್ಳುವುದು ಸಾಧ್ಯವಾಗುತ್ತದೆ. ಮಾನಸಿಕ ಸುಸ್ಥಿತಿ ಬೌದ್ಧಿಕ ಸ್ಥಿರತೆ ದೇಹದ ಆರೋಗ್ಯಕ್ಕೆ ಬೇಕೆ ಬೇಕು.

ಯಾವುದೇ ಕಾರಣದಿಂದ ಮನಸ್ಸು ಆತಂಕಕ್ಕೀಡಾದಾಗ ಸೇವಿಸಿದ ಆಹಾರವು ಜೀರ್ಣವಾಗದೆ ಆರೋಗ್ಯದ ಮೇಲೆ ಪರಿಣಾಮವನ್ನುಂಟು ಮಾಡಿ ಆರೋಗ್ಯದ ಸ್ಥಿತಿ ಹದಗೆಡುತ್ತದೆ. ತೊಂದರೆಗಳು ಕಾಣಿಸಿಕೊಳ್ಳುತ್ತವೆ. ಸುಸ್ತು, ಆಯಾಸ, ಮೈ ಕೈ ನೋವು, ತಲೆ ನೋವು, ತಲೆ ಭಾರ, ಉಸಿರಾಡಲು ಕಷ್ಟವಾಗುವುದು. ಎದೆ ಡವ ಡವ ಎನ್ನುವುದು. ಎದೆಯಲ್ಲಿ ಸಂಕಟ, ಉರಿ ಅಥವಾ ನೋವು, ಅಜೀರ್ಣ, ತೇಗು ಬರುವುದು, ಹೊಟ್ಟೆ ಉಬ್ಬರಿಸಿಕೊಳ್ಳುವುದು. ಭೇದಿ ಕೀಲುಗಳ ಬಾಧೆ, ಪದೇ ಪದೇ ಮೂತ್ರ ವಿಸರ್ಜನೆ, ಮೈಬಿಸಿ, ಅಥವಾ ತಣ್ಣಗಾಗುವುದು ವಿಪರೀತ ಬೆವರುವುದು, ಕೈಕಾಲುಗಳ ನಡುಕ, ಚಡಪಡಿಕೆ, ಬಾಯಿ ಒಣಗುವುದು ಮಾತಾಡಲು ಕಷ್ಟವಾಗುವುದು ಅಥವಾ ತೊದಲುವುದು ಇತ್ಯಾದಿಗಳಾಗುತ್ತವೆ. ಪದೇ ಪದೇ ಆಹಾರ ತೆಜ್ಯಸುವುದು. ಮಾನಸಿಕ ತೊಂದರೆಗಳಿಗೂ ಕಾರಣವಾಗುತ್ತದೆ. ಮಾನಸಿಕವಾಗಿ ಏನೋ ಭಯ, ಆತಂಕ, ಏನೋ ಕೆಟ್ಟದ್ದು ಸಂಭವಿಸಲಿದೆ ಎಂಬ ಕಳವಳ, ಏಕಾಗ್ರ ಚಿತ್ತ ಇಲ್ಲದಿರುವುದು. ಮನೋಚಂಚಲತೆ, ಮರೆತ, ನಿರಾಸಕ್ತಿ ವಿನಾಕಾರಣ ಬೇಸರ, ಮಾನಸಿಕ ಚಡಪಡಿಕೆ, ತರ್ಕಬದ್ಧವಾಗಿ ಆಲೋಚಿಸಲು ಆಗದಿರುವುದು, ಓಂಜರಿಕೆ, ಕೀಳರಮೆ ಭಾವನೆಗಳು, ಆತ್ಮ ವಿಶ್ವಾಸದ ಕೊರತೆ, ಸಹನೆ ಕಡಿಮೆಯಾಗಿ ಸಿಡುಕುತನ, ಕ್ಷುಲ್ಲಕ ತಪ್ಪುಗಳಾಗುವುದು. ಮೂರ್ಖರಂತೆ ನಡೆದುಕೊಳ್ಳುವುದು. ನಿದ್ರೆ ಬರಲು ಕಷ್ಟವಾಗುವುದು ಇತ್ಯಾದಿ ಲಕ್ಷಣಗಳು ವ್ಯಕ್ತಿಗಳಲ್ಲಿ ಕಂಡು ಬಂದಾಗ ಸಹಜವಾಗಿ ಅತಿಶಯವೆಂದು ಇತರರಿಗೆ ಕಾಣುತ್ತವೆ. ಇದನ್ನೇ ದೇವರು ಇಲ್ಲವೆ ದೆವ್ವ ಮೈ ಮೇಲೆ ಬರುತ್ತದೆ. ಎನ್ನುವ ಸ್ಥಿತಿಯಲ್ಲಿ ಆ ವ್ಯಕ್ತಿ ಈ

ಜಗೆಯ ಉನ್ಮಾದ ಸ್ಥಿತಿಗೆ ಒಳಗಾಗುತ್ತದೆ. ಸ್ವ-ಸಮ್ಮೋಹನ (ಆಟೋಹಿಪ್ನಾಸಿಸ್) ಸ್ವ ಸೂಚನೆ ನರಮಂಡಲದ ಮೇಲೆ ಹತೋಟಿ ಸಾಧಿಸಿ ಕೆಲವಾರು ವಿಸ್ಮಯಗಳನ್ನು ಪ್ರದರ್ಶಿಸುತ್ತಾರೆ ಉದಾಹರಣೆಗೆ: ಕತ್ತಿಯಿಂದ ಏಟು ಹೊಡೆದು ಕೊಂಡಾಗ ನೋವಿನ ಸಂವೇದನೆ.

ಇನ್ನು ಕೆಲವು ಸಲ ವ್ಯಕ್ತಿಗಳಿಗೆ ಆಹಾರ ಸೇವನೆ ಮಾಡಿದರೂ ತಮ್ಮದೇ ಆದ ದೈಹಿಕ ಮತ್ತು ಮಾನಸಿಕ ಕಾಯಿಲೆಗಳು ಉನ್ಮಾದದಿಂದ ಬಂದಿರುತ್ತವೆ. ಉನ್ಮಾನದಿಂದ ಬಂದ ಕಾಯಿಲೆಯಲ್ಲಿ ಶರೀರದಲ್ಲಿ ಯಾವ ನ್ಯೂನತೆ ಇರುವುದಿಲ್ಲ. ಅಂಗಾಂಗ ಹಾನಿಗೀಡಾಗಿರುವುದಿಲ್ಲ. ಸುಪ್ತ ಮನಸ್ಸಿನ ಆಜ್ಞೆಯಂತೆ ಕಾಯಿಲೆಯ ಲಕ್ಷಣಗಳು ಕಾಣಿಸಿಕೊಂಡಿರುತ್ತವೆ. ಆದರೆ ರೋಗಿಗೆ ಮತ್ತು ಮನೆಯವರಿಗೆ ಇತರರಿಗೆ ಉನ್ಮಾದದ ಈ ಕಾಯಿಲೆ ಲಕ್ಷಣಗಳಿಗೂ ನಿಜವಾದ ಶಾರೀರಿಕ ಕಾಯಿಲೆ ನ್ಯೂನತೆಯಿಂದ ಬಂದ ಲಕ್ಷಣಗಳಿಗೂ ವ್ಯತ್ಯಾಸ ಗೊತ್ತಾಗುವುದಿಲ್ಲ. ಮೇಲ್ನೋಟಕ್ಕೆ ಎರಡೂ ಒಂದೇ ರೀತಿ ಇರುತ್ತವೆ. ವಾತಾವರಣದ ಬದಲಾವಣೆಯಿಂದ. ಸಂಬಂಧಪಟ್ಟವರು ಹೆಚ್ಚು ಪ್ರೀತಿ ಆಸರೆ ಅನುಕಂಪ ತೋರಿಸಿದಾಗ ಸಮಸ್ಯೆಯ ಪರಿಹಾರಕ್ಕೆ ಸಹಕರಿಸಿದಾಗ ನಂಬಿಕೆಯಿಂದ ತೀವ್ರ ಮನೋ ಸೂಚನೆಯಿಂದ ಉನ್ಮಾದ ಮನೋಬೇನೆ ವಾಸಿಯಾಗುತ್ತದೆ. ಆದರೆ ಶಾರೀರಿಕ ಖಾಯಿಲೆಗೆ ಔಷಧೋಪಚಾರ ಬೇಕೆ ಬೇಕು.

ಇತ್ತೀಚಿನವರೆಗೆ ಚೆನ್ನಾಗಿ ಲವಲವಿಕೆಯಿಂದ ಆರೋಗ್ಯವಾಗಿದ್ದ ಸ್ತ್ರೀ ಅಥವಾ ಪುರುಷ ಸ್ತ್ರೀ ಇದ್ದಕ್ಕಿಂದಂತೆ ತೋರಿಕೆಯ ಯಾವ ಕಾರಣವೂ ಇಲ್ಲದೆ ಮಂಕಾಗಿ ಬಿಟ್ಟರೆ ಊಟ, ನಿದ್ರೆ, ಮಾಡದೆ ಸಣ್ಣಗಾಗುತ್ತಾ ಬಂದು ನಿಷ್ಕ್ರಿಯನಾದರೆ ಅಥವಾ ಹಾಸಿಗೆ ಹಿಡಿದರೆ ಸಮಾಜದಲ್ಲಿ ಜನ ತಕ್ಷಣ 'ಪಾಪ' ಯಾರೋ ಇವರಿಗೆ ಮದ್ದು ಹಾಕಿ ಬಿಟ್ಟಿದ್ದಾರೆ ಇಲ್ಲವೆ ಆಗದವರು ಭಾನಮತಿ ಮಾಡಿಸಿದ್ದಾರೆ ಎಂದು ಆಡಿಕೊಳ್ಳುತ್ತಾರೆ.

ವ್ಯಕ್ತಿಯ ದೈಹಿಕ ಮತ್ತು ಮಾನಸಿಕ ಆರೋಗ್ಯ ಕೆಡಿಸಿ ಅವನನ್ನು ನರಳಿಸಿ ನಿಷ್ಕ್ರಿಯ ಮಾಡುವ ಈ ಮದ್ದೀಡು ವಾಕರಿಕೆ ವಾಂತಿ ಬರುವಂತಹ ಸತ್ತ ಹಲ್ಲಿ ಹಾವುರಾಣಿ, ಉಡ, ಮೊಸಳೆ ಇತ್ಯಾದಿಗಳನ್ನು ಕೊಂದು ನೇತುಹಾಕಿ ಕೊಳೆ ಹಾಕಿದ ದೇಹದಿಂದ ತೊಟ್ಟಿಕ್ಕುವ ದ್ರವ ಹಾಗೂ ಇತರ ಬೇರುಗಳನ್ನು ಪುಡಿ ಮಾಡಿ ತಯಾರಿಸಿ ಅದನ್ನು ಆಹಾರ ಸೇವನೆಯಲ್ಲಿ ಗೊತ್ತಾಗದಂತೆ ಸೇರಿಸಿ ಬಿಡುತ್ತಾರೆ. ಅದು ದೇಹದೊಳಕ್ಕೆ ಸೇರುತ್ತದೆ. ಇದರ ಪರಿಣಾಮವಾಗಿ ಆಹಾರ ಜಠರ ಸೇರಿ ಜೀರ್ಣವಾಗದೆ ಅಹಿತ ಪರಿಣಾಮ ಪ್ರಕಟಿಸಲಾರಂಭಿಸುತ್ತದೆ. ವ್ಯಕ್ತಿಗೆ ಹಸಿವುವಾಗುವುದಿಲ್ಲ. ಅಜೀರ್ಣದಿಂದ ಹೊಟ್ಟೆ ಉಬ್ಬರಿಸುತ್ತದೆ. ಸುಸ್ತು, ಸಂಕಟ, ನೋವು ಉರಿಸೆಳೆತ ಕಾಡುತ್ತವೆ. ನಿದ್ರೆ ಹಾಳಾಗುತ್ತದೆ. ತಿಂಗಳುಗಟ್ಟಲೆ ಕೆಲವು ಸಲ ಒಂದೆರಡು ವರ್ಷ ಸತಾಯಿಸಿ ಕೊನೆಗೆ ಪ್ರಾಣ ತೆಗೆಯುತ್ತದೆ ಎನ್ನುವುದು ಜನರ ಮೂಢ ನಂಬಿಕೆ.

ತಿಂದ ಯಾವುದೇ ಆಹಾರ ಪದಾರ್ಥ ಅಥವಾ ಆಹಾರವಲ್ಲದ ವಸ್ತು ಜಠರದಲ್ಲಿ ಹೆಚ್ಚೆಂದರೆ ನಾಲ್ಕೈದು ಘಂಟೆಗಳ ಕಾಲ ಇದ್ದು ನಂತರ ಸಣ್ಣ ಕರುಳಿಗೆ ಸಾಗುತ್ತದೆ. ಈ ಅವಧಿಯ ನಂತರ ಜಠರ ಖಾಲಿಯಾಗಿ ಕೇವಲ ಜಠರ ರಸ (ಹೈಡ್ರೋಕ್ಲೋರಿಕ್ ಆಮ್ಲ, ಪೆಪ್ಸಿನ್ ಇತ್ಯಾದಿ) ಮಾತ್ರ ಇರುತ್ತದೆ.

ವ್ಯಕ್ತಿ ತಿಂದ ಮದ್ದು ಮತ್ತು ಅದಕ್ಕಂಟಿದ ತಿಂಡಿಯ ತುಣುಕುಗಳು ದಿನಗಳು ತಿಂಗಳುಗಳು ಜಠರದಲ್ಲಿ ಬದಲಾಗದೆ ಮುಂದಕ್ಕೆ ಹೋಗದೆ ಉಳಿಯುವುದು ಶಾರೀರಿಕ ರಚನೆ ಮತ್ತು ಕ್ರಿಯಾ ಶಾಸ್ತ್ರದ ಪ್ರಕಾರ ಅಸಾಧ್ಯ (ಅಪರೂಪಕ್ಕೆ ಜಠರಕ್ಕೆ ಹೊಂದಿಕೊಂಡಂತೆ ಸಣ್ಣ ಚೀಲ ಇದ್ದರೆ ಆಹಾರದ ಕಣಗಳು ಅದರೊಳಗೆ ಸ್ವಲ್ಪ ಕಾಲ ಇರಲು ಸಾಧ್ಯವಿದೆ) ಜೀರ್ಣವಾಗುವ ವಸ್ತು ಜಠರದ ಜೀರ್ಣರಸಗಳಿಂದ ಬದಲಾಗಲೇಬೇಕು. ಜೀರ್ಣವಾಗದಿರುವ ವಸ್ತು ಸಣ್ಣದಾಗಿದ್ದರೆ (ಉದಾಹರಣಗೆ: ಮಣಿ, ಗೋಲಿ, ನಾಣ್ಯ ಇತ್ಯಾದಿ) ಜಠರದ ಮಾಂಸ ಖಂಡಗಳು ಸಂಕುಚಿತಗೊಂಡು ತಳ್ಳಿದಾಗ, ಮುಂದೆ ಸಾಗಿ ಕರಳನ್ನು ಸೇರಿ, ಕಕ್ಕಸಿನ ಮುಖಾಂತರ ಹೊರ ಬರುತ್ತವೆ. ದೊಡ್ಡ ವಸ್ತುವಾದರೆ ಜಠರ ಮತ್ತು ಸಣ್ಣ ಕರುಳಿನ (ಡುಯೋಡಿನಮ್) ಬಾಗಿಲನ್ನು ಬಂದು ಮಾಡಿ, ವೈದ್ಯಕೀಯ ತುರ್ತು ಸ್ಥಿತಿಯನ್ನುಂಟು ಮಾಡುತ್ತದೆ (ವಾಂತಿ, ನೋವು) ಹೀಗೆ ಮದ್ದು ಮತ್ತು ಅದಕ್ಕಂಟಿದ ವಸ್ತು ಜಠರದಲ್ಲಿ ಹಾಗೆ ಉಳಿಯುವುದು ಕೇವಲ ಕಲ್ಪನೆ, ಮಿಥ್ಯ.

ಮಿದುಳಿನ ನರಕೋಶಗಳಲ್ಲಿ ಆಗುವ ಕೆಲವು ರಸಾಯನಿಕ ಬದಲಾವಣೆಯಿಂದ ಶರೀರದಲ್ಲೇ ಉತ್ಪತ್ತಿಯಾಗುವ ಈ ಮಾನಸಿಕ ಕಾಯಿಲೆ ಕೆಲವು ಸಾರಿ ಮಾನಸಿಕ ಕ್ಲೇಶದಿಂದ ಅಥವಾ ಪರಿಸರದ ಕಾರಣಗಳಿಂದ ಪ್ರಕಟಗೊಳ್ಳಬಹುದು. ಮನಸ್ಸಿನ ಕಾರ್ಯಗಳು ಮುಖ್ಯವಾಗಿ ಆಲೋಚನೆ, ಭಾವನೆ ಪರಿಸರವನ್ನು ಅರ್ಥಮಾಡಿಕೊಳ್ಳುವ ಶಕ್ತಿ ಏರುಪೇರಾಗುತ್ತವೆ. ಅಪ್ರಚೋದಿತವಾಗಿ ರೋಗಿಗೆ ಧ್ವನಿಗಳು ಕೇಳಿಸುವುದು, ಚಿತ್ರಗಳು, ದೃಶ್ಯಗಳು, ಭಯ ತಪ್ಪು ನಂಬಿಕೆ ಇತ್ಯಾದಿ ಅನುಭವಗಳಿಂದ ಆತ ಭ್ರಮಾಧೀನನಾಗುತ್ತಾನೆ. ಈ ವಿಚಿತ್ರ ಅನುಭವ ಮತ್ತು ಅಸ್ತವ್ಯಸ್ತಗೊಂಡ ಮನಸ್ಸಿನ ಕ್ರಿಯೆಗಳಿಂದ ಅವನ ಮಾತು ವರ್ತನೆ ಅಸಂಬಂಧವಾಗಿರುತ್ತವೆ. ಔಷಧೋಪಚಾರ ದೊರೆಯದಿದ್ದರೆ ಕಾಯಿಲೆ ದಿನೆ ದಿನೇ ಜಾಸ್ತಿಯಾಗುತ್ತಾ ನಡೆದು ದೀರ್ಘಕಾಲ ರೋಗಿಯನ್ನು ನರಳಿಸುತ್ತದೆ. ಕೆಲವು ಸರಿ ಭ್ರಮಾಧೀನನಾದ ಸ್ಕಿಜೋಫ್ರೀನಿಯಾ ರೋಗಿ ಹಿಂಸಾಚಾರಕ್ಕೆ ಇಳಿಯಬಹುದು. ಸಂಶಯ ಪೀಡಿತನಾಗಬಹುದು. ತನಗೆ ಅಥವಾ ಇತರರಿಗೆ ಅಪಾಯಕಾರಿಯಾಗಬಹುದು. ಆರಂಭದಲ್ಲೆ ಚಿಕಿತ್ಸೆ ನಡೆಸಿದರೆ ಕಾಯಿಲೆ ಪೂರ್ಣವಾಸಿಯಾಗುತ್ತದೆ.

ವ್ಯಕ್ತಿಯ ಮೈ ಮೇಲೆ ದೆವ್ವವೋ ಭೂತವೋ ಬರುವುದು ಆಗ ಆತ ಗಲಾಟೆ ಮಾಡುತ್ತಾ ವಿಚಿತ್ರವಾಗಿ ವರ್ತಿಸುವುದು ಪ್ರಪಂಚದಲ್ಲೆಡೆ ಕಂಡು ಬರುತ್ತದೆ. ಅಭಿವೃದ್ಧಿ ಹೊಂದಿದ. ತಾಂತ್ರಿಕ ಜ್ಞಾನ ಹೆಚ್ಚಿರುವ ದೇಶಗಳಿಗೆ ಹೋಲಿಕೆ ಮಾಡಿದರೆ, ಅಭಿವೃದ್ಧಿ ಹೊಂದದ ಮತ್ತು ವಿದ್ಯಾಭ್ಯಾಸ ಹಾಗೂ ಜೀವನಮಟ್ಟ ಕಡಿಮೆ ಇರುವ ದೇಶಗಳಲ್ಲಿ ಈ ಪ್ರಕರಣಗಳು ಹೆಚ್ಚು, ವಿಜ್ಞಾನ ಅದರಲ್ಲೂ ವೈದ್ಯಕೀಯ ವಿಜ್ಞಾನ ಬೆಳೆದಂತೆ ವಿಕಾಸಗೊಂಡಂತೆ ಹಾಗೂ ಜನರಲ್ಲಿ ಹೆಚ್ಚಿನ ತಿಳುವಳಿಕೆ ಮತ್ತು ವಾಸ್ತವಿಕ ಸತ್ಯದ ಆಧಾರದ ಮೇಲೆ ವೈಜ್ಞಾನಿಕವಾಗಿ ಆಲೋಚಿಸುವ ಶಕ್ತಿ ಬೆಳೆದಂತೆ ವ್ಯಕ್ತಿಗಳ ಮೈ ಮೇಲೆ ದೆವ್ವಗಳು ಬರುವುದು, ಕಾಟ ಕೊಡುವುದು ಕಡಿಮೆಯಾಗುತ್ತಾ ಬಂದುದು ಅತ್ಯಂತ ಗಮನಾರ್ಹವಾದುದು.

ಯಾವುದೇ ಆಧುನಿಕ ಸೇವಾ ಸೌಲಭ್ಯಗಳಿಲ್ಲದೆ ಗ್ರಾಮೀಣ ಪ್ರದೇಶಗಳಲ್ಲಿ ಹಾಗೂ ಪಟ್ಟಣಗಳ ಜನ ನಿಬಿಡ ಕೊಳಗೇರಿ ಅಥವಾ ವಸತಿಗಳಲ್ಲಿ ಮಾತ್ರ ಕಂಡು ಬರುತ್ತವೆ. ಮೈಮೇಲೆ ದೆವ್ವ ಬರುವುದು ಹೆಚ್ಚು ಮಹಿಳೆಯರಲ್ಲಿ; ಹದಿನೈದರಿಂದ ಮೂವತ್ತೈದು ವರ್ಷ ವಯಸ್ಸಿನವರಲ್ಲಿ ಎಂದು ಪ್ರಪಂಚದಾದ್ಯಂತ ನಡೆದಿರುವ ಅಧ್ಯಯನ ತಿಳಿಸುತ್ತವೆ. ಮನೋ ವಿಜ್ಞಾನಿಗಳ ಪ್ರಕಾರ 'ಮೈ ಮೇಲೆ ದೆವ್ವ ಬರುವುದು ಒಂದು ಸಾಂಸ್ಕೃತಿಕ

ಹಾಗೂ ಸಾಮಾಜಿಕ ವಿಶೇಷ. ಇದು ಒಂದು ನಂಬಿಕೆ. ಇಂತಹ ನಿರ್ದಿಷ್ಟ ಸಂದರ್ಭದಲ್ಲಿ ಹೀಗೆ ನಡೆಯಬೇಕು ಎಂದು ಎಲ್ಲರಿಗೂ ಗೊತ್ತಿರುವ ನಿರೀಕ್ಷಿತ ನಡವಳಿಕೆ. ಈ ನಂಬಿಕೆ ಮತ್ತು ನಡವಳಿಕೆ ವಿಶೇಷವನ್ನು ಕೆಲವರು ತಮ್ಮ ಅನುಕೂಲ, ಅವಶ್ಯಕತೆಗಳಿಗೆ ಉಪಯೋಗಿಸಿಕೊಳ್ಳುತ್ತಾರೆ. ತನ್ಮೂಲಕ ತಮ್ಮ ಕಷ್ಟ ಸಂಕಟ ನೋವು ನಿರಾಶೆ ಅನಿಸಿಕೆಗಳನ್ನು ಪ್ರತಿಭಟನೆಗಳನ್ನು ಪರೋಕ್ಷವಾಗಿ ಪ್ರಕಟಿಸುತ್ತಾರೆ. '

ಅಪಾಯವನ್ನು ಉಂಟುಮಾಡುವ ಜನ, ಪ್ರಾಣಿಗಳು, ಸನ್ನಿವೇಶಗಳು ನಮ್ಮಲ್ಲಿ ಭಯವನ್ನು ತರುತ್ತವೆ. ಅನ್ಯಾಯವಾದಾಗ ನಮ್ಮ ಅಗತ್ಯಗಳು ಪೂರೈಕೆ ಆಗದಿದ್ದಾಗ ನಮಗೆ ಕೋಪ ಬರುತ್ತದೆ. ಕಷ್ಟ, ನಷ್ಟ, ನೋವಾದಾಗ ನಮಗೆ ದುಃಖವಾಗುತ್ತದೆ. ಹೀಗೆ ಭಯ, ಕೋಪ, ದುಃಖಗಳು ಸಹಜವಾದ ಭಾವನೆಗಳು ಆದರೆ ಈ ಭಾವನೆಗಳನ್ನು ನಾವು ಇಷ್ಟ ಪಡುವುದಿಲ್ಲ. ಮನಸ್ಸಿಗೆ ಅಹಿತವನ್ನುಂಟು ಮಾಡುವ ಈ ಭಾವನೆಗಳಿಂದ ತಪ್ಪಿಸಿಕೊಳ್ಳಲು ನೋಡುತ್ತೇವೆ. ಅಹಿತವನ್ನಷ್ಟೇ ಅಲ್ಲ. ನಮ್ಮ ಆರೋಗ್ಯವನ್ನು ನಮ್ಮ ಸಾಮರ್ಥ್ಯವನ್ನು ಕುಗ್ಗಿಸುವ ಈ ಭಾವನೆಗಳನ್ನು ನಾವು ಬಹುಕಾಲ ಅನುಭವಿಸಿದರೆ, ಮನಸ್ಸಿನೊಳಗೆ ಅದುಮಿಟ್ಟರೆ ಅನೇಕ ದೈಹಿಕ ಕಾಯಿಲೆಗಳು ಬರುತ್ತವೆ. ಉದಾಹರಣೆಗೆ ಹೃದಯರೋಗ, ಹೃದಯಾಘಾತ, ಅಧಿಕ ರಕ್ತದ ಒತ್ತಡ, ಸಿಹಿ ಮೂತ್ರರೋಗ, ತಲೆನೋವು, ಸಂಧಿವಾತ, ಚರ್ಮರೋಗ, ಋತುಚಕ್ರದ ಏರುಪೇರು ಜಠರ ಅಥವಾ ಕರುಳಿನ ಹುಣ್ಣು, ಮಲಬದ್ಧತೆ, ಲೈಂಗಿಕ ದುರ್ಬಲತೆ ಇತ್ಯಾದಿ. ಈ ಕಾಯಿಲೆಗಳು ಬರದಂತೆ ತಡೆಗಟ್ಟಬೇಕಾದರೆ ಅಥವಾ ಈ ಕಾಯಿಲೆಗಳು ಕಾಣಿಸಿಕೊಂಡ ಮೇಲೆ ಅವುಗಳನ್ನು ಹತೋಟಿಯಲ್ಲಿಡಬೇಕಾದರೆ ಭಯ ಕೋಪ ದುಃಖಗಳನ್ನು ನೀವು ನಿಭಾಯಿಸಲು ಕಲಿಯಬೇಕು.

ನಮ್ಮ ಎಲ್ಲಾ ಬಗೆಯ ಮಾನಸಿಕ ಕಾಯಿಲೆಗಳಿಗೂ ದೇವರೇ ಅತಿ ದೊಡ್ಡ ಡಾಕ್ಟರ್ ಎಂಬಂಥ ಸ್ಥಿತಿ ಇದೆ. ಅದಕ್ಕೆ ಕೆಲವು ದೇವಸ್ಥಾನ ಮಸೀದಿಗಳ ಸುತ್ತ ವರ್ಷವಿಡಿ ಹರಕೆ, ಉರಳು ಸೇವೆ ಮಾಟ-ಮಂತ್ರ ದೆವ್ವ, ಪಿಶಾಚಿ, ಪಂಜುರ್ಲಿಗಳ ಉತ್ಸವ ನಡೆಯುತ್ತಿರುತ್ತದೆ. ಜಿಲ್ಲೆಗೆ ಒಂದಾದರೂ ಮಾನಸಿಕ ಆಸ್ಪತ್ರೆ ಇದ್ದರೆ ಈ ದೆವ್ವಗಳ ಕಾಟಗಳನ್ನು ಅದೆಷ್ಟೋ ಪಾಲು ಕಡಿಮೆ ಮಾಡಲು ಸಾಧ್ಯವಾಗುವುದು.

ನಮ್ಮ ಆರೋಗ್ಯವನ್ನು ಕಾಪಾಡುವುದು ನಮ್ಮ ನೈತಿಕ ಮತ್ತು ಧಾರ್ಮಿಕ ಕರ್ತವ್ಯವಾಗಿದೆ. "ಆರೋಗ್ಯವೇ ಎಲ್ಲ ಸಾಮಾಜಿಕ ಗುಣ ಧರ್ಮಗಳಿಗೆ ತಳಹದಿ. ನಾವು ಅನಾರೋಗ್ಯದಿಂದ ಇರುವಾಗ ಯಾರಿಗೂ ಉಪಯೋಗವಾಗುವುದಿಲ್ಲ".[೮೨] ಎಂದು ಇಂಗ್ಲಿಷ್ ಲೇಖಕ ಮತ್ತು ನಿಘಂಟುಕಾರ ಸಾಮ್ಯುವೆಲ್ ಜಾನಸನ್ ಹೇಳಿದ್ದಾನೆ. ಆರೋಗ್ಯ ಸಂವರ್ಧನೆಯ ಈ ಕಾರ್ಯದಲ್ಲಿ ಪ್ರಾಥಮಿಕ ಸ್ವಾಸ್ಥ್ಯ ಪಾಲನೆಯು ಬಹು ಮುಖ್ಯವಾದುದು. ಅದರ ಮೂಲಕವಾಗಿ ಸಮಾಜದ ಮೂಲ ಘಟಕವಾದ ವ್ಯಕ್ತಿಯು ತನ್ನ ಆರೋಗ್ಯವನ್ನು ಕಾಯ್ದುಕೊಂಡು ಬಲ ಸಂವರ್ಧನೆಯನ್ನು ಮಾಡಿಕೊಳ್ಳುವ ಅವಕಾಶವನ್ನು ಪಡೆಯುತ್ತಾನೆ. ಯೋಗ್ಯ ಪುಷ್ಟಿಕರ ಆಹಾರ, ಪರಿಶುದ್ಧ ನೀರು, ನಿರ್ಮಲ ಪರಿಸರ, ತಾಯಂದಿರ-ಮಕ್ಕಳ ಆರೋಗ್ಯ, ರೋಗ ನಿರೋಧಕ ಲಸಿಕೆ ನೀಡಿಕೆ; ರೋಗಗಳ ಚಿಕಿತ್ಸೆ ಸ್ವಾಸ್ಥ್ಯ ರಕ್ಷಣೆಯ ಬಗ್ಗೆ ತಿಳುವಳಿಕೆ ಮತ್ತು ರೋಗ ಚಿಕಿತ್ಸೆಗೆ ಸಹಾಯ ಇವುಗಳೆಲ್ಲ ಪ್ರಾಥಮಿಕ ಸ್ವಾಸ್ಥ್ಯಪಾಲನೆಯ ಕಾರ್ಯದಿಂದ ಲಭಿಸುತ್ತವೆ.

---

೮೨(ಅಡಿಟಿಪ್ಪಣಿ :೮೨: ಸಾಮಾಜಿಕ ಸ್ವಾಸ್ಥ್ಯ ಲೇ:ಡಾ॥ ಪಿ.ಎಸ್.ಶಂಕರ ಪುಟ ಸಂಖ್ಯೆ-೧)

ದೇವರನ್ನು ನಂಬಿದರೆ ಕಾಯಿಲೆ ಹೆಚ್ಚಾಗಿ ಬರುವುದಿಲ್ಲ. ಬಂದರೂ ಶೀಘ್ರ ಚೇತರಿಕೆ ಸಾಧ್ಯವಿದೆ. ಈ ವಾದ ಎಲ್ಲ ಮನೋವಿಜ್ಞಾನಿಗಳೂ ಒಪ್ಪುತ್ತಿಲ್ಲ. ಧಾರ್ಮಿಕ ನಂಬುಗೆ ಎಂಬುದೇ ಒಂದು ಗೀಳು; ಅದು ಮನಸ್ಸು ತೀರಾ ಆಕ್ರಮಿಸಿಕೊಂಡರೆ ಒಳ್ಳೆಯದಲ್ಲ ಎಂದು ಫ್ರಾಯ್ಡ್ ಹೇಳುತ್ತಾರೆ. ಈ ಜಟಾಪಟಿ ವಿಕೋಪಕ್ಕೆ ಹೋದಾಗ ೧೯೮೦ರಲ್ಲಿ ಅಮೇರಿಕಾದ ಮನೋವಿಜ್ಞಾನಿಗಳ ಸಂಘದವರು ಒಂದು ಹೇಳಿಕೆ ನೀಡಿದರು; ಅತಿಯಾದ ಧಾರ್ಮಿಕ ನಂಬುಗೆಯೇ ಒಂದು ಮಾನಸಿಕ ಅಸ್ವಾಸ್ಥ ಎಂದು ಆಗಿನಿಂದ ಧರ್ಮ ಮತ್ತು ಆರೋಗ್ಯದ ನಡುವಣ ಸಂಬಂಧ ಇನ್ನಷ್ಟು ಬಿಗಾಡಾಯಿಸಿದೆ. ಮನಸ್ಸಿಗೂ ಹೃದಯಕ್ಕೂ ನೇರ ಸಂಬಂಧವಿದೆ. ಎಲ್ಲರೂ ಒಪ್ಪುತ್ತಾರೆ. ಹೃದಯದ ಕಾಯಿಲೆ ಇದ್ದವರಿಗೆ ಭಾವೋದ್ರೇಕ ಆಗಬಾರದು; ಮನಸ್ಸು ಶಾಂತವಾಗಿರಬೇಕು ಎಂದು ಡಾಕ್ಟರ್ ಹೇಳುತ್ತಾರೆ. ಆಸ್ಪತ್ರೆ ಸೇರಿದ ಹೃದ್ರೋಗಿಗಳ ಮನಸ್ಸನ್ನು ಪ್ರಸನ್ನವಾಗಿಡಲೆಂದು ತರಾವರಿ ಪ್ರಯೋಗಗಳು ನಡೆಯುತ್ತಿವೆ. ನಾಯಿ, ಬೆಕ್ಕು, ಗಿಳಿಗಳನ್ನೂ ರೋಗಿಯ ಮಂಚದ ಬಳಿ ತರಲಾಗುತ್ತಿದೆ. 'ಸರ್ಜರಿ' ಮುಗಿದ ಮೇಲೆ ರೋಗಿಯ ಚೇತರಿಕೆಗೆಂದು ಅಮೇರಿಕಾದ ಆಸ್ಪತ್ರೆಗಳಲ್ಲಿ ಈಗ ಮೇಲುದನಿಯ ಓಂಕಾರ ವೇಧ ಪಠನದ ಧ್ವನಿ ಮುದ್ರಿಕೆಗಳನ್ನೂ ಹಾಕಲಾಗುತ್ತಿದೆ.

ಮನಸ್ಸಿಗೂ ಹೃದಯಕ್ಕೂ ಸಂಬಂಧ ಇದೆಯೆಂದ ಮೇಲೆ ಹೃದಯಕ್ಕೂ ಇತರ ಕಾಯಿಲೆಗಳಿಗೂ ಸಂಬಂಧ ಇರಲೇ ಬೇಕಲ್ಲವೇ ? ಈ ತರ್ಕದ ಎಳೆ ಹಿಡಿದು ಮತ್ತೆ ದೇವರನ್ನು ದೇಹದೊಳಕ್ಕೆ ಎಳೆದು ತರುವ ಯತ್ನಗಳು ನಡೆದವು. ಧಾರ್ಮಿಕ ನಂಬುಗೆ ಅದರಲ್ಲೂ ಮುಖ್ಯವಾಹಿನಿಯಾದ ಧರ್ಮಪರಿಪಾಲನೆ ಮಾಡುವವರಿಗೆ ರಕ್ತದ ಒತ್ತಡ ಕಮ್ಮಿ, ಲಕ್ವ ಹೊಡೆಯುವ ಸಂಭವ, ಹೃದ್ರೋಗಗಳು ಕಮ್ಮಿ; ಏಕೆಂದರೆ ಅವರು ಶಿಸ್ತು ಬದ್ಧತೆಯ ಆಹಾರ ಸೇವನೆ ದೇಹದಂಡನೆ ಮಾಡುತ್ತಾರೆ; ಆದ್ದರಿಂದ ಅವರು ದೀರ್ಘಕಾಲ ಬದುಕುತ್ತಾರೆ. ಎಂಬಲ್ಲಿಯವರೆಗೆ ಧರ್ಮ ಮತ್ತು ವಿಜ್ಞಾನದ ಮಧ್ಯಸಾಂಗತ್ಯ ಏರ್ಪಟ್ಟಿತ್ತು.

ತಾಕಲಾಟಕ್ಕೆ ಸಂಬಂಧಿಸಿದಂತೆ ೨೦೦೧ ರಲ್ಲಿ ೧೦ ಪ್ರಯೋಗ ಮಾಡಲು ಮುಂದಾದರು. ಅಂತು ನಡೆಸಿದ ಹತ್ತು ಪ್ರಯೋಗಗಳಲ್ಲೂ ಮಿಶ್ರ ಫಲಿತಾಂಶ ಬಂತು ಎಲ್ಲಕ್ಕೂ ವಿಧ ವಿಧದ ಟೀಕೆಗಳು ಬಂದವು ಮತ್ತು ಕೆಲವಕ್ಕೆ ಕ್ರೈಸ್ತ ಸಂಸ್ಥೆಗಳೇ ಧನ ಸಹಾಯ ಮಾಡಿದವು. ಕೆಲವು ಪ್ರಯೋಗಗಳಲ್ಲಿ ವಿಜ್ಞಾನಿಯೇ ದೈವಭಕ್ತ ಆಗಿದ್ದ ಕೊನೆಯದಾಗಿ ವೈಜ್ಞಾನಿಕವಾಗಿ ಅತ್ಯಂತ ನಿಖರ ಎನ್ನಲಾದ ಬೋಸ್ಟನ್ ನ ಮೈಂಡ್ ಅಥವಾ ಬಾಡಿ ಸಂಸ್ಥೆಯ ಫಲಿತಾಂಶಕ್ಕಾಗಿ ಎಲ್ಲರೂ ಕಾದಿದ್ದರು. ಈ ಸಮೀಕ್ಷೆಗೆಂದು ಆಶಯ ಆಸ್ಪತ್ರೆಯಲ್ಲಿ ೧೮೦೨ ರೋಗಿಗಳ ಬೈಪಾಸ ಸರ್ಜರಿ ನಂತರ ಮೂರು ತಂಡಗಳನ್ನಾಗಿ ಪ್ರಾರ್ಥನೆ ಮಾಡುವ, ಮಾಡದೆ ಇರುವ, ಯಾರು ಮಾಡಿದರೆ ಮಾಡಿ ಬಿಟ್ಟರೆ ಬಿಡಬಹುದು ಎಂದು.

ಫಲಿತಾಂಶ 'ಪ್ರಾರ್ಥನೆಯಿಂದ ಏನೂ ಸಕರಾತ್ಮಕ ವ್ಯತ್ಯಾಸ ಆಗಲಿಲ್ಲ. ವೈದ್ಯರಿಂದ ಸಾಧ್ಯವಿಲ್ಲ ಎಂದಾಗ ಮಾತ್ರ ತಾನೆ ಪ್ರಾರ್ಥನೆಗೆ ಶರಣಾಗುವದು ? 'ನನ್ನ ಕಾಯಿಲೆ ಅಷ್ಟೊಂದು ಗಂಭೀರವೇ ? ಎಂಬ ಚಿಂತೆಯಿಂದಾಗಿಯೇ ಕೆಲವರ ಸ್ಥಿತಿ ಗಂಭೀರವಾಗಿದ್ದನ್ನು ವೈದ್ಯರು ದಾಖಲಿಸಿದ್ದಾರೆ."

ಆರೋಗ್ಯಕ್ಕೆ ಸಂಬಂಧಿಸಿದಂತೆ ದೇವರೆಂದು ಇರುವ ಅಲೌಕಿಕವೂ, ಅತೀತವೂ, ನಿಗೂಢವೂ ಆದ ವಿಶಿಷ್ಟ ಶಕ್ತಿಯನ್ನು ಪ್ರತಿ ಸಂದರ್ಭದಲ್ಲೂ ಬಳಸಿಕೊಂಡು ಹೆಚ್ಚು ಜನ ತಮ್ಮ ಕರ್ತವ್ಯ ಮಾಡದೆ

ಸೋಮಾರಿಗಳಾಗಿ ಪರೋಕ್ಷವಾಗಿ ಮಾನವ ಹತ್ಯೆಗೆ ಕಾರಣರಾಗುತ್ತಾರೆ. ಕಾಯಿಲೆಗಳಿಗೆ ಕಾರಣಗಳನ್ನು ಕಂಡು ಹಿಡಿದಿದ್ದಾಗ್ಯೂ ದೇವರು ಪಾಪ ಮಾಡಿದವರಿಗೆ ರೋಗ ಕೊಡುತ್ತಾನೆಂದು ನಂಬುತ್ತಾರೆ. ರೋಗಿ ಬಗ್ಗೆ 'ಏನೇನು ಪಾಪ ಮಾಡಿದ್ದನೊ'? ಎಂದೆಲ್ಲಾ ಮಾತಾಡುತ್ತಾರೆ. ರೋಗ ಬಂದಾಗ ಔಷಧೋಪಚಾರಗಳಿಗೆ ಬೆಲೆ ಕೊಡದೆ ದೇವರ ಮೇಲೆ ಭಾರ ಹಾಕಿ ಹಲವು ಬಗೆಯ ಪೂಜಾ ವಿಧಾನ ಅನುಸರಿಸುತ್ತಾರೆ. ಕೆಮ್ಮು, ನೆಗಡಿ, ಗಂಟಲು ನೋವು, ಹೊಟ್ಟೆ ನೋವು ಯಾವುದಾದರೂ ಸರಿ ಎಲ್ಲಕ್ಕೂ ದೇವರ ಮೇಲೆ ಭಾರ ಹಾಕಿ ತಮ್ಮಲ್ಲಿನ ಹಣ, ಕಾಲ ಶಕ್ತಿ ಎಲ್ಲವನ್ನೂ ವ್ಯರ್ಥ ಮಾಡುತ್ತಾರೆ.

ದೇವರ ಹೆಸರಿನಲ್ಲಿ ಬರೆ ಅನಾಹುತವಿದೆಯೆಂದು ತಿಳಿಯುವ ಅಗತ್ಯವಿಲ್ಲ. ದೇವರನ್ನು ನೆನೆಯುವುದರಿಂದ ಉಪಯೋಗ ಕೂಡಾ ಇದೆ. ದೇವರನ್ನು ಭಕ್ತಿಯಿಂದ ನೆನೆಯು ಸಂದರ್ಭದಲ್ಲಿ ಯುವ ಮನಸ್ಸು ಕೇಂದ್ರಿಕರಣಗೊಂಡು ಒಂದು ಸ್ಥಿಮಿತಕ್ಕೆ ಬರುತ್ತದೆ. ಇದರಿಂದ ಲೌಕಿಕ ವ್ಯವಹಾರ, ಆಸೆ, ಚಿಂತೆ ಮರೆಯಾಗಿ ಮಾನಸಿಕ ನೆಮ್ಮದಿ ದೊರೆಯುವ ಸಾಧ್ಯತೆಯಿದೆ. ದೇವಸ್ಥಾನಗಳಲ್ಲಿನ ಸ್ಥಾನದ ಮಹಿಮೆಯ ಭಯ ಅಲ್ಲಿ ಭಾರಿಸುವ ಗಂಟೆಯ ನಿನಾದ, ಧೂಪದ ಜೋಂಪು ತರುವ ಗುಣ ಹೀಗೆ.ಮನಸ್ಸಿನ ಕೇಂದ್ರಿಕರಣಕ್ಕೆ ಬಹಳವಾಗಿ ಸಹಕರಿಸುತ್ತವೆ. ಹೃದಯ ರೋಗ, ಅತಿರಕ್ತದೊತ್ತಡ, ಕರಳು ಹುಣ್ಣು ಮತ್ತು ಹಲವು ರೀತಿಯ ಮಾನಸಿಕ ರೋಗಗಳಿಂದ ನರಳುತ್ತಿರುವ ಏರುಯೋಚನೆ, ಕೋಪ, ತಾಪಗಳನ್ನು ಬಿಡಬೇಕಾಗುತ್ತದೆ. ಅಲ್ಲದೆ ಬೀಡಿ, ಸಿಗರೇಟು, ಮಧ್ಯಪಾನ ಇವುಗಳನ್ನು ಬಿಡಬೇಕಾಗುತ್ತದೆ. ಅವರು ಇವುಗಳನ್ನು ಬಿಡಲು ಹೆಚ್ಚು ಶಕ್ತಿಯುತವಾದಷ್ಟು ತೊಂದರೆಯಿಂದ ಹೆಚ್ಚಾಗಿ ಪಾರಾಗುತ್ತಾರೆ. ಸದಾ ದೇವರನ್ನು ಧ್ಯಾನಿಸುವುದರಿಂದ ಮಾನಸಿಕ ನೆಮ್ಮದಿ ಸಾಧ್ಯ. ಬೇರೆ ವಿಧಾನಗಳಿವೆಯಾದರೂ ಗ್ರಾಮೀಣ ಜನತೆಯ ಪರಿಸರದಲ್ಲಿ ಇದು ಸುಲಭವಾಗಿ ಹೆಚ್ಚು ನೆಮ್ಮದಿ ತರುವ ವಿಧಾನ. ಅತಿಯಾದ ಆಧ್ಯಾತ್ಮಿಕ ವಿಚಾರ ತಪ್ಪು ದಾರಿಗೆ ಎಳೆಯುವುದುಂಟು. ಕೆಲವು ಸಂದರ್ಭಗಳಲ್ಲಿ ಎಲ್ಲಕ್ಕೂ ದೇವರೆ ಹೊಣೆಯೆಂದು ಕೊಂಡು ಯಾವುದೇ ಕಾರ್ಯದಲ್ಲಿ ಆಸಕ್ತಿಯಿಲ್ಲದೆ ಏನೇನೂ ಹೇಳತೊಡಗಿ ಮಾನಸಿಕ ರೋಗಿಗಳಾಗುವುದುಂಟು. ಆದ್ದರಿಂದ ಆಧ್ಯಾತ್ಮ ನಮ್ಮ ಇಂದಿನ ಹೋರಾಟದ ಬದುಕಿಗೆ ಪೂರಕವಾಗುವಷ್ಟು ಇದ್ದರೆ ಸಾಕು.

ರೋಗಿಗಳು ಸಾಮಾನ್ಯವಾಗಿ ಮಧ್ಯ, ಮಾಂಸ, ಬೀಡಿ, ಸಿಗರೇಟು ಹುಳಿ ಉಪ್ಪು ಇಲ್ಲದ ಊಟ ಮತ್ತು ಹಾಲು ಹಣ್ಣು ಮುಂತಾದ ಸಾತ್ವಿಕ ಆಹಾರ ತೆಗೆದುಕೊಳ್ಳುತ್ತಾರೆ. ಇದರಿಂದ ಎದೆಯ ಉರಿ·ಮತ್ತು ಆಮ್ಲದ ಹುಣ್ಣಿನಿಂದ ಹೊಟ್ಟೆನೋವಿರುವುದು ಪೂರ್ಣ ಗುಣ ಹೊಂದಲು ಸಾಧ್ಯ. ಹಾಗೆಂದು ಕ್ಯಾನ್ಸರ್‌ನಂಥ ಕಾಯಿಲೆ ಗುಣ ಪಡಿಸಿಕೊಳ್ಳಲಾಗದು. ದೇವರ ಪೂಜಾ ವಿಧಿಗಳನ್ನು ಅನುಸರಿಸುವದರಿಂದ ಅನೇಕ ನೋವು ಗುಣಪಡಿಸಿಕೊಳ್ಳಬಹುದು. ನಂಬಿಕೆ ದೊಡ್ಡದು, ಕೆಲವು ಸನ್ಯಾಸಿಗಳು, ಮನಶಾಸ್ತ್ರಜ್ಞ ಬಗೆಗೆ ಅರಿತಿದ್ದು ಜನರಲ್ಲಿ ನಂಬಿಕೆ ಹುಟ್ಟಿಸಿ ದೇವರ ಹೆಸರಿನಲ್ಲಿ ಗುಣಪಡಿಸುವುದುಂಟು. ಗಾಳಿ, ಪೀಡೆ, ಮಾಟವೆಂದು ಭಯ ಭ್ರಾಂತಿಗಳಿಂದ ಕಲ್ಪಿಸಿಕೊಂಡು ನರಳುವವರಲ್ಲಿ ಕಾಪಾಡುತ್ತಾನೆ. ಎಂಬ ನಂಬಿಕೆ ಹುಟ್ಟುವುದರಿಂದ ಧೈರ್ಯ ಮೂಡಿ ತೊಂದರೆ ಗುಣವಾಗಬಹುದು. ಇನ್ನಿತರ ಕಾಯಿಲೆಗಳಲ್ಲಿ ದೈವದೋಷ ಇದೆಯೆಂದೋ ಪಾಪಿಯೆಂದೋ ನರಳುವ ಕೆಲವು ರೋಗಿಗಳಗಂತೂ ದೇವರೇ ವೈದ್ಯ.

ವೈದ್ಯ ಚಿಕಿತ್ಸೆಯ ಜತೆಗೆ ಪೂಜಾ ವಿಧಿ ಅನುಸರಿಸುವ ರೋಗಿಗಳಲ್ಲಿ ನಂಬಿಕೆ ಮತ್ತು ಧೈರ್ಯ ಮೂಡುವುದರಿಂದ ರೋಗ ಬೇಗ ಗುಣವಾಗಬಹುದು. ಹೀಗೆ ಹಲವು ಉಪಯೋಗಗಳು ಕೂಡಾ ಇವೆ. ದೇವರ ನೆರಳಿನಲ್ಲಿ ಉಪಕಾರ, ಅಪಕಾರ ಎರಡೂ ಇರುವುದರಿಂದ ಇದನ್ನು ಸರಿಯಾಗಿ ಅರಿತುಕೊಂಡು ಬೇಕಾದಲ್ಲಿ ಬಳಸಿಕೊಳ್ಳುವದು ಒಳ್ಳೆಯದು. ಉಪಯೋಗವಿಲ್ಲದ ಸಂದರ್ಭದಲ್ಲಿ ದೇವರ ಮೇಲೆ ಭಾರ ಹಾಕಿ ಕಾಯುವುದು ಸರಿಯಲ್ಲ.

೧೯೪೫-೧೯೭೦ರ ಅವಧಿಯನ್ನು ಬಂಡವಾಳ ಶಾಹಿಗಳ ಸುವರ್ಣಯುಗವೆಂದೇ ಬಣ್ಣಿಸಲಾಗುತ್ತದೆ. ಎರಡನೇ ಮಹಾಯುದ್ಧದ ನಂತರದ ದಿನಗಳಲ್ಲಿ ಅಮೇರಿಕಾ ಸಂಯುಕ್ತ ರಾಷ್ಟ್ರವನ್ನು ಪ್ರಬಲ ಕೈಗಾರಿಕಾ ಪ್ರದೇಶವೆಂದು ಪರಿಗಣಿಸಲಾಗಿದೆ.

ಜಾಗತಿಕ ಆರ್ಥಿಕತೆಯಲ್ಲಿ ಲಭ್ಯವಿರುವ ಅಧಿಕ ಹಣ ಅಗಾಧವಾಗಿ ಅಭಿವೃದ್ಧಿ ಶೀಲ ದೇಶಗಳ ಆರ್ಥಿಕತೆ ಕುಸಿಯತೊಡಗಿತು. ಉತ್ಪಾದನಾಧಾರಿತ ಚಟುವಟಿಕೆಗಳಿಗೆ ಹಣ ಇಲ್ಲವಾಯಿತು. ಜಾಗತೀಕರಣಕ್ಕೆ ಇದು ಇಂಬು ನೀಡಿ ಬಹು ರಾಷ್ಟ್ರೀಯ ಕಂಪನಿಗಳಿಗೆ ತಮ್ಮ ಉತ್ಪನ್ನಗಳನ್ನು ಅಭಿವೃದ್ಧಿ ಶೀಲ ದೇಶಗಳಲ್ಲಿ ತೊಡಗಿಸಲು ಅನುವು ಮಾಡಿತು.

ವಿಶ್ವ ವ್ಯಾಪಾರ ಸಂಸ್ಥೆಯ ಅವಕಾಶಗಳಿಂದಾಗಿ ವ್ಯಾಪಾರ ಸಂಬಂಧಿ ಬೌದ್ಧಿಕ ಆಸ್ತಿ ಹಕ್ಕಿನ ಪ್ರಧಾನ ಪರಿಣಾಮ ಔಷಧಿ ಕ್ಷೇತ್ರದಲ್ಲಿ ಕಂಡು ಬರುತ್ತಿವೆ. ಟ್ರಿಪ್ಸ್ ಮೂಲಕ ಔಷಧಿವಲಯದ ನಾಶವೇ ಆಗುವ ಸೂಚನೆಗಳಿವೆ. ೧೯೭೦ರಲ್ಲಿ ಭಾರತವು ಅತ್ಯಂತ ಪ್ರಗತಿ ಪರವಾದ ಏಕಸ್ವಾಮ್ಯ ನಿಯಮಗಳನ್ನು ಅನುಮೋದಿಸಿತು. ಅದರ ವಿಶೇಷವೆಂದರೆ ಪ್ರಕ್ರಿಯೆಯ ಏಕಸ್ವಾಮ್ಯವೇ ವಿನಾ ಉತ್ಪನ್ನದ ಏಕ ಸ್ವಾಮ್ಯವಲ್ಲ. ಜಗತ್ತಿನ ಯಾವ ಭಾಗದಲ್ಲೇ ಆಗಲಿ ಮಾರಾಟವಾಗುವ ಔಷಧಿಯನ್ನು ಭಾರತದಲ್ಲಿ ಸ್ವದೇಶಿಯಾಗಿ ವಿಭಿನ್ನವಾಗುವ ಔಷಧಿಯನ್ನು ಭಾರತದಲ್ಲಿ ಸ್ವದೇಶಿಯಾಗಿ ವಿಭಿನ್ನ ಪ್ರಕ್ರಿಯೆಯ ಮೂಲಕ ಉತ್ಪಾದಿಸಲು ಅವಕಾಶವಿತ್ತು. ಬಹು ರಾಷ್ಟ್ರೀಯ ಕಂಪನಿಗಳು ಭಾರತಕ್ಕೆ ಬಂದು ನಮ್ಮ ಔಷಧೀಯ ಸ್ವಾವಲಂಬನೆಯನ್ನೇ ಪೂರ್ಣವಾಗಿ ನಾಶಪಡಿಸುವವು.

ದೇಶಕ್ಕೆ ಅಗತ್ಯವಿರುವ ಆಹಾರವನ್ನು ಆ ದೇಶವೇ ಬೆಳೆದು ಸಂಗ್ರಹಿಸಿ ರಾಷ್ಟ್ರದ ಬರಗಾಲದಲ್ಲಿ ಮತ್ತು ಮಾನವಕೃತ ಹತಾಶೆಯ ಸಂದರ್ಭದಲ್ಲಿ ಅದನ್ನು ಬಳಕೆ ಮಾಡುವುದು. ಆಹಾರ ಸುಭದ್ರತೆಯೆಂದರೆ ಸ್ವತಂತ್ರ ದೇಶವಾಗಿ ನಮ್ಮ ಸಾರ್ವಭೌಮತ್ವವು ಸುರಕ್ಷಿತವಾಗುವುದು. ಬರಗಾಲದಲ್ಲಿ ಇತರ ದೇಶಗಳ ಭೀಕ್ಷೆಯಾಚಿಸಿದ್ದಲ್ಲಿ ಅದರ ಒತ್ತಡಗಳಿಗೆ ಮಣಿಯುವುದು ಅನಿವಾರ್ಯವಾಗುವುದು. ನಮ್ಮ ಆರ್ಥಿಕ ಹಾಗೂ ರಾಜಕೀಯ ಸ್ವಾತಂತ್ರ್ಯಕ್ಕೆ ಆಹಾರ ಸುಭದ್ರತೆಯು ಆಧಾರಸ್ಥಂಬ ನಮ್ಮ ಉಳಿವಿಗಾಗಿ ಆಹಾರ ಆಮದನ್ನು ಅವಲಂಬಿಸಿದರೆ ರಫ್ತು ಮಾಡುವ ದೇಶದ ಪ್ರತಿಕೂಲ ರಾಜಕೀಯ ಒತ್ತಡಗಳಿಗೆ ಮಣಿಯಬೇಕಾಗಿ ಬಂದು ಸಾರ್ವಭೌಮತ್ವಕ್ಕೆ ಭಂಗಬರಬಹುದು. ಭಾರತದಲ್ಲಿ ನಿರಂತರವಾಗಿ ಇರುವ ಹಸಿವು ಹಾಗೂ ನ್ಯೂನಪೋಷಣೆಯಿಂದಾಗಿ ಆಹಾರ ಸುಭದ್ರತೆ ಮೂಲಭೂತವಾದದ್ದು ಎಂಬುದು ಇನ್ನೊಂದು ಕಾರಣ. ೩೦ ವರ್ಷಗಳ ಯೋಜನೆಗಳಿಂದಾಗಿ ಭಾರತ ಸರ್ಕಾರವು ಅತ್ಯಂತ ಎಚ್ಚರದಿಂದ ದೇಶದ ಅಗತ್ಯಗಳನ್ನು ಪೂರೈಸಲು ಸಮರ್ಥವಾಯಿತು.

ಆಹಾರ ಅಭಾವ ಪರಿಸ್ಥಿತಿ ಹೆಂಗಸರ ಮೇಲೆ ವಿಶೇಷ ಪ್ರಭಾವ ಬೀರುವುದು ಕುಟುಂಬದ ಸದಸ್ಯರ ಪೈಕಿ ಕೊರತೆಯನ್ನು ಹಂಚಿಕೊಳ್ಳುವಾಗ ಮಹಿಳೆಯರು ಹಾಗೂ ಹೆಣ್ಣು ಮಕ್ಕಳೇ ಕೊರತೆಯ ಪರಿಣಾಮವನ್ನು ವಿಶೇಷವಾಗಿ ಅನುಭವಿಸುವರು. ೩೫% ರಷ್ಟು ಗ್ರಾಮೀಣ ಮನೆಗಳಲ್ಲಿ ಮಹಿಳೆಯರೇ ಹೊಣೆಗಾರರಾಗಿರುವಾಗ ಅಲ್ಲಿನ ಪರಿಣಾಮ ಭೀಕರ, ಆಹಾರ ಸುಭದ್ರತೆಯ ಕೊರತೆಯಿಂದಾಗಿ ಮಹಿಳೆಯರ ಆರೋಗ್ಯ ಪದಗೆಟ್ಟರೆ ಪರಿಣಾಮ ಇನ್ನೂ ಭೀಕರ, ವಿಶ್ವ ವ್ಯಾಪಾರ ಸಂಸ್ಥೆಗೆ ಭಾರತ ಮಣಿದ ಪರಿಣಾಮವಾಗಿ ಆಹಾರ ಸುಭದ್ರತೆಯ ಮೇಲೆ ಪ್ರಭಾವ ಉಂಟಾಗಲಿದೆ. ಕೃಷಿ ಮತ್ತು ಆಹಾರೋತ್ಪನ್ನದಲ್ಲಿನ ಅಂತರರಾಷ್ಟ್ರೀಯ ವ್ಯಾಪಾರವನ್ನು ಈಗ ಕೃಷಿ ಸಂಬಂಧಿ ಒಪ್ಪಂದವನ್ನು ಉರುಗ್ವೆ ಸಭೆಯಲ್ಲಿ ಒಪ್ಪಲಾಗಿದೆ. ಕೈಗಾರಿಕೀಕರಣಗೊಂಡ ದೇಶಗಳು ತಮ್ಮ ಉತ್ಪನ್ನವನ್ನು ಭಾರತಕ್ಕೆ ತಂದು ಸುರಿವ ಸಾಧ್ಯತೆಯನ್ನು ಜಾಗತೀಕ ವ್ಯಾಪಾರ ಸಂಘಟನೆಯ ಪರವಾದಿಗಳು ನಿರಾಕರಿಸುತ್ತಾರೆ. ಸುರಿಯುವುದೆಂದರೆ ಅಧಿಕ ದಾಸ್ತಾನನ್ನು ಕಡಿಮೆ ಬೆಲೆಗೆ ಭಾರತದಲ್ಲಿ ತಂದು ಮಾರಾಟ ಮಾಡುವುದು. ಪಾಶ್ಚಿಮಾತ್ಯ ದೇಶಗಳಲ್ಲಿ ಉತ್ಪಾದಕರಿಗೆ ಸಹಾಯಧನವಿದೆ. ಹೀಗೆ ಸುರಿದು ಮಾರಾಟ ಮಾಡುವುದರಿಂದ ಅವರಿಗೆ ದಾಸ್ತಾನು ಹೊರೆ ಇಳಿಯುತ್ತದೆ. ಇಲ್ಲದೆ ಹೋಗಿದ್ದರೆ ಅವು ಗೋದಾಮುಗಳಲ್ಲಿ ಕೊಳೆಯುತ್ತಿದ್ದವು. ಮೂರನೆ ಜಗತ್ತಿನ ಉತ್ಪಾದಕರನ್ನು ಇದು ಹಾಳು ಮಾಡುವುದೂ ನಿಜ. ಮುಂಬರುವ ವರ್ಷಗಳಲ್ಲಿ ಮಾರುಕಟ್ಟೆ ಪಾಶ್ಚಿಮಾತ್ಯರ ಅಧೀನದಲ್ಲಿರುವುದು ನಿಜ. ಹೀಗೆ ಮಾಡದಂತೆ ನಿಯಾಮವಳಿ ಇದೆ. ಅಲ್ಲದೆ ಮೂರನೆಯ ಜಗತ್ತಿನ ದೇಶಗಳು ನ್ಯಾಯಾಲಯದ ಮೊರೆ ಹೋಗಬಹುದು.

ಈ ಎರಡೂ ವಾದಗಳು ಹುರುಳಿಲ್ಲದ್ದು ! ಆಹಾರವು ಬೇರೆ ಸಾಮಗ್ರಿಗಳಂತಲ್ಲ. ಯಾವುದೇ ಸಾಮಗ್ರಿ ಕೊರತೆ ನಮಗಿದ್ದರೆ ಬೆಲೆಯೇರಿಕೆಯಾದಾಗ ನಾವು ಕಾಣಬಹುದು. ಅಥವಾ ಕೊಳ್ಳದೆ ಇರಬಹುದು. ಕಾಫಿ ಪೂರೈಕೆ ಕೊರತೆಯಾದರೆ, ರೇಡಿಯೋ ದುಬಾರಿಯಾದರೆ ಹೇಗೋ ನಿಭಾಯಿಸಬಹುದು. ಆಹಾರ ಪೂರೈಕೆ ಕೊರತೆಯಾದರೆ ಇಲ್ಲವೆ ದುಬಾರಿಯಾದರೆ ಜನ ಹಾಗೂ ದನಕರುಗಳು ಉಪವಾಸ ಸಾಯುತ್ತವೆ. ಕೃಷಿ ರಫ್ತು ಮುಖ್ಯ ಧೋರಣೆಯಾದಾಗ ಆಹಾರ ಬೆಳೆಗಳನ್ನು ಬೆಳೆಯುವೆಡೆ ವಾಣಿಜ್ಯ ಬೆಳೆ ಬೆಳೆಯ ಬೇಕಾಗುವುದು. ರಫ್ತು ಪೂರಕವಾದ ವಾಣಿಜ್ಯ ಬೆಳೆ ಬೆಳೆಯಲು ಆದ್ಯತೆ. ಭತ್ತ ಬೆಳೆಯುವ ಬದಲಿಗೆ ಮೀನು, ಗೋಧಿ ಬೆಳೆಯವ ಬದಲಿಗೆ ಟೊಮ್ಯಾಟೋ, ಗದ್ದೆಗಳಲ್ಲಿ ತೆಂಗು ಹೀಗೆ ಬದಲಾವಣೆಗಳಾಗುವುದು ಫಲವತ್ತಾದ ಜಮೀನೆಲ್ಲಾ ಪರಸೇವೆಗೆ ಮೀಸಲು.

ಪ್ರಾಥಮಿಕ ಆರೋಗ್ಯ ಪಾಲನೆ ಕುರಿತಂತೆ ಅಂತರಾಷ್ಟ್ರೀಯ ಸಮಾವೇಶವು ಅಲ್ಮಾಟದಲ್ಲಿ ೧೯೭೮ ಸೆಪ್ಟೆಂಬರ್ ೨೫ರಂದು ಈ ಕೆಳಗಿನ ಘೋಷಣೆ ನೀಡಿ ಎಲ್ಲ ಸರ್ಕಾರಗಳು ತುರ್ತಾಗಿ ಕಾರ್ಯ ಪ್ರವೃತ್ತರಾಗಿ ವಿಶ್ವ ಸಮುದಾಯ ಹಾಗೂ ಎಲ್ಲ ಆರೋಗ್ಯ ಕಾರ್ಯಕರ್ತರು ಜಗತ್ತಿನ ಎಲ್ಲ ಜನರ ಆರೋಗ್ಯ ಉತ್ತಮ ಪಡಿಸಲು ಪ್ರಯತ್ನಿಸಬೇಕೆಂಬ ಕರೆ ನಿಡಿತು.

ಆರೋಗ್ಯವೆಂದರೆ ಪರಿಪೂರ್ಣ ಭೌತಿಕ, ಮಾನಸಿಕ ಮತ್ತು ಸಾಮಾಜಿಕ ಸುಸ್ಥಿತಿಯಾಗಿದೆಯೇ ವಿನಾ ಕೇವಲ ಕಾಯಿದೆ ಮತ್ತಾವುದೋ ವಿಕಲತೆ ಇರುವುದಿಲ್ಲ. ಈ ಆರೋಗ್ಯವು ಮೂಲಭೂತ ಹಕ್ಕು ಆಗಿದ್ದು ಇನ್ನು ಗರಿಷ್ಠ ಮಟ್ಟದಲ್ಲಿ ಸಾಧಿಸುವ ಸಾಮಾಜಿಕ ಗುರಿಗೆ ಜಗತ್ತಿನಾದ್ಯಂತ ಕಾರ್ಯಪ್ರವೃತ್ತರಾಗಲು ಸಾಮಾಜಿಕ ಮತ್ತು ಆರ್ಥಿಕ ವಲಯಗಳೂ ಆರೋಗ್ಯ ವಲಯದೊಂದಿಗೆ ಶ್ರಮಿಸುವುದನ್ನು ಸಮಾವೇಶವು ಪ್ರಬಲವಾಗಿ ಪ್ರತಿಪಾದಿಸುತ್ತದೆ.

ಹೀಗೆ ಆಹಾರ–ಆರೋಗ್ಯ ಪದ್ಧತಿಯಲ್ಲಿ ಹಿಂದಿನ ಪೂರ್ವಿಕರಿಂದ ಇಂದಿನ ಆಧುನಿಕರವರೆಗೆ ಹಲವಾರು ಬದಲಾವಣೆಗಳು ಸಮಯಕ್ಕೆ ತಕ್ಕಂತೆ ಬದಲಾಗುತ್ತಾ ಬರುತ್ತಲಿವೆಯಾದರೂ ಈ ಹಿಂದಿನ ಜನರಿಂದ ಅನುಸರಿಸಿಕೊಂಡು ಬಂದಿರುವ ಆಹಾರ–ಆರೋಗ್ಯ ನಂಬಿಕೆಗಳು ಎಷ್ಟು ಉಪಯುಕ್ತವಾದವುಗಳು ಎಂಬುದನ್ನು ಈ ಕೆಳಗಿನಂತೆ ಇವೆ.

**೧. ಊಟಕ್ಕೆ ಮೊದಲು ಕೈಕಾಲು ತೊಳೆದುಕೊಳ್ಳುವುದು :**

ಊಟಕ್ಕೆ ಮೊದಲು ಕೈ ಕಾಲು ಆರೋಗ್ಯವನ್ನು ಕೀಟಾಣುಗಳಿಂದ ಮುಕ್ತಗೊಳಿಸಿ ಸ್ವಚ್ಚಗೊಳಿಸಿಕೊಂಡು ಊಟಕ್ಕೆ ಸಿದ್ಧಪಡಿಸಿದ ಆಸನದ ಮೇಲೆ ಕುಳಿತುಕೊಳ್ಳುವುದು ರೂಢಿಯಲ್ಲಿದೆ. ಈ ಆಸನದ ಮೇಲೆ ಪದ್ಮಾಸನ ಸ್ಥಿತಿಯಲ್ಲಿ ಕುಳಿತು ಊಟ ಮಾಡುವುದು. ಆರೋಗ್ಯಕ್ಕೆ ಹಿತಕರವು ಹಾಗೂ ಶಿಸ್ತುಬದ್ಧವೂ ಆಗಿದೆ. ಬಹುವಾಗಿ ಬಾಗದಂತೆ ಹಿಂದಿನ ಜನರು ಊಟದ ತಾಟು ಇಟ್ಟುಕೊಳ್ಳಲು ಹಾಗೂ ದೇಹ ಪೂರ್ತಿಯಾಗಿ ಬಾಗಿಸದೆ ನೇರವಾಗಿ ಕುಳಿತು ಊಟ ಮಾಡುತ್ತಿದ್ದರು. ಇದರಿಂದ ಆರೋಗ್ಯ ಸೇವನೆಯು ಹಿತವಾಗಿ ಮತ್ತು ಸರಿಯಾದ ಕ್ರಮವಿತ್ತು. ಈ ನಂಬಿಕೆಯು ಆಹಾರದ ಸೇವನೆಗೆ ಶರೀರವು ಸ್ವಚ್ಚವಾಗಿಟ್ಟುಕೊಳ್ಳಬೇಕೆಂದು ಉದ್ದೇಶ ಹೊಂದಿದೆ.

**೨. ಊಟದ ತಾಟಿನ ಸುತ್ತಲು ನೀರು ಹಾಕುವುದು :**

ಊಟಕ್ಕೆ ಕುಳಿತ ಸ್ಥಳದಲ್ಲಿ ತಾಟಿನೊಳಗೆ ಸುತ್ತಲಿನ ಕ್ರಿಮಿಕೀಟಗಳು ಬಂದು ಸೇರುವ ಸಾಧ್ಯತೆಗಳಿರುತ್ತವೆ. ತಾಟಿನ ಸುತ್ತಲು ನೀರು ಹಾಕಿದಾಗ ಕ್ರಿಮಿಗಳು ನಾಶವಾಗಿ ಆಹರಕ್ಕೆ ಸೇರಿಕೊಳ್ಳವುದಿಲ್ಲ. ಹೀಗೆ ತಾಟಿನ ಸುತ್ತಲೂ ನೀರು ಹಾಕುವ ನಂಬಿಕೆಯು ವೈಜ್ಞಾನಿಕ ಉದ್ದೇಶವುಳ್ಳದ್ದಾಗಿದೆ.

**೩. ಊಟಕ್ಕೆ ಮೊದಲು ನೀರು ಕೊಡುವುದು :**

ಊಟದ ತಾಟಿಡುವ ಮುಂಚೆ ನೀರು ಇಡುವುದರ ಉದ್ದೇಶವೆಂದರೆ, ಊಟದ ನಡುವೆ ಅನ್ನ ಗಂಟಲಲ್ಲಿ ತಡೆ ಹಿಡಿದು ತಾಗಿ ಬಿಕ್ಕಳಿಕೆ ಬರುವುದು ತಕ್ಷಣ ನೀರು ಕುಡಿದಾಗ ಬಿಕ್ಕಳಿಕೆ ಕಡಿಮೆಯಾಗಿ ಯಾವುದೇ ತೊಂದರೆ ಯಾಗುವುದಿಲ್ಲ. ಮತ್ತು ಊಟಕ್ಕೆ ಮುಂಚೆ ನೀರು ಕುಡಿಯುವದರಿಂದ ಅನ್ನನಾಳ ಸ್ವಚಗೊಳ್ಳುವುದು. ಆದರಿಂದ ಊಟಕ್ಕೆ ಮುಂಚೆ ನೀರು ಕುಡಿಯಬೇಕು.

**೪. ಊಟಕ್ಕೆ ಕುಳಿತಾಗ ಹೊರಗಿನಿಂದ ಯಾರಾದರೂ ಬಂದರೆ ಕಾಲುಧೂಳಿಯಾಗುತ್ತದೆ:**

ಊಟಕ್ಕೆ ಕುಳಿತಿರುವಾಗ ಹೊರಗಿನಿಂದ ಬಂದ ವ್ಯಕ್ತಿಗಳ ಕಾಲಿಗೆ ಮಣ್ಣಿನ, ಧೂಳಿನ ಕಣಗಳು ಕಾಲಿಗೆ ಮೆತ್ತಿಕೊಂಡಿರುತ್ತವೆ. ಇದರಲ್ಲಿ ಅನೇಕ ಸೂಕ್ಷ್ಮಾಣು ಜೀವಿಗಳು ಅದರೊಂದಿಗೆ ಸೇರಿಕೊಂಡಿರುತ್ತವೆ. ಕಾಲು ತೊಳೆಯದೆ ಇದ್ದರೆ ಆ ಕ್ರಿಮಿಗಳೆಲ್ಲಾ ಊಟ ಮಾಡುವವರ ಸಮೀಪಕ್ಕೆ ಹೋದಾಗ ಆಹಾರದ ಮೇಲೆ ಬಂದು ಕುಳಿತುಕೊಳ್ಳುತ್ತವೆ ಇವು ಕಣ್ಣಿಗೆ ಕಾಣದಿದ್ದರೂ ದೇಹದೊಳಗೆ ಪ್ರವೇಶಿಸಿ ಹೊಟ್ಟೆ ನೋವಿಗೆ ಕಾರಣವಾಗುತ್ತವೆ. ಆದ್ದರಿಂದ ಈ ನಂಬಿಕೆ ಆರೋಗ್ಯ ರಕ್ಷಿಸುವ ವೈಜ್ಞಾನಿಕ ನಂಬಿಕೆಯೆನಿಸಿದೆ. ಹೊರಗಿನಿಂದ ಬಂದ ತಕ್ಷಣ ಕೈ ಕಾಲು ಮುಖ ತೊಳೆಯುವುದು ಆರೋಗ್ಯಕ್ಕೆ ಒಳ್ಳೆಯದು.

೫. ಸಂಜೆ ಹೊತ್ತು ಊಟ ಮಾಡಬಾರದು :

ಗ್ರಾಮೀಣದ ಜನರು ಕೃಷಿಕರಾಗಿದ್ದು ಸಂಜೆ ಹೊತ್ತಿಗೆ ತಮ್ಮ ಹೊಲದ ಕೆಲಸ ಮುಗಿಸಿಕೊಂಡು ಹುಲ್ಲು, ಕಟ್ಟಿಗೆ, ಮತ್ತಿತರ ವಸ್ತುಗಳನ್ನು ತರುವುದರೊಂದಿಗೆ ಮನೆಗೆ ಬರುತ್ತಿರುತ್ತಾರೆ. ಹಾಗೂ ದನಕರುಗಳು ಧೂಳಿನ ಕಾಲಿನಿಂದ ಮನೆಗೆ ಬರುತ್ತವೆ. ಇವುಗಳಿಂದ ಆ ಹೊತ್ತು ಧೂಳು ಮನೆಯಲ್ಲಿ ಬರುವುದು ಮತ್ತು ಈ ಸಮಯಕ್ಕೆ ದನಕರು ಕಟ್ಟುವುದರಿಂದ ಸೊಳ್ಳೆಗಳು ಹೆಚ್ಚಾಗಿ ಓಡಾಡುವವು ಇದರಿಂದಾಗಿ ಧೂಳಿನ ಕಣಗಳು, ಸೊಳ್ಳೆ, ಇತರ ಕ್ರಿಮಿಗಳು ಆಹಾರಕ್ಕೆ ಸೇರುವವು ಹೀಗೆ ಊಟ ಮಾಡಿದರೆ ಆರೋಗ್ಯದ ಮೇಲಾಗುವ ಹಾನಿಯನ್ನು ತಪ್ಪಿಸುವ ಉದ್ದೇಶದಿಂದ ಜನಪದರು ಸಂಜೆ ಹೊತ್ತಿಗೆ ಊಟ ಮಾಡಬಾರದೆಂಬ ನಂಬಿಕೆ ಜಾರಿಗೊಳಿಸಿರುವರು.

೬. ರಾತ್ರಿವೇಳೆ ಊಟ ಮಾಡದೆ ಮಲಗಬಾರದು :

ಈ ನಂಬಿಕೆ ವೈಜ್ಞಾನಿಕವಾದ ನಿಲುವನ್ನು ಹೊಂದಿದೆ. ಹಗಲಾದರೆ ಊಟ ಮಾಡದಿದ್ದರೂ ಹಸಿವು ಕಂಡು ಊಟ ಮಾಡುವಂತೆ ಶರೀರ ಕ್ರಿಯೆ ಪ್ರಚೋದಿಸುತ್ತದೆ. ಹಾಗಾಗಿ ಏನಾದರೂ ತಿನ್ನುತ್ತಾರೆ. ರಾತ್ರಿ ವೇಳೆ ಊಟಮಾಡದೆ ಮಲಗಿದರೆ ಜಠರ ಖಾಲಿ ಇದ್ದು ಅಲ್ಲಿ ಹಸಿವಿಗೆ ಸಂಬಂಧಿಸಿದ ಕ್ರಿಯೆಗಳು ನಡೆಯುತ್ತವಾದರೂ ನಿದ್ರೆಯ ಮಂಪರಿನಲ್ಲಿ ಇರುವುದರಿಂದ ಊಟಮಾಡಬೇಕೆಂಬ ತೀರ್ಮಾನ ಕೈಗೊಳ್ಳಲು ಅಸಮರ್ಥರಾಗುತ್ತಾರೆ. ಹೀಗೆ ಹಸಿವಿನ ಲಕ್ಷಣಗಳು ಮನಸ್ಸಿನ ಗಮನಕ್ಕೆ ಬರುವುದಿಲ್ಲ. ಜಠರದಲ್ಲಿ ಒಸರುವ ಹೈಡ್ರೋಕ್ಲೋರಿಕ್ ಆಮ್ಲ ಜಠರ ಖಾಲಿ ಇರುವುದರಿಂದ ಜಠರದ ಪೊರೆ ಮೇಲೆ ನೇರ ಸಂಪರ್ಕ ಪಡೆಯುತ್ತದೆ. ಇದರಿಂದ ಜಠರದ ಪೊರೆಯ ಮೇಲಿನ ಹೊದಿಕೆಯ ಜೀವಕೋಶಗಳು ಶಿಥಿಲವಾಗುವ ಸಾಧ್ಯತೆಗಳಿವೆ ಈ ರೀತಿಯ ಹೆಚ್ಚಿನ ಕ್ರಿಯೆಯಿಂದ ಎದೆ ಉರಿ ಕಾಣಬಹುದು. ಇದರಿಂದ ನಿದ್ರೆಗೆ ಭಂಗ ಆಗುತ್ತದೆ. ಗಾಢನಿದ್ರೆ ಬರುವುದಿಲ್ಲ, ಪೂರ್ಣ ಎಚ್ಚರವಾಗದೆ ಇರಬಹುದು. ಈ ಅರೆಬರೆ ನಿದ್ರೆಯಲ್ಲಿ ಹೊರಳಾಟ ಅಷ್ಟಷ್ಟು ಕನಸ್ಸು ಎಚ್ಚೆತ್ತ ಚೇತನವಿಲ್ಲದೆ. ಈ ಮಂಪರಿನಲ್ಲಿ ಅರೆಬರೆ ಚೇತನವಿರುತ್ತಿದ್ದರಿಂದ ತೊಂದರೆ ಹೋಗಲಾಡಿಸಿಕೊಳ್ಳಲು ಸಾಧ್ಯವಾಗದೆ ಈ ಸ್ಥಿತಿ ಹಾಗೆಯೇ ಕೆಲವು ಗಂಟೆಗಳ ಸಮಯ ಮುಂದುವರಿಯುತ್ತದೆ.

೭. ಕತ್ತಲಲ್ಲಿ ಊಟಮಾಡಬಾರದು :

ಕತ್ತಲಲ್ಲಿ ಇರುವೆ, ಸೊಳ್ಳೆ ಚಿಟ್ಟೆ, ಜಿರಳೆ, ಹಲ್ಲಿ ಮುಂತಾದವು ಮನೆಯಲ್ಲಿ ಓಡಾಡುತ್ತಿರುತ್ತವೆ. ದೀಪದ ಬೆಳಕು ಸಹ ಇಲ್ಲದೆ ಕತ್ತಲಲ್ಲಿ ಊಟ ಮಾಡುವಾಗ ತಟ್ಟೆಯಲ್ಲಿ ಬೀಳಬಹುದೆಂಬ ಕಾರಣಕ್ಕಾಗಿ ಇದು ಪ್ರಚಲಿತವಿದೆ. ಇದೇ ರೀತಿ ಊಟಮಾಡುತ್ತಿರುವಾಗ ದೀಪ ಆರಿದರೂ ಊಟ ನಿಲ್ಲಿಸಿ ದೀಪ ಹಚ್ಚಿದ ನಂತರ ನೀರು ಕುಡಿದು ಊಟ ಮಾಡಬೇಕೆಂಬುದೇ ಇಲ್ಲಿನ ಉದ್ದೇಶ. ಹೆಚ್ಚು ಹೊತ್ತು ಬಿಟ್ಟರೆ ರೋಗ ಕ್ರಿಮಿಗಳು ಗಾಳಿಯ ಮೂಲಕ ಹೆಚ್ಚು ಸೇರಬಹುದಾದ್ದರಿಂದ ಬೇಗ ಊಟ ಮುಗಿಸಿಬಿಡಲೆಂದು ಈ ನಂಬಿಕೆ.

೮. ಊಟ ಮಾಡಿದ ಮೇಲೆ ಮೈ ಮುರಿಯಬಾರದು :

ಇದು ಸರಿಯಾದ ನಂಬಿಕೆಯಾಗಿದೆ. ಊಟ ಮಾಡಿ ನಂತರ ಜಠರ ತುಂಬಿಕೊಂಡು ತನ್ನ ಗೋಡೆಗಳ ಅಲೆಗಳ ರೀತಿಯ ಚಲನೆ ಮೂಲಕ ತನ್ನ ಚಟುವಟಿಕೆ ಆರಂಭಿಸುತ್ತದೆ. ಜಠರ ಅರೆದ ಆಹಾರವನ್ನು ನೂಕುತ್ತಿದ್ದಂತೆ ಕರಳು ಕೂಡ ಹಾವಿನ ರೀತಿಯ ತನ್ನ ಚಲನೆಯಲ್ಲಿ ತೊಡಗುತ್ತದೆ. ಈ

ಸಂದರ್ಭದಲ್ಲಿ ಮೈ ಮುರಿಯುವುದರಿಂದ ಹೊಟ್ಟೆಯ ಮಾಂಸಗಳು ಬಿಗಿತಗೊಂಡು ಹೊಟ್ಟೆಯೊಳಗಿನ ಸ್ಥಳವಕಾಶ ಕಡಿಮೆಯಾಗುತ್ತದೆ. ಇದರಿಂದ ಜಠರ ಹಾಗೂ ಕರುಳಿನ ಚಲನಾ ಕ್ರಿಯೆಗೆ ಅಡಚಣೆಯಾಗುತ್ತದೆ.

**೯. ಉಪ್ಪಿನಕಾಯಿ ಕತ್ತಲಲ್ಲಿ ಇಡುವುದು :**

ನಮ್ಮ ಅಡಿಗೆಗಳಲ್ಲಿ ಮಾವು, ನಿಂಬೆ, ನೆಲ್ಲಿಯ ಉಪ್ಪಿನಕಾಯಿ ವರ್ಷಕಾಲ ಉಪಯೋಗಿಸುತ್ತೇವೆ. ಉಪ್ಪಿನ ಕಾಯಿಯಲ್ಲಿ 'ಸಿ' ವಿಟಾಮಿನ್ ಇರುತ್ತದೆ. ಹಾಗೂ ಉಪ್ಪಿನ ಕಾಯಿ ಹಾಕುವಾಗ 'ಆಸಿಡ್' ಆಗಿರುವ ಹುಳಿರಸದಲ್ಲಿ ಶೇಖರವಾಗಿರುತ್ತದೆ. ಲೋಹಗಳು ಸೋಂಕಿದರೆ ವಿಟಾಮಿನ 'ಸಿ' ನಾಶವಾಗುತ್ತದೆ. ಆದ್ದರಿಂದ ಜಾಡಿಗಳಲ್ಲಿ ಶೇಖರಿಸಿಡುತ್ತಾರೆ. ಬೆಳಕು ಹೆಚ್ಚಾಗಿ ಬಿದ್ದರೂ ವಿಟಾಮಿನ್ 'ಸಿ' ನಾಶವಾಗುತ್ತದೆ. ಉಪ್ಪಿನಕಾಯಿ ಜಾಡಿಗಳನ್ನು ಕತ್ತಲೆ ಮೂಲೆಗಳಲ್ಲಿಯೇ ಸಾಮಾನ್ಯವಾಗಿಟ್ಟಿರುತ್ತಾರೆ. ಅಂದರೆ ಅನುಭವದಿಂದ ರೂಢಿಗೆ ಬಂದಿರುವ ಈ ವಿಧಾನ ವೈಜ್ಞಾನಿಕವಾಗಿಯೂ ಶ್ರೇಷ್ಠವಾದದ್ದು ಎಂದಂತಾಯಿತು.

**೧೦. ಉಪ್ಪಿನ ಕಾಯಿಗೆ ದೀಪ ತೋರಿಸುವುದು :**

ರಕ್ಷಣೆಗೆಂದು ಕತ್ತಲಿನಲ್ಲಿಟ್ಟು ಉಪ್ಪಿನಕಾಯಿಯ ಜಾಡನ್ನು ಮೊದಲ ಬಾರಿಗೆ ತೆಗೆದು ನೋಡಲು ದೀಪ ಬೆಳಗಿಸುವ ನಂಬಿಕೆಯಿದೆ. ಮುಚ್ಚಿಟ್ಟ ಉಪ್ಪಿನ ಕಾಯಿ ಒಂದೊಂದು ಸಲ ಕೆಟ್ಟಿರುತ್ತವೆ. ಆದ್ದರಿಂದ ಅವುಗಳು ಹೇಗಿವೆ ಎಂದು ನೋಡಲು ದೀಪ ತೋರಿಸಿ ತೆಗೆಯುವ ನಂಬಿಕೆ ರೂಢಿಯಲ್ಲಿದೆ.

**೧೧. ತುಪ್ಪ ಕಾಸಿದ ಪಾತ್ರೆಯಲ್ಲಿ ಅನ್ನಮಾಡುವುದು :**

ತುಪ್ಪ ಕಾಸಿದ ಕರಕಿನ ಪಾತ್ರೆಯಲ್ಲಿ ಅನ್ನ ಬೇಯಿಸಿ ಊಟ ಮಾಡುವ ಪದ್ಧತಿ ಈ ಹಿಂದಿನ ಜನರಿಂದ ಬಂದಿದ್ದು ವೈಜ್ಞಾನಿಕತೆಯ ಮೆರಗನ್ನು ಹೊಂದಿರುವುದಾಗಿದೆ. ಇದು ನಮ್ಮ ಶರೀರಕ್ಕೆ ಅಗತ್ಯವಾಗಿ ಬೇಕಾದ ಮತ್ತು ಅಪರೂಪಕ್ಕೆ ಸಿಗುವ ಲೈಸಿನ್, ಥ್ರಿಯೊನಿನ್ ಮತ್ತು ಮಿಥಿಯೊನಿನ್ ಅಂಶಗಳು ಇದ್ದು ಅದು ಉತ್ಕೃಷ್ಟ ಆಹಾರವಾಗಿದೆ. ಹೀಗಾಗಿ ಈ ನಂಬಿಕೆಯು ಆರೋಗ್ಯವನ್ನು ಕಾಪಾಡುವ ವೈಜ್ಞಾನಿಕ ಉಪಯುಕ್ತತೆ ಹೊಂದಿದೆ.

**೧೨. ಒಲೆಯನ್ನು ಹಚ್ಚುವಾಗ ಪೂಜೆ ಮಾಡುವುದು :**

ಈ ಹಿಂದಿನ ಪೂರ್ವಿಕರು ಆಹಾರ ಧಾನ್ಯ ಬೆಳೆಯಲು ದೇವರನ್ನು ನಂಬಿದಂತೆ ಆಹಾರವನ್ನು ಬೇಯಿಸುವ ಒಲೆಯನ್ನು ಸಾರಣೆ ಮಾಡಿ ಶುಚಿಗೊಳಿಸಿ ಪೂಜೆ ಮಾಡಿ ಆಹಾರ ಬೇಯಿಸಲು ಆರಂಭಿಸುವರು. ಪೂಜೆ ಮಾಡುವ ನಂಬಿಕೆಯೊಂದಿಗೆ ಶುಚಿಗೊಳಿಸುವುದು ಆರೋಗ್ಯವನ್ನು ಕಾಪಾಡುವಂತಹ ಒಳ್ಳೆಯ ಆಹಾರ ತಯಾರಿಸುವ ಉದ್ದೇಶ ಈ ನಂಬಿಕೆ ಒಳಗೊಂಡಿದೆ. ಪೂಜೆಯೊಂದಿಗೆ ಹೊಟ್ಟೆಗೆ ಆಹಾರವಾದ ಅನ್ನವನ್ನು ಕೊಡವಳು ಅನ್ನಪೂರ್ಣೇಶ್ವರಿದೇವಿ ಎಂದು ಈ ದೇವತೆಯನ್ನು ಅಡುಗೆಯ ಮತ್ತು ಊಟದ ಆರಂಭಕ್ಕೆ ನೆನೆಯುವ ನಂಬಿಕೆಯು ಇದೆ.

**೧೩. ಒಲೆಗೆ ಕಾಲಿನಿಂದ ಒದೆಯಬಾರದು :**

ಒಲೆ ದೇವರಿಗೆ ಸಮಾನವೆಂಬ ನಂಬಿಕೆಯಿದೆ. ಈ ನಂಬಿಕೆ ಬಲವಾಗಲು ಕಾರಣವೆಂದರೆ ಒಲೆಯನ್ನು ಅಗ್ನಿಯ ಪ್ರತಿರೂಪವೆಂದು ಜನರಲ್ಲಿರುವ ಪರಿಭಾವನೆ. ಅಗ್ನಿಗೆ ಪೌರಾಣಿಕವಾಗಿ ಕಲ್ಪನೆ ಇದೆ. ಅಲ್ಲದೆ ಪಂಚಭೂತಗಳಲ್ಲಿ ಒಂದು. ಈ ಎಲ್ಲಾ ಕಾರಣಗಳಿಂದ ಅಗ್ನಿಯನ್ನು ಗೌರವಿಸಲಾಗಿದೆ. ಅಲ್ಲದೆ ಒಲೆಯ

ಮೇಲೆ ಆಹಾರ ಬೇಯಿಸುವ ಪೂಜ್ಯನೀಯ ಸ್ಥಳವೂ ಆಗಿದೆ. ಹಾಗೂ ಸುಡುವ ಗುಣವಿರುವುದರಿಂದ ಒಲೆಗೆ ಮುಟ್ಟುವುದರಿಂದ ಅಪಾಯವಿದೆ. ಇದನ್ನು ಧಾರ್ಮಿಕಾಂಶದಿಂದ ನಿಷೇಧಿಸಿ ವಾಸ್ತವಿಕತೆಯನ್ನು ಅರಿವಿಗೆ ತರುವ ಪ್ರಯತ್ನ ಈ ನಂಬಿಕೆಯಲ್ಲಿದೆ.

**೧೪. ಉಪವಾಸವಿದ್ದಾಗ ಸೈಂಧವ ಲವಣದ ಬಳಕೆ :**

ಸೈಂಧವ ಲವಣ ಎಂಬುದನ್ನು ಪಥ್ಯಕ್ಕೂ ಹಾಗೂ ಉಪವಾಸವಿದ್ದಾಗ ಈ ಲವಣ ಉಪಯೋಗಿಸುವುದು ರೂಢಿಯಲ್ಲಿದೆ. ಇದು ಸೋಡಿಯಂ ಕ್ಲೋರೈಡ ಆದರೆ ಗಣಿಗಳಿಂದ ತೆಗೆದಿದ್ದು, ಸಮುದ್ರ ನೀರಿನಿಂದ ತಯಾರಿಸಿದ್ದಲ್ಲ ಹಾಗಾಗಿ ಮಣ್ಣಿನಲ್ಲಿ ಇರಬಹುದಾದ ಇತರ ಲವಣಾಂಶಗಳು ಸೈಂಧವ ಲವಣದಲ್ಲಿ ಇರುತ್ತವೆ. ಉಪ್ಪು ಬಿಡಬೇಕು ಎಂದು ವೈದ್ಯರು ಪಥ್ಯವಿರಿಸಿದಾಗ ಖಂಡಿತವಾಗಿಯೂ ಸೈಂಧವ ಲವಣ ಉಪಯೋಗಿಸಬಾರದು. ಉಪವಾಸವಿದ್ದಾಗೂ ಈ ಉಪ್ಪು ಬಳಸುವುದರಲ್ಲಿ ಅರ್ಥವಿಲ್ಲ. ಸಿಂಧ ಪ್ರಾಂತದ ಕಡೆಯ ಗಣಿಗಳಿಂದ ಬಂದ ಈ ಲವಣಕ್ಕೆ ಸೈಂಧವ ಲವಣ ಎಂದು ಹೆಸರು.

**೧೫. ಸಿಂಪಿಯಲ್ಲಿ ಮಗುವಿಗೆ ಹಾಲು ಕುಡಿಸುವುದು :**

ತೊಟ್ಲ ಬಟ್ಲ ಕೊಡುವುದರೊಂದಿಗೆ ಗೀರುವ ಸಿಂಪಿಯನ್ನು ಕೊಡುವ ಸಂಪ್ರದಾಯವಿದೆ. ತೊಟ್ಲ-ಬಟ್ಲ ಕೊಡುವ ಕಾರ್ಯಕ್ರಮವೆಂದು ಕರೆಯುವ ಈ ಸಾಮಾಜಿಕ ರೂಢಿ ನಮ್ಮ ಜನಪದರ ಸ್ವಾಸ್ಥ್ಯ-ಸಂಸ್ಕೃತಿಯದ್ಯೋತಕವಾಗಿದೆ. ಆಧುನಿಕ ವೈದ್ಯಶಾಸ್ತ್ರ ಪ್ರಚುರಪಡಿಸುವ ಹಲವು ನಿಯಮಗಳನ್ನು ತಮ್ಮ ಅಪಾರ ಅನುಭವದ ಹಿನ್ನೆಲೆಯಲ್ಲಿ ಲಾಗಯ್ತನಿಂದ ನಮ್ಮ ಹಿರಿಯರು ಸಾಮಾಜಿಕ ರೂಢಿಗಳಾಗಿ ತಂದಿರುವುದನ್ನು ಇಲ್ಲಿ ನಾವು ಗುರುತಿಸಿಕೊಳ್ಳುವುದು ವಿಹಿತ. ಪರಿಶುದ್ಧ ಹಾಲು ಪರಿಶುದ್ಧವಾಗಿಯೇ ಕೂಸಿನ ಉದರ ಸೇರಬೇಕೆನ್ನುವ ನಮ್ಮ ಪ್ರಾಚೀನರು ಮೇಲು ಹಾಲುಣಿಸಲು ಸಿಂಪಿ ಅಥವಾ ಎಳೆಯಂಥ ಲೋಹದ ವಿಶಿಷ್ಠ ಸಾಧನ ಉಪಯೋಗಿಸುತ್ತಿದ್ದರು. ಅವರ ಆರೋಗ್ಯ ಪೂರ್ಣ ಜೀವನಕ್ರಮಕ್ಕೆ ಬಹು ಮುಖ್ಯ ಸಾಕ್ಷಿಯಾಗಿದೆ. ಶಿಶುವಿನ ಆರೋಗ್ಯದ ಬದುಕಿಗೆ ಅವರು ಕಂಡುಕೊಂಡಿರುವ ಸಾಧನ-ಸಲಕರಣೆ ಸಕ್ರಮವಾದ ಚಿಂತನೆ ಪದ್ಧತಿ-ವಿಧಾನಗಳು ಇಂದಿಗೂ ಅನುಕರಣೀಯ.

**೧೬. ಮಗುವಿಗೆ ಎದೆ ಹಾಲು ಕುಡಿಸುವಾಗ ಕಾಲಲ್ಲಿ ಕುಳಿತುಕೊಳ್ಳಬಾರದು :**

ಎಳೆ ಮಗುವಿಗೆ ಮುಖ್ಯವಾಗಿ ಬೇಕಾದದ್ದು ತಾಯಿಯ ಎದೆ ಹಾಲು, ಮೊಲೆ ಹಾಲಿನಲ್ಲಿ ಸಸಾರಜನಕವು ಆಕಳ ಹಾಲಿನ ಸಸಾರಜನಕದ ಅರ್ಧದಷ್ಟಿರುತ್ತದೆ ಎಂಬುದನ್ನು ಗೊತ್ತು ಮಾಡಲಾಗುತ್ತಿದೆ. ಇದರಲ್ಲಿ ಜೀರ್ಣವಾಗುವ ಗುಣವಿರುತ್ತದೆ. ಮಗುವಿನ ಜಠರದಲ್ಲಿ ಆಮ್ಲೀಕರಣ ಹೊಂದುತ್ತದೆ. ಅಲ್ಲಿನ ಮುಖ್ಯವಾದ ಸಸಾರಜನಕ ಲ್ಯಾಕ್ಟಾಲ್ಬುಮಿನ್ (ಮೊಸರು ನೀರಿನ ಸಾರಜನಕ) ಮತ್ತು ಸಣ್ಣ ಪ್ರಮಾಣದಲ್ಲಿ ಕ್ಯಾಸಿನೋಜನ್ ಇದೆ. ಇದು ಮಗುವಿನ ನಿರಂತರ ಪೋಷಣೆಯನ್ನು ಪರಿಸುತ್ತದೆ. ಎರಡು ಅಮೈನೋ ಅಮ್ಲಗಳಾದ ಸಿಸ್ಟಿನ್ ಮತ್ತು ಟ್ಯಾರೀನ್ಗಳೂ ಮಾನವ ಹಾಲಿನಲ್ಲಿ ದೊರೆಯುತ್ತವೆ. ಮೊದಲನೆಯದು ಜೀವಕೋಶಗಳಿಗೆ ಮುಖ್ಯವಾದರೆ, ಎರಡನೆಯದು ಮಿದುಳಿನ ಅಭಿವೃದ್ಧಿಗೆ ಬೇಕಾಗುತ್ತದೆ. ಇಂತಹ ಅಮೂಲ್ಯವಾದ ಆಹಾರ ಮಗುವಿಗೆ ಬೇಕಾದ್ದರಿಂದ ಕಾಲಲ್ಲಿ ಕುಳಿತು ಕುಡಿಸುವುದರಿಂದ ಓಡಾಡುವವರ ಅಥವಾ ಹೊರಗಿನಿಂದ

ಬಂದವರ ಕಾಲಿನ ಧೂಳಿನ ಕಣಗಳು ಹಾಲು ಕುಡಿಯುವಾಗ ಮಗುವಿನ ದೇಹ ಸೇರಬಹುದೆಂಬ ಕಾರಣಕ್ಕಾಗಿ ಕಾಲಲ್ಲಿ ಕುಳಿತುಕೊಳ್ಳಬಾರದೆಂಬ ನಿಷೇಧ ಹಾಗೂ ಆರೋಗ್ಯ ಕಾಪಾಡುವುದು ಈ ನಂಬಿಕೆ ಒಳಗೊಂಡಿದೆ.

**೧೭. ಏನಾದರೂ ತಿನ್ನುವಾಗ ಎದುರು ನೋಡ್ತಾ ಇದ್ದವರಿಗೆ ಕೊಡಬೇಕು :**

ತಿನ್ನುವಾಗ ಎದುರಿಗಿದ್ದವರಿಗೆ ಕೊಟ್ಟು ತಿನ್ನಲಿ ಎಂಬ ಸದುದ್ದೇಶದಿಂದ ಮಾನವೀಯ ಗುಣವನ್ನು ಮನುಷ್ಯನಿಗೆ ಬರಲಿ ಎನ್ನುವ ಸಲುವಾಗಿ ಹಿರಿಯರು ಕೊಡದಿದ್ದರೆ ಕಣ್ಣು ಕುಟರೆ ಇಲ್ಲವೆ ಹೊಟ್ಟೆನೋವು ಬರುತ್ತದೆಂದು ಹೆದರಿಸಿರಬಹುದೇ ವಿನಃ ಮತ್ತೇನೂ ವಿಶೇಷ ಈ ನಂಬಿಕೆಯಲಿಲ್ಲ. ನಾವು ತಿನ್ನುವಾಗ ಒರಟಾಗಿ ತಿಂದಾಗ ಹೊಟ್ಟೆ ನೋವು ಬರಬಹುದು. ಇಲ್ಲವೆ ಕಣ್ಣಿನ ರೆಪ್ಪೆಯಲ್ಲಿನ ಕೂದಲುಗಳ ಬುಡದಲ್ಲಿ ಗ್ರಂಥಿಗಳಿರುತ್ತವೆ. ಈ ಗ್ರಂಥಿಗಳು ಕೆಲವು ವೇಳೆ ಸ್ಟೈಫೈಲೋಕಾಕಸ್ ಜಾತಿಯ ಸೂಕ್ಷ್ಮಕ್ರಿಮಿಗಳಿಂದ ಸೋಂಕಿಗೊಳಗಾಗಿ ಊದಿಕೊಳ್ಳುವುದರಿಂದ ಸಣ್ಣ ಕುಟರೆಯಾಗುತ್ತದೆ. ಹೊರತು ಕೊಡದಿದ್ದರೆ ಈ ರೀತಿಯ ಯಾವುದೇ ನೋವು ಕಾಣಿಸಿಕೊಳ್ಳುವುದಿಲ್ಲ.

**೧೮. ಬ್ಯಾಳಿಗಡಿಗೆಗೆ ನಿಲಿಗಿ ಹತ್ತಬಾರದು :**

ಈ ನಂಬಿಕೆಯಲ್ಲಿ ಸೀರಿಯ ನಿಲಿಗಿ ಬ್ಯಾಳಿ ಗಡಿಗೆಗೆ ಹತ್ತಿದರೆ ಚೆಲ್ಲುವುದು. ಇಲ್ಲವೆ ನೀಲಿಗೆಗೆ ಓಡಾಡುವಾಗ ನೆಲಕ್ಕೆ ತಾಗಿ ಹೊಲಸು ಹತ್ತಿರುವುದು ಅದು ಬ್ಯಾಳಿಯಲ್ಲಿ ಬೀಳುವುದು ಹಾಗೂ ಬಿಸಿಯಾದ ಬ್ಯಾಳಿ ಚೆಲ್ಲಿದರೆ ಕಾಲು ಸುಡುವುದು. ಹೀಗೆ ಸುಡುವುದು ಮತ್ತು ಹೊಲಸು ಬೀಳುವುದನ್ನು ತಪ್ಪಿಸಲು ಈ ನಿಷೇಧ ನಂಬಿಕೆ ಜಾರಿಯಲ್ಲಿರಬೇಕು. ಒಲೆಗೂ ನಿಲಿಗಿ ಹತ್ತಬಾರದೆಂಬ ನಂಬಿಕೆಯು ಬೆಂಕಿಯಿಂದ ದೂರವಿರುವಂತೆ ನಿಷೇಧಿಸುತ್ತದೆ.

**೧೯. ಹಸಿರು ಔಷಧಿ ಹೆಸರು ಹೇಳಬಾರದು :**

ಹಳ್ಳಿಗಳಲ್ಲಿ ಕೆಲವು ಮಂದಿ ಹಲವಾರು ಜಾತಿಯ ಜಾನಪದ ಔಷಧಿಗಳ ಬಗ್ಗೆ ತಿಳಿದಿರುತ್ತಾರೆ. ಎಲ್ಲ ಔಷಧಗಳನ್ನು ಒಪ್ಪಲಾಗದಿದ್ದರೂ ಕೆಲವು ಔಷಧಗಳು ಸಮುದ್ರಲ್ಲಿನ ರತ್ನದಂತೆ ಉತ್ತಮವಾಗಿರುತ್ತವೆ. ಸಾಯುವ ಕೊನೆಯಲ್ಲಿ ಮಾತ್ರ ತನಗೆ ಪ್ರಿಯರಾದವರೊಬ್ಬರಿಗೆ ಹೇಳಬೇಕೆಂದು ನಂಬುತ್ತಾರೆ. ಹೀಗಾಗದಿದ್ದರೆ ಔಷಧಿ ಕಾಯಿಲೆಗೆ ಹಿಡಿಯುವುದಿಲ್ಲವೆಂದು ಭಾವಿಸುತ್ತಾರೆ. ಯಾವುದೇ ಗುಣ ನಾಶವಾಗುವುದಿಲ್ಲ. ಹಿಂದಿನ ಯಾರೋ ಸ್ವಾರ್ಥ ಜನ ಈ ನಂಬಿಕೆ ಹುಟ್ಟಿಸಿರಬಹುದು.

ಇಂತಹ ಔಷಧಗಳನ್ನು ಗುಪ್ತವಾಗಿಡದೆ ಇತರರಿಗೆ ತಿಳಿಸುವ ವಿಶಾಲ ಮನೋಭಾವನೆ ನಮ್ಮ ಹಳ್ಳಿಗರಲ್ಲಿ ಬರಬೇಕು. ತಾವು ಸಾಯುವಾಗ ಜೊತೆಯಲ್ಲಿ ಜ್ಞಾನವನ್ನು ಕೊಂಡೊಯ್ಯುವ ಸಣ್ಣತನ ಇರಬಾರದು. ಔಷಧ ಬಹಿರಂಗವಾದಾಗ ನುರಿತ ತಜ್ಞರು ಈ ಬಗ್ಗೆ ಗಮನಹರಿಸಿ ಔಷಧವನ್ನು ಅಭ್ಯಸಿಸಿ ರೋಗ ಗುಣಪಡಿಸುವ ವಸ್ತುಗಳನ್ನು ಬೇರ್ಪಡಿಸಿ ಆ ಔಷಧಿಯನ್ನು ಪತ್ತೆ ಹಚ್ಚಿ ಜನತೆಗೆ ಸುಲಭವಾಗಿ ಸಿಗುವ ರೀತಿಯಲ್ಲಿ ಗುಳಿಗೆ ಇಂಜೆಕ್ಷನ್ ರೂಪದಲ್ಲಿ ತಯಾರಿಸಲು ಅನುಕೂಲವಾಗಬಹುದು. ಜನಹಿತ ಬಯಸುವ ನಾಟಿ ಪಂಡಿತರು ಮುಂದೆ ಬಂದು ತಿಳಿಸುವ ಜ್ಞಾನ ವೈದ್ಯಕೀಯಕ್ಕೆ ಮಹತ್ತರ ಕೊಡುಗೆಯಾಗಬಹುದು.

**೨೦. ಹೂ ಮೂಸಬಾರದು :**

ಹೂವನ್ನು ಮೂಸಿದರೆ ಅದರಲ್ಲಿರುವ ಕ್ರಿಮಿಗಳು ದೇಹವನ್ನು ಸೇರಿ ಅನಾರೋಗ್ಯಕ್ಕೆ ಕಾರಣವಾಗಬಹುದು. ಇದು ಸರಿಯಾದದ್ದು. ಆದರೆ ಹೂವನ್ನು ಮೂಸಿ ಮೈಲಿಗೆ ಮಾಡಿದರೆ ದೇವರು ಮುನಿಸಿಕೊಳ್ಳುತ್ತಾನೆಂಬ ನಂಬಿಕೆ ಜನಪದರದ್ದಾಗಿದೆ.

**೨೧. ದೀಪ ಬಾಯಲ್ಲಿ ಊದಬಾರದು :**

ಈ ನಂಬಿಕೆ ಎಲ್ಲ ದೃಷ್ಟಿಯಿಂದಲೂ ಸರಿ. ಸಾಮಾನ್ಯವಾಗಿ ಹಳ್ಳಿ ಮನೆಗಳಲ್ಲಿ ಸೀಮೆ ಎಣ್ಣೆ ಇತರ ಎಣ್ಣೆಯ ದೀಪಗಳನ್ನು ಬಳಸುತ್ತಾರೆ. ಈ ದೀಪಗಳನ್ನು ಆರಿಸುವಾಗ ಬಾಯಲ್ಲಿ ಊದಬಾರದೆಂದು ನಂಬುತ್ತಾರೆ. ಇಂತಹ ದೀಪಗಳ ಸುತ್ತಲಿನ ವಾತಾವರಣದಲ್ಲಿ ಆಮ್ಲಜನಕ ತೀರ ಕಡಿಮೆಯಿದ್ದು ಇಂಗಾಲದ ಮೊನಾಕ್ಸೈಡ್, ಡೈ ಆಕ್ಸೈಡಗಳು ಹೆಚ್ಚು ಪ್ರಮಾಣದಲ್ಲಿರುತ್ತವೆ. ದೀಪ ಆರಿಸುವುದಕ್ಕೆ ಬಾಯಿಂದ ಗಾಳಿ ಊದಿದರೆ ಶ್ವಾಸಕೋಶದಿಂದ ಬಾಯಿ ಮೂಲಕ ಗಾಳಿ ಹೊರ ಬರುತ್ತಿದ್ದಂತೆಯೇ ಶ್ವಾಸಕೋಶ ಖಾಲಿಯಾಗಿ ಒಳಗೆ ಒತ್ತಡ ಕಡಿಮೆಯಾಗುತ್ತದೆ. ಮರುಕ್ಷಣದಲ್ಲೇ ಶ್ವಾಸಕೋಶ ಹಿಗ್ಗಿದಾಗ ತಕ್ಷಣಕ್ಕೆ ಅಲ್ಲಿರುವ ಗಾಳಿಯನ್ನೇ ಒಳಕ್ಕೆ ಎಳೆದುಕೊಳ್ಳುತ್ತದೆ. ಆದರೆ ಈ ಗಾಳಿ ಮೊದಲು ತಿಳಿಸಿರುವಂತೆ ಅತ್ಯಲ್ಪ ಆಮ್ಲಜನಕ, ಅತ್ಯಧಿಕ ಇಂಗಾಲದ ಅನಿಲಗಳಿರುವಂತಹದು ಈ ಗಾಳಿ ಸೇವನೆ ಆರೋಗ್ಯಕ್ಕೆ ಹಿತವಿಲ್ಲ. ಇದರ ಬದಲು ಕೈ ಬೀಸುವುದು. ಬಟ್ಟೆ ಕಾಗದ ಬೀಸುವುದು ಈ ರೀತಿಗಳಿಂದ ದೀಪ ಆರಿಸುವುದು ಉತ್ತಮ.

**೨೨. ಜಾವಳ ತೆಗೆಯುವುದು :**

ಸಣ್ಣ ಮಕ್ಕಳಿಗೆ ವರ್ಷವಾಗುವ ವೇಳೆಯಲ್ಲಿ ಮಗುವಿನ ತಂದೆ ತಾಯಿಗಳು ಗಂಡು-ಹೆಣ್ಣು ದೇವರಿಗೆ ಆ ಮಕ್ಕಳ ತಲೆ ಮುಡಿ ಕೊಡಿಸುತ್ತಾರೆ. ಇದನ್ನು ಈ ಭಾಗದಲ್ಲಿ ಜಾವಳ ತೆಗೆಯುವುದು ಎನ್ನುತ್ತಾರೆ. ದೇವರಿಗೆ ಮುಡಿ ಕೊಡುತ್ತಾರೆಂಬುದನ್ನು ಹೊರಗಿಟ್ಟು ನೋಡಿದಾಗ ಇದು ತೀರ ಅನಿವಾರ್ಯ ನಂಬಿಕೆ. ಆ ಕೂಸಿನ ಕೂದಲು ಬಹಳ ತೆಳುವಾಗಿ ಮತ್ತು ತಲೆಯ ಚರ್ಮದ ಕೋಳಿ ತುಪ್ಪಟದಂತೆ ಇರುತ್ತದೆ. ತಲೆ ಬೋಳಿಸಿದ ನಂತರ ಹೆಚ್ಚು ಒರಟಾಗಿ, ಸೊಂಪಾಗಿ ಕೂದಲು ಬೆಳೆಯುತ್ತವೆ. ಹೆಚ್ಚು ಮನಸ್ಥೈರ್ಯವಿರುವ ಜನ ತಮ್ಮ ಸ್ಥಳದಲ್ಲೇ, ಇಲ್ಲವೇ ನೆರೆಯಲ್ಲೇ ಇರುವ ದೇವಸ್ಥಾನಗಳಲ್ಲಿ ಅವರ ನೆಮ್ಮದಿಗಾಗಿ ಮಕ್ಕಳ ಮುಡಿಯನ್ನು ಕೊಡುತ್ತಾರೆ. ಹಾಗೆಂದು ಅದೊಂದೇ ಕಾರಣಕ್ಕಾಗಿ ನೂರಾರು ಮೈಲಿ ದೇವಸ್ಥಾನ ಹುಡುಕಿಕೊಂಡು (ವಿಶೇಷವಾಗಿ ತಿರುಪತಿಗೆ) ಹೋಗುವ ಅಗತ್ಯವಿಲ್ಲ. ದೊಡ್ಡವರ ತಲೆ ಬೀರಸಾಗಿರುವುದರಿಂದ ತಲೆಮುಡಿ ಕೊಡುವುದರಿಂದ ಯಾವ ಅರ್ಥವು ಇಲ್ಲ ಅವರ ಮನಸ್ಸಿನ ನೆಮ್ಮದಿಗಷ್ಟೆ ಕೊಡಬಹುದು.

**೨೩. ಉಗುರಿನಿಂದ ನೀರನ್ನು ಹಾರಿಸಿದರೆ ಉಗುರು ಸುತ್ತು ಆಗುತ್ತದೆ :**

ಈ ನಂಬಿಕೆಯು ಸರಿಯಾದ್ದು ಅಲ್ಲ ನೀರು ಅನಾವಶ್ಯಕವಾಗಿ ಚಿಮುಕಿಸುತ್ತಿರುವವರನ್ನು ಕಂಡಾಗ ಹೆದರಿಸುವ ನಂಬಿಕೆಯಾಗಿದೆ. ಉಗುರು ಸುತ್ತು ಆಗುವುದು ಸ್ಟೆಫೈಲೋಕಾಕಸ್ ಗುಂಪಿಗೆ ಸೇರಿದ ಸೂಕ್ಷ್ಮ ಕ್ರಿಮಿಗಳು ಉಗುರಿನ ತಳದಲ್ಲಿ ಸೇರಿ ಪ್ರಬಲಿಸಿದಾಗ ಉಗುರಿನ ಮತ್ತು ಬೆರಳು ತುದಿಯ ಮಾಂಸದ ನಡುವೆ ಕೀವು ತುಂಬಿಕೊಂಡು ಉಗುರು ಸುತ್ತು ಆಗುತ್ತದೆ. ಹೀಗಾದಾಗ ಉಗುರು ತೀರಾ ಹಳದಿ ಬಣ್ಣದಂತೆ ಕಾಣುತ್ತದೆ. ಉಗುರಿನ ತಳದಲ್ಲಿ ಯಾವುದಾದರೂ ರೀತಿಯಲ್ಲಿ ಸಣ್ಣ ಸೌದೆ ಚೂರು ಚುಚ್ಚಿದಾಗ, ಉಗುರು

ತರಚಿದಾಗ ಮತ್ತು ಇನ್ನಾವುದೇ ರೀತಿಯಲ್ಲಿ ಉಗುರಿನ ತಳದಲ್ಲಿ ಸಣ್ಣ ಗಾಯವಾದಾಗ ಉಗುರು ಸುತ್ತು ಆಗುವ ಸಂಭವ ಹೆಚ್ಚು. ಉಗುರು ಸುತ್ತು ಆದಾಗ ವೈದ್ಯರನ್ನು ತಕ್ಷಣ ಕಂಡಾಗ ಸ್ವಲ್ಪ ಕೊಯ್ದು ಕೀವು ತೆಗೆದಾಗ ನೋವು ಕಡಿಮೆಯಾಗುತ್ತದೆ. ಗಾಯಕ್ಕೆ ಜೀವನಿರೋಧಕ ಮದ್ದು ಹಾಕಿ ಬ್ಯಾಂಡೇಜು ಹಾಕುತ್ತಾರೆ. ಚುಚ್ಚು ಮದ್ದು ಕೊಡುತ್ತಾರೆ. ನಾಲ್ಕೈದು ದಿವಸಗಳಲ್ಲಿ ಗುಣಪಡಿಸಿಕೊಳ್ಳಬಹುದು.

**೨೪. ಮುಂಜಾನೆದ್ದು ಮನೆ ಮುಂದೆ ನೀರು ಹಾಕುವುದು :**

ಮನೆಯ ಹೊರಭಾಗ ರಸ್ತೆಗೆ ಸಮೀಪವಿರುವುದರಿಂದ ಸುತ್ತಮುತ್ತಲಿನ ಧೂಳಿನ ಕಣಗಳು, ಕ್ರಿಮಿಗಳು ಓಡಾಡುವಾಗ ಕಾಲಿನ ಮೂಲಕ ಮನೆಯೆಲ್ಲಾ ಹರಡಿಕೊಳ್ಳುತ್ತವೆ. ಆಹಾರದ ಮೇಲೆ ಕುಳಿತುಕೊಳ್ಳುತ್ತವೆ. ಇದರಿಂದಾಗಿ ಸೇವನೆಯ ಮೂಲಕ ಆರೋಗ್ಯಕ್ಕೆ ಹಾನಿಯನ್ನುಂಟು ಮಾಡುತ್ತವೆ. ಆದ್ದರಿಂದ ನೀರು ಹಾಕಿ ತೊಳೆದಾಗ ಇಂತಹ ಸಣ್ಣ ಸಣ್ಣ ಕ್ರಿಮಿಗಳು ನಾಶವಾಗಿರುವವು. ಮತ್ತು ಮನೆಯ ಮುಂದಿನ ಭಾಗವು ಶುಚಿಯಾಗಿರುವುದು ಹಾಗೂ ಆ ಶುಚಿಯಾದ ಜಾಗದಲ್ಲಿ ರಂಗವಲ್ಲಿಟ್ಟಾಗ ಮನೆಯ ಸೌಂದರ್ಯವೂ ಹೆಚ್ಚಿಸುವುದು.

**೨೫. ಕೆಲಸ ಕಾರ್ಯಗಳಿಗೆ ಬಲಗೈ, ಬಲಗಾಲ ಮುಂದಿಡಬೇಕು :**

ಪೂಜೆಮಾಡಲು, ಊಟಮಾಡಲು, ಕೊಡಲು, ತೆಗೆದುಕೊಳ್ಳಲು, ಗೃಹಪ್ರವೇಶ, ವಧುವರನ ಮನೆಗೆ ಮೊದಲು ಪ್ರವೇಶಿಸುವಾಗ ಹೀಗೆ ವಿವಿಧ ಕೆಲಸ ಕಾರ್ಯಗಳಲ್ಲಿ ಬಲಗೈ ಅಥವಾ ಬಲಗಾಲವೇ ಉಪಯೋಗಿಸಬೇಕೆಂಬ ನಂಬಿಕೆಯಿದೆ. ಈ ನಂಬಿಕೆಯಿರುವುದರಿಂದ ನಮ್ಮ ಸಮಾಜ ಬಲಗೈ ವ್ಯಕ್ತಿಗಳಿಗೆ ಸೇರಿದೆಯೆಂದು ಹೇಳಬಹುದು. ಶೇಕಡಾ ನಾಲ್ಕರಷ್ಟು ಜನ ರೊಡಗೈ (ಎಡಗೈ)ಯವರಿದ್ದಾರೆಂದು ಡಾ.ಪಿ.ಎಸ್.ಶಂಕರ ಎನ್ನುವ ಲೇಖಕರು ದೇಹಾರೋಗ್ಯದ ಹಲವು ಸಮಸ್ಯೆಗಳು ಎಂಬ ತಮ್ಮ ಕೃತಿಯಲ್ಲಿ ತಿಳಿಸುತ್ತಾರೆ. ನಮ್ಮ ದೇಹದ ಎರಡು ಭಾಗಗಳೂ ಒಂದೇ ರೀತಿಯಾಗಿದ್ದು ಒಂದನ್ನೊಂದು ಸಂಪೂರ್ಣವಾಗಿ ಹೋಲುವುದಿಲ್ಲ. ಅವುಗಳ ಶಕ್ತಿಯಲ್ಲಿ ತುಂಬಾ ವ್ಯತ್ಯಾಸವಿದೆ. ನಮ್ಮ ಮಿದುಳು ಎಡ ಮತ್ತು ಬಲ ಎಂದು ಎರಡು ಭಾಗಗಳಲ್ಲಿ ವಿಭಾಗಿಸಲ್ಪಟ್ಟಿದ್ದು. ಅವುಗಳ ಕಾರ್ಯ ಒಂದೇ ತೆರನಾಗಿಲ್ಲ. ಬಲಗೈ ವ್ಯಕ್ತಿಯಲ್ಲಿ ಎಡ ಮೆದುಳು ಪ್ರಭಾವಶಾಲಿ, ಮಿದುಳಿನ ಹೊರ ಹೊಮ್ಮುವ ನರತಂತುಗಳು ಕತ್ತಿನ ಮೇಲ್ಮಟ್ಟದಲ್ಲಿ ಒಂದನ್ನೊಂದು ಹಾಯ್ದು ವಿರುದ್ಧ ದಿಕ್ಕಿಗೆ ಸಾಗುತ್ತವೆ; ಎಂದರೆ ಬಲ ಮಿದುಳು ದೇಹದ ಎಡಭಾಗದ, ಎಡಮಿದುಳು ದೇಹದ ಬಲಭಾಗದ ಕಾರ್ಯಗಳನ್ನು ನಿಯಂತ್ರಿಸುತ್ತವೆ. ಎಡಭಾಗ ಪ್ರಬಲವಾಗಿರುವುದರಿಂದ ದೇಹದ ಬಲಭಾಗ ಶ್ರಮಯುತವಾದ ಮತ್ತು ಸೂಕ್ಷ್ಮವಾದ ಕಾರ್ಯಗಳನ್ನು ಸಮರ್ಪಕವಾಗಿ ಮಾಡಬಲ್ಲದು. ನಮ್ಮ ಓದು ಬರಹ, ಮಾತು ಎಲ್ಲವನ್ನೂ ಎಡಮಿದುಳು ನಿಯಂತ್ರಿಸುತ್ತದೆ. ಅದರಿಂದಾಗಿ ನಾವು ಬಲಗೈ ವ್ಯಕಿಗಳಾಗಿದ್ದೇವೆ. ಆದರೆ ರೊಡ್ಡರಲ್ಲಿ ಅದೆಲ್ಲ ತಿರುಗು ಮುರುಗು, ಅವರಲ್ಲಿ ಬಲ ಮಿದುಳು ಪ್ರಭಾವಶಾಲಿ, ಅದು ಅವರ ದೇಹದ ಎಡಭಾಗವನ್ನು ಹೆಚ್ಚು ಕಾರ್ಯಕ್ಕೆ ಅಳವಡಿಸುತ್ತದೆ.

**೨೬. ಮರದಲ್ಲಿ, ವಳ್ಳಿನಲ್ಲಿ, ಬಾಗೀಲಿನಲ್ಲಿ ಸೀನಬಾರದು :**

ಮರದಲ್ಲಿ, ವಳ್ಳಿನಲ್ಲಿ ಬಾಗಿಲಿನಲ್ಲಿ ಸೀನಿದಾಗ ಸೂಕ್ಷ್ಮಾಣು ಜೀವಿಗಳು ಇಲ್ಲೆಲ್ಲಾ ಬೀಳುವುದರಿಂದ ಈ ನಿಷೇಧ ನಂಬಿಕೆಯಿದೆ. ಸೀನುವುದರ ಬಗ್ಗೆ ಬಗೆ ಬಗೆಯಾದ ನಂಬಿಕೆಗಳು ಎಲ್ಲೆಡೆ ಪ್ರಚಲಿತದಲ್ಲಿವೆ. ಅದು

ನಮ್ಮ ನಿಯಂತ್ರಣಕ್ಕೆ ಒಳಪಡದ ಪರಿವರ್ತನೆ ಕ್ರಿಯೆ. ಮೂಗಿನ ಹೊಳ್ಳೆಯ ಲೋಳ್ಪೊರೆಯಡಿ ಹರಡಿರುವ ನರತಂತುಗಳು ಉತ್ತೇಜನಗೊಂಡಾಗ ಸೀನು ಬರುತ್ತದೆ. ನೆಗಡಿಯಿಂದ ಲೋಳ್ಪರೆ ಉಬ್ಬಿದಾಗ ಹೊರಗಿನಿಂದ ಏನಾದರೂ ವಸ್ತು ಒಳ ಸೇರಿದಾಗ ಇಲ್ಲವೆ ಒಗ್ಗದಿಕೆಯ ಪ್ರತಿಕ್ರಿಯೆಯಾಗಿ ಸೀನು ಬರುತ್ತವೆ. ಗಾಳಿಯನ್ನು ಹೊರಹಾಕಿ ಅದರ ಮೂಲಕ ಕೆರೆತವನ್ನುಂಟು ಮಾಡುವ ವಸ್ತುವನ್ನು ಹೊರಹಾಕಲು ದೇಹವು ತೋರ್ಪಡಿಸುವ ಕ್ರಿಯೆಯೇ ಸೀನು. ಒಂಟಿ ಸೀನು ಸೀನಬಾರದು. ಸೀನಿದಾಗ ಆಡುವ ಮಾತು ನಿಜ ವಿರುತ್ತದೆ ಎನ್ನುವ ನಂಬಿಕೆಗಳೂ ಇವೆ.

**೨೭. ಗರ್ಭಿಣೀಯರು ಗ್ರಹಣದ ವೇಳೆ ಹೊರಗೆ ಬರಬಾರದು :**

ಈ ನಂಬಿಕೆ ಜಗತ್ತಿನ ಎಲ್ಲೆಡೆ ಇದೆ. ಗರ್ಭಿಣೀಯರ ಮೇಲೆ ಸೂರ್ಯ ·ಗ್ರಹಣದಿಂದಾಗಿ ದುಷ್ಪರಿಣಾಮಗಳಾಗುವವು ಮಿಥ್ಯ ಎಂದು ವಿಜ್ಞಾನಿಗಳು ಸಹಿತ ತಿಳಿಸಿಕೊಟ್ಟರು. ಜನರಿಂದ ಆ ನಂಬಿಕೆ ಇನ್ನು ದೂರವಾಗಿಲ್ಲ. ಈ ಸಮಯದಲ್ಲಿ ಗರ್ಭಿಣಿಯು ನಿದ್ದೆ ಮಾಡಬಾರದು. ತರಕಾರಿ ಹೆಚ್ಚಬಾರದು. ಜಲಪಾನ ಭೋಜನೆ ಮಾಡಿದರೆ ಶಾರೀರಕ ಪೀಡೆ ಎಂಬ ಮಿಥ್ಯನಂಬಿಕೆಗಳಿಂದ ಆರೋಗ್ಯದ ಮೇಲೆ ಯಾವ ದುಷ್ಪರಿಣಾಮವೂ ಬೀರುವುದಿಲ್ಲ.

**೨೮. ಕಾಲು ತೊಳೆಯುವಾಗ ಹಿಮ್ಮಡಿ ಪೂರ್ತಿಯಾಗಿ ಒದ್ದೆಯಾಗಬೇಕು : ತೊಳೆಯದಿದ್ದರೆ ಶನಿಯ ಕಾಟವಿರುತ್ತದೆ :**

ಈ ನಂಬಿಕೆ ತಕ್ಷಣ ಹಿಮ್ಮಡಿಯನ್ನು ಸರಿಯಾಗಿ ತೊಳೆದುಕೊಳ್ಳದೆ ಶನಿಯನ್ನು ಹಿಡಿಸಿಕೊಂಡ ಪುರಾಣದ ನಳ ಚಕ್ರವರ್ತಿಯನ್ನು ನೆನಪಿಸುತ್ತದೆ. ಕಾಲಿನ ಹಿಮ್ಮಡಿ ಪೂರ್ತಿಯಾಗಿ ತೊಳೆಯುವುದು ಶುಚಿತ್ವದ ದೃಷ್ಟಿಯಿಂದ ಮುಖ್ಯ ಸಂಗತಿ. ಬುದ್ಧಿಮಾತನ್ನು ಕೇಳದವರನ್ನು ಸರಿಯಾಗಿ ಅನುಸರಿಸುವಂತೆ ಮಾಡಲು ಶನಿಯ ಭಯವನ್ನು ಒಡ್ಡಲಾಗಿದೆ.

**೨೯. 'ಸಿಯ್ಯು' ಆದರೆ ಜಾಜ ಮತ್ತು ಒಳೆಣ್ಣೆ ಕಲಿಸಿ ಹಚ್ಚುವುದು :**

ಚಿಕ್ಕಮಕ್ಕಳ ಬಾಯಿ ಸುತ್ತ ಹುಣ್ಣು ಆಗುವುದನ್ನು 'ಸಿಯ್ಯು' ಎನ್ನುವರು. ಹಾಗೆ ಆದವರು 'ಸಿಯ್ಯಾ' ಎನ್ನುವ ದೇವರ ಹತ್ತಿರ ದೀಪ ಹಚ್ಚಿ ಜಾಜ ಮತ್ತು ಒಳ್ಳೆಣ್ಣಿ ಕಲಿಸಿ ಅಂಟಿನಂತೆಯಾಗಿರುವುದನ್ನು ಕೈಯಿಂದ ಬಳಿದುಕೊಂಡು ಹುಣ್ಣಾಗಿರುವ ಭಾಗಕ್ಕೆ ಹಚ್ಚುತ್ತಾರೆ. ನಂತರ ಹುಣ್ಣಾದ ಮಗವನ್ನು ದೇವರಿಗೆ ನಮಸ್ಕರಿಸಲು ಹೇಳಿ ಪುಟಾಣಿ ಸಕ್ಕರೆ ನೈವೇದ್ಯಮಾಡುತ್ತಾರೆ. ನಂತರ ಅದು ವಾಸಿಯಾಗುತ್ತದೆಂಬ ನಂಬಿಕೆ. ಇದು ಮಕ್ಕಳಿಗೆ ಮಾತ್ರ ಬರುವುದರಿಂದ ಎಲ್ಲ ಮಕ್ಕಳು ಆಹಾರ ಸೇವನೆ ನಂತರ ಬಾಯಿ ಚೆನ್ನಾಗಿ ತೊಳೆದುಕೊಳ್ಳದೆ ಇದ್ದಾಗ ಬಾಯಿಗೆ ಮೆತ್ತಿದ ಆಹಾರದ ಜಿಗುಟಿಗೆ ಕ್ರಿಮಿಗಳ ಮುತ್ತುವಿಕೆಯಿಂದ ಹುಣ್ಣಾಗುವ ಸಾಧ್ಯತೆಗಳಿರುತ್ತವೆ. ಮಗುವಿನ ಸ್ವಚ್ಚತೆ ಕಡೆ ಗಮನವಿಟ್ಟರೆ ಇಂತಹ ಹುಣ್ಣಾಗುವುದು ಆದಷ್ಟು ತಪ್ಪಿಸಬಹುದು.

**೩೦. ಮನೆಯಲ್ಲಿ ಉಗುರು ಕತ್ತರಿಸಬಾರದು :**

ನಡುಮನೆಯಲ್ಲಿ ಇಲ್ಲವೆ ಬಾಗಿಲಲ್ಲಿ ಕುಳಿತು ಉಗುರು ಕತ್ತರಿಸಲು ಕುಳಿತುಕೊಂಡರೆ ಓಡಾಡುವವರಿಗೆ ತೊಂದರೆಯಾಗುವುದು. ಅಲ್ಲದೆ ಉಗುರ ನಂಜು ಇರುವ ಅಂಗ. ಈ ಸ್ಥಳಗಳಲ್ಲಿ ಕತ್ತರಿಸುವಾಗ ಹಾರಿಕೊಂಡು ಮನೆ ತುಂಬಾ ಆಗುತ್ತವೆ. ಕುಳಿತವರಿಗೆ ಚುಚ್ಚುತ್ತವೆ. ಸಣ್ಣ ಮಕ್ಕಳಿದ್ದರೆ ಬಾಯಿಯೊಳಗೆ

ಹಾಕಿಕೊಳ್ಳುವ ಸಾಧ್ಯತೆಗಳಿರುತ್ತವೆ. ಊಟ ಮಾಡುವ ತಾಟಿಗೆ ಸೇರಿದರೆ ಹೊಟ್ಟೆಯೊಳಗೆ ಹೋಗುವುದರಿಂದ ಹೊಟ್ಟೆಗೆ ಚುಚ್ಚುತ್ತದೆ. ಉಗುರಿನಿಂದಾಗುವ ಈ ಎಲ್ಲಾ ಅಪಾಯಗಳಿಂದ ದೂರವಾಗಿ ಆರೋಗ್ಯವನ್ನು ಕಾಪಾಡುವ ಉದ್ದೇಶ ಈ ನಂಬಿಕೆಯಲ್ಲಿದೆ. ಆದರೂ ಮನೆಗೆ ದಾರಿದ್ರ್ಯ ಬರುತ್ತದೆನ್ನುವ ಉಪಾಯದ ಮೂಲಕ ಅಪಾಯವನ್ನು ತಪ್ಪಿಸುವ ಕ್ರಿಯಾತ್ಮಕ ನಂಬಿಕೆ ಇದೆ. ಈ ಬಗೆಯ ಕ್ರಿಯಾತ್ಮಕವುಳ್ಳ ಅನೇಕ ನಂಬಿಕೆಗಳು ನಮ್ಮ ಪರಿಸರದಲ್ಲಿವೆ. ಇವುಗಳು ಸೊಂಕು ಮ್ಮಂತ್ರವಿದ್ಯೆ ಮತ್ತು ಸೌಲಭ್ಯಕರಣಗಳ ಹಿನ್ನಲೆಯಲ್ಲಿ ಮಹತ್ವಪೂರ್ಣವಾಗಿ ಗೋಚರಿಸುತ್ತವೆ.

**೩.೧. ಗಂಡು ಮಗುವಾಗಿದ್ದರೆ ಗರ್ಭಿಣಿ ಕಾಲಲ್ಲಿ ಹಸಿರೆಳೆ ಕಾಣಿಸಿಕೊಳ್ಳುತ್ತವೆ :**

ಈ ನಂಬಿಕೆಯು ಅರ್ಥಮಹತ್ವವುಳ್ಳದ್ದಲ್ಲ. ಈ ರೀತಿಯಾಗಲು ಕಾರಣವೆಂದರೆ ಕಾಲಿನಲ್ಲಿ ಮೇಲ್ಮುಖವಾಗಿ ರಕ್ತ ಹರಿಯುವ ಕ್ರಿಯೆ ಸ್ಥಗಿತಗೊಂಡಾಗ ಇದಕ್ಕೆ ನಿಯೋಜಿತವಾಗಿರುವ ಅಭಿದಮನಿಗಳು ಊದಿಕೊಂಡು ಗಂಟು ಗಂಟಾಗುತ್ತವೆ. ಗರ್ಭಿಣೀಯರಲ್ಲಿ ವಿಶೇಷವಾಗಿ ಹಸಿರೆಳೆ ಕಾಣಿಸಿಕೊಳ್ಳುವವು. ಗರ್ಭಿಣೀಯರಲ್ಲಿ ಕಿಬ್ಬೊಟ್ಟೆಯನ್ನೆಲ್ಲಾ ಪೂರ್ಣವಾಗಿ ಆಕ್ರಮಿಸುವ ಪಿಂಡ ಅಭಿಧಮನಿಗಳನ್ನು ಒತ್ತುವುದರಿಂದ ಎರಡು ಕಾಲುಗಳಲ್ಲೂ ಹಸಿರೆಳೆ ಕಾಣುತ್ತವೆ. ಹೆಚ್ಚು ಹೊತ್ತು ನಿಲ್ಲುವ ಅಭ್ಯಾಸವಿರುವವರಲ್ಲಿ; ಗುದನಾ ಅಂಡಾಶಯ, ಗರ್ಭಕೋಶ, ಮುಂತಾದ ಅಂಗರೋಗ ಹೊಂದಿರುವವರಲ್ಲಿ; ಬಿಗಿಯಾದ ಕಾಚ ಕಟ್ಟುವುದು ಮತ್ತು ಮಂಡಿಯ ಮೇಲೆ ಮಂಡಿಹಾಕುವುದು ಈ ಅಭ್ಯಾಸ ಇರುವವರ ಕಾಲಿನಲ್ಲಿ ಹೆಚ್ಚಾಗಿ ಕಂಡು ಬರುತ್ತವೆ. ಗರ್ಭಿಣಿಯರಲ್ಲಿ ಹೆರಿಗೆ ನಂತರ ಇಲ್ಲವಾಗುತ್ತವೆ. ಹಲವರಲ್ಲಿ ಈ ಹಂಬುಗಳು ತೊಂದರೆಯಿಲ್ಲದಂತೆ ಉಳಿಯುತ್ತವೆ. ಕೆಲವರಲ್ಲಿ ಕಾಲಿನಲ್ಲಿ ನೋವು ಕಾಣಿಸುತ್ತದೆ. ನವೆ ಹುಣ್ಣಾಗುವುದು ಮುಂತಾದ ದುಷ್ಪರಿಣಾಮ ಕೂಡ ಕಾಣಬಹುದು.

**೩.೨. ಹಾವು ಕಚ್ಚಿದಾಗ ಕೋಳಿಯ ಗುದವನ್ನು ಕೊಯ್ದು ಹಚ್ಚುವುದು :**

ಹಾವು ಕಚ್ಚಿದಾಗ ಕೋಳಿಯ ಗುದವನ್ನು ಕೊಯ್ದು ಹಾವು ಕಡಿತದಿಂದಾದ ಗಾಯಕ್ಕೆ ಅದನ್ನು ಒತ್ತಿ ಹಿಡಿಯುತ್ತಾರೆ. ಕೋಳಿಯಲ್ಲಿ ರಕ್ತ ಚಲನೆ ಇರುವುದರಿಂದ ಕೋಳಿಯ ಗುದದ ಬಳಿ ದ್ರವಗ್ರಾಹಕ ಶಕ್ತಿ ಏರ್ಪಟ್ಟು ಗಾಯದ ಬಳಿ ದೊರೆಯಬಹುದಾದ ದ್ರವವನ್ನು ಹೀರಿಕೊಳ್ಳ ತೊಡಗುತ್ತದೆ. ಈ ರೀತಿ ವಿಷಮಿಶ್ರಿತ ರಕ್ತವನ್ನು ಕೋಳಿ ಹೀರಿಕೊಳ್ಳುವುದರಿಂದ ಕೆಲವು ನಿಮಿಷಗಳಲ್ಲಿ ಕೋಳಿ ಸಾಯುತ್ತದೆ. ನಂತರ ಮತ್ತೊಂದು ಕೋಳಿಗಾಯಕ್ಕೆ ಒತ್ತಿ ಹಿಡಿಯುತ್ತಾರೆ. ಕೋಳಿ ಎಷ್ಟು ಹೊತ್ತಾದರೂ ಸಾಯದೆ ಬದುಕಿ ಉಳಿದರೆ ಅಲ್ಲಿಗೆ ಸಾಧ್ಯವಾಗಬಹುದಾದಷ್ಟು ವಿಷವನ್ನು ಹೊರಕ್ಕೆ ತೆಗೆದಂತಾಯಿತೆಂದು ಖಾತ್ರಿ ಮಾಡಿಕೊಂಡು ಈ ಪ್ರಯೋಗ ನಿಲ್ಲಿಸುತ್ತಾರೆ.

**೩.೩. ನಾಯಿ ಕಚ್ಚಿದಾಗ ಮನೆ ಔಷಧಿ ಬಳಸುವುದು :**

ನಾಯಿ ಕಚ್ಚಿದಾಗ ಆ ನಾಯಿ ಸಾಕಿದ ಮನೆಯಿಂದಲೇ ಸುಣ್ಣ ಹಚ್ಚಬೇಕೆಂಬ ನಂಬಿಕೆಯು ಇದೆ. ಅದರೊಂದಿಗೆ ಮಾಡುವ ಇನ್ನಿತರ ವಿಧಾನಗಳೆಂದರೆ ಅತ್ತಿ ಮರದ ಹಾಲು ಹಾಕಿ ತಾಮ್ರದ ನಾಣ್ಯ ಕಟ್ಟುವುದು. ಕುಂಕುಮ, ಸುಣ್ಣ ಮುಂತಾದವುಗಳನ್ನು ಹಚ್ಚುವುದುಂಟು ಇವುಗಳಿಂದ ಏನು ಪ್ರಯೋಜನವಾಗುವುದಿಲ್ಲ.

ಅಪರೂಪಕ್ಕೆ ಕೆಲವು ನಾಯಿಗಳಲ್ಲಿ ಮಾತ್ರ ರೋಗ ವಿರುವುದರಿಂದ ಕಚ್ಚಿಸಿಕೊಂಡವರೆಲ್ಲರೂ 'ನಾಯಿಹುಚ್ಚು' ರೋಗಕ್ಕೆ ತುತ್ತಾಗುವುದಿಲ್ಲ. ರೋಗವಿರುವ ನಾಯಿ ಕಚ್ಚಿ ಹಾಗೂ ಗಾಯ ಸರಿಯಾಗಿ ಆಗದಿದ್ದರೆ ಅಥವಾ ಗಾಯ ಮೇಲೆ ಬಟ್ಟೆ ಇದ್ದರೆ ರೋಗಾಣು ಒಳಸೇರಲು ಸಾಧ್ಯವಿಲ್ಲ. ಹುಚ್ಚಿಲ್ಲದಿರುವ ನಾಯಿ ಜತೆಗೆ ರೋಗಾಣುಗಳು ಗಾಯ ಸೇರಿವೆ ಅಥವಾ ಇಲ್ಲ ಎಂದು ಹೇಳುವುದು ಅಸಾಧ್ಯವಾದ್ದರಿಂದ ನಾಯಿ ಕಡಿತಕ್ಕೆ ಒಳಗಾದ ಎಲ್ಲರಿಗೂ 'ನಾಯಿಹುಚ್ಚು' ರೋಗದ ಲಸಿಕೆ ಹಾಕಿಸಬೇಕು. ೧೦-೧೨ ದಿವಸಗಳ ಕಾಲ ರೋಗ ಪ್ರತಿರೋಧಕ ಲಸಿಕೆಯನ್ನು ಚುಚ್ಚು ಮದ್ದಿನ ಮೂಲಕ ಮಾಡುವುದರಿಂದ ವ್ಯಕ್ತಿಯನ್ನು ರೋಗದಿಂದ ರಕ್ಷಿಸುತ್ತದೆ.[೮೩] ಕಚ್ಚಿದ ತಕ್ಷಣ ಸಾಬೂನಿನಿಂದ ಗಾಯ ಚೆನ್ನಾಗಿ ತೊಳೆಯಬೇಕು.

**೩೪. ಬಾಚಣಿಗೆ ಬಾಯಲ್ಲಿಟ್ಟರೆ ಬಾಯಿ ಬಸಲೆ ಬರುತ್ತದೆ :**

ಈ ನಂಬಿಕೆಯು ಹಾಸ್ಯಸ್ಪದವಾದರೂ ಬಾಚಣಿಗೆ ಬಾಯಿಲ್ಲಿಟ್ಟುಕೊಳ್ಳುವುದು ಸರಿಯಾದ ಅಭ್ಯಾಸವಲ್ಲ. ಬಸಳೆ ಸೊಪ್ಪು ಶರೀರಕ್ಕೆ ಅತ್ಯಲ್ಪ ಪ್ರಮಾಣದಲ್ಲಿ .ಅತ್ಯವಶ್ಯಕವಾಗಿ ಸದಾಬೇಕಾಗಿರುವ ವಸ್ತು. 'ಬಿ' ಜೀವಸತ್ವದ ಗುಂಪಿನ ಉಪಜೀವಸತ್ವವಾದ ರೈಬೋಫ್ಲೇವಿನ್ ಎಂಬ ವಸ್ತುವಿನ ಅಭಾವ ಶರೀರದಲ್ಲಿ ಆದಾಗ ಇದು ಬರುತ್ತದೆ. 'ಬಿ' ಜೀವಸತ್ವ ಗುಳಿಗೆ ನುಂಗಿದರೆ ಎರಡು ದಿವಸಗಳಲ್ಲಿ ಕಡಿಮೆಯಾಗುತ್ತದೆ. ಬಸಳೆ ಸೊಪ್ಪು ಊಟಕ್ಕೆ ಬಳಸುತ್ತಾರೆ. ಇದರಲ್ಲಿ 'ಬಿ' ಜೀವಸತ್ವ ಹೇರಳವಾಗಿದ್ದು ರೈಬೋಫ್ಲೇವಿನ್ ಶರೀರಕ್ಕೆ ದೊರೆಯುತ್ತದೆ.

**೩೫. ಸೂರ್ಯನನ್ನು ನಮಸ್ಕರಿಸುವುದು :**

ಸೂರ್ಯನನ್ನು ನಮಸ್ಕರಿಸುವುದು ಧಾರ್ಮಿಕ ನಂಬಿಕೆಯಾದರು ಇದರಲ್ಲಿ ಆರೋಗ್ಯವನ್ನು ಕಾಪಾಡುವ ಗುಣವಿದೆ. ಚರ್ಮದಲ್ಲಿ ಸೇರಬಹುದಾದ ಹಲವಾರು ರೀತಿಯ ರೋಗ ಕ್ರಿಮಿಗಳು ಸೂರ್ಯ ಕಿರಣಗಳಲ್ಲಿನ ಅಲ್ಟ್ರಾವಯೋಲೆಟ್ ಕಿರಣಗಳ ಶಕ್ತಿಯಿಂದ ಸಾಯುತ್ತವೆ. ವಿಶೇಷವಾಗಿ ಕ್ಷಯರೋಗಾಣುಗಳು ಬಹುಬೇಗ ಸಾಯುತ್ತವೆ. ಚರ್ಮದ ಬಣ್ಣವನ್ನು ನಿರ್ಧರಿಸುವ ಮೆಲಾನಿನ್ ಎಂಬ ಕಪ್ಪು ವಸ್ತುವಿನ ಉತ್ಪತ್ತಿಯಲ್ಲಿ ಸೂರ್ಯಕಿರಣಗಳು ಸಹಕರಿಸುತ್ತವೆ. ಸೂರ್ಯನ ಕಿರಣಗಳು ಚರ್ಮದ ಮೇಲೆ ಬೀಳಲು ಸಾಧ್ಯವಾಗದೆ ಹೋದಾಗ ಮೆಲನಿನ್ ಉತ್ಪತ್ತಿ ಸ್ಥಗಿತಗೊಳ್ಳುವುದರಿಂದ ಮೈ ಬಿಳಚಿಕೊಳ್ಳುತ್ತದೆ. ಆದ್ದರಿಂದಲೆ ನೆರಳಿನ ವೃತ್ತಿ ಅವಲಂಬಿಸುವ ಜನ ಬೆಳ್ಳಗಿರುತ್ತಾರೆ. ಶರೀರದ ಮೂಳೆಗಳು ಶಕ್ತಿಯುತವಾಗಿ ಬೆಳೆಯಲು 'ಡಿ' ಜೀವಸತ್ವ ಪೂರೈಕೆ ಅಗತ್ಯ.

**೩೬. ಬೆಳಗಿನ ಜಾವದ ಕನಸು ನೆನಪು ಉಳಿಯುತ್ತದೆ :**

ಈ ನಂಬಿಕೆಗೆ ಕಾರಣ ವ್ಯಕ್ತಿಗೆ ಆ ಅವಧಿಯಲ್ಲಿ ಎಚ್ಚರವಾಗುವುದು. ನಿದ್ರಾ ತೊಂದರೆಗೆ ಈಡಾದ ವ್ಯಕ್ತಿ ರಾತ್ರಿಯಲ್ಲಿ ಹಲವು ಬಾರಿ ಎಚ್ಚರಗೊಳ್ಳುವುದರಿಂದ, ಆತನಿಗೆ ಪ್ರತಿ ಆರ್.ಇ.ಎಂ. ನಿದ್ರೆಯ ಅವಧಿಯ ಕನಸಗಳು ನೆನಪಿನಲ್ಲಿ ಉಳಿಯುತ್ತವೆ.[೮೪] ಆದರಿಂದ ಹೀಗೆ ನಿದ್ರಾ ತೊಂದರೆ ಇರುವ ವ್ಯಕ್ತಿ ತನಗೆ ವಿಪರೀತ ಕನಸು ಬೀಳುತ್ತವೆ. ಅದರಿಂದ ತನ್ನ ನಿದ್ರೆ ಹಾಳಾಗಿದೆ ಎಂದು ದೂರುತ್ತಾರೆ.

೮೩(ಅಡಿ ಟಿಪ್ಪಣಿ :೮೩: ವೈದ್ಯಕೀಯ ನಂಬಿಕೆಗಳ ವಿಶ್ಲೇಷಣೆ ಲೇಖಕರು : ರಾಮಲಿಂಗಯ್ಯ ಉಪ್ಪಿನಕೆರೆ ಪುಟ ಸಂಖ್ಯೆ ೩೭)
೮೪(ಅಡಿಟಿಪ್ಪಣಿ :೮೪: ನಿದ್ರೆ ಮತ್ತು ಕನಸುಗಳು ಲೆ:ಸಿ.ಆರ್.ಚಂದ್ರಶೇಖರ ಪುಟ ಸಂಖ್ಯೆ ೨೩)

**೩೭. ಕನಸ್ಸಿನಲ್ಲಿ ಸತ್ತರೆ ಸಾವು ದೂರಾಗುತ್ತದೆ :**

ಸಾವಿನ ಮುನ್ಸೂಚನೆಯಾಗಿ ಕನಸ್ಸಿನಲ್ಲಿ ಹಣ, ನೀರು ಇಂತಹ ವಸ್ತುಗಳು ಬರುತ್ತವೆ. ಹಾಗೂ ಕನಸ್ಸಿನಲ್ಲಿ ಸತ್ತ ವ್ಯಕ್ತಿಯ ಸಾವು ದೂರಾಗುತ್ತದೆನ್ನುವ ನಂಬಿಕೆಗಳಿವೆ. ಮನೋವಿಜ್ಞಾನಿಯಾದ ಫ್ರಾಯ್ಡ್ ಪ್ರಕಾರ ಕನಸು ಭವಿಷ್ಯ ಸೂಚಕವಲ್ಲ. ಸಿ.ಜಿ.ಯಂಗ್ ಪ್ರಕಾರ, ವ್ಯಕ್ತಿ ನೇರವಾಗಿ ಅಥವಾ ಮನದಾಳದಲ್ಲಿ ಏನಾಗಬಹುದೆಂದು ಆಲೋಚಿಸುತ್ತಾನೋ, ಆಸೆಪಡುತ್ತಾನೋ, ಅದು ಕನಸಿನಲ್ಲಿ ಬಿಂಬಿತವಾಗುತ್ತದೆ. ಅಂತೆಯೇ ಅದು ಜರುಗಿ ಬಿಟ್ಟರೆ, ಕನಸು ಭವಿಷ್ಯ ಸೂಚಕದಂತೆ ಭಾಸವಾಗುತ್ತದೆ. ಅಷ್ಟೇ ಎನ್ನುತ್ತಾರೆ. ಆದರೆ ಈ ಸರಳ ವಿವರಣೆಯನ್ನು ಮೀರಿ ವ್ಯಕ್ತಿಯ ಅನುಭವಕ್ಕೆ ಅತೀತವಾದ ಮುಂದೆ ನಡೆಯಲಿರುವ ಘಟನೆಯ ವಿವರಣೆಗಳನ್ನು ಕನಸ್ಸಿನಲ್ಲಿ ಕಂಡಿದ್ದನ್ನು ಅಧಿಕೃತ ದಾಖಲು ಮಾಡಲಾಗಿದೆ. ನೂರಾರು ಮೈಲುಗಳ ದೂರದಲ್ಲಿ ನಡೆದ ರೈಲು ಅಪಘಾತವನ್ನು ಅದು ಜರುಗುವ ಮೂರು ದಿನಗಳ ಮುಂಚೆಯೇ ಕನಸ್ಸಿನಲ್ಲಿ ಕಂಡ ವ್ಯಕ್ತಿ ಇದ್ದಾರೆ. ಅಪಘಾತದ ಚಿಕ್ಕ ಚಿಕ್ಕ ವಿವರಗಳೂ ಕನಸ್ಸಿನಲ್ಲಿ ಮೂಡಿವೆ. ತನಗೆ ಸಂಬಂಧಿಸಿದ ವ್ಯಕ್ತಿಯ ಸಾವಿನ ಮುನ್ಸೂಚನೆ ತನಗೆ ದೊರಕಿದ್ದು ಕನಸ್ಸಿನಲ್ಲಿ ಎಂಥು ವರದಿ ಮಾಡುವರು ಇದ್ದಾರೆ. ಕನಸ್ಸುಗಳಲ್ಲಿ ಒಳ್ಳೆಯವು, ಕೆಟ್ಟವು ಎಂದೇನಿಲ್ಲ. ಅವು ಭವಿಷ್ಯ ಸೂಚಕ ಎನ್ನಲು ಆಧಾರಗಳು ಸಾಲುವುದಿಲ್ಲ. ಕೆಟ್ಟ ಕನಸುಗಳು ಬರಲಿರುವ ಅಪಾಯದ ಸೂಚನೆ ಎಂದು ಚಿಂತಿಸಬಾರದು ಭಯಪಡಬಾರದು.

**೨೮. ಸಂಜೆವೇಳೆ ಮಲಗಬಾರದು :**

ಸಂಜೆ ವೇಳೆ ಮಲಗುವ ದುರಭ್ಯಾಸ ಬೆಳೆಯದಿರಲೆಂದೇ ಈ ನಂಬಿಕೆಯ ಉದ್ದೇಶ. ಮಲಗಿದರೆ ದರಿದ್ರ ಎಂದು ಹೇಳುತ್ತಾರೆ. ಸಂಜೆ ವೇಳೆ ಹಿತವಾದ ಗಾಳಿಯ ವಾತಾವರಣವಿರುತ್ತದೆ. ಅಡ್ಡಾಡಿದರೆ ಮೈ, ಮನಸ್ಸಿಗೆ ಹಿತವಾಗುತ್ತದೆ. ಇಂತಹ ವೇಳೆಯಲ್ಲಿ ನಿದ್ರಿಸಿದರೆ ಆ ಕಾಲ ಕಳೆದು ಹೋಗುತ್ತದೆ. ಇನ್ನೂ ರಾತ್ರಿ ಊಟದ ಹೊತ್ತಿಗೆ ನಿದ್ರೆ ಕಳೆದಿರುವುದಿಲ್ಲ. ಯಾರಾದರೂ ಎಬ್ಬಿಸಿ ಊಟಮಾಡಲು ಹೇಳಿದರೂ ಮಂಪರಿದ್ದು ಸರಿಯಾಗಿ ಊಟ ಮಾಡುವುದಿಲ್ಲ. ಮತ್ತೆ ನಿದ್ರೆ ಹೋದರೆ ಬ್ಹಹಳ ಬೇಗ ಎಚ್ಚರವಾಗಿ ಬಿಡುತ್ತದೆ. ಮತ್ತೆ ನಿದ್ರೆ ಬರುವುದಿಲ್ಲ. ಹಾಸಿಗೆಯಲ್ಲಿ ಅನಿವಾರ್ಯವಾಗಿ ಹೊರಳಾಡಬೇಕಾಗುತ್ತದೆ. ಹೀಗೆ ಸಂಜೆಯ ಸಮಯದಲ್ಲಿ ಉಲ್ಲಾಸದಿಂದ ಇರಬಹುದಾಗಿದ್ದ ಕಾಲ ಕಳೆದುಕೊಂಡು ಏಕಾಂತದ ಕಾಲ ಕಳೆಯುವ ಅಭ್ಯಾಸ ಬೆಳೆಯದಿರಲೆಂದು ಹಿರಿಯರು ಈ ನಂಬಿಕೆ ರೂಢಿಯಲ್ಲಿ ತಂದಿರಬೇಕು.

ಇಂದಿನ ಆಧುನಿಕ ಕಾಲವು ಹಿಂದಿನ ಆರೋಗ್ಯ ನಿಯಮ ನಂಬಿಕೆಗಳ ಆಚರಣೆಗೆ ಯಾವ ರೀತಿಯಲ್ಲಿ ಕೈ ಚಾಚುತ್ತಿದೆ ಎನ್ನುವುದು ತಿಳಿದುಕೊಳ್ಳಬೇಕಾಗಿದೆ.

ಆಹಾರದ ಕಟ್ಟುನಿಟ್ಟಾದ ಶಿಸ್ತು ಹಿಂದಿನ ತಲೆಮಾರಿನ ಮಂದಿಯ ಬಾಯಿಯಲ್ಲಿ ಪಥ್ಯ ಎನಿಸಿತ್ತು. ಅಂತಹ ಪಥ್ಯ ಮಾಡಿರಿ. ಹೃದ್ರೋಗ ಹಾಗೂ ರಕ್ತದ ಏರೊತ್ತಡದಿಂದ ದೂರವಿರಿ ಎನ್ನುತ್ತದೆ. ಅಮೇರಿಕದ ಹೃದ್ರೋಗ ಸಂಘ ಪ್ರಕಟಿಸಿದ ಈ ವರ್ಷದ ಗ್ರಂಥಪಾಠ. ಜನಸಾಮಾನ್ಯರ ಆಡುಮಾತಿನಲ್ಲಿ ಸಕ್ಕರೆ ಕಾಯಿಲೆ, ಉಪ್ಪುಕಾಯಿಲೆ ಎನಿಸಿಕೊಳ್ಳುವ ಮಧುಮೇಹ ಮತ್ತು ಏರಿದ ರಕ್ತದೊತ್ತಡ ಇಂದು ಮಹಾನಗರ, ನಗರವಾಸಿಗಳನ್ನಷ್ಟೇ ಅಲ್ಲ. ಗ್ರಾಮೀಣ ಜನತೆಯ ನೆಮ್ಮದಿಯನ್ನೂ ಕೆಡಿಸುತ್ತದೆ. ಎಲ್ಲರ ಮನೆಯ ಕದ ತಟ್ಟುತ್ತದೆ. ಪರಿಣಾಮ ಜಗತ್ತಿನ ವೈದ್ಯರು ವಿಜ್ಞಾನಿಗಳು ಇಂದು ಹೊಸ ಹೊಸ ಸವಾಲು ಎದುರಿಸುತ್ತಿದ್ದಾರೆ.

ವಾಸ್ತವವಾಗಿ ಮಧುಮೇಹ, ಗುಂಡಿಗೆ ರೋಗ, ಏರಿದ ರಕ್ತದೊತ್ತಡಗಳಲೆಲ್ಲಾ ಮುದಿತನದ ಚಿಹ್ನೆಗಳು. ಆದರೆ ಈಗ ಮೂವತ್ತೈದು ದಾಟಿದವರನ್ನು ಈ ರೋಗಗಳು ಕಾಡತೊಡಗಿವೆ. ಹಾಗಾದರೆ ಇಂದು ನಾವು ಬಹುಬೇಗ ಮುದಿತನ ಅಪ್ಪಿಕೊಳ್ಳುತ್ತಿದ್ದೇವೆ. ಹೀಗೆ ದೀಢೀರ ಬಂದೆರಗುವ ರೋಗಕ್ಕೆ ನಮ್ಮ ಒತ್ತಡದ ಜೀವನ ಮತ್ತು ಜಿಹ್ವಾ ಚಾಪಲ್ಯವೇ ಕಾರಣ. ಇದಕ್ಕೆ ಪರಿಹಾರ ದೊರಕಿಸಕೊಳ್ಳುವುದು ಅಗತ್ಯವಾಗಿದೆ.

ವೇದ, ಉಪನಿಷತ್ ಕಾಲದಲ್ಲಿ ಋಷಿಗಳು ಕಂದಮೂಲ, ಫಲಹಾರ ಸೇವಿಸುತ್ತಿದ್ದರು ಎಂದು ಓದಿದ್ದೇವೆ. ಪ್ಲಿನಿ ಎಂಬ ಐರೋಪ್ಯ ಇತಿಹಾಸಕಾರ "ಭಾರತದ ನಗ್ನ ಸನ್ಯಾಸಿಗಳು ಹಲಸು ತಿಂದು ಉಪವಾಸವಿರುತ್ತಿದ್ದರು" ಎಂದು ಬರೆದಿದ್ದಾನೆ. ಇಂದಿಗೂ ಜೈನ ಮುನಿಗಳು ಫಲರಸ, ಜಲಪಾನದಿಂದ ತಿಂಗಳುಗಟ್ಟಲೆ ಉಪವಾಸ ವೃತ್ತ ಕೈಗೊಳ್ಳುತ್ತಾರೆ. ನಿರೋಗಿಗಳಾಗಿ ದೀರ್ಘ ಜೀವನ ನಡೆಸುತ್ತಾರೆ.

ಅಮೇರಿಕಾದ ಹೃದ್ರೋಗ ಸಂಘದ ಪ್ರಕಾರ ಹಣ್ಣು ಸೇವನೆಯಿಂದ ಏರಿದ ರಕ್ತದೊತ್ತಡ ಹಾಗೂ ಅದರ ಫಲಶ್ರುತಿಯಾಗಬಲ್ಲ ಪಾರ್ಶ್ವವಾಯು ತಡೆಯಲು ಸಾಧ್ಯ. ಗುಂಡಿಗೆಯ ಇತರ ರೋಗ ತಡೆಗೆ ಸಹ ಇದು ಸುಲಭ ಉಪಾಯವಾಗಿದೆ.

ಒಟ್ಟಿನಲ್ಲಿ ಆಹಾರ-ಆರೋಗ್ಯದ ಸಮತತ್ವ ಪರಂಪರೆ ಏನಿದೆ ಅದನ್ನು ಮುಂದುವರಿಸಿಕೊಂಡು ಹೋಗುವುದೇ ಮಾನವನ ಜಾಣ್ಮೆಯಾಗಿದೆ. ಕೃತಕ ಆಹಾರಗಳಿಗಿಂತಲೂ ನಿಸರ್ಗ ಆಧಾರಿತ ಆಹಾರ ಹಣ್ಣು ಹಂಫಲದ ಸಾರಸತ್ವ ನಮ್ಮಲ್ಲಿ ತುಂಬಿಕೊಳ್ಳಬೇಕಾಗಿದೆ.

## ಅಧ್ಯಾಯ – ೭

## ಸಂಕೀರ್ಣ

ನಾವು ಬದುಕುತ್ತಿರುವ ಪರಿಸರದಲ್ಲಿ ನಂಬಿಕೆಗಳು ಬಹಳಷ್ಟಿವೆ. ಅರಿವಿದ್ದು ಅರಿವಿಲ್ಲದೆಯೂ ಅವುಗಳ ನಿರ್ದೇಶನಕ್ಕೆ ಒಳಗಾಗಿರುತ್ತೇವೆ. ಅವು ಬದುಕುವುದನ್ನು ನಿರ್ದೇಶಿಸುವಷ್ಟು ಪ್ರಭಾವಶಾಲಿಗಳಾಗಿವೆ. ಈ ನಂಬಿಕೆಗಳಿಗೆ ಹಿನ್ನಲೆಯಾಗಿರುವ ಚಾರಿತ್ರಿಕ ಸಾಮಾಜಿಕ ಸಂದರ್ಭಗಳಾವುವು ? ನಂಬಿಕೆಗಳಲ್ಲಿ ವ್ಯಕ್ತಗೊಳ್ಳುವ ಜನಪದರ ಆಶಯ ಸ್ವರೂಪಗಳೇನು ? ಎನ್ನುವ ಪ್ರಶ್ನೆಗಳಿಗೆ ಅನೇಕ ಕುತೂಹಲಕರವಾದ ಉತ್ತರಗಳು ನಮ್ಮ ಮುಂದೆ ತೆರೆದುಕೊಳ್ಳುತ್ತವೆ.

ನಂಬಿಕೆಗಳು ಧಾರ್ಮಿಕಾಂಶಗಳಿಂದ ಆವೃತ್ತಗೊಂಡು ಬಲಿಷ್ಠವಾಗಿರುವುದೇ ಅವುಗಳ ಸಾರ್ವತ್ರಿಕ ವ್ಯಾಪಕತೆಗೆ ಕಾರಣವಾಗಿದೆ. ಧಾರ್ಮಿಕತೆಯನ್ನುವುದು ಎರಡು ಬಹು ಮುಖ್ಯ ತತ್ವಗುಣವನ್ನು ಬಿತ್ತರಿಸುತ್ತವೆ. ಒಂದು ಸಕಾಲಿಕ ಇನ್ನೊಂದು ಸಾರ್ವಕಾಲಿಕ. ಸಕಾಲಿಕ ಸತ್ಯಗಳೆಂದರೆ ನಿರ್ದಿಷ್ಟ ಸಂದರ್ಭಗಳಿಗೆ ಮಾತ್ರ ಸರಿ ಹೊಂದಿಕೊಂಡವುಗಳು. ಇವು ಅಸ್ಥಿರವಾದವುಗಳು ಇವು ಕಾಲದೊಂದಿಗೆ ಇಲ್ಲವಾಗುತ್ತವೆ. ಸಾರ್ವಕಾಲಿಕ ಸತ್ಯಗಳೆಂದರೆ ತ್ರಿಕಾಲಗಳವರೆಗೂ ಅನ್ವಯವಾಗಿರುತ್ತವೆ. ಒಮ್ಮೆ ಒಂದು ತತ್ವ ನಿರೂಪಿಸಲ್ಪಟ್ಟರೇ ಅದನ್ನು ಕ್ರಮೇಣ ಮಾನವನು ತಾನು ಅರ್ಥೈಸಿಕೊಂಡ ರೀತಿಯಲ್ಲಿ ನಂಬುತ್ತಾನೆ. ಒಂದು ತತ್ವ ನಂಬಿಕೆಗಳಿಗೆ ಬಂದ ಬಳಿಕ ಕೈ ಬಿಡುವುದು ಸುಲಭ ಸಾಧ್ಯವಲ್ಲ. ಈ ಅರ್ಥದಲ್ಲಿ ನಂಬಿಕೆಗಳು ಆಳವಾಗಿ ಬೇರು ಬಿಟ್ಟಿರುತ್ತವೆ. ಇಷ್ಟಾನಿಷ್ಟಗಳಿಂದಲೂ ನಂಬಿಕೆಗಳು ರಕ್ತಗತವಾಗಿ ಸಾಂಪ್ರದಾಯಿಕವಾಗಿರುತ್ತವೆ. ಈ ನಂಬಿಕೆಗಳೇ ಕ್ರಿಯಾರೂಪಕ್ಕೆ ಬಂದಾಗ ಆಚರಣೆಗಳಾಗುತ್ತವೆ. ನಂಬಿಕೆ ಮತ್ತು ಆಚರಣೆಗಳು ಬದುಕಿನ ಅನಿವಾರ್ಯ ಅಂಗಗಳಾಗುತ್ತವೆ.

ನಂಬಿಕೆಗಳು ಜನಪದರ ಜೀವನ ವಿನ್ಯಾಸವನ್ನು ನಿರ್ಧರಿಸುವ ವಾರ್ಷಿಕಾವರ್ತನ ಮತ್ತು ಜೀವನಾವರ್ತವನ್ನು ಅನುಸರಿಸಿಕೊಂಡಿರುತ್ತವೆ. ಆರ್ಥಿಕ, ಸಾಮಾಜಿಕ, ಪಯಣ, ಬೇಸಾಯ, ಕಾಲಮಾನ, ಹುಟ್ಟು, ಮದುವೆ, ಸಾವು, ಪ್ರಾಣಿ, ಸಸ್ಯ, ಮಾಟ ಸೋಂಕು ಹೀಗೆ ಜೀವನದಲ್ಲಿ ನಂಬಿಕೆಗಳು ಸಮಗ್ರತೆಯಲ್ಲಿ ವಿಸ್ತರಿಸಿಕೊಂಡಿರುತ್ತವೆ. ಪ್ರಕೃತಿ, ಮಾನವ, ಸಂಸ್ಕೃತಿಕ ಮೂಲಗಳನ್ನೆಲ್ಲಾ ಆವರಿಸಿಕೊಂಡಿರುತ್ತವೆ.

"ಕಪ್ಪು ಬೆಕ್ಕನ್ನು ಕಾರ್ಯ ನಿಮಿತ್ಯ ಹೊರಟಾಗ ನೋಡಿದರೆ ಅಪಶಕುನ". ಇದೊಂದು ಜನಪದ ನಂಬಿಕೆ. ಇದು ಪ್ರಯಾಣ ಸಂದರ್ಭದಲ್ಲಿ ಅರ್ಥಪಡುತ್ತದೆ. ಇದರ ಆಶಯ ಸ್ವರೂಪಗಳನ್ನು ಗ್ರಹಿಸುವವರ ಮೂಲಕ ನಂಬಿಕೆಗಳ ಚೌಕಟ್ಟನ್ನು ನಿರ್ಧರಿಸಬಹುದು. ಈ ನಂಬಿಕೆಯ ಪ್ರಕಾರ "ವರ್ತಮಾನ" ದಲ್ಲಿ ಬೆಕ್ಕನ್ನು ಕಾಣುವುದು ಕಾರಣ "ಭವಿಷತ್" ನಲ್ಲಿ ಹೋದ ಕಾರ್ಯ ಸಾಧಿಸುವುದು ಎನ್ನುವುದು ಖಚಿತತೆ ಇಲ್ಲದ ಪರಿಣಾಮ ಯಾವುದೋ ಒಂದು ಭೂತಕಾಲದ ಸಂದರ್ಭದಲ್ಲಿ ವ್ಯಕ್ತಿಯೊಬ್ಬನಿಗೆ ಅನಿರೀಕ್ಷಿತವಾಗಿ "ಹೀಗೆ ಕೇಡು" ಆಗಿತ್ತು ಎಂಬ ನಂಬಿಕೆ ಈ ಹೊತ್ತು ಆಗಬಹುದೆಂದು ನಿರೀಕ್ಷತೆಯಲ್ಲಿ ಅಂತರ್ಗತವಾಗುತ್ತದೆ. ಹೀಗೆ ನಂಬಿಕೆಗಳು ಕಾರಣ ಮತ್ತು ಪರಿಣಾಮಗಳನ್ನು ಅವಲಂಬಿಸಿವೆ. ಭೂತ, ವರ್ತಮಾನ, ಭವಿಷತ್ ಕಾಲಗಳನ್ನು

ಆವರಿಸಿಕೊಳ್ಳುತ್ತವೆ. ವ್ಯಕ್ತಿಯೊಬ್ಬನ ಅನಿರೀಕ್ಷಿತ ಕಾಕತಾಳಿಯ ಅನುಭವ ಮುಂದಿನವರಲ್ಲಿ ಪುನರಾವರ್ತನೆಗೊಂಡು ನಂಬಿಕೆಗಳಾಗಿ ಜನಮಧ್ಯ ಮೌಖಿಕವಾಗಿ ಚಾಲ್ತಿಯಲ್ಲಿರುತ್ತದೆ. ಸಾರ್ವತ್ರಿಕವಾಗಿ ಅಂಗೀಕಾರವಾಗಿರುವ ನಂಬಿಕೆಗಳು ಒಟ್ಟಾರೆಯಾಗಿ ಸಮುದಾಯದ ನಿರೀಕ್ಷೆ ಮತ್ತು ವಿಶ್ವಾಸವನ್ನು ಅವಲಂಬಿಸಿಕೊಂಡಿರುತ್ತವೆ. ಈ ಅರ್ಥದಲ್ಲಿ ನಂಬಿಕೆಗಳು ಸಾಂಪ್ರದಾಯಿಕವಾಗಿ ಅಂಗೀಕೃತವಾದ ಒಂದು ಮಾನಸಿಕ ಸ್ಥಿತಿ, ದುರ್ಬಲ ಮನಸ್ಸುಗಳಿಗೆ ಒಂದಿಷ್ಟು ಅಭಯವನ್ನು ನೀಡುವ ನಂಬಿಕೆಗಳು ಮನಶಾಸ್ತ್ರೀಯ ದೃಷ್ಟಿಯಿಂದಲೂ ಮಹತ್ವದ್ದಾಗಿವೆ. ಭೌತಿಕ ಜಗತ್ತಿನ ಕುರಿತಾದ ಪರಿಮಿತ ಮತ್ತು ಅವೈಜ್ಞಾನಿಕವಾದ ತಿಳುವಳಿಕೆ ನಂಬಿಕೆಗಳ ಹುಟ್ಟಿಗೆ ಕಾರಣ. ನಂಬಿಕೆಗಳಲ್ಲಿ ಸಂಭಾವ್ಯತೆಯ ಸಾಧ್ಯತೆಗಳು ಇರುವುದಿಲ್ಲ. ಹೀಗಿದ್ದು ಕೆಲವು ನಂಬಿಕೆಗಳು ವಾಸ್ತವಿಕತೆಯ ಕಡೆಗೆ ಮುಂದುವರೆದುಕೊಂಡು ಬಂದಿವೆ.

ಜೀವನವೇ ಒಂದು ನಂಬಿಕೆ ತಾನೆ ? ಅಲ್ಲಿ ಆಸೆಗಳಿವೆ ಕನಸುಗಳಿವೆ. ಹತಾಶೆ ಇದೆ. ನೋವಿದೆ. ನಲಿವಿದೆ. ಜನಪದರ ನಂಬಿಕೆಗಳು ಕೇವಲ ನಂಬಿಕೆಗಳಾಗಿಯೇ ಉಳಿದುಕೊಳ್ಳುವುದಿಲ್ಲ. ನಂಬಿಕೆಗಳೇ ಜೀವನದ ಊರಗೋಲು ನಾಳೆಯೂ ಬದುಕಿರುತ್ತೇನೆ ಎಂಬ ನಂಬಿಕೆಯೇ ಇಂದು ನಮ್ಮ ಕರ್ತವ್ಯದಲ್ಲಿ ನಿರತರಾಗಿರಲು ಪ್ರೇರೇಪಿಸುತ್ತದೆ. ನಾಳೆಗಾಗಿ ದುಡಿಯುತ್ತಾನೆ. ಕನಸು ಕಟ್ಟುತ್ತಾನೆ. ಗುರಿಸಾಧನೆಗಾಗಿ ಶ್ರಮಿಸುತ್ತಾನೆ ಮತ್ತು ಸಾಧಿಸುತ್ತಾನೆ. ಯಾವುದೇ ಒಂದು ಧೋರಣೆ ನಿಲುವು ಮತ್ತು ನಮ್ಮ ಸುತ್ತ ಮುತ್ತಲಿನವರಿಗೆ ಅನುಕೂಲವಾಗುತ್ತದೆ ಎಂದೋ ಅಥವಾ ನಮ್ಮ ಒಂದು ಉದ್ದೇಶ ಅದು ಒಳ್ಳೆಯದೇ ಇರಲಿ ಕೆಟ್ಟದೇ ಇರಲಿ ಈಡೇರುತ್ತದೆ ಎಂಬ ನಂಬಿಕೆ ನಮ್ಮಲ್ಲಿರುತ್ತದೆ. ನಾವು ತೆಗೆದುಕೊಳ್ಳುವ ಅನೇಕ ನಿರ್ಧಾರಗಳು ಈ ನಮ್ಮ ನಂಬಿಕೆಗಳನ್ನೇ ಅವಲಂಬಿಸಿರುತ್ತವೆ. ಬಹುಪಾಲು ನಂಬಿಕೆಗಳು ನಮ್ಮ ಹಿರಿಯರಿಂದ ನಮಗೆ ಬಂದವು. ಕೆಲವನ್ನು ಮಾತ್ರ ನಾವೇ ರೂಢಿಸಿಕೊಳ್ಳುತ್ತೇವೆ. ನಂಬಿಕೆಗಳು ಸಾಮಾನ್ಯವಾಗಿ ಯಾವುದೋ ಹಂತದಲ್ಲಿ ಪಂಚೇಂದ್ರಿಯಗಳಿಗೆ ಆದ ಅನುಭವದ ನೆಲಗಟ್ಟಿನ ಮೇಲೆ ಆಲೋಚನೆಯ ಹಂದರದೊಳಗೆ ನಿರ್ಮಿತವಾಗುತ್ತವೆ. ಒಬ್ಬನ ಅನುಭವ ಬೇರೆಯವರಿಗೆ ತಲುಪಿಸಿ ಅದನ್ನು ಅವರು ಒಪ್ಪಿಕೊಂಡು ತಮ್ಮದನ್ನಾಗಿ ಮಾಡಿಕೊಂಡಾಗ ಅದು ನಂಬಿಕೆಯಾಗುತ್ತದೆ. ಉದಾಹರಣೆಗೆ: ಖಾಲಿ ಕೊಡ ಎದುರಿಗೆ ಬಂದಾಗ ಅವರ ಕೆಲಸಕ್ಕೆ ವಿಘ್ನ ಉಂಟಾದಾಗ ಇತರರು ಖಾಲಿ ಕೊಡ ಎದುರು ಬರುವುದು ಅಶುಭ ಎಂದು ನಂಬುವಂತಾಯಿತು. ಕಾಲಕ್ರಮೇಣ ಈ ನಂಬಿಕೆಗಳು ಒಂದು ನಿರ್ದಿಷ್ಟ ಆಚಾರವಾಗಿ ಏಕೆ, ಏನು, ಹೇಗೆ ಎಂದು ಯಾರು ಪ್ರಶ್ನಿಸಬಾರದು. ಸುಮ್ಮನೆ ಪಾಲಿಸಬೇಕು. ಅದರಿಂದ ಒಳಿತಾಗುತ್ತದೆ. ಇಲ್ಲಾ ಪಾಲಿಸಲಿಲ್ಲವಾದರೆ ಕೇಡುಂಟಾಗುತ್ತದೆ ಎಂಬುದು ಪ್ರಚಲಿತವಾದಾಗ ಈ ಕೆಲವು ನಂಬಿಕೆಗಳು ಸಮಾಜಪಾಲಿಗೆ ಅನಿಷ್ಟಗಳಾದವು ಜನರ ಪಾಲಿಗೆ ತೊಂದರೆದಾಯಕವಾದವು. ತೊಂದರೆಯಾದರೂ ಸರಿ ನಂಬಿಕೆಯಂತೆ ನಡೆಯುವುದೇ ಸರಿ ಎಂಬ ಮೊಂಡವಾದಕ್ಕೆ ಎಡೆ ಸಿಕ್ಕಿತು. ಹೀಗೆ ನಮ್ಮ ಸಮಾಜದಲ್ಲೇ ಏಕೆ ಪ್ರಪಂಚದ ಎಲ್ಲಾ ಸಮಾಜಗಳಲ್ಲಿ ಈ ಬಗೆಯ ಅರ್ಥಹೀನ ಹಾನಿಕಾರಕ ಅವೈಜ್ಞಾನಿಕ ನಂಬಿಕೆಗಳೂ ಕೂಡಾ ಜನರ ಬದುಕಿನಲ್ಲಿ ಹಾಸು ಹೊಕ್ಕಾಗಿವೆ.

ಈ ದುರದೃಷ್ಟ ಸ್ಥಿತಿಗೆ ನಮ್ಮ ಸಮಾಜದಲ್ಲಿರುವ ಅನೇಕ ನಂಬಿಕೆಗಳೇ ಕಾರಣ. ವೈಜ್ಞಾನಿಕ ತಿಳುವಳಿಕೆಯ ಅಭಾವವೇ ಕಾರಣ. ನಂಬಿಕೆಗಳಿಂದಲೇ ಕಾಯಿಲೆ. ಕಸಾಲೆ. ಅದರಲ್ಲೂ ಮಾನಸಿಕ

ಕಾಯಿಲೆಗಳು ಬರಲು ದೆವ್ವ ಭೂತಗಳೇ ಕಾರಣ. ದೆವ್ವ ಭೂತಗಳೇ ಕಾರಣ. ಮದ್ದು ಮಾಟಗಳೇ ಕಾರಣ ಸ್ತ್ರೀ ಪುರುಷರೆನ್ನದೆ, ಶ್ರೀಮಂತ-ಬಡವರೆನ್ನದೆ ಗ್ರಾಮೀಣ-ಪಟ್ಟಣದ ಪ್ರದೇಶಗಳೆನ್ನದೆ, ವಿದ್ಯಾವಂತ-ಅವಿದ್ಯಾವಂತರನ್ನದೆ ಎಲ್ಲರಲ್ಲಿ ಕಂಡು ಬರುವುದು ಗಮನಾರ್ಹ. ಪ್ರತಿ ಊರಿನಲ್ಲಿ ಪ್ರತಿ ಮನೆಯಲ್ಲಿ ಈ ನಂಬಿಕೆಗಳಿಂದ ಎಷ್ಟೊಂದು ಜನ ಮಾನಸಿಕವಾಗಿ ಪರದಾಡುತ್ತಾ ನೋವು ಪಡುತ್ತಾ ತಮ್ಮ ಸಹಜ ಸಾಮರ್ಥ್ಯ ಚತುರತೆಗಳನ್ನು ಕಳೆದುಕೊಳ್ಳುತ್ತಾ ನಿಷ್ಕ್ರಿಯರಾಗುವುದು ನಿಜಕ್ಕೂ ಒಂದು ದೊಡ್ಡ ದುರಂತ. ನಂಬಿಕೆಗಳ ಹಿನ್ನಲೆ ಏನು ಅವು ಹುಟ್ಟಲು ಕಾರಣಗಳೇನು ಎಂದು ವಿವೇಚಿಸಬೇಕು. ನಿಜ ಸಂಗತಿ ಅರ್ಥಮಾಡಿಕೊಂಡು ವಾಸ್ತವಿಕ ನೆಲಗಟ್ಟಿನ ಮೇಲೆ, ವೈಜ್ಞಾನಿಕ ಆಧಾರದ ಮೇಲೆ ನಿಲುವು ಮತ್ತು ಪ್ರತಿಕ್ರಿಯೆಗಳನ್ನು ಕಂಡು ಕೊಳ್ಳಬೇಕಾಗಿದೆ.

ನಾವು ಒಂದು ಬಗೆಯ ವಿಶ್ವದಲ್ಲಿ ವಾಸಿಸುತ್ತಿದ್ದೇವೆ. ಈ ವಿಶ್ವದ ಬಗೆಯನ್ನು ಪರಿಶೀಲನೆಯಿಂದ ತಿಳಿದುಕೊಳ್ಳಬೇಕೇ ಹೊರತು ಆತ್ಮ ಪ್ರತಿಷ್ಠಾಪನೆಯಿಂದಲ್ಲ. ನಾವು ಉಂಟು ಮಾಡಬಲ್ಲ ಬದಲಾವಣೆಗಳನ್ನೆಲ್ಲ ಭೂಮಿಯ ಮೇಲೆ ಅಥವಾ ಅದರ ಹತ್ತಿರ ಮಾಡಬಲ್ಲೆವೇ ಹೊರತು ಬೇರೆಯ ಕಡೆಯಲ್ಲೆಲ್ಲ. ವ್ಯವಹಾರ ದೃಷ್ಟಿಯುಳ್ಳವರು ಬೇರೆಯ ಕಡೆ ಬದಲಾವಣೆ ಮಾಡಬೇಕೆಂಬ ಇಚ್ಛೆಯನ್ನು ಪಡೆದವರಲ್ಲ. ಆದ್ದರಿಂದ ಈ ಭೂತಲವೇ ಸಮಸ್ತ ವಿಶ್ವವೆಂಬ ತತ್ವನನ್ನು ಒಪ್ಪಿಕೊಳ್ಳಬಹುದು. ಈ ಭೂತಲದ ಮೇಲೆ ಕೂಡ ನಮ್ಮ ಶಕ್ತಿಗೆ ಪರಿಮಿತಿಯಿದೆ. ನಮ್ಮ ಜೀವನವು ಬಹುಪಾಲು ನಮ್ಮ ಇಚ್ಛೆಗಳನ್ನು ಮೀರಿದ ವಿಷಯಗಳಿಂದ ಹೆಣೆಯಲ್ಪಟ್ಟಿದೆಯೆಂಬ ಅಂಶವನ್ನು ಮರೆತರೆ ಅದು ಸ್ವಸಾಮರ್ಥ್ಯದಲ್ಲಿ ಅತಿರೇಕದ ನಂಬಿಕೆಯಿಂದಾದ ಹುಚ್ಚು.

ದುರಭಿಮಾನ ಪೂರ್ಣ ನಂಬಿಕೆಗಳೂ ಹಾನಿಕಾರಕವಾದವು ಅಂಥವು ಇನ್ನಿತರ ದುರಭಿಮಾನ ಪೂರ್ಣ ನಂಬಿಕೆಗಳೊಡನೆ ಸೆಣಸುವಾಗ ಅದರಿಂದಾಗುವ ಹಾನಿಯು ಸ್ಪಷ್ಟವಾಗುತ್ತದೆ; ಏಕೆಂದರೆ ಅವು ಪರಸ್ಪರ ದ್ವೇಷ-ಕದನಗಳನ್ನುದ್ದಿಪಿಸುತ್ತವೆ. ಒಂದೇ ಒಂದು ದುರಭಿಮಾನ ಪೂರ್ಣನಂಬಿಕೆಯಿದ್ದರೂ ಈ ಮಾತು ಸತ್ಯ ತನ್ನ ಅಸ್ತಿತ್ವವೇ ಬುಡಮೇಲಾಗಬಹುದೆಂಬ ಭಯದಿಂದ ವಿಚಾರ ಸ್ವಾತಂತ್ರ್ಯವನ್ನು ಅದು ಸಹಿಸಲಾರದು. ಹೀಗಾಗಿ ಅದು ಬೌದ್ಧಿಕ ಪ್ರಗತಿಯನ್ನು ವಿರೋಧಿಸಬೇಕಾಗುತ್ತದೆ. ಇದು ಸಾಮಾನ್ಯವಾಗಿ ಪುರೋಹಿತರನ್ನೊಳಗೊಂಡಿರುತ್ತದೆ. ಹೀಗಾದರೆ, ಪ್ರಚಲಿತ ಬೌದ್ಧಿಕ ಸ್ಥಿತಿಯನ್ನು ಹಾಗೆಯೇ ಇರಿಸಲು ಪಣತೊಟ್ಟು ಯಾವುದೋ ಒಂದು ಜಾತಿಯವರಿಗೆ ಅಪಾರ ಅಧಿಕಾರ ದೊರೆಯುತ್ತದೆ. ಯಾವುದು ಅನಿಶ್ಚಿತವೋ ಅದು ನಿಶ್ಚಿತವೆಂದೇ ಪ್ರತಿಪಾದಿತವಾಗುತ್ತದೆ.

ನಮ್ಮ ಬದುಕಿಗೆ ಭದ್ರ ಬುನಾದಿ ಒದಗಿಸುವಲ್ಲಿ ನಂಬಿಕೆಯ ಪಾತ್ರ ಮಹತ್ವ ಪೂರ್ಣವಾದದ್ದು. ಅಷ್ಟೇಕೆ – ಮೂಲತಃ ಬದುಕಿನ ಬಗ್ಗೆ ಮತ್ತು ನಮ್ಮ ಬಗ್ಗೆ ನಮಗೆ ನಂಬಿಕೆ ಇರದಿದ್ದರೆ ಜೀವನ ಬರಡಾದೀತು. ಅರ್ಥಹೀನವಾದೀತು.

ಸ್ವತಃ ವಿಜ್ಞಾನವಾದರೂ ನಂಬಿಕೆಯ ದೃಢ ಶಿಲಾಪಾಯದ ಮೇಲೆ ನಿಂತು ನಳನಳಿಸುತ್ತಿರುವುದಾಗಿದೆ ! ಆದರೆ ವಿಜ್ಞಾನದ ಬಗೆಗಿನ ಈ ನಂಬಿಕೆ ಒಬ್ಬ ವ್ಯಕ್ತಿಯ ಅಥವಾ ಗ್ರಂಥದ ಬಗೆಗಿನ ನಂಬಿಕೆಗಿಂತ ಗುಣಾತ್ಮಕವಾಗಿ ತೀರಾ ಬೇರೆಯೇ.

ಅನಾಗರಿಕ ಜನರ ಮೇಲೆ ಬುಡವಿಲ್ಲದ ನಂಬಿಕೆಗಳ ಕಂತೆಯು ಹೇಗೆ ಪ್ರಭಾವ ಜೀರಿರುವುದೆಂಬುದರ ಬಗ್ಗೆ ನಮಗೆ ಸ್ಪಷ್ಟ ಪರಿಜ್ಞಾನವುಂಟಾಗಿರುವುದು ಮಾನವ ಶಾಸ್ತ್ರದ ಅಭ್ಯಾಸದಿಂದ. ಮಾಟದಿಂದ ರೋಗವನ್ನುಂಟು ಮಾಡಬಹುದೆಂಬ ನಂಬಿಕೆಯಿದೆ; ಬೆಳೆಯು ಸರಿಯಾಗಿ ಬಾರದಿರಲು ದೇವತೆಗಳ ಕೋಪವೋ ದೈತ್ಯರ ಕಾಟವೋ ಕಾರಣ; ಗ್ರಹಣ ನರಬಲಿಗಳಿಂದ ಯುದ್ಧದಲ್ಲಿ ಗೆಲವು ಪಡೆಯಬಹುದು ಗ್ರಹಣ ಧೂಮಕೇತುಗಳು ಮುಂದಾಗುವ ಅನಿಷ್ಟಗಳನ್ನು ಸೂಚಿಸುತ್ತವೆ. ಅನಾಗರಿಕ ಜನಾಂಗಗಳ ಜೀವನವನವು ಇಂತಹ ನಿಷೇಧಗಳಿಂದ ಹೆಣೆಯಲ್ಪಟ್ಟಿವೆ. ಈ ನಿಷೇಧಗಳನ್ನು ಮೀರಿದರೆ ಕೇಡು ಸಂಭವಿಸುವುದೆಂದು ಜನರ ನಂಬಿಕೆ. ಮೂಢನಂಬಿಕೆಯ ವಲಯದಿಂದ ವಿಮೋಚನೆಗೊಂಡು ವೈಜ್ಞಾನಿಕ ವಲಯಕ್ಕೆ ನುಸುಳಿಕೊಂಡ ಪ್ರಾಕೃತಿಕ ಸಂಗತಿಗಳಲ್ಲಿ ಗ್ರಹಣಗಳೇ ಮೊತ್ತ ಮೊದಲನೆಯವು.

ಜೀವನದಲ್ಲಿ ವಿಪರೀತ ಸಂಕಷ್ಟ ಕಾಡುವಾಗ ಅಥವಾ ಅನೀರಿಕ್ಷಿತವಾಗಿ ಸೋಲು ಉಂಟಾದಾಗ ಜ್ಯೋತಿಷ, ಮಂತ್ರವಾದಿ, ಪವಾಡ ಪುರುಷರ ಮತ್ತು ಇಲ್ಲದ ದೇವರ ಮೊರೆ ಹೋಗುವ ಪ್ರವೃತ್ತಿ ಮುಗ್ಧ ಜನರಲ್ಲಿ ಮಾತ್ರವಲ್ಲ. ಉನ್ನತ ರಾಜಕಾರಣಿಗಳಲ್ಲೂ ಹೆಸರಾಂತ ವಿಜ್ಞಾನಿಗಳಲ್ಲೂ ಬುದ್ಧಿ ಜೀವಿಗಳಲ್ಲೂ ಕಾಣುತ್ತೇವೆ. "ಮೂರು ದಶಕಗಳ ಹಿಂದೆ ಹೆಸರಾಂತ ವಿಜ್ಞಾನಿ ಡಾ॥ ಭಗವಂತಂ ಇವರು ಭಾರತೀಯ ವಿಜ್ಞಾನ ಸಂಸ್ಥೆ ಬೆಂಗಳೂರು ಇದರ ನಿರ್ದೇಶಕರಾಗಿದ್ದರು. ಪುಟಪರ್ತಿ ಸಾಯಿಬಾಬನ ಶಿಷ್ಯರಾಗಿ ಪುಟ್ಟಪರ್ತಿಯಲ್ಲೆ ಖಾಯಂ ನೆಲೆಸಿದರು. ಸಾಯಿಬಾಬನ ಡೋಂಗಿ ಪವಾಡಗಳನ್ನು ಹೆಸರಾಂತ ಜನಪ್ರಿಯ ವಿಜ್ಞಾನಿ, ಶಿಕ್ಷಣ ತಜ್ಞ ಡಾ.ಹೆಚ್. ನರಸಿಂಹಯ್ಯ ಬಯಲಿಗೆಳೆದ ನಂತರ ಡಾ॥ ಭಗವಂತಂ ಅವರು ಗೊತ್ತಾಗದಂತೆ ಅಲ್ಲಿಂದ ಪಲಾಯನ ಮಾಡಿದರು." [೮೫]

ನಮ್ಮಲ್ಲಿ ಬಹುಪಾಲು ಜನರು ಪುರಾತನರ ಹೇಳಿಕೆಗಳನ್ನು ಬಿಟ್ಟು ಬೇರೆ ಯಾವ ಆಧಾರವೂ ಇಲ್ಲದ ಅನೇಕ ವಿಷಯಗಳನ್ನು ನಂಬುತ್ತೇವೆ. ಜನರು ಕೆಲವು ವಿಷಯಗಳನ್ನು ನಂಬಲು ಕಾರಣವೇನೆಂದರೆ ಅವು ನಿಜವಾಗಿರಲೇಬೇಕು ಎಂಬ ಭಾವನೆ. ಅಂಥ ಪ್ರಸಂಗಗಳಲ್ಲಿ ಆ ನಂಬಿಕೆಗಳನ್ನು ಹೋಗಲಾಡಿಸಲು ಅಪಾರ ಪ್ರಮಾಣದ ಸಾಕ್ಷಿ ಪುರಾವೆಗಳು ಅವಶ್ಯಕವಾಗುತ್ತವೆ. ಗರ್ಭಿಣೀಯ ಮೇಲೆ ಉಂಟಾಗುವ ಯಾವುದೇ ಮುಖ್ಯ ಪ್ರಭಾವ ಸಂತಾನದ ಮೇಲೆ ಪರಿಣಾಮವನ್ನುಂಟು ಮಾಡುತ್ತದೆ ಎಂಬ ನಂಬಿಕೆ. ಇದಕ್ಕೆ ಶಾಸ್ತ್ರ ಪುರಾಣಗಳಲ್ಲಿ ಸಮರ್ಥನೆ ದೊರೆಯುತ್ತದೆ. ಸ್ವತಃ ವಿಜ್ಞಾನಿಯಾಗಿರದೆ, ವಿಜ್ಞಾನಿಗಳ ಸ್ನೇಹಸಹವಾಸಗಳಲ್ಲಿಯೂ ಇಲ್ಲದೆ ಇರುವ ಯಾವ ಹೆಂಗಸನ್ನಾದರೂ ಈ ಬಗ್ಗೆ ಕೇಳಿದಾಗ ಹಲವಾರು ಸಮರ್ಥನೆ ಕೊಟ್ಟು ದಿಗ್ಭ್ರಮೆಗೊಳಿಸುವರು. ಆಕೆ ಮತ್ತೊಬ್ಬಳನ್ನು, ಮತ್ತೊಬ್ಬಳು ಇನ್ನೊಬ್ಬಾಕೆಯನ್ನು, ಈ ಇನ್ನೊಬ್ಬಾಕೆ ಕಾಲ್ಪನಿಕ ವ್ಯಕ್ತಿ !

ಮೂಢನಂಬಿಕೆಯನ್ನು ಕುರುಡು ನಂಬಿಕೆ ಎಂದೂ ಕರೆಯುವುದುಂಟು. ಕಣ್ಣು ತೆರೆದು ನೋಡದೆ ಅಂದರೆ ವಿಚಾರ ಮಾಡಿ ಪರೀಕ್ಷಿಸದೆ ಏನಾದರೊಂದನ್ನು ನಂಬುವುದು ಕುರುಡು ನಂಬಿಕೆ ಎನಿಸಿಕೊಳ್ಳುತ್ತದೆ. ಹಾಗೆ ವಿಚಾರ ಮಾಡದಿರುವುದಕ್ಕೆ ಸಾಕಷ್ಟು ತಿಳುವಳಿಕೆ ಗಳಿಸಿಕೊಂಡಿಲ್ಲದಿರುವುದು ಒಂದು ಕಾರಣವಿರಬಹುದು. ಅದು ಕ್ಷಮಾರ್ಹ. ಏಕೆಂದರೆ, ತಿಳಿವಳಿಕೆಗಳಿಸಿಕೊಂಡ ಮೇಲೆ ವಿಚಾರ ಮಾಡುವುದು ಸಾಧ್ಯ. ಅಕ್ಷಮ್ಯ ಎನ್ನಬಹುದಾದ ಇನ್ನೊಂದು ಕಾರಣವಿದೆ. ವೈಜ್ಞಾನಿಕ ದೃಷ್ಟಿಯಿಂದ ವಿಚಾರ ಮಾಡತೊಡಗಿದಾಗ

---

೮೫ (ಅಡಿ ಟಿಪ್ಪಣಿ :೮೫: ದೇವರು ಧರ್ಮ ಮತ್ತು ವೈಚಾರಿಕತೆ ಲೇಖಕರು ಸಿ.ಎಸ್. [illegible])

ಅನಿವಾರ್ಯವಾಗಬಹುದಾದ ತೀರ್ಮಾನ ಅಹಿತವಾದುದ್ದಾದರೂ ಅದನ್ನು ಸ್ವೀಕರಿಸುವ ಮನೋದಾರ್ಢ್ಯವಿಲ್ಲದಿರುವುದು ಅಗತ್ಯವೆನಿಸಿದಾಗಲೂ ಅದಕ್ಕೆ ಸಿದ್ಧವಿಲ್ಲದಿರುವ ಮನೋ ದೌರ್ಬಲ್ಯ. ಅಂಥ ಕುರುಡು ನಂಬಿಕೆಯುಳ್ಳವರಿಗೆ ಆ ನಂಬಿಕೆ ಆಧಾರ ರಹಿತವೆಂದು ಅವರ ಒಳಮನಸ್ಸು ಹೇಳುವುದರಿಂದ ಅವರು ಅದನ್ನು ಮುಚ್ಚಿಡುವ ಪ್ರಯತ್ನ ಮಾಡುತ್ತಾರೆ; ತಮ್ಮ ನಂಬಿಕೆ ವೈಜ್ಞಾನಿಕವಾದುದೆಂದು ಸಾಧಿಸಲು ಪ್ರಯತ್ನಿಸುತ್ತಾರೆ.

ಈ ಮೂಢನಂಬಿಕೆಗಳು ಕೇವಲ ಅವಿದ್ಯಾವಂತರಾದ ಹಳ್ಳಿಗಾಡಿನವರಿಗೆ ಮಾತ್ರ ಮೀಸಲು ಎಂಬುದಾಗಿಯೂ, ಇವಕ್ಕೆ ಯಾವುದೇ ಸಾಹಿತ್ಯಕ ಅಥವಾ ಗ್ರಾಂಥಿಕ ಆಧಾರಗಳಿಲ್ಲವೆಂತಲೂ ನಮ್ಮ ಸಂಪ್ರದಾಯವಾದಿಗಳು ವಾದಿಸಿಯಾರು. ಆದರೆ, ಇಂತಹ ವಾದ ಸತ್ಯಕ್ಕೆ ದೂರವಾದ ಅಂಶ, ಹೇಳುವುದಾದರೆ ವಿದ್ವಾಂಸರಿಂದ ಗೌವರಿಸಲ್ಪಟ್ಟು ಅಧಿಕಾರಯುತವೆಂದು ಸ್ವೀಕರಿಸಲ್ಪಟ್ಟಿರುವ ಅನೇಕ ಪ್ರಾಚೀನ ಗ್ರಂಥಗಳು ಉದ್ದೇಶ ಪೂರ್ವಕವಾಗಿಲ್ಲದಿದ್ದರೂ ಅನೇಕ ಕೆಟ್ಟ ನಂಬಿಕೆಗಳ ಊಹಾತೀತ ಉಗ್ರಾಣಗಳಾಗಿವೆ. ಉದಾಹರಣೆಗೆ ಖ್ಯಾತ ಜ್ಯೋತಿಷಾಚಾರ್ಯನೂ ಖಗೋಲಜ್ಞನೂ ಆದ ವರಾಹಮಹೀರನು ತನ್ನ ಪ್ರಸಿದ್ಧ ಗ್ರಂಥವಾದ ಬೃಹತ ಸಂಹಿತೆಯಲ್ಲಿ 'ಉತ್ಪಾತಾಧ್ಯಾಯ' ಎಂದು ಇಡೀ ಒಂದು ಅಧ್ಯಾಯವನ್ನು ಅಪಶಕುನಗಳಿಗಾಗಿ ಮೀಸಲಿಟ್ಟಿದ್ದಾನೆ.

ಹೀಗೆಂದ ಮಾತ್ರಕ್ಕೆ ಮೂಢನಂಬಿಕೆಗಳಿಗೆಲ್ಲಾ ಭಾರತೀಯರು ಗುತ್ತಿಗೆದಾರರೆಂದೇನಲ್ಲ ! ಇತರ ಸಮಾಜಗಳಲ್ಲೂ ಸಹ ಸಾಕಷ್ಟು ಅರ್ಥಹೀನವೂ, ಕೆಲವೊಮ್ಮೆ ಅಪಾಯಕಾರಿಯೂ ಆಗಿರುವ ನಂಬಿಕೆಗಳು, ಸಹಸ್ರಾರು ವರ್ಷಗಳಿಂದ ಪೋಷಿಸಲ್ಪಟ್ಟಿವೆ. ನಮ್ಮ ಸಮಾಜದಲ್ಲೇ ಬೇರೂರಿರುವ ಹಲವು ಕ್ಷುಲ್ಲಕ ಮೂಢನಂಬಿಕೆಗಳಿವೆ. ಉದಾಹರಣೆಗೆ ಎಡಮಗ್ಗಲಲ್ಲಿ ಏಳುವುದು ಕೆಟ್ಟ ಫಲದ ಸೂಚಕ: ಹಲ್ಲಿ ದೇಹದ ಬೇರೆ ಬೇರೆ ಭಾಗಗಳಲ್ಲಿ ಬೀಳುವುದರಿಂದ ಬೇರೆ ಬೇರೆ ಫಲಗಳು ಮುಂತಾದವು ನೂರೆಂಟಿವೆ. ಪಾಶ್ಚಾತ್ಯ ದೇಶಗಳಲ್ಲಿಯೂ ಸಹ ಇಂತಹ ಹಾಸ್ಯಾಸ್ಪದ ನಂಬಿಕೆಗಳಿವೆ. '೧೩ ಎಂಬುದು ಒಂದು ಅಶುಭ ಸಂಖ್ಯೆ. ಪಾತ್ರೆ ಒರೆಸುತ್ತಿರುವ ಮಹಿಳೆಯ ಕೈಯಿಂದ ಬಟ್ಟೆ ಜಾರಿಬಿದ್ದರೆ, ಮನೆಗೆ ಅತಿಥಿಗಳು ಆಗಮಿಸುತ್ತಾರೆ. ಹೀಗೆ ಪ್ರತಿ ಸಮಾಜದಲ್ಲೂ ಹಾಸುಹೊಕ್ಕಾಗಿರುವ ಈ ಮೂಢನಂಬಿಕೆಗಳು ಮನುಷ್ಯನ ಆಲೋಚನಾ ಶಕ್ತಿಗೆ ಧಕ್ಕೆಯುಂಟು ಮಾಡುವುದಲ್ಲದೆ, ಸಾರ್ವತ್ರಿಕ ಪ್ರಗತಿಯನ್ನು ಕುಂಠಿತಗೊಳಿಸುತ್ತವೆ.

ಪೋಸ್ಟ್ ಮಾಡರ್ನಿಸ್ಟ್ ಪಂಥಕ್ಕೆ ಸೇರಿದ ಚಿಂತಕರು ಎಲ್ಲ ಘಟನೆಗಳೂ, ಸಂಗತಿಗಳೂ, ನಂಬಿಕೆಗಳೂ ಸಾಪೇಕ್ಷವೆಂದು ಆಯಾ ಸಂದರ್ಭಕ್ಕೆ ಮಾತ್ರ ಅನ್ವಯವಾಗುವುದೆಂದೂ ಸಮರ್ಥಿಸಿಕೊಳ್ಳುತ್ತಾರೆ. ಇವರನ್ನು ಸಾಪೇಕ್ಷತಾವಾದಿಗಳೆಂದು ಹೆಸರಿಸಬಹುದು. ಎಲ್ಲ ಚಿಂತಕರಂತೆ ಸಾಪೇಕ್ಷತಾವಾದಿಗಳೂ ಸಹ ನಂಬಿಕೆಗಳಲ್ಲಿ ಹಲವನ್ನು ಸ್ವೀಕರಿಸಿ ಉಳಿದವನ್ನು ತಿರಸ್ಕರಿಸುತ್ತಾರೆ. ತಮ್ಮ ಕ್ಷೇತ್ರದ ವ್ಯಾಪ್ತಿಯಲ್ಲಿರುವ ನಂಬಿಕೆಗಳ ಕಡೆಗೆ ಇವರ ಮನಸೋಲುತ್ತದೆ. ನಂಬಿಕೆಗಳನ್ನು ಮೌಲ್ಯೀಕರಣ ಮಾಡುವಾಗ 'ಸತ್ಯ' ಮತ್ತು ಅಸತ್ಯವೆಂದು ವಿಂಗಡಿಸುತ್ತಾರೆ. ಹಾಗೆಯೇ 'ವೈಚಾರಿಕ' ಮತ್ತು 'ಅವೈಚಾರಿಕ' ಸಂಗತಿಗಳನ್ನೂ ಗುರುತಿಸುತ್ತಾರೆ. ನಿಜಕ್ಕೂ 'ಸತ್ಯ'ದ ಬಗ್ಗೆ ಇವರಿಗಿರುವ ಕಲ್ಪನೆ ನಮ್ಮ ಸಾಮಾನ್ಯ ಕಲ್ಪನೆಗೆ ದೂರವಾಗಿದೆ. 'ಇಂದು ಬೆಳಿಗ್ಗೆ ನಾನು ಚಹಾ ಕುಡಿದೆ' ಎಂಬುದು ನಿಜವಾದರೆ ಎಂಬ ವಾಕ್ಯವು ಬಾರ್ನ್ಸ್ ಮತ್ತು ಬ್ಲೂರ್ ಎಂಬ ಈ ಇಬ್ಬರ ಸಾಪೇಕ್ಷತಾವಾದಿಗಳ ಪ್ರಕಾರ ನಾನು ಇಂದು ಬೆಳಿಗ್ಗೆ ಚಹಾ ಕುಡಿದೆನೆಂದು ನಂಬಲು ಇಷ್ಟಪಡುತ್ತೇನೆ. ಎಂದು ಹೇಳುವುದಷ್ಟೇ

ಅಲ್ಲದೆ "ನನ್ನ ಕ್ಷೇತ್ರದಲ್ಲಿರುವ ಇತರರು ನಾನು ಚಹಾ ಸೇವವಿಸಿದ್ದನೆಂದು ಭಾವಿಸುತ್ತಾರೆ" ಎಂಬರ್ಥಕೊಡುತ್ತದೆ. ಒಟ್ಟಿನಲ್ಲಿ ಹೇಳಬೇಕಾದರೆ ಸತ್ಯ ನಿರೇಪಕ್ಷವಲ್ಲ. ಸ್ಥಳೀಯ ಸಂದರ್ಭಕ್ಕೆ ಹೊಂದಿಕೊಳ್ಳುವ ಸಂಗತಿ ಮಾತ್ರ ಎನ್ನುವಂತೆ ನಂಬಿಕೆಗಳು ಕೂಡಾ ಸ್ಥಳೀಯ ಸಂದರ್ಭಕ್ಕೆ ತಕ್ಕಂತೆ ರೂಢಿಯಲ್ಲಿ ಬಂದಿರುತ್ತವೆ.

ವೈಜ್ಞಾನಿಕತೆಯನ್ನು ಮೊತ್ತ ಮೊದಲು ತಂದು ಕೊಟ್ಟವರು ಗೌತಮ ಬುದ್ದ ಅವನು ಹೇಳಿದೆನೆಂದರೆ ತಂದೆ ತಾಯಿ ಗುರುಗಳು ಧರ್ಮಗ್ರಂಥಗಳು ಯಾರು ಏನು 'ಹೇಳಿದರೂ ನಂಬಬೇಡಿ ನೀವು ಕೂಲಂಕಷವಾಗಿ ವಿಶ್ಲೇಷಿಸಿ. ಅರ್ಥೈಸಿ ಅದು ಸತ್ಯವೆಂದು ಕಂಡು ಬಂದಾಗ ನಂಬಿ, ನೀವು ನಂಬಿದ ಸತ್ಯವನ್ನು ಬಿಡಬೇಡಿ ಎಂದು ನಂಬಿಕೆಗಳನ್ನು ಕೆಲವೊಂದು ವಿಶಿಷ್ಟವೂ ಅಪೂರ್ವವೂ ಆಗಿವೆ. ಇವುಗಳು ಹೆಚ್ಚಾಗಿ ರೂಢಿಗತವಾಗಿರುವುದು ಗ್ರಾಮಾಂತರ ಪ್ರದೇಶಗಳಲ್ಲಿ ಕೆಲವೊಂದು ಆಚರಣೆಗಳು ಅವರ ಜೀವನ ಕ್ರಮಕ್ಕೆ ಅವರ ಸಂಸ್ಕೃತಿಗೆ ಅವರ ರೀತಿ ನೀತಿಗಳಿಗೆ ಕನ್ನಡಿಯಂತಿವೆ. ಹಿಂದಿನ ಕಾಲದಲ್ಲಿ ಈ ಹೊತ್ತಿನ ಸೌಲಭ್ಯಗಳಿರಲಿಲ್ಲ. ಆಗ ಪರಿಸರ ಪ್ರಚೋದನೆಯಿಂದ ಅಥವಾ ಅಂತರಂಗದ ಪ್ರೇರಣೆಯಿಂದ ಸಂಭವಿಸಿದ ಭಾವನೆಗಳು ಪರೀಕ್ಷೆಯಿಲ್ಲದೆಯೇ ಚಲಾವಣೆಗೆ ಬರುತ್ತಿದ್ದವು ಯಾವುದೋ ಒಂದು ಭಾವನೆ ಕಾಕತಾಳಿಯ ನ್ಯಾಯದಿಂದ ಸರಿಯೆಂದು ತೋರಿದಾಗ ಅದನ್ನೇ ಜನ ಅವಿಷ್ಕಾರವೆಂದು ತಿಳಿಯುತ್ತಿದ್ದರು. ಆ ಅವಿಷ್ಕರಣೆ ಪುನರಾವರ್ತನೆಯಿಂದ ಸಾರ್ಥಕವೆಂದು ಕಂಡಾಗ ಅದಕ್ಕೆ ವೈಜ್ಞಾನಿಕ ಮಹತ್ವ ದೊರಕುತ್ತಿತ್ತು. ಸಮಾಜದ ಒಬ್ಬ ತಲೆಯಾಳಿನ ಅಥವಾ ಬುದ್ಧಿವಂತನೆನಿಸಿಕೊಂಡವನ ಅಭಿಪ್ರಾಯ ನಿರಕ್ಷರಿಗಳಿಗೆ ಸತ್ಯವಾಗಿ ಪರಮ ಪ್ರಮಾಣವಾಗಿ ಕಾಣುತ್ತಿತ್ತು.

ಒಮ್ಮೆ ಒಂದು ತತ್ವ ನಿರೂಪಿಸಲ್ಪಟ್ಟರೆ ಅದನ್ನು ಕ್ರಮೇಣ ಮಾನವನು ತಾನು ಅರ್ಥೈಸಿಕೊಂಡ ರೀತಿಯಲ್ಲಿ ನಂಬುತ್ತಾನೆ. ಒಂದು ತತ್ವ ನಂಬಿಕೆಗಳಾಗಿ ಬಂದ ಬಳಿಕ ಕೈ ಬಿಡುವುದು ಸುಲಭ ಸಾಧ್ಯವಲ್ಲ. ಈ ಅರ್ಥದಲ್ಲಿ ನಂಬಿಕೆಗಳು ಆಳವಾಗಿ ಬೇರು ಬಿಟ್ಟಿರುತ್ತವೆ. ಇಷ್ಟಾನಿಷ್ಟಗಳಿಂದಲೂ ನಂಬಿಕೆಗಳು ರಕ್ತಗತವಾಗಿ ಸಂಪ್ರದಾಯಕವಾಗಿರುತ್ತವೆ. ಈ ನಂಬಿಕೆಗಳೇ ಕ್ರಿಯಾರೂಪಕ್ಕೆ ಬಂದಾಗ ಆಚರಣೆಗಳಾಗುತ್ತವೆ. ನಂಬಿಕೆ, ಆಚರಣೆಗಳು ಬದುಕಿನ ಅನಿವಾರ್ಯ ಅಂಗಗಳಾಗಿ ಜನಪದರ ಇತರೆ ಅಭಿವ್ಯಕ್ತಿ ಮಾಧ್ಯಮಗಳಾದ ಹಾಡು ಕುಣಿತಗಳಲ್ಲೂ ಅಭಿವ್ಯಕ್ತಗೊಳ್ಳುತ್ತವೆ.

ಜನಪದರು ಕಂಡುಕೊಂಡ ಒಂದೊಂದು ನಂಬಿಕೆಗಳು ಅವರ ಹೊಸ ಹೊಸ ಕೆಲಸಗಳೇ ಸಂಶೊಧನೆಗೆ ಕಾರಣಗಳಾಗಿ ಮನುಕುಲದ ಕಲ್ಯಾಣಕ್ಕೆ ಮಾಡಿದವುಗಳಾಗಿವೆ. ಏನಹ ಯಾವುದೇ ಪದವಿ ಪ್ರಶಸ್ತಿಗಾಗಿ ಮಾಡಿದವುಗಳಲ್ಲ. ಹಳ್ಳಿಯ ಬಡಿಗನೊಬ್ಬ ಮಾಡಿರಬಹುದಾದ ಗಾಲಿ ಎಂತ ಅದ್ಭುತ ಸಂಶೋಧನೆ ಎನ್ನಬೇಕು ! ಇಂದು ಗಾಲಿ ಇಲ್ಲದ ಯಂತ್ರಗಳೇ ಇಲ್ಲ ಇಡೀ ವಿಶ್ವಗಾಲಿಯ ಮೇಲೆ ಉರುಳುತ್ತಿದೆ. ಅದನ್ನು ಮಾಡಿದಕ್ಕಾಗಿಯೇ, ಅವರನ್ನು ವಿಶ್ವಕರ್ಮರು ಎಂದಿರಬೇಕು. ಇದಕ್ಕೆ ಪ್ರೇರಣೆ ಸದಾ ಚಲಿಸುವ ಸೂರ್ಯ ಚಂದ್ರರೇ ಆಗಿರಬೇಕು.

ಜನಪದ ನಂಬಿಕೆಗಳೆಲ್ಲವು ಜನತೆಯ ಮೌಢ್ಯದಿಂದಲೆ ಬಂದುವಲ್ಲ. ಜನಪದ ನಂಬಿಕೆಗಳಲ್ಲಿ ಬಹುಪಾಲು ಬುದ್ಧಿ ಪೂರ್ವಕವಾಗಿ ಆಲೋಚನಾ ಹಂತಗಳನ್ನೇರಿ ಹೃದಯದಿಂದ ಮೂಡಿಬಂದವು ಎಂಬುದನ್ನು ತೋರಿಸಬಹುದು ಅದಲ್ಲದೆ ಜನಪದ ನಂಬಿಕೆಗಳಲ್ಲಿ ಬಹುಪಾಲು ವೈಜ್ಞಾನಿಕ ಸತ್ಯವಿದೆ.

ಅವುಗಳಲ್ಲಿ ಪೌರಾಣಿಕ ಅಂಶಗಳೂ ಇವೆ. ಸಾಮಾನ್ಯ ತಿಳುವಳಿಕೆ ಐತಿಹಾಸಿಕಾಂಶಗಳು ಮತ್ತು ಕಥಾಂಶಗಳು ಅಡಕವಾಗಿರುವುದನ್ನು ಕಾಣಬಹುದು ಎಂಬ ಮಾತನ್ನು ಸಮರ್ಥಿಸಬಹುದು. ಕೆಲವು ಜನಪ್ರಿಯ ಜನಪದ ನಂಬಿಕೆಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಬಹುದು. ಜನಪದ ನಂಬಿಕೆಗಳ ವಿವರಣಾತ್ಮಕ ಮತ್ತು ವಿಶ್ಲೇಷಣಾತ್ಮಕ ಕಾರ್ಯವನ್ನೇ ಪ್ರತ್ಯೇಕವಾಗಿ ಮಾಡಬಹುದು ಮಾನವ ಎಲ್ಲ ಬಗೆಯ ಕ್ಷೇತ್ರಗಳ ಮಾನವನ ಬದುಕಿನ ಬಗೆಯ ಹಿನ್ನೆಲೆಯಲ್ಲಿ ಮೂಡಿ ಬೆಳೆದು ಬಂದಿರುತ್ತದೆ. ಜನಪದ ನಂಬಿಕೆ ಪದವು ಯಾರೋ ಒಬ್ಬ ವ್ಯಕ್ತಿಯ ವಸ್ತುವಿನ ಅಥವಾ ತತ್ವದ ವಿಷಯದಲ್ಲಿ ನಮಗಿರುವ ಮನೋಭಾವನೆಯನ್ನು ಸೂಚಿಸುತ್ತದೆ. ಜ್ಞಾನವು ಆಧಾರ ಸಹಿತವಾಗಿರುತ್ತದೆ. ನಂಬಿಕೆಯು ಪ್ರಭಾವಕ್ಕೊಳಗಾಗಿರುತ್ತದೆ. ಜನಪದ ನಂಬಿಕೆಯು ಭರವಸೆ ಮತ್ತು ನಿಶ್ಚಲತೆಯ ಅನೇಕ ಹಂತಗಳನ್ನುಳ್ಳದ್ದು ನಂಬಿಕೆಗಳ ನೆಲೆಗಟ್ಟೆಲ್ಲವು ನಂಬುವವರ ಮನೋವೈಖರಿಯನ್ನು ಪ್ರತಿಬಿಂಬಿಸುತ್ತದೆ. ಜನಪದ ನಂಬಿಕೆಗಳಿಗೆ ವಿಶಿಷ್ಟ ಸ್ವರೂಪವಿರುವುದನ್ನು ಗ್ರಹಿಸಬಹುದು.

ನಂಬಿಕೆಯು ಜನಪದ ಜೀವನಾನುಭವದ ಉತ್ಪನ್ನ, ಹೀಗಾಗಿ ಮಾನವ ಬದುಕಿಗೂ ನಂಬಿಕೆಗೂ ಬೇರ್ಪಡಿಸಲಾಗದ ಸಂಬಂಧ. ಅದು ಸೂಚನೆ, ನಿಯಮ, ವಿಧಿ, ನಿಷೇಧ, ನಿರ್ದೇಶನ, ಆಗ್ರಹ, ಆದೇಶ ಮತ್ತು ಆಜ್ಞೆಗಳ ರೂಪದಲ್ಲಿ ನಿತ್ಯ ಬದುಕಿನೊಂದಿಗೆ ಸಂಬಂಧವನ್ನು ಕಂಡುಕೊಂಡಿದೆ. ಜನಪದರ ಕೆಲಸ, ಆಲೋಚನೆ, ರೂಢಿ, ಜೀವನಕ್ರಮ ಸಂಪ್ರದಾಯ, ಆಚರಣೆಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಪ್ರೇರಿತವಾದವುಗಳು ನಂಬಿಕೆಯೊಂದು ಸಂಪ್ರದಾಯ ಆಚರಣೆಗಳೊಂದಿಗೆ ಅಂತರ ಸಂಬಂಧವನ್ನು ಹೊಂದಿದ್ದು ಆ ಮೂಲಕ ಕ್ರಿಯಾ ರೂಪವನ್ನು ತಾಳುತ್ತದೆ. ಲೌಕಿಕ ಕ್ರಿಯೆಯೊಂದನ್ನು ಗಟ್ಟಿಗೊಳಿಸಲು ಅಥವಾ ನಿಷೇಧಿಸಲು ಅದಕ್ಕೆ ಧಾರ್ಮಿಕ ಚೌಕಟ್ಟನ್ನು ಒದಗಿಸುವುದುಂಟು. ಮನುಷ್ಯನ ಬದುಕನ್ನು ತೀವ್ರವಾಗಿ ಪ್ರಭಾವಿಸುವ ಋತುಮಾನಗಳ ಚಲನೆಗಳು ಅನೇಕ ಜೀವನಾವರ್ತನೆ ವಾರ್ಷಿಕಾವರ್ತನಗಳ ನಂಬಿಕೆಗಳನ್ನು ರೂಪಿಸಿವೆ. ಒಂದು ನಂಬಿಕೆ ಕಾರ್ಯಕಾರಣ ಸಂಬಂಧವನ್ನು ಕಳೆದುಕೊಂಡಾಗ ಅದು ಜನರ ಬದುಕಿನಿಂದ ದೂರವಾಗಿ ಮರೆಯಾಗುತ್ತದೆ. ಅಥವಾ ಅದರ ಗರ್ಭಕೋಶದಿಂದ ಇನ್ನೊಂದು ನಂಬಿಕೆಯಾಗಿ ಹುಟ್ಟುತ್ತದೆ. ಉದಾಹರಣೆಗೆ : ಸೂರ್ಯ-ಚಂದ್ರರನ್ನು, ರಾಹು ಕೇತುಗಳು ನುಂಗಿದಾಗ ಗ್ರಹಣ ಸಂಭವಿಸುತ್ತದೆ ಎನ್ನುವ ನಂಬಿಕೆಯನ್ನು ಖಗೋಳಶಾಸ್ತ್ರದ ವೈಜ್ಞಾನಿಕ ಬೆಳವಣಿಗೆ ಸಡಿಲಗೊಳಿಸಿದ್ದನ್ನು ನೆನೆಯಬಹುದು.

ನಮ್ಮ ಜೀವನದ ಮೂಲ ಸೆಲೆ ಎಲ್ಲಿದೆ ಎಂಬ ಬಗ್ಗೆ ಜನಪದರ ಚಿಂತನೆ ಯಾವತ್ತೂ ಏಕ ಮುಖವುಳ್ಳದ್ದಲ್ಲ. ಶಿಷ್ಟತೆಯ ಸಂದರ್ಭದಲ್ಲಿ ನಾವಿಂಥ ಮಾತನ್ನು ಮರೆಯುವಂತಿಲ್ಲ. ಆದರೆ ಜನಪದರ ಆಧ್ಯಾತ್ಮಿಕ ಮತ್ತು ಧಾರ್ಮಿಕ ಚಿಂತನೆಯ ವೈಶಿಷ್ಟ್ಯವೆಂದರೆ ತಮ್ಮ ಆ ಕ್ಷಣದ ಬದುಕಿನ ಅಗತ್ಯ ಕರ್ತವ್ಯಗಳನ್ನು ನಿಭಾಯಿಸಿಕೊಳ್ಳುವ ಜೊತೆ ಜೊತೆಗೆ ಅಲೌಕಿಕ ತರ್ಕ ಹುಟ್ಟಿಕೊಳ್ಳುತ್ತದೆ. ಹೊಸ ಗದ್ದೆಯಲ್ಲಿ ಕಾಡು ಮೇಡಿನಲ್ಲಿ ಗುದ್ದಲಿ ಕತ್ತಿ ಕುಡಗೋಲುಗಳನ್ನು ಹಿಡಿದು ದುಡಿಯುವ ಸಂದರ್ಭದಲ್ಲಿ ಕಾಡುವ ಜೀವನದ ಪ್ರಶ್ನೆಗಳೇ ಅಧ್ಯಾತ್ಮದ ರೂಪವನ್ನು ಪಡೆದುಕೊಳ್ಳುತ್ತವೆ. ಚಿಂತನೆ ಮಾಡುವುದಕ್ಕಾಗಿಯೇ ಬದುಕುವವರನ್ನು ಜನಪದರಲ್ಲಿ ಕಾಣಲಾರೆವು. ಲೌಕಿಕ ಬದುಕು ಮತ್ತು ಇಲ್ಲಿನ ಅಸ್ತಿತ್ವಗಳನ್ನು ಕುರಿತ ಪ್ರಶ್ನೆ ಜನಪದರಲ್ಲಿ ಮುಖ್ಯವಾಗುತ್ತದೆ. ತಾವು ಗೌರವಿಸುವ ಶಕ್ತಿಯನ್ನು ಯಾವ ಕಾರಣಕ್ಕೂ ವೈಭವೀಕರಿಸದೆ. ತಮ್ಮ ಬದುಕಿನಲ್ಲಿ ಅದನ್ನು ಕಾಣುವ ಪ್ರಯತ್ನ ಇಲ್ಲಿ ನಿರಂತರವಾಗಿ ನಡೆಯುತ್ತದೆ. ಜನಪದರಲ್ಲಿ ವಿಜ್ಞಾನವೂ ಇದೆ. ಹಾಗೆಯೇ ಧರ್ಮವೂ ಇದೆ. ಆಸಕ್ತ ಬೇಕಾದುದನ್ನು ಹೆಕ್ಕಿಕೊಳ್ಳುತ್ತಾನೆ. ಊಹಾತ್ಮಕ ನಂಬಿಕೆಯು ಒಂದು ತತ್ವವಿರದೆ ಯಾವ ಸಂಶೋಧಕನೂ

ಯಾವ ವಿಜ್ಞಾನಿಯೂ ತನ್ನ ಕಾರ್ಯದಲ್ಲಿ ಮುನ್ನಡೆಯಲಾರ. ಹೀಗಿರಬಹುದು. ಹೀಗಾಗಬಹುದೆಂಬ ನಂಬಿಕೆಯೇ ಅಲ್ಲಿಯೂ ಮೂಲ. ಆದ್ದರಿಂದ ನಂಬಿಕೆಯ ಜಾಗ ಸಾರ್ವತ್ರಿಕ, ಸರ್ವಕಾಲಿಕ ತನ್ನ ರೂಪವನ್ನು ತನ್ನ ಇರುವಿಕೆಯನ್ನು ಬೇರೆ ರೀತಿಯಲ್ಲಿ ಅದು ಪ್ರಕಟಪಡಿಸುತ್ತದೆ.

ಜೀವನಕ್ಕೆ ಅತ್ಯಗತ್ಯವಾದ ಶಿಸ್ತು, ಸ್ವಚ್ಛತೆ, ನೈತಿಕ ಮೌಲ್ಯ, ಮಾನಸಿಕ ನೆಮ್ಮದಿ ಆರೋಗ್ಯ, ಸಮಾಜ, ಸಂಸ್ಕೃತಿ, ದೇವರು, ಮುಂತಾದ ಚಟುವಟಿಕೆಗಳ ಕೇಂದ್ರ ಬಿಂದುಗಳಾಗಿ ನಂಬಿಕೆಗಳನ್ನು ಅಳವಡಿಸಿಕೊಂಡು ಆಚರಣೆಗೆ ತಂದಿರುವ ಈ ಜನಪದರು ಯಾವ ಔಪಚಾರಿಕ ಶಿಕ್ಷಣ ಪಡೆದಿರಲಿಲ್ಲ. ನಂಬಿಕೆ ಮತ್ತು ಆಚರಣೆಗಳು ಪರಸ್ಪರ ಪೂರಕವಾಗಿವೆ. ಅನುಭವದ ಮೂಲಕ ಸೃಷ್ಟಿಯಾದ ನಂಬಿಕೆಗಳು, ಪುನಃ ಪುನಃ ಆಚರಣೆಯಲ್ಲಿ ಬಂದಾಗ ವ್ಯಕ್ತಿಗಳಿಂದ, ವ್ಯಕ್ತಿಗಳ ಮೂಲಕ ಸಮಾಜದಲ್ಲಿ ಸ್ಥಿರಗೊಳ್ಳುತ್ತವೆ. ಹೀಗಾಗಿ ನಂಬಿಕೆ ಮತ್ತು ಆಚರಣೆಗಳು ಅಷ್ಟೇ ಶಕ್ತಿಯುತವಾದ ಪ್ರಭಾವವನ್ನು ಬೀರುತ್ತವೆ.

ಸಾಂಪ್ರದಾಯಕವಾಗಿ ಅಂಗೀಕೃತವಾದ ಒಂದು ತಿಳುವಳಿಕೆಯನ್ನು ನಂಬಿಕೆ ಎನ್ನುತ್ತೇವೆ. ಜನಪದ ನಂಬಿಕೆಗಳಿಗೆ ಯಾವುದೇ ವೈಜ್ಞಾನಿಕ ಕಾರಣಗಳಿವೆ ಎಂದು ಪೂರ್ವಿಕರು ಅವುಗಳನ್ನು ಅನುಸರಿಸಿರಬಹುದೋ ಅಥವಾ ಇಲ್ಲವೋ ಆದರೆ ಅವುಗಳ ಹಿಂದೆ ಒಂದು ಅವ್ಯಕ್ತವಾದ ಭಯ ಅಥವಾ ಆತಂಕದಿಂದ ರೂಢಿಯಲ್ಲಿ ತಂದಿರಬೇಕು. ಹೀಗೆ ಭಾವ ಸಂಬಂಧಿಯಾದ ನಂಬಿಕೆಗಳು ಜನಪದರ ಬದುಕಿನ ಸಾಂಸ್ಕೃತಿಕ–ಬೌದ್ಧಿಕ ವಿಕಾಸದ ಮಜಲುಗಳನ್ನು ಗುರುತಿಸಲು ಸಹಾಯಕವಾಗುತ್ತವೆ.

ಮಾನವ ತನ್ನ ಆದಿಮತೆಯಿಂದ ಇವತ್ತಿನ ನಾಗರೀಕ ಅವಸ್ಥೆಗೆ ಬರುವಲ್ಲಿನ ಪಥದಲ್ಲಿ ತನ್ನ ಆಲೋಚನಾ ಕ್ರಮದಿಂದಾಗಿ ಬದುಕಿನ ವಿಧಾನದಲ್ಲಿ ಬದಲಾಗಿದ್ದಾನೆ. ನಿಜವಾಗಿ ಇಂದಿಗೂ ಆದಿಮ ಪ್ರವೃತ್ತಿಯ ಕೆಲವೊಂದು ಅಂಶಗಳು ಒಂದಲ್ಲ ಒಂದು ,ಬಗೆಯಲ್ಲಿ ಅವನಲ್ಲಿ ಅಂತರ್ಗತವಾಗಿರುವುದು ಸ್ಪಷ್ಟವಾಗಿದೆ. ಅದರಂತೆ ನಂಬಿಕೆಗಳಲ್ಲೂ ಬದಲಾವಣೆ ಕಂಡು ಬರುತ್ತವೆ. 'ಮನಿಪ್ಲಾಂಟ್' ಬಳ್ಳಿಯನ್ನು ಮನೆಯೊಳಗೆ ಬೆಳೆಸಿದಾಗ ಬೇಗ ಹಬ್ಬಿಕೊಂಡರೆ ಮನೆಯಲ್ಲಿ ಸಂಪತ್ತು ಅಭಿವೃದ್ಧಿಯಾಗುತ್ತದೆನ್ನುವುದು ಒಂದು ಆಧುನಿಕ ನಂಬಿಕೆ. ಜನಪದ ಮನಿಪ್ಲಾಂಟ್ ಬಳ್ಳಿಯ ಪರಿಚಯ ಇತ್ತೀಚಿನದು ಆದರೆ ಇಲ್ಲಿನ 'ಸಿರಿ" ಯ ಆಶಯ ಪರಿಕಲ್ಪನೆ ಹಳೆಯದು.

ತಂತ್ರಜ್ಞಾನದ ಯುಗದಲ್ಲಿರುವಾಗಲೂ ನಂಬಿಕೆಗಳನ್ನು ಬಿಟ್ಟಿಲ್ಲ. ಭಾರತದಂತಹ ದೇಶದ ಜನ ಬಾಹ್ಯಾಕಾಶ ನೌಕೆಗಳನ್ನು ಉಡಾಯಿಸುವ ಸಂದರ್ಭವನ್ನು ರಾಹು ಗುಳಿಕ ಕಾಲಗಳ ಹಿನ್ನೆಲೆಯಲ್ಲಿ ನಿರ್ಧರಿಸುತ್ತಾರೆ. ಅಂದ ಮೇಲೆ ಈ ನಂಬಿಕೆಗಳ ಸಾರ್ವತ್ರಿಕತೆ ಮತ್ತು ವ್ಯಾಪಕತೆ ಎಷ್ಟೆಂಬುದರ ಅರಿವಾಗುತ್ತದೆ. ನಿನ್ನೆಯ ತಂತ್ರಜ್ಞಾನದ ಪೂರ್ವಗ್ರಹಿಕೆಗಳು, ಊಹೆಗಳು, ನಂಬಿಕೆಗಳು, ಆಚರಣೆಗಳು ಆಧುನಿಕಯುಗದ ತಂತ್ರಜ್ಞಾನದ ವಿಸ್ತರಣೆಗೆ ಕಾರಣವಾಗಿರುತ್ತವೆ. ನಿನ್ನೆಯ ಸಂಸ್ಕೃತಿಯ ಒಳಗಳಲ್ಲಿದ್ದ ಸಮುದಾಯಗಳ ತಾಂತ್ರಿಕ ಗ್ರಹಿಕೆಗಳು ಇವತ್ತಿನ ಸಾಮಾಜಿಕ ಸಂಬಂಧಗಳಲ್ಲಿ ಆಧುನಿಕತೆಯ ಪ್ರತಿಬಿಂಬವಾಗಿ ಬೇರು ಬಿಟ್ಟಿರುತ್ತವೆ. ತಂತ್ರಜ್ಞಾನದ ಮಾರುಕಟ್ಟೆಯಲ್ಲಿ ಅನುಭೋಗಿ ಪ್ರಧಾನವಾದ ಜನಪದ ನಂಬಿಕೆ, ಆಚರಣೆ, ಉತ್ಸವಗಳು ಎಲ್ಲಾ ಕಡೆ ಚಾಚಿಕೊಂಡಿವೆ.

ಪೂರ್ವಿಕರಿಂದ ಬೆಳೆದುಕೊಂಡು ಬಂದಿರುವ ನಂಬಿಕೆ ಮತ್ತು ಆಚರಣೆಗಳು ಜೀವನದ ವಿವಿಧ ಮಗ್ಗುಲಗಳಲ್ಲಿ ಸರ್ವಕಾಲಿಕವಾಗಿ ಸರ್ವವ್ಯಾಪ್ತಿಯಾಗಿ ವೈಜ್ಞಾನಿಕವಾಗಿಯೂ ಅವೈಜ್ಞಾನಿಕವಾಗಿಯೂ ಇಂದಿನವರಿಗೂ ತನ್ನ ರೂಪ ರೇಷೆಗಳನ್ನು ಈ ಸಮಾಜದಲ್ಲಿ ವಿಸ್ತರಿಸಿಕೊಂಡಿವೆ. ಇಂತಹ ಈ ಎಲ್ಲಾ ನಂಬಿಕೆ ಮತ್ತು ಆಚರಣೆಗಳು ಅಧ್ಯಯನ ದೃಷ್ಟಿಯಿಂದ ದೇವರು, ಧರ್ಮ, ಹಬ್ಬಗಳು, ಲೌಕಿಕ ಜೀವನ ಕೃಷಿ, ನಿಸರ್ಗ, ಆಹಾರ–ಆರೋಗ್ಯಕ್ಕೆ ಸಂಬಂಧಿಸಿದಂತೆ ವಿಂಗಡಿಸಿಕೊಳ್ಳಲಾಗಿದೆಯಾದರೂ ಅವುಗಳಿಗೂ ಮಿಕ್ಕಿ ಇನ್ನೂ ವಿವಿಧ ನಮೂನೆಗಳಲ್ಲಿ ಕಂಡು ಬರುವ ನಂಬಿಕೆ ಮತ್ತು ಆಚರಣೆಗಳು ಸಂಕೀರ್ಣ ಎನ್ನುವ ಈ ಅಧ್ಯಾಯದಲ್ಲಿ ಸೇರಿಸಿಕೊಳ್ಳಲಾಗಿದೆ. ಅವುಗಳು ಈ ಕೆಳಗಿನಂತಿವೆ.

**೧. ವಳ್ಳಕಲ್ಲಿನಲ್ಲಿ ನೀರಿಟ್ಟರೆ ಸಾಲ ಹೆಚ್ಚಾಗುತ್ತದೆ :**

ಈ ಹಿಂದಿನ ಕಾಲದಲ್ಲಿ ಧಾನ್ಯಗಳನ್ನು ಕುಟ್ಟಲು ಮತ್ತು ಅಡುಗೆಗೆ ಬೇಕಾದ ಇತರ ಸಾಮಗ್ರಿಗಳನ್ನು ಕುಟ್ಟುವುದಕ್ಕೂ ವಳ್ಳು ಅಗತ್ಯವಾಗಿ ಬೇಕಾಗಿರುತ್ತಿತ್ತು. ದಿನ ನಿತ್ಯವೂ ಕೆಲಸಕ್ಕೆ ಉಪಯೋಗಿಸುವ ಸಾಧನವಾಗಿದೆ. ಅದರ ಭಾಗದಲ್ಲಿ ನೀರು ಇದ್ದರೆ ತಕ್ಷಣ ಯಾವುದೇ ಕಾಳನ್ನಾಗಲಿ ಕುಟ್ಟಲು ಬರುವುದಿಲ್ಲ. ಹಸಿಯಾಗಿದ್ದರೆ ಅದನ್ನು ಒರೆಸಿ ಒಣಗಿಸಲು ಸಮಯ ತೆಗೆದುಕೊಳ್ಳುವುದು ಹಾಗೂ ನೀರು ನಿಂತರೆ ಅದರಲ್ಲಿ ಸಣ್ಣ ಸಣ್ಣ ಕ್ರಿಮಿಗಳು ಹುಟ್ಟಿಕೊಳ್ಳುತ್ತವೆ. ಅದಕ್ಕಾಗಿ ವಳ್ಳು ಸ್ವಚ್ಛವಾಗಿಡುವ ಉದ್ದೇಶದಿಂದ ಈ ರೀತಿಯ ಹೆದರಿಕೆಯನ್ನು ಹೆಚ್ಚಿಸುವ ನಂಬಿಕೆ ರೂಢಿಯಲ್ಲಿ ಬಂದಿರಬೇಕು.

**೨. ಬೀಸುವಕಲ್ಲಿನ ಮೇಲೆ ಕೂಡಬಾರದು:**

ಬೀಸುವ ಕಲ್ಲು ಈ ಹಿಂದಿನ ಜನರಿಗೆ ದಿನ ಆಹಾರಕ್ಕಾಗಿ ಕಾಳುಗಳನ್ನು ಹಿಟ್ಟಾಗಿಸಲು ಮತ್ತು ಇತರ ಕಾಳುಗಳು ಚೂರ್ಣವಾಗಿ ಮಾಡಲು ಬೀಸುವ ಕಲ್ಲು ಅಗತ್ಯವಾಗಿ ಬೇಕಾಗಿತ್ತು. ಆಲ್ಲ ಜಲ್ಲನೆ ಬೀಸು ತಾಯಿ ಎಂದು ಈ ಕಲ್ಲನ್ನು ಪೂಜಿಸುವ ನಂಬಿಕೆಯು ಇದೆ. ಬೀಸುವ ಕೆಳಗಿನ ಕಲ್ಲಿಗೆ ಕಟ್ಟೆ ಕಟ್ಟಿ ಮೇಲಿನ ಕಲ್ಲು ಇಳಿಸಿ ಎತ್ತಲು ಬರುವಂತೆ ಇಡುತ್ತಾರೆ. ಬೀಸುವ ಕಲ್ಲಿನ ಮೇಲೆ ಕುಳಿತು ಅಥವಾ ತಿಳಿಯದೇ ಇರುವ ಸಣ್ಣ ಮಕ್ಕಳು ಅದನ್ನು ಎಳೆಯುವುದು ಮತ್ತು ಕುಳಿತುಕೊಂಡಾಗ ಕಾಲ ಮೇಲೆ ಬಿದ್ದರೆ ಅಪಾಯ ತಪ್ಪಿದ್ದಲ್ಲ. ಆದ್ದರಿಂದ ಅದರ ಸಮೀಪಕ್ಕೆ ಹೋಗದಂತೆ ಈ ನಂಬಿಕೆ ನಿಷೇಧ ರೂಪದಲ್ಲಿ ರೂಢಿಯಲ್ಲಿರಬೇಕು.

**೩. ಒಡೆದ ಕನ್ನಡಿಯಲ್ಲಿ ಮುಖ ನೋಡಬಾರದು:**

ಮನೆಯಲ್ಲಿ ಕನ್ನಡಿ ಒಡೆಯಬಾರದು ಮತ್ತು ಕನ್ನಡಿ ಬೆಳಕು ಮನೆಯಲ್ಲಿ ಹಾಕಬಾರದೆಂಬ ನಂಬಿಕೆಗಳೂ ಕೂಡಾ ಇವೆ. ಮನೆಯಲ್ಲಿ ಕನ್ನಡಿ ಒಡೆದರೆ ಅಶುಭ ಎಂಬ ನಂಬಿಕೆ ಮೂಢನಂಬಿಕೆ ಎಂದಾದರೂ ಈ ಒಡೆದ ಕನ್ನಡಿ ಬಳಸದೆ ಇರುವುದರಲ್ಲಿ ಉಪಯೋಗವಿದೆ. ಏಕೆಂದರೆ ಒಡೆದ ಕನ್ನಡಿಯ ಗಾಜು ಚೂಪಾಗಿದ್ದು ಅಂಗದ ಯಾವ ಭಾಗಕ್ಕೂ ತಗಲಿದರೂ ರಕ್ತ ಸುರಿಯುತ್ತದೆ ಮತ್ತು ಚುಚ್ಚಿದ ಭಾಗದಲ್ಲಿ ಗಾಜು ಸೇರುತ್ತವೆ. ಆದ್ದರಿಂದ ಮುಖವೇ ನೋಡಬಾರದೆಂಬ ನಂಬಿಕೆಯಿಂದಾಗಿ ಅದನ್ನೇ ಉಪಯೋಗಿಸದೆ ಇರುತ್ತಾರೆಂಬ ಉದ್ದೇಶ ಈ ನಂಬಿಕೆಯಲ್ಲಿದೆ.

**೪. ಮಣೆಯನ್ನು ಗೋಡೆಗೆ ಒರಗಿಸಿ ನಿಲ್ಲಿಸಬಾರದು :**

ಮಣೆಯನ್ನು ಗೋಡೆಗೆ ಒರಗಿಸಿ ನಿಲ್ಲಿಸಿದಾಗ ಬೀಳುವ ಸಾಧ್ಯತೆಗಳಿರುತ್ತವೆ. ಆಕಸ್ಮಾತ್ತಾಗಿ ಕಾಲ ಮೇಲೆ ಬಿದ್ದರೆ ಕಾಲಿಗೆ ನೋವಾಗುವುದು. ಮನೆಯಲ್ಲಿ ಸಣ್ಣ ಮಕ್ಕಳಿದ್ದರೆ ಅವು ಜಗ್ಗಿದಾಗ ಮೈಮೇಲೆ ಹಾಕಿಕೊಳ್ಳುತ್ತವೆ. ಆದ್ದರಿಂದ ಗೋಡೆಗೆ ಒರಗಿಸಿಡಬಾರದೆಂಬ ನಂಬಿಕೆಯಿದೆ.

**೫. ಕರಿದಾರದಲ್ಲಿ ಕವಡೆ, ಗಜಗ, ಕೇರು ಹಾಕಿ ಕಟ್ಟುವುದು :**

ಕರಿದಾರದಲ್ಲಿ ಕವಡೆ, ಗಜಗ, ಕೇರು, ನಾರುವಬೇರು ಮೊದಲಾದವುಗಳನ್ನು ಪೋಣಿಸಿ ಕಾಲಿಗೆ, ಕೈಗೆ ಕಡಗ ಹಾಕಿದಂತೆ ಕಟ್ಟಿಕೊಂಡಿರುವುದು ಹಳ್ಳಿಗಳಲ್ಲಿ ಕಾಣುವ ದೃಶ್ಯ. ಕಾಲು, ಕೈ ಮುರಿದು ಅಥವಾ ಒಳ ನೋವಾದಾಗ ಅದಕ್ಕೆ ಕಂಬೀಕಟ್ಟಿಸಿಯೋ ತಿಕ್ಕಿಸಿಯೂ ಗುಣಪಡಿಸುತ್ತಿದ್ದರು. ಕಂಬಿ ಬಿಚ್ಚಿದ ತರುವಾಯ ಸಹಿತ ಆ ಕಾಲಿಗೆ ವಿಶ್ರಾಂತಿ ಬೇಕಿರುತ್ತಿತ್ತು. ಧಕ್ಕೆ ತಗುಲದಂತೆ ಎಚ್ಚರ ವಹಿಸಬೇಕಾಗುತ್ತಿತ್ತು. 'ಅದಕ್ಕೆ ಯಾರು ಏನು ಮಾಡಬಾರದು ಅದು ನೋವಿನ ಕಾಲು' ಎಂಬ ತಿಳಿವಳಿಕೆ ಕೊಡುವುದಕ್ಕೆ ಈ ಕರಿದಾರ ಕವಡೆ ಕೇರಿನ ರಕ್ಷಣೆಯನ್ನು ಅದಕ್ಕೆ ಕಟ್ಟುತ್ತಿದ್ದರು. ಇದು ನೋವಿನ ಕಾಲು ಎಂಬುದನ್ನು ಸೂಚಿಸುವ ಸಂಕೇತ ಇದಾಗಿತ್ತು. ಪೂರ್ಣ ಆರಾಮವಾಗುತ್ತಲೂ ಅದನ್ನು ಹರಿದು ಹಾಕುತ್ತಿದ್ದರು. ಕಟ್ಟಿಕೊಂಡ ಕಾಲನ್ನು ಬಿಡಿ, ಆ ಕವಡೆಯನ್ನು, ಕೇರನ್ನು ಮುಟ್ಟಿದರೇನೇ ನಮಗೆ ಅನಾಹುತವಾಗಬಹುದೆಂಬ ಭೀತಿಯನ್ನು ನೋಡಿದವರಿಗೆ ಹುಟ್ಟಿಸುವಂತಿರುತ್ತದೆ.

**೬. ದನಕರುಗಳಿಗೆ ದಿಟ್ಟಿ ಕಣ್ಣಿ ಕಟ್ಟುವುದು :**

ಈಯಲಿಕ್ಕಾದ ಅದರಲ್ಲಿಯೂ ಚೊಚ್ಚಿಲ ಗಬ್ಬವಿದ್ದ ದನಗಳಿಗೆ ಕರಿಯದಾರ, ನಿಂಬೆಹಣ್ಣು ಕೇರು, ಕವಡಿ ಇತ್ಯಾದಿಗಳನ್ನು ವಿಶಿಷ್ಟವಾದ ಪುಂಡೀನಾರಿನಿಂದ ಮಾಡಿದ ಲಡ್ಡಿನಲ್ಲಿ ಪೋಣಿಸುತ್ತಾರೆ. ಅದಕ್ಕೆ ಸಾಧು ಇಲ್ಲವೆ ಫಕೀರೊಬ್ಬರು ಮಂತ್ರಹಾಕಿದಂತೆ ಮಾಡಿ ಅದನ್ನು ಈ ಗಬ್ಬದ ದನದಕೊರಳಿನಲ್ಲಿ ಕಟ್ಟುತ್ತಾರೆ. ನೆದರು ಅಥವಾ ದೃಷ್ಟಿಯಾಗಬಾರದೆಂದು ಇದನ್ನು ಕಟ್ಟುತ್ತಾರೆಂಬ ತಿಳಿವಳಿಕೆಯೇ ಜನರಲ್ಲಿದೆ. ಈ ಲಡ್ಡನ್ನು ಕಟ್ಟುವ ಮೂಲ ಉದ್ದೇಶ ಯಾರು ಇದನ್ನು ಹೊಡೆಯಬಾರದು, ಓಡಿಸಬಾರದು. ಕಾರಣ ಇದು ಗಬ್ಬವಿದೆ ಕಲ್ಲು ಒಗೆದರೆ ಹೊಟ್ಟೆಗೆ ಹತ್ತಿದ್ದರೆ ಗರ್ಭಪಾತವಾಗಬಹುದು ಇಲ್ಲವೆ ಸಾಯಬಹುದು ಎಂಬ ತಿಳಿವಳಿಕೆಯನ್ನು ಸಾರ್ವಜನಿಕರಿಗೆ ಕೊಡುವುದೇ ಆಗಿದೆ.

**೭. ಹೊರಬಾಗಿಲ ಇಕ್ಕೆಲದಲ್ಲಿ ಕುದರೆ ಮುಖಕೂಡಿಸುವುದು :**

ಅವು ಕೇವಲ ಅಲಂಕಾರವೆಂದು ನಂಬಿದವರೆ ಹೆಚ್ಚು ಹಾಗಿದ್ದರೆ ಪ್ರತಿ ಊರಲ್ಲಿ ಹಲವಾರು ಮನೆಗಳಿಗೆ ಆ ರೀತಿಯ 'ಕುದರೆಯ ಮುಖ' ಮಾಡಿಸಬಹುದಿತ್ತು. ಊರಗೌಡ, ದೇಸಾಯಿ, ಜಹಗೀರದಾರ ಮೊದಲಾದ ಪ್ರತಿಷ್ಠಿತ ವ್ಯಕ್ತಿಗಳ ಮನೆಯ ಬಾಗಿಲಿಗೆ ಮಾತ್ರ ಈ ಬೆಡಗಿನ 'ಕುದರೆಯ ಮುಖ'ದ ಸಂಕೇತಗಳನ್ನು ಕಾಣುತ್ತೇವೆ. ಇವು ಅವರ ದರ್ಪ, ಅಧಿಕಾರ, ಆಸ್ತಿ, ದೊಡ್ಡಸ್ಥನ ಮೊದಲಾದವುಗಳ ಸಂಕೇತ 'ಕುದರೆ' ಜಂಬ ಅಹಂಕಾರ ಅಭಿಮಾನ ಹರ್ಷಗಳಿಗೆ ಪ್ರತೀಕವಾಗಿ ಈಗಲೂ ರೂಢಿಯಲ್ಲಿದೆ.

**೮. ಗೂಳಿ ಬಿಡುವುದು:**

ದೇವರಿಗೆ ಹರಕೆ ಹೊತ್ತವರೋ, ಹೆಚ್ಚು ದನಕರುಗಳಿದ್ದವರೋ ಒಂದು ಕರು ಅಥವಾ ಮಣಕವನ್ನು ದೇವರಿಗೆ ಬಿಡುತ್ತಿದ್ದರು. ಅದು ಸರ್ವರ ಸೊತ್ತಾಗಿರುತ್ತಿತ್ತು. ಗೋಮೂತ್ರಕ್ಕಾಗಿ, ಪೂಜೆಗಾಗಿ ಎಲ್ಲರೂ ಅದನ್ನು ಶಮ್ಮುದಾಗಿಸಿಕೊಳ್ಳುತ್ತಿದ್ದರು. ಅದಕ್ಕೆ ತಿನ್ನಲು ಕೊಡುತ್ತಿದ್ದರು. ಹೀಗೆ ಮೇದು ದೊಡ್ಡದಾಗಿ ಕರುಗಳನ್ನು ಹಾಕಿದರೆ ಅವುಗಳನ್ನು ದೇವಸ್ಥಾನದ ವ್ಯವಸ್ಥಾಪಕರು ಮಾರಿ ಬಂದ ಹಣದಿಂದ ದೇವಸ್ಥಾನ ಸುಧಾರಣೆ ಕೈಕೊಳ್ಳುತ್ತಿದ್ದರು. ಇದರಂತೆ ಊರಿನ ಸಾರ್ವಜನಿಕ ಆಕಳುಗಳ ಉಪಯೋಗಕ್ಕೆಂದೇ ಹೋರಿಗರುವನ್ನು

ಬಿಡುತ್ತಿದ್ದರು. ಇದರ ಹಿಂಗಾಲಿನ ಬಲದೊಡೆಯ ಮೇಲೆ ಗುರುತು ಹಾಕುತ್ತಿದ್ದರು. ಈ ಮುದ್ರೆ ಇದ್ದುದನ್ನು ಯಾರು ಕೊಳ್ಳುತ್ತಿರಲಿಲ್ಲ. ಕಾರಣ ಇದು ಸಾರ್ವಜನಿಕ ಆಸ್ತಿ ಎಂಬುದನ್ನು ಈ ಸಂಕೇತ ಸೂಚಿಸುತ್ತಿತ್ತು. ಸಾಮಾಜಿಕ ಪ್ರಯೋಜನ ಜೊತೆಗೆ ಸಾಮಾಜಿಕ ತಿಳುವಳಿಕೆಯನ್ನು ನೀಡುವದೂ ಈ ಸಂಕೇತಗಳ ಉದ್ದೇಶವಾಗಿತ್ತು.

**೯. ಜನಿವಾರ ಹಾಕುವುದು :**

ಗುರು ಶಿಷ್ಯನ ಯೋಗ್ಯತೆಯನ್ನು ಪರೀಕ್ಷೆ ಮಾಡಿ ಮೂರೆಳೆಯ ಮುಂಜಾದರ್ಭೆ (ಜನಿವಾರ)ಯನ್ನು ಅವನ ಸೊಂಟಕ್ಕೆ ಕಟ್ಟುತ್ತಿದ್ದರು. ಇದು ದೇಹ, ಮಾತು, ಮನಸ್ಸುಗಳನ್ನು ನಿಗ್ರಹಿಸುತ್ತೇನೆ · ಎಂಬ ವೃತ್ತದ ಸೂಚನೆ ನಂತರ ವೇದ ಕಲಿಸುತ್ತಿದ್ದರು. ಅದೇ ನಂಬಿಕೆಯಿಂದಾಗಿ ಬ್ರಾಹ್ಮಣರಲ್ಲಿ ಶಿಕ್ಷಣ ಕೊಡುವ ಪದ್ಧತಿ ಬದಲಾದರು ಜನಿವಾರ ಧರಿಸುವುದು ಇಂದಿಗೂ ಇದೆ.

**೧೦. ಬಾಗಿಲು ತಲೆಗೆ ಹತ್ತಬಾರದು :**

ಈ ನಂಬಿಕೆಯು ಬಾಗಿಲು ದಾಟುವಾಗ ತಲೆ ಬಾಗಿಸಿ ನಡೆಯಬೇಕೆಂಬುದು ಸೂಚಿಸುತ್ತದೆ. ಇದು ಇನ್ನೊಂದು ಅರ್ಥವನ್ನು ಕೊಡುತ್ತದೆ. ಅದೇನೆಂದರೆ ಜೀವನದಲ್ಲೂ ಕೂಡಾ ನಾವು ಗುರು ಹಿರಿಯರನ್ನು ಗೌರವಿಸಿ ಮಾನವಿಯತೆಯಿಂದಿರಬೇಕು ಹಾಗೂ ಒಂದು ವೇಳೆ ಬಾಗಿಲು ತಲೆಗೆ ಬಡಿದರೆ ಪೆಟ್ಟಾಗಿ ಎಚ್ಚರ ತಪ್ಪಬಹುದು. ಅಥವಾ ಪ್ರಾಣಕ್ಕೆ ಅಪಾಯವೇ ಬರಬಹುದು ಎಂಬ ಜಾಗೂರುಕತೆಯನ್ನು ಸೂಚಿಸುವ ನಂಬಿಕೆ ಇದಾಗಿದೆ.

**೧೧. ರಾತ್ರಿ ಹೊತ್ತು ಬೀದಿ ಬಾಗಿಲನ್ನು ಸಾರಿಸಬಾರದು :**

ರಾತ್ರಿ ಹೊತ್ತು ಓಡಾಡುವುದು ಕಡಿಮೆ. ಎಲ್ಲರೂ ನಿದ್ರಾವಸ್ಥೆಯಲ್ಲಿರುವುದರಿಂದ ಸ್ವಚ್ಛತೆಗೊಳಿಸಿದರೂ ಅದರ ಉಪಯುಕ್ತತೆ ಪಡೆಯುವುದಿಲ್ಲ. ಮತ್ತೆ ಅದರ ಮೇಲೆ ಧೂಳು, ಕ್ರಿಮಿ ಕೀಟಗಳು ಬಂದು ಸೇರುಕೊಳ್ಳುತ್ತವೆ. ಮುಂಜಾನೆಯಾದರೆ ಕಸಗೂಡಿಸಿ ಸಾರಿಸಿದರೆ ಮನೆಯೊಳಗೆ ಬರುವ ಧೂಳು, ಕ್ರಿಮಿ, ಕೀಟಗಳ ಬಾಧೆಯನ್ನು ನಿಯಂತ್ರಿಸಬಹುದು ಹಾಗೂ ಅದರ ಮೇಲಿಟ್ಟ ರಂಗೋಲಿ ಇನ್ನು ಮನೆಯ ಸೌಂದರ್ಯವನ್ನು ಹೆಚ್ಚಿಸುತ್ತದೆ.

**೧೨. ರಾತ್ರಿ ಹೊತ್ತು ಸೂಜಿಯಿಂದ ಹೊಲೆಯಬಾರದು :**

ಏನೇ ಹೊಲೆಯಬೇಕಾದರೂ ಕಣ್ಣಿನ ದೃಷ್ಟಿಕೋನ ಅದರ ಮೇಲೆಯೇ ಇಡಬೇಕಾಗುತ್ತದೆ. ಇಲ್ಲವಾದರೆ ಹೊಲಿಗೆಯು ತಪ್ಪುತ್ತದೆ. ಹಾಗೂ ಸೂಜಿಯು ಅಂಗಾಂಗಗಳಿಗೆ ಚುಚ್ಚುತ್ತದೆ. ಬೆಳಕಿನಲ್ಲಿ ಮಾಡಬಹುದಾದ ಕೆಲಸಕ್ಕೂ ಮತ್ತು ಕತ್ತಲಲ್ಲಿ ಮಾಡಬಹುದಾದ ಕೆಲಸಕ್ಕೂ ವ್ಯತ್ಯಾಸವಾಗುತ್ತದೆ. ರಾತ್ರಿ ಹೊತ್ತು ಇಂತಹ ಕೆಲಸಗಳಿಂದಾಗಿ ಕಣ್ಣಿನದೋಷಕ್ಕೆ ಕಾರಣವಾಗುತ್ತದೆ. ಆದ್ದರಿಂದ ಇಂತಹ ಆತಂಕ ತಪ್ಪಿಸುವ ಉದ್ದೇಶ ಈ ನಂಬಿಕೆಯಲ್ಲಿದೆ.

**೧೩. ಸಂಜೆ ಹೊತ್ತು ಕಸಗೂಡಿಸಬಾರದು :**

ಸಂಜೆ ಹೊತ್ತು ಕಸಗೂಡಿಸಿ ಹೊರಹಾಕಿದರೆ ಮನೆಯ ಲಕ್ಷ್ಮಿ ಹೊರ ಹೋಗುತ್ತಾಳೆಂಬ ನಂಬಿಕೆಯಿದೆ. ಸಂಜೆ ಕಸ ಗೂಡಿಸುವಾಗ ಮನೆಯಲ್ಲಿ ಬಿದ್ದಂತಹ ಸಣ್ಣ ಪುಟ್ಟ ವಸ್ತುಗಳೇನಾದರೂ ಕೈ ತಪ್ಪಿ ಕಸದ ಮೂಲಕ

ಹೊರಹೋಗಬಹುದು. ಆದ್ದರಿಂದ ವಸ್ತುಗಳಾವವು ಕಳೆದು ಹೋಗಬಾರದೆಂಬ ಕಾರಣಕ್ಕಾಗಿ ಸಂಜೆ ಹೊತ್ತು ಕಸಗೂಡಿಸಿ ಹೊರ ಹಾಕಬಾರದೆಂಬ ನಿಷೇಧ ನಂಬಿಕೆ ಜಾರಿಗೆ ತಂದಿರಬೇಕು.

**೧೪. ರಾತ್ರಿ ಹೊತ್ತು ಒಲೆ ಸಾರಿಸಬಾರದು :**

ಈ ನಂಬಿಕೆಯು ಸರಿಯಾಗಿಯೇ ಇದೆ. ಏಕೆಂದರೆ ಹಳ್ಳಿಯಲ್ಲಿ ಮುಂಜಾನೆ ಮತ್ತು ರಾತ್ರಿ ಎರಡ್ಹೊತ್ತಿನ ಆಹಾರ ಬೇಯಿಸುವುದಕ್ಕಾಗಿ ಒಲೆಯನ್ನು ಹಚ್ಚುತ್ತಾರೆ. ಅಂದಾಗ ರಾತ್ರಿ ಹೊತ್ತು ಅಡುಗೆಯಾದ ನಂತರ ಬಿಸಿಯಾಗಿರುತ್ತದೆ. ಮಣ್ಣಿನಿಂದ ತಯಾರಿಸಿರುವ ಒಲೆ ಬಿಸಿ ಇದ್ದಾಗ ನೀರು ಹಾಕುತ್ತಾ ಅಥವಾ ಸಾರಿಸಿದಂತೆ ಒಲೆ ಆದಷ್ಟು ಬೇಗ ಬಿದ್ದು ಬಿಡುತ್ತದೆ. ಆದ್ದರಿಂದ ಒಲೆ ಸಾರಿಸಬೇಕಾದರೆ ಅದು ತಣ್ಣಗಾದ ಬಳಿಕವೆ ಸಾರಿಸುವುದರಿಂದ ಒಲೆಗಳು ಮತ್ತಷ್ಟು ಗಟ್ಟಿಯಾಗುತ್ತವೆ.

**೧೫. ಮಕ್ಕಳಿಗೆ ದೃಷ್ಟಿ ಆಗದಂತೆ ಕಾಡಿಗೆ ಹಚ್ಚುವುದು :**

ಮಕ್ಕಳ ಮುದ್ದಾದ ಮುಖ ಮುಗಳ್ನಗೆ ಇನ್ನೊಬ್ಬರ ಮನವನ್ನು ಕಲುಕುತ್ತವೆ. ಇದರಿಂದ ನೋಡುವವರ ದೃಷ್ಟಿಯು ಒಳ್ಳೆಯದಾಗಿರುತ್ತದೆಯೋ ಅಥವಾ ಕೆಟ್ಟದಾಗಿರುತ್ತದೆಯೋ ಎಂಬ ಭಯದಿಂದ ಮುಖ. ಗಲ್ಲದ ಮೇಲೆ ಮತ್ತು ಕಣ್ಣಿಗೂ ಕೂಡಾ ಕಾಡಿಗೆ ಹಚ್ಚುವರು. ಮಗುವಿನ ಅಂದವಾದ ಮುಖದಲ್ಲಿ ಈ ಕಪ್ಪು ಕಾಡಿಗೆ ಎದ್ದು ಕಾಣುವುದು. ಮನೆಯಲ್ಲಿ ದೀಪದ ಹೊಗೆ ಸಂಗ್ರಹಿಸಿ ಅದಕ್ಕೆ ಪಟಕಾ ಸೇರಿಸಿ ಔಡಲ ಎಣ್ಣೆಯಲ್ಲಿ ಕಲಿಸಿ ಮಾಡಿದ ಕಾಡಿಗೆಯು ಮಗುವಿನ ಕಣ್ಣು ತಿಳಿಯಾಗಿರಿಸುವವು ಹಾಗೂ ಮಕ್ಕಳಿಗೆ ಬರುವ ಕಣ್ಣು ಕುಪರೆ, ಕಣ್ಣು ಬರುವುದು ಇತ್ಯಾದಿ ಕಣ್ಣು ನೋವುಗಳನ್ನು ಬಾರದಂತೆ ನಿಯಂತ್ರಿಸುತ್ತದೆ. ಆದ್ದರಿಂದ ಈ ಕಾಡಿಗೆ ಮಗುವಿನ ಕಣ್ಣಿಗೆ ತಪ್ಪದಂತೆ ಹಚ್ಚುವುದು ಆರೋಗ್ಯಕರವಾಗಿದೆ. ಈ ಕಪ್ಪು ಕಾಡಿಗೆ ಜನರ ಕಣ್ಣಿನ ದೃಷ್ಟಿಯಿಂದಲೂ ಹಾಗೂ ಕಣ್ಣು ನೋವಿನಿಂದಲೂ ರಕ್ಷಿಸುತ್ತದೆ.

**೧೬. ಫಲಬಿಟ್ಟ ಮರಗಳಿಗೆ ಚಪ್ಪಲಿ ಕಟ್ಟುವುದು :**

ಮರಗಳನ್ನು ಫಲಕೊಡುವ ದೇವತೆಗಳಂತೆ ಪೂಜಿಸುವುದುಂಟು. ಆದರೂ ಜನರು ಇಲ್ಲಿ ತಮ್ಮ ಸ್ವಾರ್ಥ ಭಾವನೆಯಿಂದಾಗಿ ದೇವತೆಯನ್ನುವ ನಂಬಿಕೆ ಮರೆತು ಚಪ್ಪಲಿಗಳನ್ನು ಕಟ್ಟುತ್ತಾರೆ. ಮರದ ತುಂಬೆಲ್ಲಾ ಫಲಬಿಟ್ಟಾಗ ಮರಕ್ಕೂ ದೃಷ್ಟಿತಾಗಿ ಹಣ್ಣು ತಾನಾಗಿಯೇ ಉದರಬಹುದು ಇಲ್ಲವೆ ಮುಂದಿನ ವರ್ಷಕ್ಕೆ ಕಡಿಮೆ ಫಲ ಬಿಡಬಹುದೆನ್ನುವ ಭಯದಿಂದಲೇ ಚಪ್ಪಲಿ ಕಟ್ಟುತ್ತಾರೆ.

**೧೭. ರಾತ್ರಿ ಹಂಚು ತಿಕ್ಕಬಾರದು :**

ರಾತ್ರಿ ಹೊತ್ತು ರೊಟ್ಟಿ ಬೇಯಿಸಿದ ಹಂಚು ಬಿಸಿಯಾಗಿರಬಹುದು. ದಿನಾಲು ಬಿಸಿಯಾದ ಹಂಚಿನಲ್ಲಿ ನೀರು ಹಾಕುತ್ತಾ ಹೋದಂತೆ ಹಂಚು ಬಹು ಬೇಗ ತೆಳುವಾಗುತ್ತದೆ. ಇಲ್ಲವೆ ರಂಧ್ರಗಳು ಬೀಳುತ್ತವೆ. ಇದಲ್ಲದೆ ರೈತರ ಮನೆಯಲ್ಲಿ ದನಕರುಗಳು ಹಂಚನ್ನು ಕಲ್ಲಿನಿಂದ ತಿಕ್ಕುವ ಕರ್ಕಶ ಶಬ್ದಕ್ಕೆ ಹೆದರುತ್ತವೆ. ಗೂಟಕ್ಕೆ ಕಟ್ಟಿದ ಹಗ್ಗ ಜಗ್ಗಲು ಪ್ರಯತ್ನಿಸುತ್ತವೆ. ಆದ್ದರಿಂದ ರಾತ್ರಿ ಹಂಚು ತಿಕ್ಕಬಾರದೆನ್ನುವ ಉದ್ದೇಶ ಈ ನಂಬಿಕೆಯು ಒಳಗೊಂಡಿದೆ.

೧೮. ಗುಬ್ಬಿ ಗೂಡು ಕಟ್ಟಿದರೆ ಬೀಳಿಸಬಾರದು :

ಗುಬ್ಬಿ ಒಂದು ಚಿಕ್ಕ ಜೀವಿ ತನ್ನ ರಕ್ಷಣೆಗೋಸ್ಕರ ಗೂಡನ್ನು ನಿರ್ಮಿಸಿಕೊಳ್ಳಲು ತನ್ನ ಚಿಕ್ಕ ಬಾಯಿಂದ ಒಂದೊಂದು ಹುಲ್ಲಿನ ಕಡ್ಡಿಯನ್ನು ಆಯ್ದುಕೊಂಡು ಬಂದು ಗೂಡನ್ನು ನಿರ್ಮಿಸಿಕೊಳ್ಳುವುದು. ತನ್ನ ಪ್ರಯತ್ನದ ಮೂಲಕ ನಿರ್ಮಿಸಿದ ಈ ಗೂಡನ್ನು ಬೀಳಿಸಿದರೆ ಅದು ಮತ್ತೆ ಯತ್ನ ಮಾಡಿ ಗೂಡು ಕಟ್ಟುವವರೆಗೆ ಆಶ್ರಯವಿರುವುದಿಲ್ಲ. ಮೇಲಾಗಿ ಸಕಲ ಜೀವಿಗಳಿಗೂ ದಯ ತೋರುವುದೇ ಮಾನವ ಧರ್ಮ. ಇನ್ನು ಮಾನವೀಯತೆ ಮರೆತು ಬಾಳುವಂತಹವರಿಗೆ ಗುಬ್ಬಿ ಗೂಡು ಬೀಳಿಸಿದರೆ ಮಕ್ಕಳಾಗುವುದಿಲ್ಲ ಎಂಬ ಹೆದರಿಕೆಯನ್ನು ಈ ನಂಬಿಕೆಯ ಮೂಲಕ ಒಡ್ಡಲಾಗಿದೆ.

ಹೀಗೆ ಸಂಕೀರ್ಣವಾದ ನಂಬಿಕೆ ಮತ್ತು ಆಚರಣೆಗಳು ಜೀವನದ ವಿವಿಧ ಸ್ತರಗಳಲ್ಲಿ ಚಾಚಿಕೊಂಡಿದ್ದು ಅವುಗಳು ತಮ್ಮದೇ ಆದ ವಿಸ್ತಾರವಾದ ನೆಲೆಯನ್ನು ಹೊಂದಿವೆ. ಇವು ಪ್ರಾಚೀನ ಜನಪದರಿಂದ ಬಂದವುಗಳಾದರೂ ಹಳೆ ನೀರಿನೊಂದಿಗೆ ಒಂಧಾಗುವ ಹೊಸ ನೀರಿನಂತೆ ಚಲಿಸುತ್ತಲಿವೆ. ಇವುಗಳಲ್ಲಿ ಕೆಲವು ನಂಬಿಕೆ ಮತ್ತು ಆಚರಣೆಗಳು ನೇರವಾಗಿ ತಮ್ಮ ಉಪಯುಕ್ತತೆ ತೋರಿಸಿಕೊಟ್ಟರೆ ಇನ್ನು ಕೆಲವು ತಮ್ಮದೇ ಆದ ಗೂಡಾರ್ಥವನ್ನು ಒಳಗೊಂಡಿವೆ. ಇಂತಹವೇ ಮೂಢನಂಬಿಕೆಗಳೆನ್ನಲು ಕಾರಣವಾಗಿರುತ್ತವೆ. ಆದರೆ ಇವುಗಳನ್ನು ಹಾಗೆಯೇ ಅನುಸರಿಸದೆ ಅವುಗಳಲ್ಲಿ ಅಡಗಿರುವುದನ್ನು ತಾರ್ಕಿಕ ಭಾವನೆಯಿಂದ ಗುರುತಿಸುವ ಪ್ರಯತ್ನ ನಮ್ಮದಾಗಬೇಕು.

# ಅಧ್ಯಾಯ – ೮
## ಸಮಾರೋಪ

ಜನಪದ ನಂಬಿಕೆಗಳು ಸಾಹಿತ್ಯೇತರ ಭಾಗಕ್ಕೆ ಸೇರುತ್ತವೆ. ಜಾನಪದ ವಿದ್ವಾಂಸರು ವಿಭಾಗಿಸಿದ ವೈಜ್ಞಾನಿಕ ನಂಬಿಕೆಗಳ ಹಿನ್ನೆಲೆಯಲ್ಲಿಯೇ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ನಂಬಿಕೆಗಳು ದೇಶ ಪ್ರಪಂಚದಾದ್ಯಂತ ಹರಡಿಕೊಂಡಿವೆ. ಇದರ ವ್ಯಾಪ್ತಿ ವಿಶಾಲವಾಗಿರುವುದು. ಇಲ್ಲಿ ಬೀದರ ಜಿಲ್ಲೆಗೆ ಸಂಬಂಧಿಸಿದ ಜನಪದ ನಂಬಿಕೆ ಮತ್ತು ಆಚರಣೆಗಳು. ಎಂಬ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಇಲ್ಲಿಯ ಹೆಚ್ಚಿನ ಜನರು ಹಳ್ಳಿಯಲ್ಲಿದ್ದರೆಂದು ಬಹಮನಿ ಸುಲ್ತಾನರ ಕಾಲದಲ್ಲಿ ಭೇಟಿ ನೀಡಿದ ರಷ್ಯಾದೇಶದ ವ್ಯಾಪಾರಿಯಾದ ನಿಕಿತಿನ್ ಹೇಳುತ್ತಾನೆ. ಅದರಂತೆ ಇಂದಿಗೂ ಹೆಚ್ಚಿನ ಜನ ಹಳ್ಳಿಯಲ್ಲಿರುವುದು ಕಂಡು ಬರುತ್ತದೆ. ಆದ್ದರಿಂದ ಜಿಲ್ಲೆಯಾದ್ಯಂತ ಜನಪದ ನಂಬಿಕೆ ಮತ್ತು ಆಚರಣೆಗಳು ಇನ್ನೂ ಜನರಲ್ಲಿ ಹಚ್ಚ ಹಸಿರಾಗಿವೆ ಎಂದು ತಿಳಿಯುತ್ತದೆ.

ನಂಬಿಕೆಗಳ ಹುಟ್ಟೂ ಪೂರ್ವೋತ್ತರ ಬಗ್ಗೆ ಅವಲೋಕಿಸಿದಾಗ, ಪ್ರಾಚೀನ ಮಾನವನಿಗೆ ನಂಬಿಕೆಗಳು ಮೂಲ ಆಸ್ತಿ. ಕಾಲಕ್ರಮೇಣ ಈ ಆಸ್ತಿಯು ವಿಸ್ತಾರವಾಯಿತು. ಆ ಸಮಯದಲ್ಲಿ ಪ್ರಾಚೀನರು ಒಂದು ಕಡೆಯಿಂದ ಇನ್ನೊಂದು ಕಡೆಗೆ ವಲಸೆ ಹೋಗುತ್ತಿದ್ದರು. ಭೂಮಿ ಯಾರ ಆಸ್ತಿಯೂ ಆಗಿರಲಿಲ್ಲ. ಎಲ್ಲಾ ಸಂಘ ಜೀವನ, ಒಟ್ಟಿಗೆ ಒಂದು ಕಡೆ ನೆಲಸುವುದು, ವಾಸ ಮಾಡುವುದು, ಅಲ್ಲಿಂದ ಮುಂದೆ ಹೊಗುವುದು. ಜನಸಂಖ್ಯೆ ತುಂಬಾ ಕಡಿಮೆ. ಅಪಾರವಾದ ಭೂಸಂಪತ್ತು ಯಾರಿಗೆ ಎಷ್ಟು ಬೇಕಾದರೂ ಅಷ್ಟು ಭೂಮಿಯ ಸೌಲಭ್ಯವಿದ್ದಿತು. ಆಕಾಶ ನೊಡಲು ನೂಕು ನುಗ್ಗಲೇಕೆ ? ಭೂಮಿಯ ಸ್ವಾಮ್ಯಕ್ಕಾಗಿ ಯಾವ ವಿಧವಾದ ಘರ್ಷಣೆಗಳೂ ಇಲ್ಲದೆ ಜೀವನ ಸಾಗಿದ್ದಿತು. ಅಂದಿನ ಕಾಲದ ಜನಗಳ ಪ್ರಪಂಚ ಚಿಕ್ಕದಾಗಿತ್ತು ಅವನು ನಡೆಯುವಷ್ಟು ಅವನಿಗೆ ಕಾಣಿಸುವಷ್ಟು ಅಷ್ಟೇ ಪ್ರಪಂಚ. ಕುದರೆ ಗಾಡಿಗಳ ಸಹಾಯದಿಂದ ಅವನ ಪ್ರಪಂಚ ಸ್ವಲ್ಪ ವಿಸ್ತಾರವಾಯಿತು. ಒಂದು ಚಿಕ್ಕ ಪ್ರದೇಶದಲ್ಲಿ ವಾಸ ಮಾಡುವ ಜನಗಳಿಗೆ ತಮ್ಮದೇ ಆದ ನಂಬಿಕೆಗಳು ಸಂಪ್ರದಾಯಗಳು ಬೆಳೆದವು ಇವೆಲ್ಲಾ ಸ್ಥಳೀಯ ನಿಯಮಗಳಾದವು. ಇವುಗಳು ಪ್ರಪಂಚದ ನಿಯಮಗಳೆಂದು ಆ ಜನಗಳಿಗೆ ಗೋಚರವಾಯಿತು.

ಹಾಗೆಯೇ ಒಂದೊಂದು ಗುಂಪೂ ತಮ್ಮ ಬುದ್ಧಿಗೆ ಎಟುಕುವಷ್ಟರ ಮಟ್ಟಿನ ಸಂಪ್ರದಾಯಗಳನ್ನು ಸೃಷ್ಟಿಸಿಕೊಂಡರು. ಭೂಮಿಯ ಮೇಲೆ ವಿವಿಧ ಭಾಗಗಳಲ್ಲಿ ಜೀವಿ ಸ್ವಲ್ಪ ಹೆಚ್ಚು ಕಡಿಮೆ ಒಟ್ಟಿಗೆ ಹುಟ್ಟಿರಬೇಕು. ಬೆಳವಣಿಗೆಯು ಸ್ಥೂಲವಾಗಿ ಒಂದೇ ಪ್ರಮಾಣದಲ್ಲಿ ಆಗಿರಬೇಕು. ಹಗಲು–ರಾತ್ರಿಗಳು, ನಿಸರ್ಗದ ಕ್ರಿಯೆಗಳು, ಸಹಜವಾದ ರೋಗಗಳು, ಸ್ವಪ್ನಗಳು ಮತ್ತು ಸಾವು ಭೂಮಿಯ ಎಲ್ಲಾ ಭಾಗಗಳ ಜನಗಳ ಮೇಲೂ ಒಂದೇ ವಿಧವಾದ ಪ್ರತಿಕ್ರಿಯೆಯನ್ನುಂಟು ಮಾಡಿರಬೇಕು. ಮನುಷ್ಯನ ಬುದ್ಧಿಶಕ್ತಿ ಬೆಳೆದ ಹಾಗೆಲ್ಲಾ ಅವನು ನಿಸರ್ಗದ ಘಟನೆಗಳನ್ನು ಲೌಕಿಕವಾಗಿ ಅರ್ಥಮಾಡಿಕೊಳ್ಳಲು ಮೊದಲು ಮಾಡಿದನು. ವಿಪುಲವಾಗಿ ಪ್ರಶ್ನೆಗಳನ್ನು ಹಾಕಿಕೊಂಡು ಸಮಂಜಸವಾದ ಉತ್ತರವನ್ನು ಹುಡಕಲು ಜೀವ ಮಾನವನ್ನೇ ಕಳೆದನು. ಇಂತಹ ಅನ್ವೇಷಣೆಯೇ ವಿಜ್ಞಾನಕ್ಕೆ ಜನ್ಮವಿತ್ತಿತ್ತು. ಈ ವೈಜ್ಞಾನಿಕ ಮಾರ್ಗದಿಂದ ಅನೇಕ ಜಟೀಲ ಸಮಸ್ಯೆಗಳಿಗೆ ಉತ್ತರ ಸಿಕ್ಕಿವೆ.

ಅರಿವಿನಿಂದ ಅರಿವಿಗೆ ಅಡಿ ಇಡುತ್ತಾ ಸೃಷ್ಟಿಯ ನಿಗೂಢವನ್ನು ಭೇದಿಸಿ ವಿಶ್ವ ವೈಶಾಲ್ಯತೆಗೆ ಎದೆ ತೆರೆದು ಒಂದಾಗುವ ಯತ್ನ ವ್ಯಕ್ತವಾಗಿವೆ. ವೇದಗಳ ಕಾಲದ ಪಂಚಭೂತಗಳ ಅಧ್ಯಯನವಾಗಲಿ, ವೇದಪೂರ್ವಕಾಲದ ಹರಪ್ಪ ಮಹೆಂಜೋದಾರೋ ಸಂಸ್ಕೃತಿಯ ಅರ್ಧನಾರೀಶ್ವರ ಕಲ್ಪನೆಯ ಹಿಂದಿರುವ ಪ್ರಕೃತಿ ಪುರುಷರ ಸಮನ್ವಯ ತತ್ವವಾಗಲಿ, ಉಪನಿಷತ್ ಕಾಲದ ಚೈತನ್ಯದ ಸರ್ವವ್ಯಾಪಕ ಅಭಿವ್ಯಕ್ತಿಯಾಗಲಿ ಅನಂತರ ಬಂದ ಜೈನ ಬೌದ್ಧಧರ್ಮಗಳ ಗುರಿಯಾಗಲಿ ಬಹು ಪ್ರಾಚೀನವಾದ ಶೈವಸಿದ್ಧಾಂತವಾಗಲಿ ಈ ಯಾವುದೂ ಕೊಲ್ಲುವ ಕ್ರಿಯೆಗೆ ಒತ್ತು ಕೊಡದೆ ಅರಿತು ಅಡಿಯಿಡುವುದಕ್ಕೆ ಮಹತ್ವ ಕೊಟ್ಟವು.

ಗಿರಿ ಕಂದರದಲ್ಲಿ ಹರಿಯುವ ನದಿಯಂತೆ ನಮ್ಮ ಚೇತನವೂ ಕಾಲ ಅಥವಾ ಸಮಯದ ಮಾಧ್ಯಮದಲ್ಲಿ ಹರಿಯುತ್ತದೆ. ನದಿಯಂತೆಯೇ ನಮ್ಮ ಚೇತನದ ಇರವು ಸ್ಥಿರವೂ ವೈವಿಧ್ಯ ಪೂರ್ಣವವೂ ಆಗಿದೆ. ಇತರ ಪ್ರಾಣಿಗಳಿಗಿಂತ ನಾವು ಹೆಚ್ಚು ಸ್ವತಂತ್ರರಿರುವ ಕಾರಣ ಸನ್ನಿವೇಶದೊಡನೆಯೇ ತೇಲಿ ಹೋಗುತ್ತಿಲ್ಲ. ನಮ್ಮ ಬುದ್ಧಿ ಶಕ್ತಿಯು ಈ ಪರಾವಲಂಬನೆಯನ್ನು ಕಡಿಮೆ ಮಾಡಿದೆ. ಮನುಷ್ಯನು ಆಯುಧ, ಯಂತ್ರಾದಿ ಉಪಕರಣಗಳನ್ನು ರಚಿಸಿ ಸನ್ನಿವೇಶ ಮೇಲೂ ಸ್ವಲ್ಪ ಪರಿಣಾಮವನ್ನು ಬೀರುತ್ತಾ, ತನಗೂ ಇತರ ಪ್ರಾಣಿಗಳಿಗೂ ಇರುವ ಅಂತರವನ್ನು ಸರಿಯಾಗಿ ಪ್ರದರ್ಶಿಸಿದ್ದಾನೆ. ಇಷ್ಟು ಮಾತ್ರವೇ ಅಲ್ಲದೆ, ಈತನು ತನ್ನ ಸಹಜ ಪ್ರವೃತ್ತಿಗಳನ್ನು. ಗುಡಿ ದೇಗುಲಗಳ ನಿರ್ಮಾಣದಿಂದಾಗಲಿ, ಶಿಲಾಸ್ತಂಭಗಳ ರಚನೆಯಿಂದಾಗಲಿ, ಆಸ್ಪತ್ರೆ ವಿದ್ಯಾಲಯ, ಅಧಿ ವಿದ್ಯಾಲಯ ಮತ್ತು ಪ್ರಯೋಗ ಶಾಲೆ ಇವುಗಳ ನಿರ್ಮಾಣದಿಂದಾಗಲಿ ಉದಾತ್ತೀಕರಿಸಿದ್ದಾನೆ. ಹೀಗೆ ಉನ್ನತಿ ಹೊಂದಿದ ತನ್ನ ಚಟುವಟಿಕೆಗಳ ಸಹಾಯದಿಂದಲೇ ಕಲೆ, ಧರ್ಮ, ನೀತಿ ಮತ್ತು ವಿಜ್ಞಾನಗಳನ್ನು ಸೃಷ್ಟಿಸಿ ಭೂಮಿಯ ಸ್ವರೂಪವನ್ನು ಸ್ವಲ್ಪ ಮಟ್ಟಿಗೆ ಬದಲಿಸಿ ಇತರ ಪ್ರಾಣಿಗಳಿಗಿಂತ ಉತ್ತಮ ಮಟ್ಟದಲ್ಲಿದ್ದಾನೆ.

ಪ್ರಪಂಚದ ಪ್ರತಿಯೊಂದು ಸಮಾಜವೂ ಅನಾದಿಕಾಲದಿಂದ ತನ್ನದೇ ಆದ ನಂಬಿಕೆಗಳನ್ನು ಆಚರಣೆಯಲ್ಲಿಟ್ಟು ಕೊಂಡು ಬಂದಿದೆ. ಕಾಲ ದೇಶಗಳಿಗೆ ಅನುಗುಣವಾಗಿ ಇವು ಬದಲಾಗುತ್ತಲೂ ಇರುತ್ತವೆ. ಇಂತಹ ನಂಬಿಕೆಗಳಲ್ಲಿ ಹಾಗೂ ಉತ್ಕಟವಾದ ಆಶಾಪೂರ್ಣ ಹಾರೈಕೆಗಳಲ್ಲಿ ಎಷ್ಟೋ ಆ ಸಮಾಜದ ಸಂಸ್ಕೃತಿ ಮತ್ತು ನಾಗರಿಕತೆಗಳ ಬೆಳವಣಿಗೆಗೆ ರೂಪು ಕೊಡುತ್ತವೆ. ಹಾಗೆಯೇ ಇನ್ನೆಷ್ಟೋ ನಂಬಿಕೆಗಳು ಅರ್ಥಪೂರ್ಣವಾಗಲಿ ಅಥವಾ ಸಂಸ್ಕೃತಿಯ ಪ್ರಗತಿಗೆ ಪ್ರೇರಕವಾಗಲಿ ಆಗಿರುವುದಿಲ್ಲ. ಒಂದು ಸಮಾಜದಲ್ಲಿ ಅನೇಕ ಅಂತಹ ನಂಬಿಕೆಗಳು ಅವೈಚಾರಿಕ ಹಾಗೂ ಅವೈಜ್ಞಾನಿಕ. ಇವುಗಳನ್ನೇ ಮೂಢ ನಂಬಿಕೆಗಳೆಂದು ಕರೆಯುವುದು. ಸಾಮಾನ್ಯವಾಗಿ ಮೂಢ ನಂಬಿಕೆಗಳಿಗೆ ಯಾವುದೇ ಸಾಕ್ಷಾಧಾರಗಳಿಲ್ಲದೆ ದೊರಕಬಹುದಾದ ಆಧಾರಗಳಿಗೆ ವಿರುದ್ಧವಾಗಿರುತ್ತದೆ.

ವಿಜ್ಞಾನ ಬೆಳೆದ ಹಾಗೆಲ್ಲಾ ಪ್ರಕೃತ್ಯತೀತವೆಂದು ಗಣಿಸಲ್ಪಟ್ಟ ಹಲವು ಘಟನೆಗಳು ಸಹಜ ಸ್ಥಿತಿಗೆ ಬಂದು ಇಳಿದವು. ಬೆಂಜಮಿನ್ ಫ್ರಾಂಕ್ಲಿನ್ ವಿಜ್ಞಾನಿಯ ಸಂಶೋಧನೆಗಳಿಂದ ಸಿಡಿಲು, ಗುಡುಗು, ಮಿಂಚು, ವಿದ್ಯುಚ್ಛಕ್ತಿಯ ಪ್ರಭಾವವೆಂದು ಖಚಿತವಾಗಿ ಸ್ಥಾಪನೆಯಾದ ಮೇಲೆ ಅವುಗಳ ಮೇಲಿನ ಹತೋಟಿ ಇಂದ್ರನ ಕೈ ತಪ್ಪಿಹೋಯಿತು. ವೈದ್ಯಕೀಯ ಕ್ಷೇತ್ರದಲ್ಲಿ ವಿಜ್ಞಾನದಿಂದ ಸಾಧಿಸಿದ ಉತ್ತಮ ಮಟ್ಟದ ಪ್ರಗತಿಯಿಂದ ವಿಪುಲವಾಗಿ ಬೆಳೆದಿದ್ದ ದೇವತೆಗಳ ಅಥವಾ ಅಮ್ಮಗಳ ಸಂಖ್ಯೆಯೂ ಕಡಿಮೆಯಾಯಿತು.

ಹೀಗೆ ವೈಜ್ಞಾನಿಕ ಪ್ರಪಂಚದಲ್ಲಿ ಹೆಜ್ಜೆಯಿಟ್ಟು ನಂತರ ಸಮಾಜದ ಪರಿಸ್ಥಿತಿಯಲ್ಲಿ ಬದಲಾವಣೆಗಳೂ ಆದವು. ದೇವರ ಮುಂದೆ ಪ್ರಾರ್ಥನೆ ಮಾಡುವದಾಗಲಿ ಅನುಕಂಪ ತೋರಿಸಲು ಎಂದು ವಿನಮ್ರತೆಯಿಂದಾಗಲಿ ಇಚ್ಛೆಗಳನ್ನು ಈಡೇರಿಸಿಕೊಳ್ಳುವುದು ಸಾಧ್ಯವಿಲ್ಲೆಂಬುದು ಜನರಿಗೆ ಅರಿವಾಯಿತು. ಇಂತಹ ವಿಷಯಗಳಲ್ಲಿ ಮಿತಿಗಳು ಯಾವುವು ಇಲ್ಲ. ವ್ಯಕ್ತಿಗಳ ಮನೋ ನಿರ್ಧಾರದ ಮೇಲೆ ಬಿಟ್ಟದ್ದು ಎನ್ನುವುದು ಅರ್ಥ ಮಾಡಿಕೊಂಡ. ತಾನು ಮಾಡುವ ಕೆಲಸದ ಮೇಲೆ ನಂಬಿಕೆಯಿಟ್ಟು ಮಾಡಿದ್ದಾದರೆ ಅದು ಯಶಸ್ವಿಯಾಗುತ್ತದೆ ಎಂದು ಆಧುನಿಕರ ಛಲವಾಯಿತು. ಅಷ್ಟೇ ಅಲ್ಲದೆ ಆಧುನಿಕ ಶಿಕ್ಷಣವು ಸಮಾಜದ ಬದಲಾವಣೆಗೆ ಕಾರಣವಾಗಿರುವುದು ತಿಳಿದು ಬರುತ್ತದೆ.

ಪ್ರಾಕೃತಿಕ ಘಟನೆಗಳು ತಮ್ಮ ನಿಯಂತ್ರಣಕ್ಕೆ ಒಳಪಡದ ಸಂದರ್ಭಗಳಲೆಲ್ಲಾ ಒಂದೊಂದು ದೇವತೆಗಳನ್ನು ಕಲ್ಪಿಸಿಕೊಳ್ಳುತ್ತಿದ್ದರು. ಇದರಿಂದ ತಮ್ಮ ಕಾರ್ಯಸಾಧನೆ ಆಗುತ್ತಿತ್ತೋ ಅಥವಾ ಇಲ್ಲವೋ, ಮನಸ್ಸಿನ ಸಮಾಧಾನವೇ ಹೊರತು ವಾಸ್ತವಂತೂ ಆಗಿರಲಿಲ್ಲ. ಆದರೆ ಕಲ್ಪನೆ ಅನಾವಶ್ಯಕವಾಗಿ ಆದದ್ದಲ್ಲ ಎನ್ನುವುದು ಮುಖ್ಯ. ಬೆಟ್ಟ ಇಲ್ಲದ ಜಾಗದಲ್ಲಿ ಬೆಟ್ಟದೇವತೆ, ಸಮುದ್ರ ಇಲ್ಲದ ಜಾಗದಲ್ಲಿ ಸಮುದ್ರ ದೇವತೆಗಳೇನು ಕಲ್ಪಿಸಿಕೊಂಡಿರಲಿಲ್ಲ. ಮ್ಯಾಕ್ ಗ್ರೇಗರ್ ಹೇಳುವಂತೆ "ಪುರಾತನರು ಮೊದಲು ದೇವತೆಗಳನ್ನು ಕಲ್ಪಿಸಿಕೊಂಡು ಅವರಿಗೆ ಪ್ರಾಕೃತಿಕ ಘಟನೆಗಳನ್ನು ಅಥವಾ ವಿಭಾಗಗಳನ್ನು ಕೊಡುತ್ತಿರಲಿಲ್ಲ. ಬದಲಾಗಿ ಪ್ರಾಕೃತಿಕ ಘಟನೆಗಳನ್ನು ನೊಡಿ, ಅವುಗಳ ಹಿಂದೆ ದೇವತೆಗಳು ಇರಬೇಕೆಂದು ತರ್ಕಿಸುತ್ತಿದ್ದರು". ಈ ರೀತಿಯಾಗಿ 'ದೇವರು' ಧರ್ಮ ಕುರಿತು ಅನೇಕ ನಂಬಿಕೆ ಮತ್ತು ಆಚರಣೆಗಳು ಅಸ್ತಿತ್ವಕ್ಕೆ ಬಂದವು.

ಪ್ರಾಚೀನರ ಎಲ್ಲಾ ಅನಿಸಿಕೆಗಳು ಫಲೋತ್ಪತ್ತಿ ಸಂಬಂಧಿಯಾಗಿದ್ದವು. ಅವು ಋತುಗಳನ್ನು, ಸೂರ್ಯ ಚಂದ್ರನ್ನು, ಪ್ರಕೃತಿಯ ಇತರ ಗಾಳಿ, ಮಳೆ, ಬಿಸಿಲು ಮುಂತಾದವುಗಳ ಚಟುವಟಿಕೆಗಳನ್ನು ಅವಲಂಬಿಸಿದ್ದವು. ಅವರ ಅನಿಸಿಕೆಗಳು ಕೈಗೂಡಿದಾಗ ಸಂತೋಷದಿಂದ ಹಬ್ಬಗಳನ್ನು ಆಚರಿಸಿದರು. ಎಲ್ಲಾ ಹಬ್ಬಗಳಲ್ಲಿ ಹೆಚ್ಚಿನವು ವಿಶೇಷವಾಗಿ ಕೃಷಿಗೆ ಮಹತ್ವ ಕೊಟ್ಟಿರುವುದು ಕಂಡು ಬರುತ್ತದೆ. ಹಬ್ಬಗಳ ಆಚರಣೆಯಲ್ಲಿ ಉಪಯೋಗಿಸುವ ಹಣ್ಣುಹಂಫಲ ಆಹಾರ ಪದಾರ್ಥಗಳ ಬಳಕೆಯು ಆರೋಗ್ಯ ರಕ್ಷಣೆಗೆ ಬೇಕಾದ ಪೌಷ್ಠಿಕಾಂಶದ ಆಹಾರಗಳೇ ಆಗಿವೆ. ಆದ್ದರಿಂದ ಇಲ್ಲಿ ಜನಪದರು ಆರೋಗ್ಯ ಬಗ್ಗೆ ಎಷ್ಟು ಕಾಳಜಿ ವಹಿಸುತ್ತಿದ್ದರೆಂಬುವದು ಅರಿವಾಗುವುದು. ಇದು ಅವರಲ್ಲಿರುವ ವೈಜ್ಞಾನಿಕ ಮನೋಭಾವನೆ ತೋರಿಸಿಕೊಡುತ್ತದೆ. ಹಾಗೂ ಹಬ್ಬಗಳ ಆಚರಣೆಯಲ್ಲಿ ಧಾರ್ಮಿಕ, ಸಾಂಸ್ಕೃತಿಕ, ಪೌರಾಣಿಕ, ಇತಿಹಾಸಿಕ, ಸಾಮಾಜಿಕಾಂಶಗಳನ್ನೊಳಗೊಂಡಿರುತ್ತವೆ.

ಪರಂಪರೆಯ ಬೆಳವಣಿಗೆಗೆ, ಧಾರ್ಮಿಕ ಸಾಂಸ್ಕೃತಿಕ ಸಾಮಾಜಿಕ ನಿರಂತರತೆಗೆ ಲೌಕಿಕ ಜೀವನವು ಅಷ್ಟೇ ಪ್ರಮುಖವಾಗಿದೆ. ಇದರ ಕೇಂದ್ರ ಬಿಂದುವಾದ ಮಾನವ ಮದುವೆ, ಮಕ್ಕಳು, ಸಂಸಾರದ ಜೊತೆಗೆ ತನ್ನ ಬದುಕು ಸಾಗಿಸಿಕೊಂಡು ಹೋಗುತ್ತಾನೆ.

ಸೃಷ್ಟಿಯಲ್ಲಿ ಮಾನವ ನಿನ್ನೆ ಮೊನ್ನೆಯವನಲ್ಲ. ಮಾನವನ ಜೀವನ ವಿಕಾಸ ಹೊಂದಿದಂತೆ, ಅವನ ಬದುಕಿನ ಪದ್ಧತಿ ಬದಲಾಯಿತು. ಭಾವನೆಗಳು ಬದಲಾದವು. ಅದರಂತೆ ವಿವಾಹ ಕೂಡಾ. ನಾಗರಿಕತೆ ಬೆಳೆದಂತೆ ಗಂಡು-ಹೆಣ್ಣಿನ ಲೈಂಗಿಕ ಸಂಬಂಧಕ್ಕೆ ಸಾಮಾಜಿಕ ಚೌಕಟ್ಟು ನಿರ್ಮಾಣವಾಯಿತು. ಸಮಾಜ

ಬದಲಾವಣೆಯಲ್ಲಿ ವಿವಾಹ ಕೂಡ ಸೇರಿದೆ. ಪ್ರಾಚೀನ ಕಾಲದಿಂದ ವಿವಾಹ ಹೇಗೆ ಆರಂಭವಾದವು. ಏಕೆ ಆರಂಭವಾದವು, ವಿವಾಹ ಎಂದರೇನು ಹೀಗೆ ಅನೇಕ ವಿಚಾರಗಳೊಂದಿಗೆ ವಿವಾಹ ತನ್ನ ಸ್ವರೂಪ ಪಡೆದು ಕೊಂಡಿತು. ಸ್ವೇಚ್ಛೆಯಾಗಿ ಹೆಣ್ಣು–ಗಂಡು ಜೊತೆಗೂಡುವ ಪದ್ಧತಿಗೆ ಬರು ಬರುತ್ತಾ ಕೆಲವು ನಿಯಮಗಳನ್ನಾಗಿ ನಿರ್ಭಂದಿಸಿಕೊಂಡರು.

ಇತಿಹಾಸ ಪೂರ್ವಕಾಲದಲ್ಲಿ ಕುಟುಂಬ ವಿಕಾಸದಲ್ಲಿ ಕುಟುಂಬ ವೃತ್ತವು ಸತತವಾಗಿ ಸಂಕುಚಿತಗೊಳ್ಳುತ್ತಾ ಹೋಯಿತು. ಮೂಲದಲ್ಲಿ ಅದು ಇಡೀ ಬುಡಕಟ್ಟನ್ನು ಒಳಗೊಂಡಿತು. ಹೀಗೆ ವಿವಾಹದ ಮೂಲಕ ರಚನೆಗೊಂಡ ಕುಟುಂಬವು ಸಾಮಾಜಿಕ–ರಾಜಕೀಯ ವ್ಯವಸ್ಥೆಯ ಮೂಲ ತಳಹದಿಯಾಗಿ ತನ್ನ ಅಸ್ತಿತ್ವ ಉಳಿಸಿಕೊಂಡಿದೆ. ಅದರೊಂದಿಗೆ ತನ್ನ ಸುತ್ತಲೂ ಲೌಕಿಕ ಜೀವನಕ್ಕೆ ಸಂಬಂಧಿಸಿದಂತೆ ನಂಬಿಕೆ ಮತ್ತು ಆಚರಣೆಗಳನ್ನು ಮುಂದುವರೆಸಿಕೊಂಡು ಬಂದಿದೆ.

ಅದೇ ರೀತಿಯಾಗಿ ಕೃಷಿಯನ್ನು ಆರಂಭಿಸಿದಂತೆ ಅದರಲ್ಲಿಯು ಅನೇಕ ನಂಬಿಕೆ ಮತ್ತು ಆಚರಣೆಗಳು ರೂಢಿಯಲ್ಲಿ ಬಂದಿರುವುದುಂಟು. ಆಹಾರ ಸಂಗ್ರಹಣೆಯನ್ನೂ ಗೃಹಕೃತ್ಯವನ್ನೂ ನೋಡಿಕೊಳ್ಳುತ್ತಿದ್ದ ಹೆಣ್ಣು ಬೀಜವು ಗಿಡವಾಗುವ ಪವಾಡವನ್ನು ಮೊದಲು ಕಂಡಳು. ಕೈಗುದ್ದಲಿಯಿಂದ ತೋಟದ ಕೃಷಿಯನ್ನು ಆರಂಭ ಮಾಡಿದ ಹಿರಿಮೆ ಹೆಣ್ಣಿನದಾಗುತ್ತದೆ. ಇದು ಹೆಣ್ಣಿನ ವೈಜ್ಞಾನಿಕ ಅನ್ವೇಷಣೆ ಎಂಬುದು ಅಧ್ಯಯನದಿಂದ ತಿಳಿದುಬರುತ್ತದೆ.

ಪ್ರಾರಂಭದ ಕೃಷಿಕಳಾಗಿದ್ದ ಹೆಣ್ಣು ಸಮೃದ್ಧಿಗೋಸ್ಕರ ನಡೆಯುವ ಕೃಷಿಯ ಆಚರಣೆಗಳನ್ನು ನಡೆಸಿಕೊಡುವ ಹೊಣೆಗಾರಿಕೆಯನ್ನೂ ಹೊತ್ತಳು. ಹೆಣ್ಣಿನ, ಗರ್ಭಧಾರಣೆ ಮತ್ತು ಭೂಮಿಯ ಸಸ್ಯಧಾರಣೆ ಇವರೆಡಕ್ಕೂ ಸಾಮ್ಯತೆಯನ್ನು ಕಂಡುಕೊಂಡ ಆದಿ ಮಾನವ ಹೆಣ್ಣು ಮತ್ತು ಭೂಮಿ ಇವರೆಡೂ ಪೂಜ್ಯ ವಸ್ತುಗಳೆಂದು ಭಾವಿಸಿದ.

ಕೃಷಿಗಾಗಿ ತಾನಿದ್ದೆಡೆ ಇರುವ ಗಿಡಗಂಟೆ, ಮರಗಳನ್ನು ಕಡಿದು ಸುಟ್ಟು ಬಯಲು ಮಾಡಿ ಕೃಷಿಗಾಗಿ ಭೂಮಿಯನ್ನು ಬಳಸಿಕೊಳ್ಳಲು ಆರಂಭಿಸಿದ. ಕೃಷಿ ಪ್ರಧಾನ ಸಮಾಜಗಳಲ್ಲಿ ಮಾನವರ ಮತ್ತು ಭೂಮಿಯ ಫಲವಂತಿಕೆಯನ್ನು ಹೆಚ್ಚಿಸುವ ಉದ್ದೇಶದಿಂದ ರೂಪಗೊಂಡ ಅನೇಕ ಬಗೆಯ ಧಾರ್ಮಿಕ ನಂಬಿಕೆಗಳು, ಆಚರಣೆಗಳು ಯಾಂತ್ರಿಕ ಕ್ರಿಯಾವಿಧಿಗಳನ್ನೆಲ್ಲಾ ಒಳಗೊಂಡಿದ್ದ ಧಾರ್ಮಿಕ ಅಭಿವ್ಯಕ್ತಿಯೇ ಮಾತೃ ಆರಾಧನೆ. ಹಿಂದಿನಿಂದ ಬಂದ ಪದ್ಧತಿಗಳನ್ನು ಅನುಷ್ಠಾನಕ್ಕೆ ತರುವುದರ ಮೂಲಕ ಬೆಳೆಸುವುದರ ಮೂಲಕ ಅದು ಅನೇಕ ಶತಮಾನಗಳಿಂದ ವಿಕಾಸಗೊಂಡು ಬಂದಿತು. ಅದು ಬಲವಾಗಿ ಬೇರೂರಿದ ಜನರ ಪರಂಪರೆಯ ಆಚಾರ ಮತ್ತು ಸಂಸ್ಕೃತಿಗಳ ಒಂದು ಭಾಗವಾಗಿ ಬೆಳೆಯಿತು.

ಆದರೆ ಇಂದು ಕೃಷಿ ಬದುಕು ದಿಕ್ಕು ತಪ್ಪಿದೆ. ಹಸಿರುಕ್ರಾಂತಿ ಮತ್ತು ಆಧುನಿಕತೆಯ ಹೆಸರಿನಲ್ಲಿ ಭೂಮಿಯ ಮೇಲೆ ಅತ್ಯಾಚಾರ ನಡೆದಿದೆ. ನಮ್ಮ ಪೂರ್ವಿಕರು ಎಂದೂ ನಿಸರ್ಗಧರ್ಮಕ್ಕೆ ವಿರುದ್ಧವಾಗಿ ಬದುಕನ್ನು ಕಟ್ಟಿಕೊಂಡವರಲ್ಲ. ಬಿತ್ತುವ ಬೀಜ, ಬಳಸುವ ಗೊಬ್ಬರ, ಉಪಕರಣ ಕೃಷಿ ಮಾಡುವ ವಿಧಾನ, ಕಾಲಮಾನ ಎಲ್ಲವೂ ಸಾವಿರಾರು ವರ್ಷಗಳ ಅನುಭವದ ಮೂಸೆಯಲ್ಲಿ ಅರಳಿದ ಅರಿವಿನ

ಫಲಗಳಾಗಿವೆಂಬುದು ನಾವು ಮರೆಯುವಂತಿಲ್ಲ. ಆಧುನಿಕತೆಯ ಕೃಷಿಯಲ್ಲಿಯು ಇವುಗಳನ್ನು ಅಳವಡಿಸಿಕೊಳ್ಳುವುದು ಅಗತ್ಯವಾಗಿದೆ.

ಹಿಂದಿನ ಕಾಲದಲ್ಲಿ ನಿಸರ್ಗ ಎಂದರೆ ಮನುಷ್ಯನಿಗೆ ಭಯ ಭಕ್ತಿಯಿತ್ತು. ನಿಸರ್ಗದ ಎದುರಿಗೆ ತಾನು ಅತ್ಯಂತ ದುರ್ಬಲ ಎಂದು ಮನುಷ್ಯ ತಿಳಿದಿದ್ದರಿಂದ ಆತನಲ್ಲಿ ಭಕ್ತಿಗಿಂತ ಭಯವೇ ಹೆಚ್ಚಾಗಿತ್ತೆಂದು ಹೇಳಬಹುದು. ಅದಕ್ಕೆ ಜಗತ್ತಿನ ಎಲ್ಲಾ ಪುರಾತನ ಜನಾಂಗಗಳಲ್ಲೂ ಪ್ರಕೃತಿಯ ಆರಾಧನೆ ಚರಿತ್ರೆಯಿದೆ. ನಮ್ಮ ಭಾರತೀಯ ಸಂಸ್ಕೃತಿಯಲ್ಲಂತೂ ನಿಸರ್ಗವನ್ನು ಪಂಚ ಮಹಾಭೂತಗಳಾಗಿ ಪರಿಗಣಿಸಲಾಗಿದೆ.

ಮಾನವನ ಸಂತತಿ ಬೆಳದಿದ್ದೇ ಹಸಿರು ತುಂಬಿದ ನಿಸರ್ಗದ ಮಡಿಲಲ್ಲಿ ನಿಸರ್ಗದ ನಿಯಮಗಳನ್ನು ಅರಿತು ಅನುಕರಿಸುವುದರಿಂದ ಮತ್ತು ಅವುಗಳಿಗೆ ಅನುವರ್ತಿಯಾಗಿ ಬಾಳುವುದರಿಂದ ತನಗೆ ಲಾಭವಾಗುವುದು ಎಂಬ ಸಂಗತಿ ಸ್ಪಷ್ಟವಾಯಿತು. ನಾಗರಿಕತೆ ಬೆಳೆದಂತೆ ಕಾಡು ಕ್ಷೀಣಿಸುತ್ತ ಹೋಯಿತು. ಸುಧಾರಣೆಯ ಸಂಭ್ರಮ ಕಾಡಿಗೆ ಹಿಡಿದ ಕೊಡಲಿ ಆಯಿತು.

ನಮಗೆ ಪೋಷಣೆ ನೀಡುವ ನೀರಿಗೆ, ಗಾಳಿಗೆ, ಮಣ್ಣಿಗೆ ಹಾಗೂ ಸಸ್ಯಕೋಟಿಗೆ ವಿಪತ್ತು ಬಂದಾಗ ಯಾವ ಪ್ರಬಲ ಸೈನ್ಯವಾಗಲಿ, ಸರಕಾರವಾಗಲಿ, ತಂತ್ರಜ್ಞಾನವಾಗಲಿ ನೆರವಿಗೆ ಬರುವುದಿಲ್ಲ. ಸ್ಥಿತ ಪ್ರಜ್ಞ ಭೂಮಿಯಂತೂ ಮನುಷ್ಯರಿಗೆಂದು ತನ್ನ ಭೌತಿಕ ನಿಯಮಗಳ ರಿಯಾಯಿತಿ ತೋರಿಸುವುದಿಲ್ಲ. ನಮ್ಮ ಪೀಳಿಗೆ ಭೂಮಿಯ ಮೇಲೆ ಇನ್ನೊಂದಿಷ್ಟು ಕಾಲ ಬದುಬೇಕಾದರೆ ಭೂಮಿಯನ್ನು ಪಳಗಿಸುವ ಯತ್ನ ಕೈ ಬಿಟ್ಟು, ನಮ್ಮನ್ನು ನಾವೇ ವೈಜ್ಞಾನಿಕವಾಗಿ ಪಳಗಿಸಬೇಕು. ಜನಸಂಖ್ಯೆ ತಡೆಗಟ್ಟಿ ಹತೋಟಿಗೆ ತರಬೇಕು. ನೀರು, ಗಾಳಿ ಹಾಗೂ ಮಣ್ಣಿಗೆ ವಿಷ ಉಣಿಸುವ ಕೃತ್ಯ ಕಡಿಮೆಯಾಗಬೇಕು. ನಮ್ಮೆಲ್ಲರ ತಪ್ಪುಗಳನ್ನು ಭೂಮಿ ಕ್ಷಮಿಸುತ್ತದೆಂಬ ಪುರಾತನ ಕಾಲದ ಭ್ರಮೆಯನ್ನಾಗಲಿ, ವಿಜ್ಞಾನದ ಪ್ರಬಲ ಶಕ್ತಿಯೇ ಭೂಮಿಯನ್ನು ಹದಬಸ್ತಿನಲ್ಲಿ ಇಡುತ್ತದೆಂಬ ಆಧುನಿಕ ಮೌಢ್ಯವನ್ನಾಗಲೀ ಅಂಗೀಕರಿಸುವ ಬದಲು ಈ ಗ್ರಹದ ನಿಯಮ ಅರ್ಥ ಮಾಡಿಕೊಂಡು ಆದಷ್ಟು ಕಾಲ ಅವುಗಳೊಂದಿಗೆ ಸಹಬಾಳ್ವೆ ಸಾಧಿಸಬೇಕು. ಹಾಗೂ ಸುತ್ತಲಿನ ಪರಿಸರ ಸಂರಕ್ಷಣಾ ಕ್ರಮ ಕೈಗೊಳ್ಳುವುದು ಅಷ್ಟೇ ಅಗತ್ಯವಾದ ಕರ್ತವ್ಯವಾಗಿದೆ.

'ಸದೃಢವಾದ ದೇಹದಲ್ಲಿ ಸದೃಢ ಮನಸ್ಸು ಇರುತ್ತದೆ' ಎಂಬಂತೆ ಉತ್ತಮ ಆರೋಗ್ಯಕ್ಕೆ ಆಹಾರಬೇಕು. ಆಹಾರ ಸೇವನೆಗೆ ಮಾನಸಿಕ ಸ್ವಾಸ್ಥವೂ ಅಷ್ಟೇ ಮುಖ್ಯವಾಗಿ ಬೇಕು. ನಮ್ಮ ದೇಹದ ಬೆಳವಣಿಗೆಗೂ ಮಾಡುವ ಕೆಲಸಗಳಿಗೆ ಶಕ್ತಿಯನ್ನು ಒದಗಿಸಿ ಕೊಡುವುದಕ್ಕೂ ಆಹಾರವು ಅವಶ್ಯಕ ಎಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಆಹಾರ ಮಾನವನಿಗೆ ಅವಶ್ಯಕವಾದಂತೆ ಎಲ್ಲಾ ಪ್ರಾಣಿಗಳ ಜೀವನಕ್ಕೆ ಅತ್ಯವಶ್ಯಕವಾದದ್ದು. ಹಸಿವನ್ನು ತಣಿಸಲು ಶರೀರದ ಬೆಳವಣಿಗೆಗೆ, ಆರೋಗ್ಯವಾಗಿರುವುದಕ್ಕೆ ಆಹಾರವನ್ನು ಸೇವಿಸಬೇಕು.

ಆಹಾರ-ಆರೋಗ್ಯ ಎನ್ನುವ ಸಮತತ್ವವೇ ಪಾರಂಪರಿಕವಾಗಿ ರೂಢಿಯಲ್ಲಿದೆ. ಈ ಸೂತ್ರವನ್ನು ಅಳವಡಿಸಿಕೊಂಡಿರುವುದರಿಂದಲೇ ನಮ್ಮ ಆಹಾರ ಪದ್ಧತಿಗಳು ಪ್ರದೇಶದಿಂದ ಪ್ರದೇಶಕ್ಕೆ ಸಮುದಾಯದಿಂದ ಸಮುದಾಯಕ್ಕೆ ಮತ್ತು ಋತುಮಾನದಿಂದ ಋತುಮಾನಕ್ಕೆ ಬೇರೆ ಬೇರೆ ಬಗೆಯ ಭಿನ್ನತೆಗಳನ್ನು ವಿಶೇಷತೆಗಳನ್ನು ಪ್ರಕಟಪಡಿಸುತ್ತವೆ. ಅದು ಬೇರೆ ಬೇರೆ ಆಹಾರ ಭಕ್ಷ್ಯಗಳು ಬೇರೆ ಬೇರೆ ತಯಾರಿಕಾ ವಿಧಾನಗಳು ಹಬ್ಬದ

ವಿಶೇಷ ಅಡುಗೆಗಳು ಬೇರೆ ಬೇರೆ ಋತು ವಿಶೇಷಗಳು ಆಹಾರ ಸೇವನೆಯ ನಿಯಮಗಳ ರೂಪದಲ್ಲಿ ಕಂಡು ಬರುತ್ತವೆ. ಇಂಥ ವೈವಿಧ್ಯಮಯ ಅಂಶಗಳು ಆಹಾರ ಪದ್ಧತಿಗಳ ವೈಶಿಷ್ಟ್ಯವು ಆರೋಗ್ಯವನ್ನು ಕಾಪಾಡುತ್ತವೆ ಎಂಬುದು ನಂಬಿಕೆ ಮತ್ತು ಆಚರಣೆಗಳ ಅಧ್ಯಯನದಿಂದ ತಿಳಿದು ಬರುತ್ತದೆ.

ಇಂದಿನ ಕೃಷಿಯಲ್ಲಿ ಬೆಳೆಯುವ ಆಹಾರ ಬೆಳೆಗಳು ಬೆಳೆಯುವ ವಿಧಾನ, ಆಹಾರ ಬಳಕೆಯ ವಿಧಾನ, ತಯಾರಿಸುವ ವಿಧಾನ, ಸೇವಿಸುವ ವಿಧಾನ ಮುಂತಾದವುಗಳಲ್ಲಿ ಹಿಂದಿರುವ ಪದ್ಧತಿಗೂ ಇಂದಿರುವ ಪದ್ಧತಿಗೂ ಬಹಳಷ್ಟು ವ್ಯತ್ಯಾಸ ಕಂಡು ಬರುತ್ತವೆ.

ಹೀಗೆ ಜನಪದ ನಂಬಿಕೆ ಮತ್ತು ಆಚರಣೆಗಳು ಧರ್ಮ-ದೇವರು, ಹಬ್ಬಗಳು, ಲೌಕಿಕ ಜೀವನ, ಕೃಷಿ, ನಿಸರ್ಗ, ಆಹಾರ ಆರೋಗ್ಯಗಳಲ್ಲದೆ ಇನ್ನು ವಿವಿಧ ರೀತಿಯಲ್ಲಿ ಕಂಡು ಬರುವ ನಂಬಿಕೆಗಳನ್ನು ಸಂಕೀರ್ಣದಲ್ಲಿ ಸೇರಿಸಿಕೊಳ್ಳಲಾಗಿದೆ.

ನಂಬಿಕೆಗಳು ಜನಪದರ ಜೀವನ ವಿನ್ಯಾಸವನ್ನು ನಿರ್ಧರಿಸುವ ವಾರ್ಷಿಕಾವರ್ತನ ಮತ್ತು ಜೀವನಾವರ್ತವನ್ನು ಅನುಸರಿಸಿಕೊಂಡಿರುತ್ತವೆ. ಆರ್ಥಿಕ, ಸಾಮಾಜಿಕ, ಪಯಣ, ಕಾಲಮಾನ, ಹುಟ್ಟು, ಮದುವೆ, ಸಾವು, ಪ್ರಾಣಿ, ಸಸ್ಯ, ಮಾಟ, ಸೊಂಕು ಹೀಗೆ ಜೀವನದ ನಂಬಿಕೆಗಳ ಸಮಗ್ರತೆಯಲ್ಲಿ ವಿಸ್ತರಿಸಿಕೊಂಡಿರುತ್ತವೆ. ಪ್ರಕೃತಿ ಮತ್ತು ಮಾನವ ಸಾಂಸ್ಕೃತಿಕ ಮೂಲಗಳನ್ನೆಲ್ಲಾ ಆವರಿಸಿಕೊಂಡಿರುತ್ತವೆ.

ಜನಪ್ರಿಯವಾದ ಎಷ್ಟೋ ಜನಪದ ನಂಬಿಕೆಗಳು ವೈಜ್ಞಾನಿಕತೆಯ ಅಂಶಗಳನ್ನು ಹೊಂದಿರುತ್ತವೆ. ಜನಪದರ ನಂಬಿಕೆಗಳ ವಿವರಣಾತ್ಮಕ ಮತ್ತು ವಿಶ್ಲೇಷಣಾತ್ಮಕ ಕಾರ್ಯವನ್ನೇ ಪ್ರತ್ಯೇಕವಾಗಿ ಮಾಡಬಹುದು ಮಾನವ ಎಲ್ಲಾ ಬಗೆಯ ಕ್ಷೇತ್ರಗಳ, ಮಾನವನ ಬದುಕಿನ ಬಗೆಯ ಹಿನ್ನೆಲೆಯಲ್ಲಿ ಮೂಡಿ ಬೆಳೆದು ಬಂದಿರುತ್ತವೆ. ಜನಪದ ನಂಬಿಕೆ ಪದವು ಯಾರೋ ಒಬ್ಬ ವ್ಯಕ್ತಿಯ, ವಸ್ತುವಿನ ಅಥವಾ ತತ್ವದ ವಿಷಯದಲ್ಲಿ ನಮಗಿರುವ ಮನೋಭಾವನೆಯನ್ನು ಸೂಚಿಸುತ್ತದೆ. ಜ್ಞಾನವು ಆಧಾರ ಸಹಿತವಾಗಿರುತ್ತದೆ. ಜನಪದ ನಂಬಿಕೆ ಮತ್ತು ಆಚರಣೆಗಳು ಭರವಸೆ ಮತ್ತು ನಿಶ್ಚಲತೆಯ ಅನೇಕ ಹಂತಗಳನ್ನುಳ್ಳದ್ದು. ನಂಬಿಕೆಗಳ ನೆಲೆಗಟ್ಟೆಲ್ಲವು ನಂಬುವವರ ಮನೋ ವೈಖರಿಯನ್ನು ಪ್ರತಿಬಿಂಬಿಸುತ್ತದೆ. ಜನಪದ ನಂಬಿಕೆಗಳಿಗೆ ವಿಶಿಷ್ಟ ಸ್ವರೂಪವಿರುವುದನ್ನು ಗ್ರಹಿಸಬಹುದು.

ನಂಬಿಕೆಯು ಜನಪದ ಜೀವನಾನುಭವದ ಉತ್ಪನ್ನ ಹೀಗಾಗಿ ಮಾನವ ಬದುಕಿಗೂ ನಂಬಿಕೆಗೂ ಬೇರ್ಪಡಿಸಲಾಗದ ಸಂಬಂಧ ಅದು ಸೂಚನೆ, ನಿಯಮ, ವಿಧಿ, ನಿಷೇಧ, ನಿರ್ದೇಶನ, ಆಗ್ರಹ, ಆದೇಶ ಮತ್ತು ಆಜ್ಞೆಗಳ ರೂಪದಲ್ಲಿ ನಿತ್ಯ ಬದುಕಿನೊಂದಿಗೆ ಸಂಬಂಧವನ್ನು ಕಂಡು ಕೊಂಡಿದೆ.

ಜನಪದ ನಂಬಿಕೆಗಳೆಲ್ಲವು ಮೂಢನಂಬಿಕೆಗಳೆಂದು ಹಣೆಪಟ್ಟಿ ಕಟ್ಟಿ ತಿರಸ್ಕರಿಸುವುದಕ್ಕಿಂತಲೂ, ಆ ನಂಬಿಕೆಗಳಲ್ಲಿರುವ ವೈಜ್ಞಾನಿಕ, ಸಾಮಾಜಿಕ ಗುಣ ಮತ್ತು ಮಾನವೀಯ ಮೌಲ್ಯಗಳನ್ನು ಗುರುತಿಸಬೇಕಾಗಿದೆ. ಅನಕ್ಷರಸ್ಥರಾದ ಜನಪದರಿಂದ ಬಂದ ನಂಬಿಕೆ ಮತ್ತು ಆಚರಣೆಗಳೆಂದು ಅವುಗಳ ಮೇಲೆ ಉಸಿರಾಡದಂತೆ ಪರದೆ ಎಳೆಯುವ ಮೊದಲು ನಮ್ಮ ಬದುಕಿಗೆ ಉಸಿರಾಗಿರುವ ನಂಬಿಕೆಗಳನ್ನು ಅನ್ವೇಷಿಸಿಕೊಳ್ಳಬೇಕು.

ಭೂತಕಾಲದ ನಂಬಿಕೆಗಳು ವರ್ತಮಾನದಲ್ಲಿ ವಿಮರ್ಶೆಯ ಒರೆಗಲ್ಲಿನ ಪರೀಕ್ಷೆಗೆ ಒಳಗಾಗಿ ವೈಜ್ಞಾನಿಕತೆಯನ್ನು ಗುರುತಿಸಿಕೊಳ್ಳುವಂತಹ ಮತ್ತು ಬಹು ಉಪಯೋಗಿ ನಂಬಿಕೆಗಳು ಭವಿಷ್ಯತ್ತಿನಲ್ಲೂ ಜೀವನಕ್ಕೆ ಪ್ರಕಾಶಮಾನವಾಗಿ ಮುಂದುವರೆಯುತ್ತವೆ.

ಒಟ್ಟಿನಲ್ಲಿ ಜನಪದ ನಂಬಿಕೆ ಮತ್ತು ಆಚರಣೆಗಳು ಮುಂದಿನ ದಿನಗಳಿಗೆ ಊರುಗೋಲು ಆಗುತ್ತವೆ. ಸಮಸ್ಯೆ ಹಾಗೂ ಗೊಂದಲಗಳಿಗೆ ಅನ್ಯಮಾರ್ಗ ನಂಬಿಕೆ. ಕಡು ಬಿಸಿಲಿಗೆ ಸುಟ್ಟುಕರಲಾಗದಂತೆ, ತಡೆಯುವ ನೆರಳಿನಂತೆ ಬದುಕಿನ ಜಂಜಾಟದ ಕಠೋರತೆಗೆ ಜೀವನದ ನಾಳಿನ ಆಸೆ ಬಾಡದಂತೆ ತಡೆಯುವಂತಹ ನಂಬಿಕೆಗಳು ಬೆಳಕಿಗೆ ತಂದರೆ ತಿಳಿದುಕೊಳ್ಳಲು ಸಹಾಯಕವಾಗುವುದೆಂದು ಎನಿಸುತ್ತದೆ.

# ಆಧಾರ ಗ್ರಂಥಗಳು


| ಕ್ರ. ಸಂ. | ಲೇಖಕರು | ಗ್ರಂಥಗಳು | ಪ್ರಕಾಶಕರು | ವರ್ಷ |
|---|---|---|---|---|
| ೧ | ಡಾ॥ ಅರವಿಂದ ಮಾಲಗತ್ತಿ | ಜಾನಪದ ತತ್ವಗಳು | ನಿರ್ದೇಶಕರು ಪ್ರಸಾರಾಂಗ, ಮಾನಸ ಗಂಗೋತ್ರಿ ಮೈಸೂರು | ೧೯೯೯ |
| ೨ | ಡಾ॥ ಅರವಿಂದ ಮಾಲಗತ್ತಿ | ಜಾನಪದ ಸೈದ್ಧಾಂತಿಕ ಪ್ರಜ್ಞೆ ಮತ್ತು ದೇಶಿವಾದ | ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ನೃಪತುಂಗ ರಸ್ತೆ, ಬೆಂಗಳೂರು | ೧೯೯೮ |
| ೩ | ಡಾ॥ ಅರವಿಂದ ಮಾಲಗತ್ತಿ | ಪುರಾಣ ಜಾನಪದ ಮತ್ತು ದೇಶಿವಾದ | ಕನ್ನಡ ಸಾಹಿತ್ಯ ಪರಿಷತ್ತು ಪಂಪ ಮಹಾಕವಿ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು. | ೧೯೯೯ |
| ೪ | ಅವಿನಾಶ ಕೊಡೆಂಕಿರಿ | ಹಿಂದೂ ಧರ್ಮ ನಂಬಿಕೆ ನಡೆವಳಿಕೆ | ಕೊಡೆಂಕಿರಿ ಪ್ರಕಾಶನ, ನರಿಮೊಗರು, ಪುತ್ತೂರು. | ೨೦೦೯ |
| ೫ | ಅಲೆಕ್ಸಿಸ್ ಕೆರೆಲ | ಅವ್ಯಕ್ತ ಮಾನವ | ಪ್ರಾದೇಶಿಕ ಸಂಪನ್ಮೂಲ ಕೇಂದ್ರ ಮತ್ತು ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ ಎಮ್.ಜಿ.ಎಮ್. ಕಾಲೇಜು, ಉಡುಪಿ. | ೧೯೯೯ |
| ೬ | ಈರಣ್ಣಾ ಕೋಸಗಿ | ವಿಚಾರ ಸಾಹಿತ್ಯ-೧೯೯೬ | ಕರ್ನಾಟಕ ಸಾಹಿತ್ಯ ಅಕಾಡೆಮಿ, ನೃಪ ತುಂಗ ರಸ್ತೆ, ಬೆಂಗಳೂರು | ೧೯೯೭ |
| ೭ | ಎ.ಎಸ್.ನಟರಾಜ | ಹತ್ತು ಲಕ್ಷ ರೂಪಾಯಿ ಜ್ಯೋತಿಷಕ್ಕೆ ಸವಾಲು | ರಾಜ್. ವೈಚಾರಿಕ ವೇದಿಕೆ ನಂ.೪೩, ರೋಹಿಣಿ, ೫ನೇ ಮುಖ್ಯ ರಸ್ತೆ, ಪದ್ಮಾನಭನಗರ, ಬೆಂಗಳುರು | ೨೦೦೧ |
| ೮ | ಡಾ॥ ಎಂ. ಚಿದಾನಂದ ಮೂರ್ತಿ | ಜನ-ಜನಪದ-ಜಾನಪದ | ಶ್ರೀಮತಿ ಭಾನುಮತಿ ಎಸ್.ಷಾಹ ಸಪ್ನ ಬುಕ್ ಹೌಸ್, ತುಂಗಾ ಕಾಂಪ್ಲೆಕ್ಸ್, ಗಾಂಧಿನಗರ, ಬೆಂಗಳೂರು. | ೨೦೦೨ |
| ೯ | ಎಚ್.ಎಸ್.ಮೋಹನ | ಯಂದ್ರ-ದೇಹ-ಮನಸ್ಸು | ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ, ಕರ್ನಾಟಕ. | ೧೯೯೨ |
| ೧೦ | ಡಾ॥ ಎಲ್ ನಾರಾಯಣರೆಡ್ಡಿ | ಈ ಭೂಮಿ ಈ ಸಸ್ಯ | ನವ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್ ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು. | ೨೦೦೫ |
| ೧೧ | ಎಂ.ಶಿವರಾಮ್ | ನಮ್ಮ ಅಡಿಗೆ ಪಥ್ಯದ ಊಟ | ನವ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್ ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು. | ೧೯೯೮ |

| ೧೨ | ಡಾ॥ ಎಂ.ಜಿ. ಬಿರಾದರ | ಬೆಳೆ-೧, ದೇಸಿ ಸಂಸ್ಕೃತಿಯ ಆಯಾಮಗಳು | ಸಿದ್ದಲಿಂಗ.ಬಿ.ಕೊನೇಕ್, ಸಿದ್ದಲಿಂಗೇಶ್ವರ ಪ್ರಕಾಶನ, ಸರಸ್ವತಿ ಗೋದಾಮ, ಕಲಬುರ್ಗಿ | ೨೦೦೮ |
|---|---|---|---|---|
| ೧೩ | ಡಾ॥ ಎಂ.ಬಿ.ನೇಗಿನಹಾಳ | ಮೈಲಾರಲಿಂಗ-ಖಂಡೋಬಾ (ಒಂದು ಸಾಂಸ್ಕೃತಿಕ ಅಧ್ಯಯನ) | ಸದಾನಂದ ಕನವಳ್ಳಿ, ನಿರ್ದೇಶಕರು, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ | ೧೯೯೨ |
| ೧೪ | ಡಾ॥ ಎಸ್.ಬಾಲಚಂದ್ರರಾವ್ | ಸಂಪ್ರದಾಯ ವಿಜ್ಞಾನ ಮತ್ತು ಸಮಾಜ | ನವ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್ ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು. | ೨೦೦೫ |
| ೧೫ | ಡಾ॥ ಎಸ್.ಎಸ್.ಪಾಟೀಲ | ನಮ್ಮ ದೇಹವೆ ದೇಗುಲ | ಚೇತನ ಪ್ರಕಾಶನ, ಮನೆ ನಂ.೧-೮೯೧/೪, ಜೇವರ್ಗಿ ಕಾಲೋನಿ, ಗುಲಬರ್ಗಾ | |
| ೧೬ | ಡಾ॥ ಎಸ್.ಎಂ. ವೃಷಭೇಂದ್ರ ಸ್ವಾಮಿ | ಜಾನಪದ ಸಾಹಿತ್ಯದರ್ಶನ ಭಾರ್ಗ | ನಿರ್ದೇಶಕರು, ಪ್ರಸರಾಂಗ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ | ೧೯೮೯ |
| ೧೭ | ಎಸ್.ಎಸ್.ಹಿರೇಮಠ | ಅಮೃತಧಾರೆ | ಶಿವಪ್ರಶಾಂತ ಪ್ರಕಾಶನ, ಜಿ.ಡಿ.ಎ. ಪ್ಲಾಟ ನಂ.೪೨೫, ತಿಲಕ ನಗರ, ಕುಶನೂರ ರೊಡ, ಗುಲಬರ್ಗಾ | ೧೯೯೭ |
| ೧೮ | ಡಾ॥ ಕೆ.ಜಿ.ಗುರುಮೂರ್ತಿ | ಧರ್ಮ ಮತ್ತು ರಾಜಕೀಯ | ವಿಮೋಚನಾ ಪ್ರಕಾಶನ, ವಿಮೋಚನಾ ದೇವದಾಸಿ ಪುನರ್ವಸತಿ ಸಂಘ ಅಥಣಿ, ಜಿ.ಬೆಳಗಾವಿ. | ೧೯೯೬ |
| ೧೯ | ಕೆ.ಆರ್.ಕೃಷ್ಣಮೂರ್ತಿ | ಮುಢ ನಂಬಿಕೆಗಳನ್ನು ಕೈ ಬಿಡಬೇಡಿ | ಜನಪದ ಪ್ರಕಾಶನ, ಬೆಂಗಳೂರು. | ೧೯೯೯ |
| ೨೦ | ಕೆ.ಪಿ. ಪೂರ್ಣಚಂದ್ರ ತೆಜಸ್ವಿ | ಕಿರಿಯರಿಗಾಗಿ ಪರಿಸರ | ಇಂದ್ರ ಪ್ರಸ್ಥೆ ಪ್ರಕಾಶನ, ನಂ. ೩೬೦,. ೧ನೇ ಕ್ರಾಸ್, ಗವಿಪುರಂ, ಬೆಂಗಳೂರು. | ೧೯೯೧ |
| ೨೧ | ಕೆ.ಎಸ್.ನವೀನ್ | ವಿಜ್ಞಾನ ಮತ್ತು ವೈಜ್ಞಾನಿಕ ಮನೋಧರ್ಮ | ನವ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್ ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು. | ೨೦೦೫ |
| ೨೨ | ಡಾ॥ ಕಮಲಾ ಹೆಮ್ಮಿಗೆ | ಸವದತ್ತಿ ಎಲ್ಲಮ್ಮ ಹಾಗೂ ದೇವದಾಸಿ ಪದ್ಧತಿ | ವಿಮೋಚನಾ ಪ್ರಕಾಶನ, ವಿಮೋಚನಾ ದೇವದಾಸಿ ಪುನರ್ವಸತಿ ಸಂಘ ಅಥಣಿ, ಜಿ.ಬೆಳಗಾವಿ. | ೧೯೯೮ |
| ೨೩ | ಡಾ॥ ಜಿ.ವಿ.ದಾಸೆಗೌಡ | ನಮ್ಮ ಜನಪದ ನಂಬಿಕೆಗಳು | ಚೇತನ್ ಬುಕ್ ಹೌಸ್, "ಅಂಜನಾದ್ರಿ" ರೇಣುಕಾಚಾರ್ಯ ದೇವಸ್ಥಾನ ಲಕ್ಷ್ಮೀ ಟಾಕೀಸ್ ಹಿಂದುಗಡೆ, ಮೈಸೂರು-೨೪ | ೨೦೦೭ |

| | | | | |
|---|---|---|---|---|
| ೨೪ | ಜಿ.ಟಿ.ನಾರಾಯಣರಾವ್ | ಧೂಮಕೇತು | ನವ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್ ಎಂಬೆಸಿ ಸೆಚಿಟರ್, ಕ್ರೆಸೆಚಿಟ್ ಉಪ್ಪೆ, ಬೆಂಗಳೂರು. | ೨೦೦೨ |
| ೨೫ | ಜಿ.ಟಿ.ನಾರಾಯಣರಾವ್ | ಜಾತಕ ಮತ್ತು ಬಖ್ಪವಿಷ್ಯ | ದತ್ತಾತ್ರಯ ಪ್ರಕಾಶನ ಅತ್ರಿಬುಕ್ ಸೆಚಿಟರ್ 'ಶರಾವತಿ ಕಟ್ಟಡ' ಬಲ್ಮಠ, ಮಂಗಳೂರು. | ೧೯೯೨ |
| ೨೬ | ಜಿ.ಟಿ.ನಾರಾಯಣರಾವ್ | ಬಖ್ಪವಿಷ್ಯ ವಾಚನ | ದತ್ತಾತ್ರಯ ಪ್ರಕಾಶನ ಅತ್ರಿಬುಕ್ ಸೆಚಿಟರ್ 'ಶರಾವತಿ ಕಟ್ಟಡ' ಬಲ್ಮಠ, ಮಂಗಳೂರು. | ೧೯೯೨ |
| ೨೭ | ಕ್ಞಾ ಜಿ.ಎಸ್. ಶಿವರುದ್ರಪ್ಪಾ | ವಿಚಾರ ಸಾಹಿತ್ಯ-೧ | ನಿರ್ದೇಶಕರು, ಪ್ರಸರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು | ೧೯೯೪ |
| ೨೮ | ಜಿ.ಟಿ.ನಾರಾಯಣರಾವ್ | ವೈಜ್ಞಾನಿಕ ಮನೋಧರ್ಮ | ನವ ಕರ್ನಾಟಕ ಪಬ್ಲಿಶ್ಷಿಷನ್ಸ್ ಪ್ರೈವೆಟ್ ಲಿಮಿಟೆಡ್ ಎಂಬೆಸಿ ಸೆಚಿಟರ್, ಕ್ರೆಸೆಚಿಟ್ ಉಪ್ಪೆ, ಬೆಂಗಳೂರು. | ೨೦೦೭ |
| ೨೯ | ಡಿ.ಎಲ್.ಪಾಟೀಲ್ | ಅಧ್ಯಾತ್ಮ ವಾಹಿನಿ | ಕಣಿವೆ ಪ್ರಕಾಶನ, ೧೯೨, ೧೨ನೇ ಮುಖ್ಯರಸ್ತೆ, ಕಾಮಕ್ಷಿ ಆಸ್ಪತ್ರೆ ಉಪ್ಪೆ, ಸರಸ್ವತಿಪ್ಮರಂ, ಮೈಸುರು | ೨೦೦೧ |
| ೩೦ | ನಾಗೇಶ ಹೆಗಡೆ | ವಿಜ್ಞಾನ ಗಂಗೆಯ ಬಿಂದುಸಾರ | ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಬಖ್ಪವನ, ಇಷಿ.ಉಪ್ಪೆ, ಬೆಂಗಳೂರು | ೨೦೦೬ |
| ೩೧ | ನಾಗೇಶ ಹೆಗಡೆ | ಆಚೀನ ಲೋಕಕ್ಕೆ ಕಾಲಕೋಶ | ವಸಚಿತ ಪ್ರಕಾಶನ, ನಂ.೩೬೦.೧೧ಬಿ, ಮುಖ್ಯರಸ್ತೆ, ೩ನೇ ಬ್ಲಾಕ್, ಜಯನಗರ, ಬೆಂಗಳುರು | ೨೦೦೭ |
| ೩೨ | ನಾಗೇಶ ಹೆಗಡೆ | ನ್ಯಾನೋ ಹೇನು | ವಸಚಿತ ಪ್ರಕಾಶನ, ನಂ.೩೬೦.೧೧ಬಿ, ಮುಖ್ಯರಸ್ತೆ, ೩ನೇ ಬ್ಲಾಕ್, ಜಯನಗರ, ಬೆಂಗಳುರು | ೨೦೦೩ |
| ೩೩ | ಕ್ಞಾ ನಿಂಗಣ್ಣ ಸಣ್ಣಕ್ಕಿ | ಇಾನಪದ ತರಂಗಗಳು | ಕನ್ನಡ ಸಾಹಿತ್ಯ ಪರಿಷತ್ತು, ಪಂಪ ಮಹಾಕವಿ ಉಪ್ಪೆ, ಜಿ.ಸಿ.ನಗರ, ಬೆಂಗಳೂರು | ೨೦೦೨ |
| ೩೪ | ಕ್ಞಾ ಪಿ.ಎಸ್.ಶಂಕರ | ಮಕ್ಕಳ ಆರೋಗ್ಯ ಜನಾಂಗದ ಭಾಗ್ಯ | ನವ ಕರ್ನಾಟಕ ಪಬ್ಲಿಶ್ಷಿಷನ್ಸ್ ಪ್ರೈವೆಟ್ ಲಿಮಿಟೆಡ್ ಎಂಬೆಸಿ ಸೆಚಿಟರ್, ಕ್ರೆಸೆಚಿಟ್ ಉಪ್ಪೆ, ಬೆಂಗಳೂರು. | ೧೯೮೬ |
| ೩೫ | ಕ್ಞಾ ಪಿ.ಎಸ್.ಶಂಕರ | ಬ್ಞಹಾರೋಗ್ಯದ ಹಲವು ಸಮಸ್ಯೆಗಳು | ನಿರ್ದೇಶಕರು, ಪ್ರಸರಾಂಗ, ಮಾನಸ ಗಂಗೋತ್ರಿ, ಮೈಸೂರು | ೧೯೯೫ |

| ೩೬ | ಡಾ॥ ಪಿ.ಎಸ್.ಶಂಕರ | ಆರೋಗ್ಯ ರಕ್ಷಣೆ | ಡಾ॥ ಪಿ.ಎಸ್.ಶಂಕರ ಪ್ರತಿಷ್ಠಾನ "ದೀಪ್ತಿ" ಜಿಲ್ಲಾ ಕೋರ್ಟ ಹಿಂದುಗಡೆ, ಗುಲಬರ್ಗಾ | ೨೦೦೧ |
|---|---|---|---|---|
| ೩೭ | ಡಾ॥ ಪಿ.ಎಸ್.ಶಂಕರ | ಸಾಮಾಜಿಕ ಸ್ವಾಸ್ಥ್ಯ | ಡಾ॥ ಪಿ.ಎಸ್.ಶಂಕರ ಪ್ರತಿಷ್ಠಾನ "ದೀಪ್ತಿ" ಜಿಲ್ಲಾ ಕೋರ್ಟ ಹಿಂದುಗಡೆ, ಗುಲಬರ್ಗಾ | ೨೦೦೧ |
| ೩೮ | ಡಾ॥ ಪುರುಷೋತ್ತಮ ಬಿಳಿಮಲೆ | ವಿಚಾರ ಸಾಹಿತ್ಯ ೧೯೯೨ | ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು | ೧೯೯೩ |
| ೩೯ | ಪೂವಪ್ಪ ಕಣಿಯೂರು | ಪೂಕರೆ ಮತ್ತು ಜಾನಪದೀಯ ಲೇಖನಗಳು | ರಾಜ್ ಪ್ರಕಾಶನ, ನಂ.೮೩, ಕೆ.ಎಸ್.ಆರ್.ಟಿ.ಸಿ., ಬಡಾವಣೆ, ಹನುಮಮತನಗರ, ಬನ್ನಿ ಮಂಟಪ, ಮೈಸೂರು | ೨೦೦೪ |
| ೪೦ | ಪ್ರೊ.ಕಾಳೇಗೌಡ ನಾಗವಾರ ಮತ್ತು ಡಾ.ಅಂಬಳಿಕೆ ಹಿರಿಯಣ್ಣ | ಜೀ.ಶಂ.ಪ.ಅವರ ಬರಹಗಳು | ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು | ೨೦೦೦ |
| ೪೧ | ಪ್ರೊ.ಎಮ್.ಆರ್. ನಾಗರಾಜು | ಜಾಗತೀಕರಣದಿಂದ ಜನಾರೋಗ್ಯಕ್ಕೇನಾದಿತು | ಈ.ಬಸವರಾಜು, ಸೆಕ್ರಟರಿ, ಭಾರತ ಜ್ಞಾನ ವಿಜ್ಞಾನ ಸಮಿತಿ-೨ ಎಸ್.ಸಿ. ಕ್ಯಾಂಪಸ್, ಬೆಂಗಳೂರು. | ೨೦೦೦ |
| ೪೨ | ಪ್ರೊ.ಬಿ.ವಿ.ವೆಂಕಟರಾವ್ | ಕೃಷಿ ಮತ್ತು ಪರಿಸರ ಹೊಸ ಸವಾಲುಗಳು | ನವ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್ ಎಂಬೆಸಿ ಸೆಂಟರ್, ಕ್ರೆಸೆಚಿಟ್ ರಸ್ತೆ, ಬೆಂಗಳೂರು. | ೨೦೦೪ |
| ೪೩ | ಪ್ರೊ.ಹಿ.ಶಿ. ರಾಮಚಂದ್ರೆಗೌಡ | ಜನಪದರು ನಾವು | ಮಾನವಿ ಪ್ರಕಾಶನ ಮಾನಸ ಗಂಗೊತ್ರಿ, ಮೈಸೂರು | ೧೯೪೭ |
| ೪೪ | ಪ್ರೊ.ಹಿ.ಶಿ. ರಾಮಚಂದ್ರೆಗೌಡ | ಜಾನಪದ ಅನ್ವಯಿಕತೆ | ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು | ೨೦೦೩ |
| ೪೫ | ಪ್ರೊ.ಹಿ.ಶಿ. ರಾಮಚಂದ್ರೆಗೌಡ | ಜಾನಪದ ಸಿದ್ಧಾಂತಗಳು-೨ | ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು | ೨೦೦೩ |
| ೪೬ | ಪ್ರೊ.ಹಿ.ಶಿ. ರಾಮಚಂದ್ರೆಗೌಡ | ಜನಪದ ವೈದ್ಯ | ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು | ೨೦೦೩ |
| ೪೭ | ಫ್ರೆಡರಿಕ್ ಎಂಗೆಲ್ಸ್ ಅನುವಾದ: ಕೆ.ಎಲ್.ಗೋಪಾಲ ಕೃಷ್ಣರಾವ್ | ಕುಟುಂಬ, ಖಾಸಗಿ, ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ | ಪ್ರಗತಿ ಪ್ರಕಾಶನ ಮಾಸ್ಕೋ (ಸೋವಿಯತ್ ಒಕ್ಕೂಟದಲ್ಲಿ ಮುದ್ರಿತವಾದುದು) | ೧೯೮೦ |
| ೪೮ | ಡಾ.ಬಿ.ಎಸ್.ಸ್ವಾಮಿ | ಜಾನಪದ ಐಸಿರಿ | ದಾಮಿನಿ ಸಾಹಿತ್ಯ ನಂ.೫೫೯, ೯ನೇ ಮುಖ್ಯ ರಸ್ತೆ, ವಿಜಯನಗರ, ಬೆಂಗಳೂರು | ೨೦೦೬ |

| ೪೯ | ಬಿ.ಎಸ್.ಸೋಮಶೇಖರ | ಆಹಾರ ಮತ್ತು ಆರೋಗ್ಯ | ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು | ೨೦೦೮ |
|---|---|---|---|---|
| ೫೦ | ಬರ್ಟ್ರೆಂಡ್ ರಸೆಲ್ | ಸಮಾಜದ ಮೇಲೆ ವಿಜ್ಞಾನದ ಪ್ರಭಾವ | ಕೆ.ಸಿ.ಶಿವಪ್ಪ ಕೋ ಆರ್ಡಿನೇಟರ್, ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. | ೧೯೬೩ |
| ೫೧ | ಡಾ॥ ಮನೋಹರ ಪಂಚಾಳ | ದೃಶ್ಯಾನುಭವ | ಅನ್ನಪೂರ್ಣ ಪ್ರಕಾಶನ, ನಂದಗಾಂವ, ಹುಮನಾಬಾದ ತಾಲ್ಲೂಕು, ಬೀದರ ಜಿಲ್ಲೆ | ೨೦೧೦ |
| ೫೨ | ಮಲ್ಲಿಕಾರ್ಜುನ ಹೊಸ ಪಾಳ್ಯ | ಕೃಷಿಯ ಆಚರಣೆ | ಕನ್ನಡ ಪುಸ್ತಕ ಪ್ರಾಧಿಕಾರ ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು | ೨೦೦೮ |
| ೫೩ | ಯಳನಾಡು ಅಚಿಜನಪ್ಪ | ಧರ್ಮ ಮತ್ತು ಮುಕ್ತ ವಿಚಾರ | ನಿರ್ದೇಶಕರು, ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ | ೨೦೦೮ |
| ೫೪ | ರವಿ ಬೆಳಗೆರೆ | ವಿವಾಹ, ಹುಟ್ಟು ಮತ್ತು ಪೂರ್ವೋತ್ತರ | ನವ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್ ಎಂಬೆಸಿ ಸೆಚಿಟರ್, ಕ್ರೆಸೆಚಿಟ್ ರಸ್ತೆ, ಬೆಂಗಳೂರು. | ೧೯೮೯ |
| ೫೫ | ಡಾ॥ ರಾಮಲಿಂಗಯ್ಯ, ಉಪ್ಪಿನ ಕೆರೆ | ವೈದ್ಯಕೀಯ ನಂಬಿಕೆಗಳ ವಿಶ್ಲೇಷಣೆ | ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು | ೧೯೯೯ |
| ೫೬ | ರಾಮಚಂದ್ರ ಗುಹಾ | ಜಾಗತಿಕ ಪರಿಸರ ಚರಿತ್ರೆ | ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ, ಕರ್ನಾಟಕ | ೧೯೯೯ |
| ೫೭ | ಡಾ॥ ರಮಾನಂದ ಬನಾರಿ | ಆರೋಗ್ಯ ಸಂವಿಧಾನ | ಕಲ್ಲಕೂರ ಪ್ರಕಾಶನ, ಶ್ರೀ ಕೃಷ್ಣ ಸಂಕೀರ್ಣ (ಕಾಂಪ್ಲೆಕ್ಸ್) ಮಹಾತ್ಮಾಗಾಂಧಿ ರಸ್ತೆ, ಕೊಡಿಯಾಲ್ ಬೈಲ್, ಮಂಗಳೂರು | ೨೦೦೮ |
| ೫೮ | ಡಾ॥ ವಸುಂಧರಾ ಭೂಪತಿ | ಆಹಾರ ಮತ್ತು ಆರೋಗ್ಯ | ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು | ೨೦೦೮ |
| ೫೯ | ಡಾ॥ ವಿಜಯಶ್ರೀ ಸಬರದ | ವಿಚಾರ ಸಾಹಿತ್ಯ ೧೯೯೯ | ಕರ್ನಾಟಕ ಸಹಿತ್ಯ ಅಕಾಡೆಮಿ, ನೃಪತುಂಗ ರಸ್ತೆ, ಬೆಂಗಳೂರು | ೨೦೦೦ |
| ೬೦ | ಡಾ॥ ವಿವೇಕ ರೈ | ಅನ್ವಯಿಕ ಜಾನಪದ | ಕರ್ನಾಟಕ ಸರ್ಕಾರ ಕನ್ನಡ ಪುಸ್ತಕ ಪ್ರಾಧಿಕಾರ, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು | ೧೯೯೫ |
| ೬೧ | ಡಾ॥ ಶ್ರೀ ಪಾದಭಟ್ | ಜಾನಪದ ಚಿತ್ತಾರ | ತಲಗವಾಡಿ ಪ್ರಕಾಶನ, ನಂ.೨೨, ವಿಜಯಶ್ರೀ, ಕುವೆಂಪುನಗರ, ಮೈಸೂರು | ೨೦೦೩ |
| ೬೨ | ಸದಾಶಿವಯೋಗಿ | ಭಾರತೀಯರಿಗೆ ಭಗವಂತರೆಷ್ಟು ? | ಸದಾಶಿವಯೋಗಿ, ಶ್ರೀ ಶಿವಾನಂದ ಯೋಗಾಶ್ರಮ, ಹಂಪಿ, ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ | ೧೯೯೯ |

| ೬೩ | ಸ್ವಾಮಿನಿ ವಿಮಲಾನಂದ ಮತ್ತು ಶ್ರೀಮತಿ ರಾಧಿಕಾ ಕೃಷ್ಣಕುಮಾರ | ಸಂಪ್ರದಾಯಗಳ ಅರ್ಥ ವಿವರಣೆ | ಸೆಂಟ್ರಲ್ ಚಿನ್ಮಯ ಮಿಷನ್ ಟ್ರಸ್ಟ್, ಕನ್ನಡ ಪ್ರಕಟಣಾ. ವಿಭಾಗ, ದೀನಬಂಧು ದೇವಸ್ಥಾನ, ಇಂದಿರಾನಗರ, ಬೆಂಗಳೂರು. | ೨೦೦೪ |
|---|---|---|---|---|
| ೬೪ | ಡಾ॥ ಸಿ.ಆರ್.ಚಂದ್ರಶೇಖರ | ಸಾಮಾಜಿಕ ನಂಬಿಕೆಗಳು ಮತ್ತು ಮಾನಸಿಕ ಆರೋಗ್ಯ | ನಿರ್ದೇಶಕರು ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆ, ಬೆಂಗಳೂರು | ೧೯೯೪ |
| ೬೫ | ಡಾ॥ ಸಿ.ಆರ್.ಚಂದ್ರಶೇಖರ | ನಿದ್ರೆ ಮತ್ತು ಕನಸ್ಸುಗಳು | ನವ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್ ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು. | ೨೦೦೬ |
| ೬೬ | ಸ್ಟೀವನ್ ಕ್ವಾಡ್ರಸ್ | ಪ್ರಾಚೀನ ಭಾರತದ ಇತಿಹಾಸ | ಲಕ್ಷ್ಮೀ ಪ್ರಿಂಟಿಂಗ್ & ಪಬ್ಲಿಸಿಂಗ್ ಹೌಸ್, ನಂ.೩೪೧, ಕಾಳಮ್ಮಾ ಟೆಂಪಲ್ ರಸ್ತೆ, ಮೈಸೂರು | ೨೦೦೬ |
| ೬೭ | ಸಿ.ಎನ್.ಶೆಟ್ಟಿ | ದೇವರು ಧರ್ಮ ವೈಚಾರಿಕತೆ | ಸಿ.ಎನ್.ಶೆಟ್ಟಿ 'ಸಿದ್ಧಾರ್ಥ' ನಿಲಯ ಕೇಶವ ಚೌಟ ನಗರ, ಪೊ.ಹೊಸಬೆಟ್ಟು, ಮಂಗಳೂರು | ೨೦೦೫ |
| ೬೮ | ಡಾ॥ ಸಿದ್ಧಲಿಮಗಯ್ಯ | ಗ್ರಾಮದೇವತೆಗಳು | ಮೂಲಭಾರತಿ ಪ್ರಕಾಶನ, ನಂ.೫೭, ೩ನೇ ಮುಖ್ಯರಸ್ತೆ, ಚಾಮರಾಜ ಪೇಟೆ, ಬೆಂಗಲೂರು | ೧೯೯೭ |
| ೬೯ | ಸುಭಾಷ.ಎನ್.ನೇಳಗೆ | ವಿಜ್ಞಾನ ಸಾಹಿತ್ಯ ೧೯೯೮ | ಟೆ.ಎಸ್.ದಕ್ಷಿಣಮೂರ್ತಿ, ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ.ರೋಡ, ಬೆಂಗಳೂರು | ೧೯೯೯ |
| ೭೦ | ಡಾ.ಸೂರ್ಯಕಾಂತ ಸುಜ್ಯಾತ್ | ಗುಲಾಮಗಿರಿ | ಸುಮೇಧ ಪ್ರಕಾಶನ, ಪ್ಲಾಟ ನಂ.೩೦, ಮ.ನಂ.೧-೯೪೯, ಹಲೆ ಜೇವರ್ಗಿ ರಸ್ತೆ, ದೇವ ನಗರ, ಗುಲಬರ್ಗಾ | ೨೦೦೯ |
| ೭೧ | ಹೆಚ್.ಆರ್.ಕೃಷ್ಣಮೂರ್ತಿ | ಪರಿಸರ ವಿಜ್ಞಾನ | ಕನ್ನಡ ಪುಸ್ತಕ ಪ್ರಾಧಿಕಾರ, ಪಂಪ ಮಹಾಕವಿ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು | ೧೯೯೪ |
| ೭೨ | ಹೆಚ್.ಆರ್.ಕೃಷ್ಣಮೂರ್ತಿ | ಪರಿಸರದರ್ಶನ | ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಇಂಡಿಯನ್ ಇನ್ ಸ್ಟಿಟ್ಯೂಟ್ ಆಫ್ ಸೈನ್ಸ್ ಆವರಣ, ಬೆಂಗಳೂರು | ೧೯೯೫ |
| ೭೩ | ಡಾ॥ ಹೆಚ್.ಜಿ.ಲಕ್ಕಪ್ಪಗೌಡ ಮತ್ತು ಇತರರು | ಜಾನಪದ ಕೈಪಿಡಿ | ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ ಪಂಪ ಮಹಾಕವಿ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು. | ೧೯೯೭ |
| ೭೪ | ಜಿ.ಶಿವನಂಜಯ್ಯ | ಸಹಜ ಕೃಷಿ | ಓರಿಯಂಟ್, ಲಾಂಗ್ ಮನ್ ಲಿಮಿಟೆಡ್ ಶೃಂಗಾರ ಶಾಪಿಂಗ್ ಸೆಂಟರ್, ೮೦/೧, ಮಹಾತ್ಮಾಗಾಂಧಿ ರಸ್ತೆ, ಬೆಂಗಳೂರು | ೧೯೯೪ |

| ೭೫ | ಜಿ.ಶಿವನಂಜಯ್ಯ | ಫುಕುವೊಕನ ಹಾದಿಯಲ್ಲಿ | ನಮ್ಮ ಪ್ರಕಾಶನ, ಬಿಳಿಗೆರೆ, ತಿಪಟೂರ ತಾಲ್ಲೂಕು, ತುಮಕೂರು ಜಿಲ್ಲೆ | ೨೦೦೦ |
|---|---|---|---|---|
| ೭೬ | ನರೇಂದ್ರರೈದೇರ್ಲ | ಬೊಗಸೆ ತುಂಬಾ ಬೀಜ | ಸಿ.ವಿ.ಜಿ.ಪಬ್ಲಿಕೇಷನ್ಸ್, ನಂ.೭೦, ೨ನೇ ಮುಖ್ಯ ರಸ್ತೆ, ಆಬ್ಬರ್ ಬ್ಲಾಕ್, ವ್ಯಾಲಿಕವಲ, ಬೆಂಗಳೂರು | ೨೦೦೪ |
| ೭೭ | ಮೂಲ: ಬಸಂತ್ ಬೊಂಬಟ್ಕರ್ ಕನ್ನಡಕ್ಕೆ : ಸುಭಾಷ ಹೆಗ್ಗಡೆ | ಸ್ವಾವಲಂಬಿ ಕೃಷಿ ಹೇಗೆ ? | ಸ್ವರಾಜ್ ಪ್ರಕಾಶನ ಸಮೂಹ ೨೨-೨೩, ಎರಡನೇ ಮಹಡಿ, ಪೋಲೀಸ್ ರಸ್ತೆ, ರಾಣಾಸಿಂಗ್ ಪೇಟೆ, ಬೆಂಗಳೂರು | ೨೦೦೫ |
| ೭೮ | ಮೂಲ: ಮಸನೊಬು ಫುಕುವೊಕ ಕನ್ನಡಕ್ಕೆ: ಸಂತೋಷ ಕೌಲಗಿ | ಒಂದು ಹುಲ್ಲಿನ ಕ್ರಾಂತಿ | ಜನಪದ ಸೇವಾ ಟ್ರಸ್ಟ್ ಪ್ರಕಾಶನ ಮೇಲುಕೋಟೆ, ಮಂಡ್ಯ ಜಿಲ್ಲೆ | ೨೦೦೦ |
| ೭೯ | ಮೂಲ: ಸರ್ ಅಲ್ಬರ್ಟ್, ಹೋವರ್ಡ್ ಅನುವಾದ: ವಾಲ್ಮೀಕಿ | ಹೀಗೊಂದು ಕೃಷಿ ಸಂಹಿತೆ | ಇನ್ ಸ್ಟಿಟೂಟ್ ಫಾರ್ ಕಲ್ಚರಲ್ ರಿಸರ್ಚ್ & ಆ್ಯಕ್ಷನ್, ಬೆಂಗಳೂರು | ೨೦೦೨ |
| ೮೦ | ಮೂಲ: ವಂದನಾಶಿವ ಕನ್ನಡಕ್ಕೆ : ಮಾಧವ ಐತಾಳ | ಬತ್ತದ ಚಿಲುಮೆ | ಹಿ.ಚಿ.ಬೋರಲಿಂಗಯ್ಯ, ನಿರ್ದೇಶಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ | ೨೦೦೫ |
| ೮೧ | ವಿಜಯ ಅಂಗಡಿ | ಕೀಟ/ರೋಗ | ಅಶೋಕ ಎನ್. ಚಲುವಾದಿ ಆಡಳಿತಾಧಿಕಾರಿಗಳು, ಕನ್ನಡ ಪುಸ್ತಕ, ಪ್ರಾಧಿಕಾರ ಕನ್ನಡಭವನ, ಜೆ.ಸಿ.ರಸ್ತೆ, ಬೆಂಗಳೂರು | ೨೦೦೮ |
| ೮೨ | ಡಾ.ಶಿವಗಂಗಾ ರುಮ್ಮಾ | ಬೀದರ ಜಿಲ್ಲೆಯ ಜನಪದ ಆಹಾರ ಮತ್ತು ಆರೋಗ್ಯ ಪದ್ಧತಿ | ಅಪ್ರಕಟಿತ, ಯು.ಜಿ.ಸಿ., ಮೈನರ್ ಪ್ರೊಜೆಕ್ಟ್ | ೨೦೧೦ |
| ೮೪ | ಬಿ.ಎಸ್.ಸಿದ್ಧರಾಮಯ್ಯ | ಸುಸ್ಥಿರ ಕೃಷಿ ಒಂದು ಚಿಂತನೆ | ಕನ್ನಡ ಪುಸ್ತಕ ಪ್ರಾಧಿಕಾರ, ಜೆ.ಸಿ.ರಸ್ತೆ, ಬೆಂಗಳೂರು | ೨೦೦೬ |

# ಕ್ಷೇತ್ರ ದರ್ಶನ ಹಾಗೂ ಶ್ರೀಯುತರಿಂದ ಪಡೆದ ಅನುಭವದ

## ಅನುಭವಿಕರ ವಿವರ

| ಕ್ರ.ಸಂ. | ವಿವರ<br>ಶ್ರೀ/ಶ್ರೀಮತಿ | ವಯಸ್ಸು | ಉದ್ಯೋಗ |
|---|---|---|---|
| | ಹುಮನಾಬಾದ : | | |
| ೧ | ವಿರುಪಾಕ್ಷಯ್ಯ ಶಿವಾಚಾರ್ಯರು ಹಿರೇಮಠ, ಹುಡಗಿ | ೭೮ | ಮಠಾಧೀಶರು |
| ೨ | ಚೆನ್ನಮಲ್ಲಯ್ಯ ಕರಿಬಸವೇಶ್ವರ ದೇವಸ್ಥಾನ, ಹುಡಗಿ | ೭೨ | ಪೂಜಾರಿ |
| ೩ | ಸಿದ್ರಾಮಪ್ಪ ಕಾರಮುಗಿ ಹುಡಗಿ | ೭೩ | ನಿವೃತ್ತ ಶಿಕ್ಷಕರು |
| ೪ | ಗುಂಡಪ್ಪಾ ಖನಶೆಟ್ಟಿ ಹುಡಗಿ | ೭೦ | ಒಕ್ಕಲುತನ |
| ೫ | ಇಂದುಮತಿ ಗಂ. ಬಸವರಾಜ ಭಾಗಿರಥಿ ಹುಡಗಿ | ೫೮ | ಮನೆಕೆಲಸ |
| ೬ | ಕಮಲಾಬಾಯಿ ಗಂ. ಅಣ್ಣೆಪ್ಪಾ ಭಾಗಿರಥಿ ಹುಡಗಿ | ೫೫ | ಮನೆಕೆಲಸ |
| ೭ | ಶಶಿಕಲಾ ಗಂ. ವೀರಣ್ಣಾ ಹುಡಗಿ | ೫೨ | ಮನೆಕೆಲಸ |
| ೮ | ಶರಣಮ್ಮಾ ಗಂ.ಶಿವರಾಯ ಮಾಶೆಟ್ಟಿ ಹುಡಗಿ | ೬೫ | ಮನೆಕೆಲಸ |
| ೯ | ಮಾಣಿಕಬಾಯಿ ಗಂ.ಅಣ್ಣೆಪ್ಪಾ ಒಳದೊಡ್ಡಿ ಹುಡಗಿ | ೬೩ | ಮನೆಕೆಲಸ |
| ೧೦ | ಸಿದ್ರಾಮಪ್ಪಾ ತಂದೆ ಶಿವಶರಣಪ್ಪಾ ಮುಗಳಿ ಹುಡಗಿ | ೬೮ | ಒಕ್ಕಲುತನ |
| ೧೧ | ಬಸಮ್ಮಾ ಗಂಡ ಶರಣಪ್ಪಾ ಸಿಂಧನಕೇರಾ ಹುಡಗಿ | ೬೩ | ಮನೆಕೆಲಸ |
| ೧೨ | ರತ್ನಮ್ಮಾ ಗಂಡ ಬಾಬುರಾವ ಕೊಳಾರ ಮೊಳಕೇರಾ | ೬೬ | ಮನೆಕೆಲಸ |
| ೧೩ | ಕಲಾವತಿ ಗಂಡ ಅನಿಲ ಕಣಜಿ, ದುಬಲಗುಂಡಿ | | ಮನೆಕೆಲಸ |
| ೧೪ | ಶೋಭಾವತಿ ಗಂಡ ಬಸವರಾಜ ಖ್ಯಾಲಪ್ಪ ಬೋರಂಪಳ್ಳಿ | ೫೦ | ಶಿಕ್ಷಕಿ |
| ೧೫ | ಪಾರ್ವತಿ ಗಂಡ ರೇವಣಸಿದ್ದಯ್ಯ ಕಲ್ಲೂರ | ೬೫ | ಮನೆಕೆಲಸ |
| ೧೬ | ಪದ್ಮಾವತಿ ಗಂಡ ವೀರಪ್ಪಾ ಬಿಜ್ಮಾ, ಬೇಮಳಖೇಡಾ | ೫೫ | ಮನೆಕೆಲಸ |
| ೧೭ | ಕಾಶಿನಾಥರೆಡ್ಡಿ ನಿರ್ಣಾ ಜಾನಪದ ವಿದ್ವಾಂಸರು | ೬೩ | ಜಾನಪದ ವಿದ್ವಾಂಸರು |
| ೧೮ | ಶಾಂತಪ್ಪಾ ದೇವರಾಯ ದೇಶಾಂಶ ಹುಡಗಿ | ೭೦ | ಜಾನಪದ ವಿದ್ವಾಂಸರು |
| ೧೯ | ಪುತಳಾಬಾಯಿ ಗಂಡ ರೇವಣಯ್ಯ ಮಠಪತಿ ಸೇಡೋಳ | ೬೨ | ಮನೆಕೆಲಸ |
| ೨೦ | ಪಾರ್ವತೆಮ್ಮ ಗಂಡ ವೆಂಕಟರಾವ ರಘೋಜಿ | ೬೩ | ಮನೆಕೆಲಸ |
| ೨೧ | ಜಗದೇವಿ ಗಂಡ ಧೂಳಯ್ಯ ಮಠಪತಿ | ೫೫ | ಮನೆಕೆಲಸ |
| ೨೨ | ಸಂಪತ್ತಬಾಯಿ ಗಂಡ ನಾಗರೆಡ್ಡಿ ಮಾಲಿಪಾಟೀಲ | ೫೩ | ಮನೆಕೆಲಸ |
| ೨೩ | ಶಾರದಾಬಾಯಿ ಗಂಡ ಗಂಗಪ್ಪಾ ತಲವಡೆ ನಿರ್ಣಾ | ೫೫ | ಕೃಷಿಕರು |
| ೨೪ | ರವಿಕಾಂತ ತಂದೆ ಗಂಗಪ್ಪಾ ತಲವಡೆ ನಿರ್ಣಾ | ೪೦ | ವಕೀಲರು |
| ೨೫ | ಚಂದ್ರಮ್ಮಾ ಗಂಡ ಗುರುಪಾದಯ್ಯ ಗಡವಂತಿ | ೬೦ | ಮನೆಕೆಲಸ |
| ೨೬ | ಕಾಂತಯ್ಯಾ ತಂದೆ ಗುರುಪಾದಯ್ಯಾ ಗಡವಂತಿ | ೪೦ | ವ್ಯಾಪಾರಿ |
| ೨೭ | ರುದ್ರಮುನಿ ತಂದೆ ವಿರುಪಾಕ್ಷಯ್ಯಾ ಹಿರೇಮಠ ಗಡವಂತಿ | ೭೦ | ಒಕ್ಕಲುತನ |

| ೨೮ | ರತ್ನಮ್ಮಾ ಗಂಡ ಶಾಮರಾವ ನೇಳಕೂಡ ಗಡವಂತಿ | ೬೦ | ಕೃಷಿಕರು |
|---|---|---|---|
| ೨೯ | ಪರಮೇಶ್ವರ ತಂದೆ ಬಸವಣಪ್ಪಾ ಗುಳಶೆಟ್ಟಿ, ಹುಮನಾಬಾದ | ೪೦ | ವಕೀಲರು |
| ೩೦ | ಹಮೀದಾಬೇಗಂ ಗಂಡ ಆಬೇದಲಿ ಹುಡಗಿ | ೬೮ | ಕೃಷಿಕರು |
| | | | |
| | **ಬಸವಕಲ್ಯಾಣ :** | | |
| ೧ | ಚೆನ್ನವೀರಯ್ಯಾ ಸ್ವಾಮಿ ಯರಬಾಗ | ೬೭ | ಧಾರ್ಮಿಕ ಗುರುಗಳು |
| ೨ | ಪಾರ್ವತಿ ಗಂಡ ಶಿವಪೂಜಿ ರಟಕಲ್ ಯರಭಾಗ | ೫೦ | ಮನೆಕೆಲಸ |
| ೩ | ಅರುಣಾ ಗಂಡ ಸೂರ್ಯಕಾಂತ ಅಳ್ಳಿ ಯರಭಾಗ | ೪೮ | ಮನೆಕೆಲಸ |
| ೪ | ಡಾ.ರಾಜಶೇಖರ ಸ್ವಾಮಿ ಗೋರ್ಟಾ | ೪೩ | ಪ್ರವಚನಕಾರರು |
| ೫ | ಸಂಪಾವತಿ ಗಂಡ ನಾಗಶೆಟ್ಟಿ ಬೆಟ್ಟ ಬಾಲಕುಂದಾ | ೪೦ | ಕೃಷಿಕರು |
| ೬ | ಕರೆಮ್ಮಾ ಗಂಡ ಸಂಗಪ್ಪಾ ಪಟ್ನೆ, ನಾರಾಯಣಪುರ | ೭೦ | ಮನೆಕೆಲಸ |
| ೭ | ಶಾಂತಾಬಾಯಿ ಗಂಡ ಘಾಳೆಪ್ಪಾ ಶಾಯಪ್ಪನೋರ ಮಂಠಾಳ | ೪೫ | ಕೃಷಿಕರು |
| ೮ | ಮಹಾದೇವಿ ಗಂಡ ಬಾಬುರಾವ ಉಮರ್ಗೆ ಮಂಠಾಳ | ೭೩ | ಕೃಷಿಕರು |
| ೯ | ಶೋಭಾ ಗಂಡ ಜಗನ್ನಾಥರಾವ ಉಮರ್ಗೆ ಮಂಠಾಳ | ೫೦ | ಮನೆಕೆಲಸ |
| ೧೦ | ಗೌರಮ್ಮಾ ಗಂಡ ಅಣ್ಣಪ್ಪಾ ಬಿಜಾಪುರೆ ರಾಜೇಶ್ವರ | ೫೫ | ಕೃಷಿಕರು |
| | | | |
| | **ಭಾಲ್ಕಿ :** | | |
| ೧ | ಜಗದೇವಿ ಗಂಡ ಸಿದ್ರಾಮಪ್ಪಾ ತಳವಾಡಿ ಏಣಕೂರ | ೪೭ | ಮನೆಕೆಲಸ |
| ೨ | ಸರಸ್ವತಿ ಗಂಡ ಬಸವರಾಜ ಕಳಸೆ ನಾಗರಾಳ ಚಿಂಚೋಳಿ | ೫೦ | ಮನೆಕೆಲಸ |
| ೩ | ನಾಗಮ್ಮಾ ಗಂಡ ವೈಜಿನಾಥ ಡೋಣಗಾಪುರ | ೫೦ | ಮನೆಕೆಲಸ |
| | | | |
| | **ಔರಾದ :** | | |
| ೧ | ಬಾಬುರಾವ ಭಗವಂತ್ರಾಯ ಪೋ.ಪಾಟೀಲ್ ಬೆಡಕುಂದಾ | ೭೫ | ಒಕ್ಕಲುತನ |
| ೨ | ಸಿದ್ದಮ್ಮಾ ಗಂಡ ಬಸವರಾಜ ಹೊರಂಡೆ ಬೆಡಕುಂದಾ | ೫೦ | ಕೃಷಿಕರು |
| ೩ | ಶಾಂತಮ್ಮಾ ಗಂಡ ಧನರಾಜ ಕಳಸೆ ಬೆಡಕುಂದಾ | ೪೮ | ಒಕ್ಕಲುತನ |
| ೪ | ಚೆಂಗಳಮ್ಮಾ ಗಂಡ ಮಾಹಳಪ್ಪಾ ದೇಶಮುಖ ಮಾಳೆಗಾಂವ | ೭೨ | ಮನೆಕೆಲಸ |
| ೫ | ಮಲ್ಲಮ್ಮಾ ಗಂಡ ಶಿವಾಜಿರಾವ ದೇಶಮುಖ ಮಾಳೆಗಾಂವ | ೪೮ | ಮನೆಕೆಲಸ |
| ೬ | ಭೀಮರಾಯ ಲಂಬಾಣಿ ಮಾಳೆಗಾಂವ | ೮೫ | ಕೃಷಿಕರು |
| ೭ | ಮಾಹನಂದ ಗಂಡ ಘಾಳೆಪ್ಪಾ ಪಾಟೀಲ ತೇಗಂಪೂರ | ೪೮ | ಕೃಷಿಕರು |
| ೮ | ಪ್ರೇಮಿಲಾಬಾಯಿ ದೇವಪ್ಪಾ ಸೋನಾಳ | ೫೭ | ಮನೆಕೆಲಸ |
| ೯ | ಕಮಲಾಬಾಯಿ ಗಂಡ ವೈಜಿನಾಥ ವಠಾಗೆ ಡೋಣಗಾಂವ | ೭೦ | ಮನೆಕೆಲಸ |
| | | | |

| | ಬೀದರ : | | |
|---|---|---|---|
| ೧ | ಬಸಮ್ಮಾ ಗಂಡ ಬಸವರಾಜ ಬಲಕಲ್ ಬೀದರ | ೬೦ | ಮನೆಕೆಲಸ |
| ೨ | ವಿರೇಂದ್ರ ತಂದೆ ಮಾಣಿಕಪ್ಪಾ ಧುಮ್ಮನಸೂರೆ ಬೀದರ | ೫೦ | ಉಪನ್ಯಾಸಕರು |
| ೩ | ಅಶೋಕ ತಂದೆ ನಿರಂಜನಪ್ಪಾ ಪಾಟೀಲ್ ಅಲಿಯಾಬಾದ | ೫೫ | ಎಫ್.ಡಿ.ಎ. |
| | | | |
| | ಡೊಂಗರಗಾಂವ : | | |
| ೧ | ಉದಯಕುಮಾರ ಸ್ವಾಮಿಗಳು ಡೊಂಗರಗಾಂವ | ೪೩ | ರೇಣುಕಾಚಾರ್ಯ ಆಶ್ರಮ ಡೊಂಗರಗಾಂವ |
| ೨ | ಕಾಶಿಬಾಯಿ ಗಂಡ ಬಸವಣಪ್ಪಾ ರಾಜೇಶ್ವರ ಡೋಂಗರಗಾಂವ | ೬೦ | ಕೃಷಿ |
| ೩ | ಮಲ್ಲಯ್ಯ ತಂದೆ ವಿರುಪಾಕ್ಷಯ್ಯ ಡೊಂಗರಗಾಂವ | ೭೨ | ಕೃಷಿ |
| ೪ | ರಾಮಚಂದ್ರ ತಂದೆ ಅಣ್ಣಪ್ಪಾ ನಾಟಿಕರ್ ಡೊಂಗರಗಾಂವ | ೪೮ | ಒಕ್ಕಲುತನ |
| ೫ | ಸೂರ್ಯಕಾಂತ ಸಂಗಪ್ಪಾ ವಡ್ಡನಕೇರಾ ಡೊಂಗರಗಾಂವ | ೪೫ | ಒಕ್ಕಲುತನ |
| ೬ | ಸಂಗಪ್ಪಾ ತಂದೆ ಗುಂಡಪ್ಪಾ ಸಜ್ಜನಶೆಟ್ಟಿ ಡೊಂಗರಗಾಂವ | ೭೫ | ಕೃಷಿಕರು |
| ೭ | ರೇವಣಸಿದ್ದಪ್ಪಾ ಬಿ. ಶೇರಿ ಓಕಳಿ | ೬೦ | ಒಕ್ಕಲುತನ |
| ೮ | ಸುಭಾಷ ತಂದೆ ಭೀಮಷಾ ಚೌವ್ಹಾಣ, ಬೆನಕಿನಪಳ್ಳಿ ಧರಿ ತಾಂಡಾ | ೪೦ | ಪೋಲೀಸ್ |
| ೯ | ವೀರಭದ್ರ ಸಿಂಪಿ, ಕನ್ನಡ ಸಾಹಿತ್ಯ ಪರಿಷತ್ತು ಅಧ್ಯಕ್ಷರು ಕಲಬುರ್ಗಿ | ೫೦ | ಸಾಹಿತಿಗಳು |
| ೧೦ | ಶೋಭಾ ರಂಜೋಳಕರ್ ಕ.ಸಾ.ಪ. ತಾಲ್ಲೂಕ ಅಧ್ಯಕ್ಷರು, ಕಲಬುರ್ಗಿ | ೬೦ | ಸಾಹಿತಿಗಳು |
| ೧೧ | ದೌಲತರಾಯ ಎಸ್. ಮಾಲಿಪಾಟೀಲ್ ಮಾವೂರ, ಗುಲಬರ್ಗಾ | ೪೫ | ವಕೀಲರು |
| ೧೨ | ಜೆ. ವಿನೋದಕುಮಾರ | ೪೦ | ವಕೀಲರು |
| ೧೩ | ಆನಂದ ತಂದೆ ಯಶವಂತರಾವ ಕಳಶಕರ | ೪೦ | ವಕೀಲರು |
| ೧೪ | ಸಂಗಮ್ಮಾ ಗಂಡ ಶಿವರಾಯ ಉಪ್ಪಿನ ಭೂಯ್ಯಾರ | ೪೮ | ಕೃಷಿಕರು |
| ೧೫ | ವಿಮಲಾಬಾಯಿ ಗಂಡ ಹಣಮಂತಪ್ಪಾ ಕಪನೂರ | ೫೦ | ಮನೆಕೆಲಸ |
| ೧೬ | ನಾಗಮ್ಮಾ ಗಂಡ ಹಣಮಂತಪ್ಪಾ ಕಪನೂರ | ೫೨ | ಮನೆಕೆಲಸ |
| ೧೭ | ಉಸ್ಮಾನ್ ಸಾಬ ತಂದೆ ಅಲ್ಲಾವುದ್ದೀನ್ ತಿಲ್ಲೆ | ೫೬ | ಪೋಲೀಸ್ |
| ೧೮ | ಸಂಗೀತಾ ಗಂಡ ಶರಣಬಸಪ್ಪಾ ಮೂಲಗಿ ಡೋಂಗರಗಾವ | | |

